# ಚಿರ ವಿರಹಿ

ಬೆಳ್ಳೆ ರಾಮಚಂದ್ರರಾಯರು




ಧಾರವಾಡ

U. Gundacha
S.S.L.C

ಲಲಿತ ಸಾಹಿತ್ಯ ಮಾಲೆಯ ಇಪ್ಪತ್ತಾರನೆಯ ಕುಡಿ

( ಆರನೆಯ ವರ್ಷದ ಮೊದಲನೆಯ ಪುಸ್ತಕ )

# ಚಿರವಿರಹಿ

ಕಾದಂಬರಿ

ಬೆಳ್ಳಿ ರಾಮಚಂದ್ರರಾಯರು








| ಉತ್ತಮ ಪ್ರತಿ | ಮೇ | ಸಾದಾಪ್ರತಿ |
|---|---|---|
| ೫-೦-೦ | ೧೯೫೦ | ೪-೦-೦ |

ಸಂಪಾದಕರು :
ಚುಳಕಿ ಗೋವಿಂದರಾಯರು
ಲಲಿತ ಸಾಹಿತ್ಯ ಮಾಲೆ, ಧಾರವಾಡ

ಮಾರಾಟಗಾರರು
ಮನೋಹರ ಗ್ರಂಥ ಭಾಂಡಾರ, ಧಾರವಾಡ
ಕನ್ನಡ ಪುಸ್ತಕಾಲಯ, ಬೆಳಗಾವಿ

ಮಾಲೆಯ ಮುಂದಿನ ಕಾದಂಬರಿಗಳು ✓

ಹಂಬಲ
ದತ್ತಾತ್ರೇಯ ಕುಲಕರ್ಣಿ

ಹಸಿ ಹಂಬಲ
ಪಾಡಿಗಾರು ವೆಂಕಟರಮಣಾಚಾರ್ಯ ✓



Special paper quota No. 65/24614/III
12-8-1949.

ಮುದ್ರಕರು :
ಎಸ್. ಎಮ್. ಕುಲಕರ್ಣಿ
ಲಲಿತ ಮುದ್ರಣಾಲಯ
ಧಾರವಾಡ

ಪ್ರಕಾಶಕರು :
ದ. ಬಾ. ಕುಲಕರ್ಣಿ
ಮನೋಹರ ಗ್ರಂಥಭಾಂಡಾರ
ಧಾರವಾಡ

# ಅರಿಕೆ

ಕಳೆದ ವರುಷವೇ ಪ್ರಕಟವಾಗಬೇಕಾಗಿದ್ದ ಈ 'ಚಿರವಿರಹಿ' ಕಾದಂಬರಿ ಈಗ ಪ್ರಕಟವಾಗುತ್ತಿದೆ. ಇದನ್ನು ತುಂಬ ಕುತೂಹಲದಿಂದ ಎದುರುನೋಡುತ್ತಿದ್ದ ನಮ್ಮ ಚಂದಾದಾರರು ಇದನ್ನು ಸಂತೋಷದಿಂದ ಸ್ವಾಗತಿಸುವರೆಂದು ಆಶಿಸುತ್ತೇವೆ.

ಈ ಕೃತಿಯ ಕರ್ತೃ ಪುತ್ತೂರಿನ ಶ್ರೀ ಬೆಳ್ಳಿ ರಾಮಚಂದ್ರರಾಯರು. ಇವರು ದಕ್ಷಿಣ ಕನ್ನಡ ಜಿಲ್ಲೆಯ ಗಣ್ಯ ವಕೀಲರು.

ಜಾತಕಕೂಡಿಯೂ ರುಚಿಭೇದದಿಂದ ಅನಾಕರ್ಷಕವಾದ ಒಂದು ದಾಂಪತ್ಯ ಚಿತ್ರ; ಜಾತಕಕೂಡದೆಯೂ ಸಂಸ್ಕಾರವಿಶೇಷದಿಂದ ಆಕರ್ಷಕವಾಗಬಲ್ಲ ಇನ್ನೊಂದು ಜೋಡಿಯ ಚಿತ್ರ. ಈ ಎರಡೂ ರಂಗಗಳಲ್ಲಿ ಒಂದೇ ಹೆಣ್ಣಿನ ಪಾತ್ರ! ಈ ಸನ್ನಿವೇಶವನ್ನು ಚಿತ್ರಿಸುವಾಗ ಶ್ರೀಯುತರು ಮನೋವ್ಯಾಪಾರದ ವಿಲಕ್ಷಣ ಸಮಸ್ಯೆಯನ್ನು ಓದುಗರ ಮುಂದೊಡ್ಡಿ ಅದನ್ನು ಎದುರಿಸುವಾಗ ಒಂದುಬಗೆಯ ಸಾತ್ವಿಕ ಆದರ್ಶವನ್ನು ಮೆರೆದಿದ್ದಾರೆ

ಲಲಿತವಾದ ಸಂಭಾಷಣೆಗಳು, ಹಿತಮಿತ ವಿನೋದ, ಸಾಹಿತ್ಯ. ಸಂಗೀತ, ಕಲಾಪ್ರಿಯತೆ, ರಸಿಕಮನೋಲ್ಲಾಸ—ಇವೆಲ್ಲವುಗಳನ್ನು ಹದವರಿತು ಚಿತ್ರಿಸುವ ಆಕರ್ಷಕವಾದ ಶೈಲಿ, ಇವೆಲ್ಲ ಕಾದಂಬರಿಯ ನಡೆಗೆ ಸಹಜತೆಯ ಓಟವನ್ನು ತಂದಿವೆ.

ಇಂಥ ಒಂದು ಕೃತಿಯನ್ನು ನಮ್ಮ ಮಾಲೆಯಲ್ಲಿ ಹೆಣೆಯಲು ನಮಗೆ ತುಂಬ ಸಂತೋಷವೆನಿಸುತ್ತದೆ. ಈ ಸದವಕಾಶ ಕಲ್ಪಿಸಿಕೊಟ್ಟ ಶ್ರೀ. ಬೆಳ್ಳಿ ರಾಮಚಂದ್ರರಾಯರಿಗೆ ನಾವು ತುಂಬ ಕೃತಜ್ಞರಾಗಿದ್ದೇವೆ

ಮಾಲೆಯ ಪುಸ್ತಕ ಪ್ರಕಾಶನ ಮಂದಗತಿಯಿಂದ ನಡೆದಿದೆ. ನಮ್ಮ ಚಂದಾದಾರರು ತಮ್ಮ ಆಪ್ತಸ್ನೇಹಿತವರ್ಗದಲ್ಲಿ ಮಾಲೆಯ ಬಗ್ಗೆ ಹೇಳಿ ನಮಗೆ ಇನ್ನಷ್ಟು ಗ್ರಾಹಕಸಂಪತ್ತು ಒದಗಿಸಿಕೊಡಲಿ; ನಮ್ಮಿಂದ ಇನ್ನೂ ಹೆಚ್ಚಿನ ಸೇವೆ ತಕ್ಕೊಳ್ಳಲಿ.

ಧಾರವಾಡ
೮-೫-೫೦

ಸಂಪಾದಕರು
ಲಲಿತ ಸಾಹಿತ್ಯಮಾಲೆ

# ಚಿರವಿರಹಿ

## ೧

ರಾಘವೇಂದ್ರರಾಯರಿಗೆ ಕಾದು ನಿಂತು ನಿಂತು ಸಾಕಾಗಿತ್ತು. ಅವರ ಗಂಭೀರ ಮುಖಲಕ್ಷಣ ಅಸಹನೆಯಿಂದ ಮಲಿನವಾಗಿತ್ತು. ಬೆಳಿಗ್ಗೆ ಏಳು ಗಂಟೆಗೆ ವಿಟ್ಟಲಕ್ಕೆ ಹೊರಡಬೇಕಾಗಿದ್ದ ಬಸ್ಸು ಎಂಟು ಗಂಟೆ ದಾಟಿದರೂ ಗ್ಯಾರೇಜಿನಿಂದ ಸ್ಟೇಶನಿಗೇ ಬಂದಿರಲಿಲ್ಲ. ಎಲ್ಲಿ ಬದಲು ಬಿಟ್ಟಿಗೆ ಹೋಗಿದೆಯೋ, ಚಕ್ರ ಕಳಚಿ ಬಿದ್ದಿದೆಯೋ, ಅಥವಾ ಅಂದಿನ ಸರ್ವಿಸೇ ವಜಾ ಆಗಿದೆಯೋ ಯಾರಿಗೆ ಗೊತ್ತು? ಕೇಳಿದರೆ ಈಗ ಬರುತ್ತೆ, ಇನ್ನೊಂದೈದು ನಿಮಿಷದಲ್ಲೇ ಬಂದುಬಿಡುತ್ತೆ ಅನ್ನುತ್ತಿದ್ದರು. ಕೂತುಕೊಳ್ಳೋಣವೆಂದರೆ ತಂದ ಸಾಮಾನಿನ ಮೇಲೇ ಕೂತುಕೋಬೇಕಲ್ಲದೆ ಬೇರೆ ಸ್ಥಳವಿರಲಿಲ್ಲ. ಮಂಗಳೂರಿನಂಥ ಶಹರಿನಲ್ಲಿ, ದಿನವೊಂದಕ್ಕೆ ನೂರಾರು ಬಸ್ಸುಗಳು ಅಷ್ಟದಿಕ್ಕುಗಳಿಗೂ ಓಡಾಡುತ್ತಿರುವಲ್ಲಿ, ಸಾವಿರಾರು ಮಂದಿ ಪ್ರಯಾಣಿಕರು ಬಂದುಹೋಗಿ ಹತ್ತಿ ಇಳಿದು ಮಾಡುತ್ತಿರುವಲ್ಲಿ, ಜಿಲ್ಲೆಯ ಕೇಂದ್ರದಲ್ಲಿ, ಮಳೆಬಿಸಿಲಿನಿಂದ ವಿಶ್ರಮಿಸಿಕೊಳ್ಳಲು ಒಂದು ಬಸ್ಸು ಸ್ಟ್ಯಾಂಡಿಗೂ ಗತಿಯಿರಲಿಲ್ಲಾಂದ್ರೆ? ಟಿಕೆಟು ಆಫೀಸು ಕೂಡಾ ಅಷ್ಟೆ: ಹರಕು ಮುರುಕು, ಹಂಗಾಮಿ ಏರ್ಪಾಡು; ಮಂಗಳೂರಿಗೆ ನಾಚಿಕೆಗೇಡು. ರಾಘವೇಂದ್ರರಾಯರು ಕಾಲು ಸೋತು ಬೆಂಡಾಗಿದ್ದರೂ ಬೀದಿಯ ಬಳಿ ಗಂಟುಮೂಟೆಗಳ ಮೇಲೆ, ಟ್ರಂಕು ಪೆಟ್ಟಿಗೆಗಳ ಮೇಲೆ ಹೇರಿಕೊಳ್ಳತಕ್ಕವರಲ್ಲ. ಸಿಡುಕು ಮೋರೆ ಮಾಡಿಕೊಂಡು ಕೈಕಟ್ಟಿಕೊಂಡು ಕಾವಲುಗಾರನಂತೆ ನಿಂತಿದ್ದರು. ಅವರಿಗೆ ಮೊದಲೇ ಗೊತ್ತು: ಸೇಕಡ ತೊಂಭತ್ತೊಂಭತ್ತು ಮಂದಿಗೆ ಸುಸೂತ್ರವಾಗಿ ಯಾವ ಕೆಲಸವನ್ನು ಮಾಡುವುದಕ್ಕೂ ಬರದು; ಹೆಂಗುಸರಿಂದಲೂ ಕಡೆ ಎಂಬುದು.

ಆಗ ಒಂದು ಬಲೆಬನೀನಿನ ಕೆಳಗೆ ಚೌಕುಳಿ ಲುಂಗಿಯನ್ನು ಸುತ್ತಿ, ಸೊಂಟಕ್ಕೊಂದು ಬೆಳ್ಳಿಯ ಹಾಗಿದ್ದ ಉಡಿದಾರವನ್ನು ಬಿಗಿದ, ತಂಬಿಗೆ ತಲೆಯ ಬ್ಯಾರಿಯೊಬ್ಬ ಅಂಗೈಮೇಲೆ ನಾಲ್ಕು ಕಿತ್ತಳೆ ಹಣ್ಣುಗಳನ್ನಿಟ್ಟು ಕೊಂಡು ರಾಘವೇಂದ್ರರಾಯರ ಮುಂದೆ ಬಂದು ನಿಂತು, "ಸೋಲ್ನಾರೆ, ಸೋಲ್ನಾರೆ" ಎಂದು ಕೂಗುತ್ತ ಆರತಿ ಮಾಡಿದ. ರಾಘವೇಂದ್ರರಾಯರು ಅಸಹ್ಯಪಟ್ಟು ಮುಖ ತಿರುಗಿಸಿದರು, "'ಕಿತ್ತಳೆ ಹಣ್ಣು' ಅನ್ನೋದಕ್ಕೆ ಸಂಕಟ," ಅಂದುಕೊಳ್ಳುತ್ತ. ಅಷ್ಟರಲ್ಲಿ ಸಮೀಪದ ಕಾಫಿ ಹೊಟೆಲಿಗೆ ಹೋಗಿದ್ದ ಕಮ್ತಿಯರೂ ಕೃಷ್ಣಯ್ಯನೂ ಮರಳಿ ಬಂದರು. ಕಮ್ತಿಯರು ಕೃಷ್ಣಯ್ಯನ ಖರ್ಚಿನಿಂದ ಪಟ್ಟಾಗಿ ನಾಲ್ಕು ಇಡ್ಲಿ ಸಾಂಬಾರು ಗಿಟ್ಟಿಸಿ ಕೊಂಡದ್ದಲ್ಲದೆ ಅವರ ಕೈಯಿಂದ ಒಂದು ಚುಟ್ಟವನ್ನು ಇಸ್ಕೊಂಡು ಬಾಯಿಗೆ ತುರುಕಿಕೊಂಡಿದ್ದರು. ಆಗ ಒಂದು ಬಸ್ಸು ಬಂತು, ಅತಿ ತರಾತುರಿಯಿಂದ. ತಕ್ಷಣ ಕಾದಿದ್ದ ನೂರಾರುಮಂದಿ ಪ್ರಯಾಣಿಕರು ಮುತ್ತಿದರು. ಒಬ್ಬ ಏಜೆಂಟು ಟಿಕೆಟು ಪಂಜರದಿಂದ ಹೊರಬಂದು "ಮಂಗಳೂರು ವಿಟ್ಲ, ಮಂಗಳೂರು ವಿಟ್ಲ" ಎಂತ ಭಜನೆ ಮಾಡುತ್ತ ಬಸ್ಸಿನ ಬಳಿ ನಿಂತ. ಅವರ ಸಹಾಯದಿಂದ ರಾಘವೇಂದ್ರರಾಯರಿಗೂ ಕೃಷ್ಣಯ್ಯಗೂ ಡ್ರೈವರಿನ ಸೀಟಿನಲ್ಲಿ ಸ್ಥಳ ದೊರಕಿತು. ಡ್ರೈವರಿನ ಹಿಂದಿನ ಸಾಲಿಗೆ ಇಬ್ಬರು ಕ್ರೈಸ್ತ ಕನ್ನೆಯರು ಹತ್ತುವುದನ್ನು ನೋಡಿ ಕಮ್ತಿಯರು ಅವರ ಬೆನ್ನುಹಿಡಿದು ನುಗ್ಗಿದರು. ಆದರೆ ಅವರ ಅದೃಷ್ಟ ಚೆನ್ನಾಗಿರಲಿಲ್ಲವೋ ಏನೋ, "ಇಳಿದುಬಿಡಿ ವಕೀಲರೇ, ಹೆಂಗಸರಿದ್ದಾರೆ" ಅಂದ ಏಜೆಂಟು. ಏರಿದವರು ಇಳಿಯಬೇಕಾಗಿ ಬಂದರೂ ವಕೀಲರು ಹತಾಶರಾಗಲಿಲ್ಲ. ಇನ್ನಿಬ್ಬರು ಹೆಂಗಸರು ಹತ್ತಿ ಕುಳಿತಮೇಲೆ, ಅವರ ಕಡೆ ಗಂಡಸರೊಬ್ಬರು ಕುಳಿತಮೇಲೆ, ಆರನೆಯವರಾಗಿ ಅದೇ ಸಾಲಿಗೆ ಸೇರಿಕೊಂಡರು. ಅವರ ದೇಹದ ಆಕಾರ ಮೃದಂಗದಂತಿದ್ದದ್ದರಿಂದ ಇಕ್ಕಟ್ಟಿನಲ್ಲಿ ಹಿಂದೊರಗಿ ಕೂತುಕೊಳ್ಳಲು ಸಾಧ್ಯವಾಗದೆ ಸೀಟಿನ ಅಂಚಿನ ಮೇಲೆ ಕೂತು, ಮೊಳಕಾಲುಗಳ ಮೇಲೆ ಕೈಯೂರಿಕೊಂಡು ಕತ್ತು ಚಾಚಿ ಅತ್ತಿತ್ತ ಇಣಿಕಿನೋಡಿದರು.

"ಒರಗಿ ಕೂತುಕೊಳ್ಳಿ ಕಮ್ತೇರು. ಅದಕ್ಕೇನೂ ಜಾಸ್ತಿ ಚಾರ್ಜು ಕೊಡಬೇಕಾಗಿಲ್ಲವಲ್ಲ" ಅಂದರು ಕೃಷ್ಣಯ್ಯ ಹಿಂದಿರುಗಿ ನೋಡುತ್ತ.

" ಹೂಂ ಸುರಾಯಿತು ತಮಾಷೆಗೆ. ನನಗ್ಗೊತ್ತು ನಿಮ್ಮ ಹೊಟ್ಟೇಯುರಿ ಏನೂಂತ. ಕಾರು ಮಾಡಲಿಲ್ಲಾಂತಲ್ವೇ ? ನಲವತ್ತು ರೂಪಾಯಿ ಕೇಳಿದ ಹಾಳಾದವನು; ಗೊತ್ತೇ ? ಯಾತಕ್ಕೆ ತಿನ್ನಿಸಬೇಕು, ಕಾರಿನವನಿಗೆ ? ಕಂಡ ವರ ಕಾಸಾದ್ರೇನು ? ಈಗ ನೋಡಿ, ನಾಲ್ಕೇ ನಾಲ್ಕು ರೂಪಾಯಿಯೊಳಗೆ ಹೋಗಿ ಬರೋದಿಲ್ವೇ, ನಾವು ? ಏನು ರಾಘವೇಂದ್ರರಾವ್ ? ನಿಮ್ಮಿಪ್ಪತ್ತು ರೂಪಾಯಿನೂ ಉಳೀತು, ನನ್ನದೂ ಉಳೀತು. ಅಲ್ವೇ ?"

ಈ ಸುಹದುಪಕಾರಕ್ಕೆ ರಾಘವೇಂದ್ರರಾಯರು ಏನು ಹೇಳಿದರೋ ; ಹಿಂದಿನ ಸೀಟುಗಳಲ್ಲಿದ್ದ ಗಲಭೆಯಿಂದ ಕೇಳಿಸಲಿಲ್ಲ. ಏಜಂಟನು ಒಂದೊಂದಾಗಿ ಟಿಕೆಟುಗಳನ್ನು ತನಿಖೆ ಮಾಡುತ್ತಿದ್ದ. ಹತ್ತಿಕೂತುಬಿಟ್ಟರೆ ಹೇಗೂ ಹೋಗಿಬಿಡಬಹುದೆಂಬ ಭರವಸೆಯಿಂದ ನಿಗ್ಗಿನಲ್ಲಿ ಟಿಕೆಟು ಸಿಗದಿದ್ದವರನ್ನೂ ಬೇರೆ ಬಸ್ಸುಗಳಿಗೆ ಟಿಕೆಟು ಪಡೆದು ಸುರು ಬಂದ ಬಸ್ಸಿಗೆ ಹತ್ತಿ ಕೂತವರನ್ನೂ, ಹೋಗುವವರನ್ನು ಬೀಳ್ಕೊಡಲು ಬಂದು ಸೇರಿಕೊಂಡ ನೆಂಟರಿಷ್ಟರನ್ನೂ, ಬೈದು ಬೆದರಿಸಿ ಕೆಳಗಿಳಿಸುತ್ತಿದ್ದ. ಈ ಗೊಂದಲವಾಗುತ್ತಿರುವಾಗ ಬಸ್ಸು ನಿಲ್ಲಿಸಿಬಿಟ್ಟು ಅದೃಶ್ಯರಾದ ಡ್ರ್ಯೈವರನೂ ಕಂಡಕ್ಟರನೂ ಎಲೆ ಅಡಿಕೆ ಮೆಲ್ಲುತ್ತ ಬೀಡಿ ಸೇದುತ್ತ ಮಾತನಾಡುತ್ತ ನಗುತ್ತ ಬೀದಿಯ ಕೊನೆಯಿಂದ ಬಂದರು. ಬಸ್ಸಿನ ಬಳಿ ಬಂದೊಡನೆ ಸಾರಥಿಯು ಬಾಯಲ್ಲಿದ್ದ ಬೀಡಿ ತುಂಡನ್ನು ತೆಗೆದೆಸೆದು ಅಲ್ಲೇ ಹಾದು ಹೋಗುತ್ತಿದ್ದ 'ಬೀಡ ಬೀಡಿ ಸಿಗರೇಟ್' ನವನ ಕುತ್ತಿಗೆಗೆ ತೂಗ ಹಾಕಿದ್ದ ತಟ್ಟೆಯಿಂದ ಒಂದು ಬೀಡಿ ಕಟ್ಟನ್ನು ಹೇಳದೆ ಕೇಳದೆ ತೆಗೆದು ಕಿಸೆಗೆ ಸೇರಿಸಿ, ಬಸ್ಸಿನ ಹಾರ್ನು ಮೂರು ಬಾರಿ ಹಿಸುಕಿ, ತನ್ನ ಸ್ಥಾನದಲ್ಲಿ ಹತ್ತಿ ಕುಳಿತು,ಪಕ್ಕದಲ್ಲಿ ಅಸಹನೆಯಿಂದ ಕುದಿಯುತ್ತಿದ್ದ ರಾಘವೇಂದ್ರರಾಯರಿಗೆ ಸಲಾಂ ಹೊಡೆದು, ಹುರುಪಿನಿಂದ "ಆಗ್ಲಿಲ್ವೇನೋ, ತಿಮ್ಮಾ?ಸ್ಟೇಟುಮೆಂಟು ತಗೊಂಡಿಯೇನೋ? ಎಂದರಚಿದ.

ಕಮ್ತಿಯರು " ರ್‍ಯಾಟ್ " ಅಂದರು. ಆದರೆ ಬಸ್ಸಿನ ಮಾಡಿನ ಮೇಲೆ ಹತ್ತಿಕೊಂಡು ಸಾಮಾನು ಒತ್ತರೆ ಮಾಡುತ್ತಿದ್ದ ಕಂಡಕ್ಟರು ತಿಮ್ಮನಿಗೆ ಇನ್ನೂ 'ರ್‍ಯಾಟ್' ಆಗಿರಲಿಲ್ಲ.

" ಯಾರಿಗ್ರೀ ಅದು ಪ್ರಾಣಾ ಹೋಗೋದು ? ಆಗ್ಲಿಲ್ಲ, ಆಗ್ಲಿಲ್ಲ. " ಅಂತ ರೇಗಿದ. ಆಮೇಲೆ ಕೆಳಗಿಳಿದು ಕಣ್ಣಮೇಲೆ ಬೀಳುತ್ತಿದ್ದ ಕೆದರಿದ ಕ್ರಾಪನ್ನು

ಹಿಂದಕ್ಕೆ ಜಾಡಿಸಿ, ಟಿಕೆಟು ಆಫೀಸಿಗೆ ಓಡಿಹೋಗಿ ಸ್ಟೇಟುಮೆಂಟು ತಂದು 'ಕಟ್ಟಾ' ತೆಗೆದು, 'ರ‍್ಯಾಟ್' ಹೇಳಿಬಿಟ್ಟು, ಸಾರಥಿಯು ಪೋಲಿಸಿನವರ ಪುಸ್ತಕಕ್ಕೆ ಸಹಿ ಗೀಚಿ, ಮತ್ತೆ ಹಾರ್ನು ಬಾರಿಸಿ, ಬಸ್ಸು ಹೊರಡಿಸಿದ ಮೇಲೆ, ಹೇಗೇಗೋ ಹತ್ತಿ ಕುಳಿತ.

ಈ ಪ್ರಕಾರ ಮೂವರು ಎಡ್ವೋಕೇಟರು ಸುಮಾರು ಇಪ್ಪತ್ತು ಮೈಲಿ ದೂರವಿದ್ದ ವೀರಕಂಭವೆಂಬ ಹಳ್ಳಿಗೆ ಸ್ಥಳತನಿಖೆಗಾಗಿ ಹೊರಟರು. ರಾಘವೇಂದ್ರರಾಯರು ವಾದಿವಕೀಲರು, ನರಸಿಂಗ ಕಮ್ತಿಯರು ಪ್ರತಿವಾದಿ ವಕೀಲರು, ಕೃಷ್ಣಯ್ಯನವರು ಕೋರ್ಟು ಕಮಿಶನರು ಕಮ್ತಿಯರು ದಾರಿಯುದ್ದಕ್ಕೂ ಪರಡಿಹೊಡೆಯುತ್ತಲೇ ಇದ್ದರು. ತನ್ನ ಸಾಲಿನ ಕೊನೆಯಲ್ಲಿದ್ದ ಕ್ರೈಸ್ತ ಮುಗುದೆಯರು ಬಾಯಿಗೆ ಕೈಯಿಟ್ಟುಕೊಂಡು ಹೆಗಲು ಮುದುರಿಸಿಕೊಂಡು ತಲೆಬಾಗಿ ನಗುತ್ತಿರುವುದನ್ನು ನೋಡಿ ಅವರನ್ನು ಇನ್ನಷ್ಟು ಮೆಚ್ಚಿಸುವಗೋಸ್ಕರ ಕುಚೇಷ್ಟೆಗೆ ಆರಂಭಿಸಿದರು.

"ಎರಡು ಟಿಕೇಟು ಕೊಂಡರೂ ಸುಖವಿಲ್ಲ, ಅಲ್ವೇ ಸಾಹುಕಾರ‍್ರೇ ?" ಅಂತ ಹಿಂದಿನ ಸಾಲಿನಲ್ಲಿದ್ದ ಡೊಳ್ಳುಹೊಟ್ಟೆಯ ಸಾಬರನ್ನು ಮಾತಾಡಿಸಿದರು. ಇನ್ನೊಬ್ಬ ಖಾಕಿ ಚಡ್ಡಿ ಶರಟು ಹಾಕಿದ್ದ ಹಳ್ಳಿ ಹುಡುಗನನ್ನು ನೋಡಿ, "ಏನಯ್ಯಾ, ನೀನು ಮಿಲಿಟರಿಗೆ ಸೇರಿದ್ದೀಯೊ ? ಇಲ್ವೇ ಛೆ ! ಛೆ ! ಛೇ ! ಏನನ್ಯಾಯ ! ಇನ್ನಾದ್ರೂ ಹೋಗಿ ಸೇರಿಕೋ. ತಾಲೂಕು ಕಚೇರಿಗೆ ಹೋಗಿ ನಾನು ಕಳುಹಿಸಿಕೊಟ್ಟದ್ದು ಅನ್ನು. ಒಡನೆ ಸೇರ‍್ಸಿಕೋತಾರೆ. ಆಮೇಲೆ ಸತ್ತರೂ ಪರವಾಯಿಲ್ಲ. ನಿನ್ನ ತಾಯಿಗೆ ಒಂದು ಬಾಟ್ಲೆ ಸೀಮೆ ಎಂಣೆನೂ ನಾಲ್ಕು ರಾತ್ಲು ಸಕ್ರೇನೂ ಕೊಟ್ಟುಬಿಟ್ಟು ಹೊಟ್ಟೆ ತಣ್ಣಗೆ ಮಾಡ್ತಾರೆ, ಸರಕಾರದೋವ್ರು' ಅನ್ನುತ್ತ ಹೊಟ್ಟೆ ಕುಲುಕಿಸುತ್ತ ಗಹಗಹನೆ ನಕ್ಕರು.

ಮತ್ತೊಬ್ಬನ ಹತ್ತರ ಮದ್ರಾಸು ನಸ್ಯ ಇಸ್ಕೊಂಡು ಮೂಗಿಗೆ ತುಂಬಿಸಿಕೊಂಡು ಕೆಮ್ಮುತ್ತ "ಯಾವ ಬೀದೀದೋ ಇದು ?" ಎಂದು ಪ್ರಶ್ನಿಸಿದರು. ಈ ಅಡ್ವೋಕೇಟರಿಗೆ ಕೊಳ್ಳುವುದರಲ್ಲಿ ಸಂಕೋಚವಿಲ್ಲವೆಂಬದನ್ನು ನೋಡಿ ಮತ್ತೊಬ್ಬ ಕೇವಲ ಅಪರಿಚಿತರು ಒಂದು ಬೀಡ ಕೊಟ್ಟರು. ಕಮ್ತಿಯರು ಅದನ್ನು ಬಿಡಿಸಿ ಸರಿಮಾಡಿ ಬಾಯಿಗೆ ಹಾಕಿಕೊಂಡು ಜಗಿಯುತ್ತ, "ಬಸ್ಸು

ಬಿಡೋ ಮೊದ್ಲೇ ಆಗಿದ್ರೆ ಬೊಂಬ್ಯಾಬೀಡ ಕೊಡಿಸುತ್ತಿದ್ದೆ ನಿಮಗೆ" ಅಂದರು. ಒಬ್ಬ ಹಳ್ಳಿ ಶಾಲಾಮಾಸ್ತರನ್ನು ಕಂಡು "ಏನು ಮಿಸ್ಟರ್, ನೀವು ಸಿಗರೇಟು ಸೇದೋದಿಲ್ಲವೇ ?" ಎಂದು ಕೇಳಿದರು. ಆತ, ಪಾಪ, ಒಂದು ಪ್ರಾಮಿಸರಿ ನೋಟಿನ ಕುರಿತು ಮುನ್ಸಿಫ್ ಕೋರ್ಟಿನಲ್ಲಿ ಸಾಕ್ಷಿ ನುಡಿಯುವುದಕ್ಕೆ ಬಂದವನು ಮಂಗಳೂರಲ್ಲಿ ಕೂಡಿದ ಮಟ್ಟಿಗೆ 'ಶೋಕು' ಮಾಡಿ ತನ್ನ ಹಳ್ಳಿಗೆ ಹಿಂತಿರುಗುವಾಗ ನೆನಪಿಗೆ ಬಂದು ಸಿಗರೇಟು ಪ್ಯಾಕೆಟಾದರೂ ಇರಲೀಂತ ಇಟ್ಟುಕೊಂಡಿದ್ದವನು,

"ತಮಗೆ ಆಗುತ್ತೋ ಇಲ್ವೋ, ಕರಡಿ ಮಾರ್ಕಿಂದು" ಅನ್ನುತ್ತ ಜೇಬಿಗೆ ಕೈ ಹಾಕಿದ.

"ಹೋ, ಆಗಬಹುದು. ಆದಕ್ಕೇನು ? ಹಚ್ಚಿ ಉರಿಸೋದಕ್ಕೆ ಕರಡಿಯಾದರೇನು, ಗೂಬೆಯಾದರೇನು !" ಅನ್ನುತ್ತ ಕಮ್ತಿಯರು ಆತ ಕೊಟ್ಟ ಸಿಗರೇಟನ್ನು ಕೊಂಡರು. ಬಲಗಡೆ ಕೂತಿದ್ದ ಹೆಂಗಸರನ್ನು ನೋಡಿ "ನಿಮ್ಮ ಆಕ್ಷೇಪವಿಲ್ಲವಷ್ಟೆ ?" ಎಂದರು. ಅವರು ಮುಗುಳು ನಗುತ್ತ ತಲೆಯಾಡಿಸಿದ ಮೇಲೆ ಸಿಗರೇಟನ್ನು ಹಚ್ಚಿ ಒಲೆ ಊದುವ ಕೊಳವೆಯಂತೆ ಬಾಯಲ್ಲಿಟ್ಟುಕೊಂಡು ಸೇದಿದರು. ರೇಶನ್ ಚೌಕಿಗೆ ತಲುಪಿ ಬಸ್ಸು ನಿಂತಾಗ ತನ್ನ ಪಕ್ಕದಲ್ಲಿದ್ದವರ ಕಡೆ ತಿರುಗಿ, "ನಾನೀಗ ತುರಿಸಿದೆನಲ್ಲ, ಅದು ಯಾರ ಕಾಲು ? ನನ್ನದೋ ನಿಮ್ಮದೋ ? ನಿಮ್ಮದೇನು ? ಹೋಗಲಿ ಬಿಡಿ. ಗೊತ್ತಾಗಲಿಲ್ಲ, ಈ ಸಂದಿಸಿಕ್ಕಿನಲ್ಲಿ" ಅಂದರು.

ಇದೆಲ್ಲ ನಕಲಿ ರಾಘವೇಂದ್ರರಾಯರಿಗೆ ಒಂದಿಷ್ಟೂ ಒಗ್ಗಲಿಲ್ಲ. ಅವರು ಅಸಮಾಧಾನದಿಂದ ಮೌನಸ್ಥರಾಗಿದ್ದರು. ಕೃಷ್ಣಯ್ಯ ಸ್ವಾಭಾವಿಕವಾಗಿ ಹಾಸ್ಯಪ್ರಿಯರಾಗಿದ್ದರೂ ಈ ರೀತಿ ಪರಕೀಯರಲ್ಲೂ ಪರಿಚಿತರಲ್ಲೂ ಒಂದೇ ಸಮ ಬಯಲಾಟದ ಹಾಸ್ಯಗಾರನಂತೆ ವರ್ತಿಸುವುದು ಅವರಿಗೂ ಹಿತವಾಗಿರಲಿಲ್ಲ. ಆದರೂ ಕಮ್ತಿಯರ ವಿಕಟ ವಿನೋದದಿಂದ ಪ್ರಯಾಣವೇನೋ ಸ್ವಾರಸ್ಯವಾಗಿತ್ತು.

ಈ ಸಮಕಾಲೀನ ಸಹ ಉದ್ಯೋಗಿಗಳು ಮೂವರ ವ್ಯಕ್ತಿಚಿತ್ರ ಮೂರು ತೆರನಾಗಿತ್ತು. ಅವರವರ ಪೂರ್ವಜೀವನಾವರಣದ ವೈವಿಧ್ಯವೇ ಅದಕ್ಕೆ ಕಾರಣ.

ರಾಘವೇಂದ್ರರಾಯರ ತಂದೆ ಶ್ರೀನಿವಾಸರಾಯರು ತೀರ್ಥಹಳ್ಳಿಯಿಂದ ಉಡುಪಿಗಾಗಿ ಮಂಗಳೂರಿಗೆ ಇಳಿದುಬಂದು ನೆಲೆಸಿದ್ದ ಕರ್ಣಾಟಕ ಕುಲದವರಾಗಿದ್ದರು. ಮಂಗಳೂರು ಬಂದರದಲ್ಲಿ ಕಾಫಿ ಯಾಲಕ್ಕಿ ಮೊದಲಾದ ದಲಾಲಿ ವ್ಯಾಪಾರ ಮಾಡಿ ತುಂಬ ಹಣವನ್ನು ಸಂಪಾದಿಸಿ ತನ್ನ ಒಬ್ಬನೇ ಒಬ್ಬ ಮಗನಿಗೆ ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಶಿಕ್ಷಣವನ್ನು ಕೊಡಿಸಿ, ಅನಂತರ ಆತ ವಕೀಲಿ ಪರೀಕ್ಷೆ ಕೊಡುವ ಮೂರು ತಿಂಗಳ ಮುಂಚೆ ಇದ್ದಕ್ಕಿದ್ದ ಹಾಗೆ ಎದೆನಾಡಿ ನಿಂತುಬಿಟ್ಟು ಗತಿಸಿದ್ದರು. ಮದ್ರಾಸಿನಲ್ಲಿ ರಾಘವೇಂದ್ರರಾಯರಿಗೆ ಹಾಸ್ಟೆಲು ವಾಸ ರುಚಿಸದೆ, ಪರಜಾತಿ, ಪರಭಾಷೆ, ಪರದೇಶದವರೊಡನೆ ಬೆರತಿರಲು ಇಷ್ಟವಿಲ್ಲದೆ, ಒಬ್ಬ ಅಡುಗೆಯವನನ್ನಿಟ್ಟುಕೊಂಡು ಬೇರೆ ಬಿಡಾರ ಮಾಡಿಕೊಂಡಿದ್ದರು. ವಿಜ್ಞಾನ ಶಾಸ್ತ್ರದಲ್ಲಿ ಮೇಲ್ತರಗತಿಯ ಉತ್ತೀರ್ಣತೆಯನ್ನು ಪಡೆದರು. ಪಾಶ್ಚಾತ್ಯ ಶಾಸ್ತ್ರ ಪ್ರಮುಖರಾದ ಡಾರ್ವಿನ್, ಹಕ್ಸ್ಲೀ, ಸ್ಪೆನ್ಸರ್ ಅಂತಹವರ ಆದಿಭೌತಿಕ ಪಂಥದ ಪಥ್ಯವನ್ನುಂಡು ಬೆಳೆದದ್ದರಿಂದ ಯಂತ್ರಸಾಧನಗಳ ಶೋಧನೆಗೆ ಸಿಗದ ಮಾನವವ್ಯಾಪಾರ ವರ್ತನೆಗಳ ಕುರಿತು ಅವರ ತಿಳುವಳಿಕೆ ಆಳವಾಗಿರಲಿಲ್ಲ. ಜನತೆಯ ನಿತ್ಯ ನಡತೆಯ ಸರಳತೆ, ಸಹಾನುಭೂತಿ, ಪ್ರೀತಿ, ಭಕ್ತಿಗಳಿಗೆ ಅವರು ಹೆಚ್ಚಿನ ಬೆಲೆಗೊಡುತ್ತಿರಲಿಲ್ಲ. ಸೇವೆ, ತ್ಯಾಗ ಇವೇ ಮಾನವ ಗುಡಿ ಗೋಪುರಗಳ ಅಡಿಗಲ್ಲುಗಳೆಂದರೆ ಇರಬಹುದು, ಆದರೆ ಅವು ಒಂದಕ್ಕೊಂದು ಅಂಟಿಕೊಂಡಿರೋದು ಸ್ವಾರ್ಥವೆಂಬ ಸಿಮೆಂಟಿನಿಂದ ಅನ್ನುತ್ತಿದ್ದರು. ಸಾಹಿತ್ಯಾಭಿರುಚಿ, ಕಲಾವಿಲಾಸ, ಸೌಂದರ್ಯೋಪಾಸನೆ ಮೊದಲಾದ ಆಸಕ್ತಿಗಳು ಅಜ್ಞಾನಿಗಳ ಜಪಸರದ ರುದ್ರಾಕ್ಷಿಮಣಿಗಳೆಂದು ತುಚ್ಛೀಕರಿಸುತ್ತಿದ್ದರು. ಜಗವೆಲ್ಲ ಒಂದಾನೊಂದು ಅವ್ಯಕ್ತ ಅಮಾನುಷ ರಚನೆಯನ್ನವಲಂಬಿಸಿದೆ. ಕ್ಷಣಕ್ಷಣಕ್ಕೂ ಬದಲಾಗುತ್ತಿರುವುದೇ ಅದರ ಶಾಶ್ವತ ಗುಣ. ಅಂತಹ ಜಗದ್ರಚನೆಯ ನಿಯಾಮಕನೇ ಸಾಕ್ಷಾತ್ಕಾರನೇ ದೇವರು ಅಂದರೆ, ಆ ಪರಮ ಶಕ್ತಿಗೆ 'ದೇವರು' ಎಂಬ ಹಳಸಿದ ಹೆಸರಿಟ್ಟು ಆ ಹೆಸರಿಗೆ ತಗಲಿಕೊಂಡಿರುವ ಪ್ರಾಚೀನ ವಿಷಪರಂಪರೆಗಳಿಗೆ ಯಾಕೆ ಶರಣು ಹೋಗಬೇಕು ಅಂತ ಪ್ರಶ್ನಿಸುತ್ತಿದ್ದರು.

ಅವರ ಈ ಬುದ್ಧಿಯ ಹರಿತ ಅವರು ಸಂಸಾರಕ್ಕಿಳಿದ ಮೇಲೆ ಅದರ ಉಪ್ಪು ಹುಳಿ ಖಾರದಿಂದ ಸ್ವಲ್ಪ ಮಟ್ಟಿಗೆ ಮೊಂಡಾಗಿದ್ದರೂ ತೀರ ಹೋಗಿರಲಿಲ್ಲ.

ಉದ್ಯೋಗದ ಅನುಸಂಧಾನದಲ್ಲಿ ಉಪಕಾರಿಯಾಗಿತ್ತು. ಇದರೊಂದಿಗೆ ರಕ್ತಗತವಾದ ಆತ್ಮಾಭಿಮಾನವು ಸೇರಿಕೊಂಡುದರಿಂದ ಅವರು ಜನಸಾಮಾನ್ಯರ ಮಟ್ಟಕ್ಕಿಂತ ಸ್ವಲ್ಪ ದೂರವಾಗಿಯೂ ಸ್ವಲ್ಪಎತ್ತರವಾಗಿಯೂ ಬೇರೆ ಏಕಾಂಗಿಯಾಗಿದ್ದರು. ಸಂಪತ್ತಿನ ತೊಟ್ಟಿಲಲ್ಲಿ ಲಾಲಿತರಾದವರಿಗೆ ಅತಿ ಸುಲಭವಾಗಿ ಅಂಟಿಕೊಳ್ಳತಕ್ಕ ಯಾವ ದುಶ್ಚಾಳಿಯೂ ಅವರ ಬೆನ್ನು ಹತ್ತಿರಲಿಲ್ಲ. ಜೀವತ್ವದ ಸುಖದುಃಖದ ಗಂಧ ಗಾಳಿಯೂ ಅವರ ಮೂಗಿನ ನೆಲೆಗೆ ನಿಲುಕುತ್ತಿರಲಿಲ್ಲ.

ಉದ್ಯೋಗಕ್ಕೆ ತೊಡಕಿದಮೇಲೆ ತದೇಕ ಚಿತ್ತದಿಂದ ಸಾಧಿಸುವುದು ಅವರಸಹಜ ಲಕ್ಷಣವಾದ್ದರಿಂದ ಹತ್ತು ವರ್ಷಗಳೊಳಗೆ ಉದ್ದಾಮ ವ್ಯಾಸಂಗದಿಂದಲೂ ಪ್ರಾಮಾಣಿಕತನದಿಂದಲೂ ಕಕ್ಷಿಗಾರರ ಹಾಗೂ ನ್ಯಾಯಾಧಿಕಾರಿಗಳ ವಿಶ್ವಾಸಗೌರವಗಳ ಪಾತ್ರರಾಗಿ ವಕೀಲವರ್ಗದಲ್ಲಿ ಗಣ್ಯರೆಂದು ಪ್ರಖ್ಯಾತಿ ಪಡೆದಿದ್ದರು.

ನೋಟಕ್ಕೆ ಗಂಭೀರವಾಗಿದ್ದರು. ಐದಡಿ ಆರಿಂಚಿನ ತುಂಬಿದ ದೇಹ, ತಿಳಿಯಾದ ಮೈಬಣ್ಣ, ದುಂಡಗಾದ ಅಧಿಕಾರಯುಕ್ತವಾದ ಕತ್ತು, ವಿಶಾಲವಾದ ಹಣೆ, ರಕ್ತ ಚಿಮ್ಮುವ ಕೆನ್ನೆ, ವಿಚಕ್ಷಣತೆ ಸೂಚಿಸುವ ಮೂಗು, ತಿರಸ್ಕಾರ ಭಾವದ ಕಣ್ಣುಗಳು, ಕುಡಿ ಮೀಸೆ, ಹೆಚ್ಚಾಗಿ ಬಿಗಿಯಲ್ಪಟ್ಟ ತುಟಿಗಳು: ಎಲ್ಲವೂ ಅವರ ಸ್ಥಾನಮಾನಗಳ ಹಿರಿಮೆಯನ್ನು ಬೀರುತ್ತಿದ್ದುವು.

ಕೃಷ್ಣಯ್ಯ ಹಾಗಲ್ಲ; ಸ್ವಲ್ಪವೂ ಹಾಗಲ್ಲ. ಅವರ ತಂದೆ ಒಂದು ಕುಗ್ರಾಮದ ಬಡ ವೈದಿಕರಾಗಿದ್ದರು. ಅವರು ಪೌರೋಹಿತ್ಯಕ್ಕೆ ಹೋದಲ್ಲೆಲ್ಲ ಅವರ ಹಿಂದೆ ಕೌಪೀನದಮೇಲೆ ಮೂರು ಮೊಳದ ತುಂಡನ್ನು ಸುತ್ತಿಕೊಂಡು ಪಂಚಪಾತ್ರೆ ಸಹಿತ ಹಿಂಬಾಲಿಸಿ ಹೋಗಿ ದಕ್ಷಿಣೆ ಹಿಡಿದವರು, ಕೃಷ್ಣಯ್ಯ. ಅನಂತರ ಮಂಗಳೂರ ಒಬ್ಬ ಶ್ರೀಮಂತರಲ್ಲಿ ಊಟಕ್ಕಿದ್ದು ಸರಕಾರವೇತನದ ಸಹಾಯದಿಂದ ಶಿಕ್ಷಣ ಹೊಂದಿದವರು. ಅಲ್ಲಿಂದ ಮುಂಬಯಿಗೆ ಹೋಗಿ ಸಾಹುಕಾರರ ಮನೆಯಲ್ಲಿ ಗುಮಾಸ್ತಗಿರಿಯನ್ನೂ ಲಾ ಕಾಲೇಜಿನಲ್ಲಿ ವ್ಯಾಸಂಗವನ್ನೂ ಏಕಕಾಲದಲ್ಲಿ ನಿರ್ವಹಿಸಿ ಹೊರಬಿದ್ದ ಶ್ರಮಜೀವಿ, ಅವರು. ಬಡತನದ ಒರಳಲ್ಲಿ ಸಾಕಷ್ಟು ಮೆತ್ತಗಾದ್ದರಿಂದ ಸಮಸ್ತರಲ್ಲೂ ಸಮತಾಭಾವ, ಸೌಹಾರ್ದ, ಸಹನ ಶೀಲತೆ ಇವೇ ಅವರ

ಮುಖ್ಯ ಗುಣಲಕ್ಷಣಗಳಾಗಿದ್ದವು. ವಕೀಲಿ ವೃತ್ತಿಯಲ್ಲಿದ್ದುಕೊಂಡು ಸ್ವಾರ್ಥ ಪರಾರ್ಥ ಎರಡನ್ನೂ ಸಾಧಿಸುವುದು ಶಕ್ಯವಲ್ಲವೆಂದು ಚೆನ್ನಾಗಿ ತಿಳಿದಿದ್ದರೂ ಸಾಧ್ಯವಾದಷ್ಟು ಪರೋಪಕಾರ ಮಾಡಿ ಸಮಾಜಕ್ಕೆ ತನ್ನ ಸಾಲವನ್ನು ಸಲ್ಲಿಸ ಬೇಕೆಂಬ ಹೆಗ್ಗುರಿಯನ್ನಿಟ್ಟುಕೊಂಡಿದ್ದರು. ಆದರ್ಶವಾದಿಯಲ್ಲದಿದ್ದರೂ ಆಶಾವಾದಿಯಾಗಿದ್ದರು. ತುಂಬ ನಗಬೇಕು, ನಗಿಸುತ್ತಿರಬೇಕು. ಇರಬೇಕು, ಅನುಭವಿಸಬೇಕು, ತಿಳಿಯಬೇಕು, ತಾಳಬೇಕು ಎಂದವರ ಮತ. ಈ ದಯಾ ಪರತೆಯ ಬೆಳಕಿಂದ ಅವರ ಎಣ್ಣೆಕಪ್ಪುಮೋರೆಯ ಬಾಡಿದ ಕೆನ್ನೆಗಳು, ತೆಳು ತುಟಿಗಳು ಮೊಂಡು ಮೂಗು, ದೂರದೂರವಾಗಿ ಗುಳಿಬಿದ್ದ ಕಣ್ಣುಗಳು, ಸಪುರವಾದ ಹಣೆ, ಎಲ್ಲವೂ ಆಕರ್ಷಕವಾಗಿತ್ತು. ನಿಲುವಿನಲ್ಲಿ ರಾಘವೇಂದ್ರ ರಾಯರಷ್ಟೇ ಎತ್ತರವಿದ್ದರೂ ಕೃಶವಾದ ದೇಹವಾದ್ದರಿಂದ ಇನ್ನಷ್ಟು ಉದ್ದವಾಗಿ ಕಾಣುತ್ತಿದ್ದರು.

ತನ್ನ ಉದ್ಯೋಗದಲ್ಲಿ ಅವರಿಗೆ ರಾಘವೇಂದ್ರರಾಯರಷ್ಟೇ ಆಸಕ್ತಿಯಿತ್ತು. ಆದರೆ ಕಣ್ಣುಪಟ್ಟಿ ಕಟ್ಟಿದ ಕುದುರೆಯ ಏಕಾಗ್ರತೆ ಅವರಂತಿರಲಿಲ್ಲ. ಕಾರ್ಯ ಸಾಧನೆಯಲ್ಲೂ ಹಟ ಅವರಷ್ಟಿರಲಿಲ್ಲ. ರಾಘವೇಂದ್ರರಾಯರಿಗೆ ಪಕ್ಷಕಾರ ಮುಖಸ್ತುತಿ ಮಾಡಿ, ಎದುರುವಾದಿಯ ದೋಷದುರ್ಗುಣಗಳನ್ನು ಬಿಡಿಸಿ ಬಣ್ಣಕೊಟ್ಟು ಎತ್ತಿಹಿಡಿದು, ಕಣ್ಣೀರು ಸುರಿಸಿದರೆ ಸಾಕು, ಫೀಸು ಇರಲಿ ಇಲ್ಲದಿರಲಿ, ಅವರು ರೌದ್ರವನ್ನು ತಾಳಿ ಪ್ರತಿಪಕ್ಷದವನು ತನ್ನ ಸ್ವಂತ ಆಜನ್ಮ ಶತ್ರುವೆಂದೇ ಭಾವಿಸಿ ಆತನನ್ನು ಹೇಗಾದರೂ ಮಾಡಿ ನಿರ್ಗತಿಕ ನನ್ನಾಗಿ ಮಾಡುವ ಒಂದೇ ಹಟ ತೊಡುತ್ತಿದ್ದರು. ಆದರೆ ಕೃಷ್ಣಯ್ಯಗೆ ಎದ್ರಿಯರದು ಹೇಗೋ ಹಾಗೆಯೇ ತನ್ನ ಕಕ್ಷಿಗಾರರ ಕೊಂಕು ಕೊರತೆಗಳು, ವಿಕಾರ ವೈಚಿತ್ರ್ಯಗಳು ಕಣ್ಣಿಗೆ ಕಟ್ಟಿದಂತಾಗುತ್ತಿದ್ದುದರಿಂದ ವಿರೋಧ ಪಕ್ಷಕಾರನ ಮೇಲೆ ವೈಯಕ್ತಿಕ ಸೇಡಿಗೆ ಅವಕಾಶವಿರಲಿಲ್ಲ.

ನರಸಿಂಹ ಕಮ್ತಿಯರು ಕೂಡಾ ಉದ್ಯೋಗಸಾಧನೆಯಲ್ಲಿ ರಾಘವೇಂದ್ರ ರಾಯರಷ್ಟೇ ದೀಕ್ಷಾಬದ್ಧರು, ದೃಢಚಿತ್ತರು. ಆದರೆ ಅವರ ದಾರಿ ಒಂದು, ಇವರ ದಾರಿ ಮತ್ತೊಂದು. ರಾಘವೇಂದ್ರರಾಯರು ಪ್ರತಿವಾದಿಯ ಹೆಸರನ್ನೇ ಎತ್ತುತ್ತಿದ್ದಿಲ್ಲ. ಅಂತಹ ನೀಚನ ವಕಾಲತ್ತು ವಹಿಸಿದ್ದಕ್ಕೆ ಆತನ ಅಡ್ವೋ ಕೇಟನ ಮೇಲೂ ಅಸಮಾಧಾನ, ಉಪೇಕ್ಷೆ. ಆದರೆ ಕಮ್ತಿಯರಿಗೆ ಒಂದು

Mr. K. Srinivasa Rao



ಕೇಸು ಬಂತೂದ್ರೆ ಸರಿ, ಆ ಲಾಗ್ಯಾಯಿತಿನಿಂದ ಪ್ರತಿಪಕ್ಷಿಯವನಲ್ಲಿ ಎಂದೂ ಇಲ್ಲದ ಸಲಿಗೆ, ಸಹಾನುಭೂತಿ, ಕನಿಕರ. ಆತನ ವಕೀಲರೆಂದರೆ ನಿಬಿಡವಾದ ಸ್ನೇಹಾಚಾರ. ಆತನ ಕಣ್ಣೆದುರಿಗೆ ಅವರ ಹೆಗಲಮೇಲೆ ಕೈಹಾಕಿಕೊಂಡು ಪದೇ ಪದೇ ಪಿಸುಮಾತು, ಒಳಸಂಚಿನ ಕಿರುನಗೆ, ಕಿರುಕುಳದ ಓರೆನೋಟ ಮೊದಲಾದ ಅಟ್ಟಹಾಸಗಳು. ಕ್ರಿಮಿನಲ್ ಮೊಕದ್ದಮೆಯಾದರೆ. ತನಿಖೆಗೆ ಸುರುವಾಗುವ ಮುಂಚೆಯೇ ಅಪಾದಿತನನ್ನು ಕೂಗಿ "ಕಂಬಳಿ ಕೊಂಡು ಕೊಳ್ಳೊ" ಅನ್ನೋದು. ಸಿವಿಲು ದಾವೆಯಾದರೆ "ನಿನ್ನಾಸ್ತಿಗೊಂದು ಗಿರಾಕಿ ಹುಡುಕೋ" ಅನ್ನೋದು. 'ಕಣ್ಣೆದುರಿಗೇ ಹಾಳಾಗ್ತಿದ್ದಾನಲ್ಲಾ' ಎಂಬಂತೆ ನೋಡೋದು. ಇಂತಹ ಸುರಂಗಸಾಧನೆಗಳಿಂದ ವಿಪಕ್ಷದವನ ಧೈರ್ಯ ಸ್ಥೈರ್ಯ ಸ್ವಾವಲಂಬನೆಯನ್ನು ಒಳಗೊಳಗೇ ಕೊರೆದು ಕುಸಿದುಬೀಳು ವಂತೆ ಮಾಡಿ ಬಳಿಕ ಕಾಯದೆ ಕಾನೂನುಗಳ ವ್ಯೂಹದೊಳಗೆ ಸದೆಬಡೆದು ಸೋಲಿಸುವುದರಲ್ಲಿ ಕಮ್ತಿಯರು ನಿಸ್ಸೀಮರು.

ಅವರ ವ್ಯಕ್ತಿಯ ರೀತಿನೀತಿಯ ಕುರಿತು ಒಬ್ಬೊಬ್ಬರು ಒಂದೊಂದು ವಿಧವಾಗಿ ಟೀಕಿಸುತ್ತಿದ್ದರು. "ಇವರಪ್ಪ ಸ್ಟೇಟುಮೆಂಟಿಗೆ ಕೈಪೇತಿನಷ್ಟೇ ಸ್ಟ್ಯಾಂಪು ಬೇಕೆಂತ ಕೇಳಿ ಸುಲಿಗೆ ಮಾಡುತ್ತಿದ್ರೆ ಇವರು ಅರ್ಜಿಕಾಗದಕ್ಕೆ ಇಬ್ಬದಿಗಳಲ್ಲೂ ಸ್ಟ್ಯಾಂಪು ಹಚ್ಚಬೇಕೆಂತ ಹೇಳಿ ತಕೋತಾರೆ" ಅಂತ ಒಬ್ಬರು. "ಕೇಸು ಬಿಟ್ಟರೂ ಕಮ್ತೇರು ಬಿಡರು" ಅಂತ ಇನ್ನೊಬ್ಬರು. "ಇದ್ದವರಿಗೆಲ್ಲಾ ಗಿಲೀಟುಮಾಡಿ ತನ್ನ ಮೋರೆ ಕಪ್ಪು ಮಾಡಿಕೊಂಡರು" ಅಂತ ಮತ್ತೊಬ್ಬರು. ಇದರ ಯಥಾರ್ಥ ಹೇಗಿದ್ದರೂ ಕಮ್ತಿಯರ ಮುಖದ ಬಣ್ಣವಂತೂ ಬಿಳುಪಾಗಿರಲಿಲ್ಲ. ಮುಕ್ಕಾಲುಪಾಲು ಬೋಳಾದ ತಲೆ, ತೀಕ್ಷ್ಣವಾದ ಚಿಕ್ಕ ಕಣ್ಣುಗಳು, ಮೂಗಿನ ಎರಡು ಬದಿಗಳಲ್ಲೂ ಜೋಲು ಬಿದ್ದ ಗಲ್ಲದ ಮಡಿಕೆಗಳು, ದಪ್ಪವಾದ ಬಿಲ್ಲಿನಾಕಾರದ ತುಟಿಗಳು, ಬೊಜ್ಜು ದೇಹ, ಇವೇ ಅವರ ರೂಪದ ಹೆಗ್ಗುರುತುಗಳು. ಲೋಕಾಪವಾದಕ್ಕೆ ಅವರು ಅಂಜುತ್ತಿರಲಿಲ್ಲ. ಬೈಗಳಿಂದ ಬೆನ್ನು ಮುರಿಯದು ಎಂಬ ದೃಢ ನಂಬಿಕೆ ಯಿತ್ತು ಅವರಿಗೆ. ಹತ್ತು ಜನರ ಕಣ್ಣಿಗೆ ಬಿದ್ದರೆ ಸಾಕು. ಹತ್ತು ಜನರ ಗಮನಕ್ಕೆ ಬಂದರೆ, ಮಾತಿಗೆ ಸಿಕ್ಕರೆ ಸಾಕು. ಅದೇ ಒಂದು ಲಾಭ ಅನ್ನುತ್ತಿದ್ದರು. ಅವರ ಹಾವಭಾವಗಳು, ವೇಷಭೂಷಣಗಳು ಎಲ್ಲವೂ ಈ ಮನೋಧರ್ಮಕ್ಕೆ ತಕ್ಕಂತೆಯೇ ಇದ್ದವು.

ವೀರಕಂಭಕ್ಕೆ ತಲಪುವಾಗ ಹತ್ತುಗಂಟೆ ಸಮೀಪಿಸುತ್ತಿದ್ದರೂ ಕಣ್ಣು ಮುಚ್ಚಿಸುವಷ್ಟು ಪ್ರಕಾಶವಿದ್ದ ಕಾರ್ತಿಕ ಮಾಸದ ಬಿಸಿಲಿಗೆ ಉರಿಯಿರಲಿಲ್ಲ. ಅಲ್ಲಿಂದ ಒಂದರ್ಧ ಮೈಲು ಒಳಗಡೆ ವ್ಯಾಜ್ಯದ ಬೀಜ ಮೊಳೆದಲ್ಲಿಗೆ ಕರೆದೊಯ್ಯಲು ರಾಘವೇಂದ್ರರಾಯರ ಕಕ್ಷಿಗಾರ ವೆಂಕಣ್ಣ ಜೋಯಿಸರ ಮಗನೂ ಪ್ರತಿವಾದಿ ಸುಬ್ಬಾಭಟ್ಟರ ಮಗನೂ, ಇಬ್ಬರು ಉಳಿದಾಳುಗಳೂ ಮಾರ್ಗದ ಬಳಿ ಕಾದಿದ್ದರು. ವಕೀಲರಗಳು ಇಳಿದೊಡನೆ ಆಳುಗಳು ತಂದಿದ್ದ ಎಳನೀರುಗಳನ್ನು ಕೆತ್ತಿ ದೂರದಿಂದ ಕೈಚಾಚಿ ಕೊಟ್ಟರು. ರಾಘವೇಂದ್ರರಾಯರೂ ಕೃಷ್ಣಯ್ಯನೂ ಕೊಳ್ಳಲಿಲ್ಲ. ಕಮ್ತಿಯರು ಮಾತ್ರ "ಇಲ್ತನ್ನಿ. ಅವರು ಕಾಫಿ ವಿನಾ ಬೇರೇನೂ ಕುಡಿಯೋದಿಲ್ಲ. ನಾನೂ ಅಷ್ಟೇ, ಸಾಮಾನ್ಯವಾಗಿ. ಆದರೆ ನೀವು ಕೆತ್ತಿಬಿಟ್ಟದ್ದನ್ನು ಏನು ಮಾಡೋದು? ನಿಮ್ಮ ಹೊಟ್ಟೆಯಾದರೂ ತಣ್ಣಗಾಗಲಿ, ಇಲ್ತನ್ನಿ" ಎಂದು ತುಳು ಭಾಷೆಯಲ್ಲ ಹೇಳುತ್ತ ಉಟ್ಟ ಪಂಜೆಯನ್ನು ಮೊಳಕಾಲ ಮೇಲೆತ್ತಿ ಕಟ್ಟಿಕೊಂಡು ತಲೆಮೇಲಿದ್ದ ಗಾಂಧಿ ಟೋಪಿಯನ್ನು ತೆಗೆದು ಕಿಸೆಯೊಳಗೆ ತುರುಕಿಕೊಂಡು ತರ್ಪಣಾಸನ ಹಾಕಿ ಕುಳಿತು ಮೂರು ಎಳನೀರುಗಳನ್ನು ಗಳಗಳಾಂತ ಗಂಟಲೊಳಗೆ ಹೊಯಿದುಕೊಂಡರು. ಕೋಟು ಒದ್ದೆಯಾದಲ್ಲೆಲ್ಲ ಕೈಯಿಂದ ಜಾಡಿಸುತ್ತ ಮಿಕ್ಕುಳಿದ ಎಳನೀರುಗಳನ್ನು ವಾಪಸು ಹೋಗುವಾಗ ಬಸ್ಸಿನಲ್ಲಿ ಹಾಕಿಬಿಡಿ, ಇರುತ್ತೆ ಅಂದರು. ಅಷ್ಟರೊಳಗೆ ರಾಘವೇಂದ್ರರಾಯರು ಜೋಯಿಸರ ಮಗನ ಹಿಂದೆ ಗದ್ದೆಗಳ ದಿಡ್ಡುಗಳ ಮೇಲೆ ನಿಧಾನವಾಗಿ ಮುಂದರಿಯುತ್ತಿದ್ದರು. ಮಿಕ್ಕವರೂ ನೋಡಿಕೊಂಡ ಮೇಲೆ ಎಲ್ಲರೂ ಒಬ್ಬರ ಹಿಂದೊಬ್ಬರು ಸಾಲುಕಟ್ಟಿ ಮುನ್ನಡೆದರು, ಅವರ ಚಲನವನ್ನು ಅಣಕಿಸುವಂತಿದ್ದ ಅವರ ನೆರಳುಗಳೊಂದಿಗೆ.

ನೋಡಿದರೆ ಅವರು ನಗರದ ಅಶಾಂತಿ, ಅತೃಪ್ತಿ, ಅವಾಂತರಗಳನ್ನು ತಪ್ಪಿಸಿಕೊಂಡು ಯಾವುದೋ ಒಂದು ನಿರ್ಮಲ ನಿಲಯವನ್ನು ಹುಡುಕಿಕೊಂಡು ಒಂದೇ ಗತ್ತಿನಿಂದ ಧಾವಿಸುತ್ತಿರುವಂತೆ ಕಾಣುತ್ತಿತ್ತು. ಆದರೆ ಅವರ ಹೃದಯದಲ್ಲಿ ಅಂತಹ ಯಾವ ಉದಾತ್ತ ಭಾವನೆಯೂ ಇರಲಿಲ್ಲ. ಬಹುಮಂದಿಯ ನಿತ್ಯಾಭ್ಯಾಸದಂತೆ ಇಂದ್ರಿಯಗಳನ್ನು ಮುಚ್ಚಿಕೊಂಡು ಕೈಕಾಲುಗಳನ್ನು ಮಾತ್ರ ಯಂತ್ರಗಳಂತೆ ಆಡಿಸುತ್ತಿದ್ದರು. ಕೃಷ್ಣಯ್ಯಗೆ

ಮಾತ್ರ ಸುತ್ತುಮುತ್ತಲಿನ ಸೃಷ್ಟಿಸೌಂದರ್ಯವನ್ನು ನೋಡಿ ತನ್ನ ಗೆಳೆಯ ಗೋಪಿನಾಥನ ನೆನಪಾಯಿತು. ಈ ಮುಟ್ಠಾಳರ ಬದಲು ಆತ ಬಂದಿದ್ದರೆ ಎಷ್ಟು ಚೆನ್ನಾಗಿತ್ತು, ಅಂತನಿಸಿತು. ಅವನಿಗೆ ಈ ರೀತಿ ಚೇತನಗಳನ್ನು ಒಳ ಕ್ಕೆಳೆದುಕೊಂಡು ಮುಂದುವರಿಯಲು ಕಾಲೇ ಬರುತ್ತಿದ್ದಿಲ್ಲ. ಈ ದೃಶ್ಯವನ್ನು ನೋಡಿ ಆನಂದಪಡುತ್ತಿದ್ದ. ಮಧ್ಯಾಹ್ನ ಸಮೀಪಿಸುತ್ತಿದ್ದರೂ ಬೈಲು-ಬೆಟ್ಟ ತಪ್ಪಲುಗಳು ಮುಂಜಾನೆಯ ಅರಸಿದ್ದೆಯ ಅಮಲಿನಲ್ಲೇ ಇನ್ನೂ ಮೈಮರೆ ತಿವೆ ಅನ್ನುತ್ತಿದ್ದ. ಎಳೆ ಬಿಸಿಲು ಸುಗ್ಗಿಗದ್ದೆಗಳ ಹಸುರು ರೇಶ್ಮೆಯ ಹಾಸಿಗೆ ಬಿಟ್ಟು ಎದ್ದೇಳಲು ಮನಸ್ಸಿಲ್ಲದೆ ಮೆಲುಗಾಳಿಯೊಂದಿಗೆ ಅಲ್ಲೇ ಉರುಳಾಡು ತ್ತಿದೆಯಲ್ಲವೇ ಎಂದು ಕೇಳುತ್ತಿದ್ದ. ದೂರದಲ್ಲಿ ಒಂದೆಡೆ, ನಾಟ್ಯರಂಗಕ್ಕೆ ಬರುವ ಮುಂಚೆ ಪರದೆಯ ಮಗ್ಗುಲಲ್ಲಿ ಮರೆಯಾಗಿ ನಿಂತ ನರ್ತಕಿಯಂತೆ ನಿಬಿಡವಾಗಿ ಬೆಳೆದ ಹಲಸು-ಮಾವು-ಗೇರು ಮರಗಳು ಸೂರ್ಯರಶ್ಮಿಯಲ್ಲಿ ತಮ್ಮ ಅಂಗಸೌಷ್ಟವವನ್ನೂ ಅಲಂಕಾರಗಳನ್ನೂ ನೋಡಿಕೊಂಡು ನಗುವಂತಿ ದ್ದವು. ಮೇಲೆ ಆಕಾಶ ನಿರ್ಮಲಾತಿಶಯದಿಂದ ಪ್ರಜ್ವಲಿಸುತ್ತ ಮಧ್ಯಾಹ್ನದ ರುದ್ರ ತಪಸ್ಸಿಗೆ ಆಗಲೇ ಆರಂಭಿಸಿದಂತಿತ್ತು. ಕೃಷ್ಣಯ್ಯಗೆ ವಿಸ್ಮಯವಾ ಯಿತು; ವಿಷಾದವಾಯಿತು. ಇಂತಹ ಪ್ರಶಾಂತಮಯ ಸೌಂದರ್ಯಮಯ ವಾತಾವರಣಕ್ಕೂ ಅದರ ಆಶ್ರಯದಲ್ಲಿ ಹುಟ್ಟಿ ಬೆಳೆಯುವ ಹಳ್ಳಿಗರ ಕ್ಷುದ್ರ ಪ್ರವೃತ್ತಿಗೂ ಇರುವ ವೈಷಮ್ಯವನ್ನು ಯೋಚಿಸಿ, ಯೋಚಿಸುತ್ತ ಮಿಕ್ಕವರ ಬೆನ್ನು ಹಿಡಿದು ನಡೆದರು.

ಕೃಷ್ಣಯ್ಯಗೆ ಯೋಚನೆಗೆ ಮತ್ತೊಂದು ಕಾರಣವಿತ್ತು. ಗೋಪಿನಾಥನ ಕಕ್ಷಿಗಾರರಾದ ವೆಂಕಣ್ಣ ಜೋಯಿಸರು ಈ ಕೇಸನ್ನು ರಾಘವೇಂದ್ರರಾಯ ರಿಗೆ ಒಪ್ಪಿಸಲು ಏನೋ ವಿಶೇಷ ನಡೆದಿರಬೇಕು. ಗೋಪಿನಾಥರಾಯರು ಇದೇ ಕೇಸಿನ ಸಂಬಂಧ ಇದೇ ಸ್ಥಳದ ತನಿಖೆಗಾಗಿ ಬಂದು ಹೋದದ್ದೂ ಅವ ರಿಗೆ ಗೊತ್ತಿತ್ತು. ಹಾಗಿರುವಾಗ ಆತನ ಕೈ ತಪ್ಪಲು ಕಾರಣವೇನು? ಗೋಪಿನಾಥರಾಯರಿಗೂ ರಾಘವೇಂದ್ರರಾಯರಿಗೂ ಅಂತಹ ಪರಸ್ಪರ ಜಿಜ್ಞಾಸೆಯೇನೂ ಇರಲಾರದು. ಹತ್ತಿರದ ಸಂಬಂಧಿಕರು. ಅಲ್ಲದೆ ಅವರಿಬ್ಬರ ಮನೆಗಳ್ಳದೆ ಮಂಗಳೂರಲ್ಲಿ ಮೈಸೂರು ಅತ್ತ ಕಡೆಯ ವಂಶಸ್ಥರ ಮನೆ ಗಳಾವುದೂ ಇರಲಿಲ್ಲ. ಅವರಿಬ್ಬರೊಳಗೆ ಏನೋ ಒಂದು ಬಗೆಯ ಗೂಢ

ವ್ಯತ್ಯಾಸ ಪ್ರತಿಸ್ಪರ್ಧೆ ಆಗಾಗ ಹೊರಬೀಳುತ್ತಿತ್ತೇನೋ ನಿಜ. ಆದರೂ ಪ್ರತ್ಯಕ್ಷವಾಗಿ ಏನೂ ಇದ್ದ ಹಾಗಿರಲಿಲ್ಲ. ಕೃಷ್ಣಯ್ಯಗೆ ಮತ್ತೆ ಮತ್ತೆ ಗೋಪಿನಾಥನದೇ ಜ್ಞಾಪಕ ಬಂತು. ಆತ ಇದ್ದಿದ್ದರೆ ಈ ವೃತ್ತಿ ಗುಲಾಮರಂತೆ ಮೌನಯಾತ್ರೆ ಮಾಡುತ್ತಿರಲಿಲ್ಲ. ಸ್ಮಶಾನಕ್ಕೆ ಹೆಣ ಹೊರುವವರಂತೆ ತಲೆ ತಗ್ಗಿಸಿಕೊಂಡು ಧಾವಿಸುತ್ತಿರಲಿಲ್ಲ, ಅಂದುಕೊಳ್ಳುತ್ತ ಮುನ್ನಡೆದರು.

ಈ ಕೇಸಿನ ವಿಚಾರ ಕೇಳಿ ತಿಳುಕೊಳ್ಳೋಣವೆಂತ ಕೃಷ್ಣಯ್ಯ ಗಟ್ಟಿಯಾಗಿ ಕೂಗಿ ಪ್ರಶ್ನೆಮಾಡಿದರು.

"ರಾಘವೇಂದ್ರರಾಯರೇ, ಗೋಪಿನಾಥರಾಯರು ಇಲ್ಲಿಗೊಂದು ಸಲ ಬಂದಿದ್ರಂತಲ್ಲಾ ?"

"ಹೌದು, ಬಂದಿದ್ದನಂತೆ."

"ಹಾಗಾದರೆ ? ಜತೆವಕಾಲತ್ತು ಕೂಡಾ ಇಲ್ಲವಲ್ಲ ?"

"ಇಲ್ಲ"

"ಅದೇನು ?"

"ಏನೋ, ಅವಂದು ವಿಚಿತ್ರ! ಕೇಸು ಪರವಾಯಿಲ್ಲ, ಗೆದ್ದು ಬರಬಹುದು. ಆದರೆ ಕೇಸು ಮುಗಿಯುವಾಗ ಆಸ್ತಿಯೂ ಮುಗಿಯಬಹುದು, ಅಂದನಂತೆ ಜೋಯಿಸರು ಕೇಳಿದ್ದಕ್ಕೆ."

"ಹಾಗೇನು? ಕಮ್ತೇರ ಪುಣ್ಯ ಈ ದಾವೆ ದಾಖಲಾದ್ದು. ಅಲ್ಲೇನ್ರಿ?"

ಕಮ್ತಿಯರು ನಿಂತು ಹಿಂತಿರುಗಿ, "ಏನು ಪುಣ್ಯವೋ! ಸುಬ್ಬಾಭಟ್ಟರ ವಕಾಲತ್ತು ಬಂದಂದಿನಿಂದ ರಾಘವೇಂದ್ರರಾಯರು ನನ್ನ ಕಣ್ಣೆತ್ತಿ ಕೂಡಾ ನೋಡೋದಿಲ್ಲ, ಮಹಾರಾಯರು. ನನ್ನ ಗ್ರಹಚಾರ ಅನ್ನಬೇಕು!" ಎಂದು ಗೋಗರೆದರು.

ಕಮ್ತಿಯರ ಹಿಂದೆ ಇದ್ದ ಸುಬ್ಬಾಭಟ್ಟರ ಮಗ, "ನಾವೂ ಸುರುವಿಗೆ ಹೋದ್ದು ಗೋಪಿನಾಥರಾಯರಲ್ಲಿಗೇ, ಸ್ವಾಮೀ" ಎಂದು ತಾನಾಗಿ ಹೇಳಿ ತಿಳಿಸಿದ.

"ಮತ್ತೇನಾಯಿತು ?"

"ಆಗೋದಿಲ್ಲಾಂದುಬಿಟ್ರು. ಕೇಳಿದಷ್ಟು ಫೀಸು ಕೊಡ್ತೇನೇಂದೆ, ಸ್ವಾಮಿ. ಅವರದು ಒಂದೇ ಮಾತು: ಆಗೋದಿಲ್ಲಾಂತ ನಗ್ನಗ್ತಾ ಹೇಳಿಬಿಟ್ಟು ಹೋಗೀಂದ್ರು."

ಗೋಪಿನಾಥನ ಸ್ವಭಾವವನ್ನು ಚೆನ್ನಾಗಿ ಅರಿತಿದ್ದ ಕೃಷ್ಣಯ್ಯಗೆ ಈ ವರ್ತನೆ ವಿಚಿತ್ರವಾಗಿ ತೋರಲಿಲ್ಲ. ಆದರೆ ಪುತ್ತೂರು ಮುನ್ಸಿಫ್ ಕೋರ್ಟಿನಲ್ಲಿ ದಾಖಲಾಗಬೇಕಾಗಿದ್ದ ಕೇಸು ಮಂಗಳೂರು ಸಬ್‌ಕೋರ್ಟಿಗೆ ಬರಲು ಕಾರಣವೇನೆಂದು ತಿಳಿಯಲು ಕುತೂಹಲಪಟ್ಟು ಕಮ್ತಿಯರನ್ನು ವಿಚಾರಿಸಿದರು. ಇಂಜಂಕ್ಶನ್ (Injunction) ಜತೆಗೆ ಡಿಕ್ಲರೇಶನ್ (Declaration) ಕೂಡಾ ಕೇಳಿ ದಾವಾ ಮಾಡಿದ್ದರಿಂದ ಹಾಗಾಯಿತು ಎಂದು ಕಮ್ತಿಯರು ವಿವರಿಸಿದರು.

ಹೀಗೆ ಮಾತನಾಡುತ್ತ ಹಲವು ಗದ್ದೆಗಳನ್ನು ದಾಟಿದ ಬಳಿಕ ಒಂದು ಹಳ್ಳದ ಬದಿಗೆ ಬಂದರು. ಅದು ಸುಮಾರು ಹದಿನೆಂಟು ಅಡಿ ಅಗಲ, ಎಂಟಡಿ ಆಳವಾಗಿತ್ತು. ಸುಬ್ರಮಣ್ಯ ಷಷ್ಠಿಯ ನಂತರ ಸುಗ್ಗಿಬೆಳೆಗಾಗಿ ಅದಕ್ಕೆ ಅಡ್ಡ ಕಟ್ಟಿದ್ದರಿಂದ ನೀರು ಅಂಚಿನ ತನಕ ತುಂಬಿತ್ತು. ಅದಕ್ಕೆ ದಡದಿಂದ ದಡಕ್ಕೆ ಸೇತುವೆ ರೂಪವಾಗಿ ನಾಲ್ಕು ಅಡಿಕೆ ಮರದ ತುಂಡುಗಳನ್ನು ಒತ್ತೊತ್ತಿಗೆ ಹಾಕಿದ್ದರು. ರಾಘವೇಂದ್ರರಾಯರು ತನ್ನ ಕಕ್ಷಿಗಾರರ ಮಗನನ್ನು ಕೇಳಿ ಸೇತುವೆ ಭದ್ರವಾಗಿದೆಯೆಂದು ಗೊತ್ತುಮಾಡಿದ ನಂತರ ಬಲು ಜೋಕೆಯಿಂದ ದಾಟಿಹೋದರು. ಕಮ್ತಿಯರು ಮೊದಲೇ ಮೇಲೆತ್ತಿ ಕಟ್ಟಿದ್ದ ಪಂಜೆಯನ್ನು ಮತ್ತಷ್ಟು ಮೇಲೆಕ್ಕೆಳೆದು ಕಟ್ಟಿಕೊಂಡರು. ಟೋಪಿಯನ್ನು ಯಥಾಪ್ರಕಾರ ಕೋಟಿನ ಜೇಬಿಗೆ ತುರುಕಿದರು. ಆ ಮೇಲೆ ಪಾದರಕ್ಷೆಗಳನ್ನು ಒಬ್ಬ ಆಳಿನ ಕೈಗೆ ಕೊಟ್ಟು ತನ್ನ ಕೋಟಿನ ಕೈಗಳನ್ನು ಮೇಲೊತ್ತುವುದಕ್ಕೆ ಆರಂಭಿಸಿದರು.

ಅವರು ಹೀಗೆ ಸಾಹಸಸಿದ್ಧರಾಗುವುದನ್ನು ನೋಡಿ, ಇನ್ನು ಹಾರಿ ಬಿಡೋದೊಂದೆ ಬಾಕಿಯೆಂದು ಕೃಷ್ಣಯ್ಯ, "ಶ್ರೀರಾಮಚಂದ್ರ !" ಅಂದರು. ಆದರೆ ಕಮ್ತಿಯರ 'ಪ್ಲೇನು' ಹಾರುವುದರಲ್ಲಿರಲಿಲ್ಲ. ಒಂದು ಕಾಲನ್ನು ಸೇತುವೆ ಮೇಲಿಟ್ಟು ಬಲವಾಗಿ ಜಗ್ಗಿಸಿ ನೋಡಿದರು. ನಾಲ್ಕರ ಪೈಕಿ ಒಂದು ಅಡ್ಡ ಕೊಂಚ ಅಲುಗಾಡಿದ್ದನ್ನು ಕಂಡು ಒಡನೆ ಕಾಲು ಹಿಂತೆಗೆದು ಸುತ್ತಮುತ್ತ ಇದ್ದವರ ಮುಖ ನೋಡಿದರು.

"ನಮ್ಮಾಳು ಕೈಹಿಡಿದು ದಾಟಿಸಿಬಿಡ್ತಾನೆ. ಏನೂ ಭಯವಿಲ್ಲ" ಎಂದು ಸುಬ್ಬಾಭಟ್ಟರ ಮಗ ಧೈರ್ಯ ಹೇಳಿದ.

ಆದರೆ ಆಗಲೇ ಅಂಬೆಗಾಲು ಹಾಕಿ ಸೇತುವೆ ಮೇಲೆ ಎರಡು ಕೈಯೂರಿದ್ದ ಕಮ್ಮಿತ್ತಯರು ಹಾಗೇ ಚತುಷ್ಪಾದದಂತೆ ಸರಸರ ದಾಟಿಬಿಟ್ಟರು. ರಾಘವೇಂದ್ರರಾಯರು ನೋಡಿ ಸಹಿಸಲಾರದೆ ಮುಖ ತಿರುಗಿಸಿಬಿಟ್ಟರು. ಕೃಷ್ಣಯ್ಯ ಗಟ್ಟಿಯಾಗಿ ನಕ್ಕುಬಿಟ್ಟರು.

ಅಲ್ಲಿಂದ ಒಂದರ್ಧ ಫರ್ಲಂಗು ಹೋಗುವಷ್ಟರಲ್ಲಿ ಜೋಯಿಸರ ಮನೆ ಬಂತು. ಗೋಮಯ ಸಾರಿಸಿ ಶುಚಿಯಾಗಿಟ್ಟ ಅಂಗಳ. ಒಂದು ಪಕ್ಕದಲ್ಲಿ ಒಣಹುಲ್ಲಿನ ರಥ. ಅದರೆದುರು ಮನೆಯ ಆಚೆ ಪಕ್ಕದಲ್ಲಿ ಮುಸುಡುಗಳನ್ನೆತ್ತಿ ಜೊಲ್ಲು ಸುರಿಸುತ್ತ ಮೆಲುಕು ಹಾಕುತ್ತಿರುವ, ಗೊಬ್ಬರದ ಕೆಸರಲ್ಲಿ ಕಟ್ಟಿ ಹಾಕಿದ್ದ ನಾಲ್ಕು ಕೋಣಗಳ ಕೊಟ್ಟಿಗೆ. ಈ ಮಧ್ಯ ಉದ್ದಕ್ಕೆ ರೈಲುಬಂಡಿಗೆ ಮುಳಿಹುಲ್ಲಿನ ಹೊದಿಕೆ ಹಾಕಿದಂತಿದ್ದ ಮನೆ. ಜೋಯಿಸರ ಮಗ ಮುಂದಾಗಿ ಓಡಿಹೋಗಿ ಮನೆಯೊಳಗೆ ಹೊಕ್ಕು ಒಂದು ಬೆಂಚನ್ನು ಹೊರ ತಂದ. ಅದನ್ನು ಅಂಗಳದಲ್ಲಿ ನೆರಳಿದ್ದೆಡೆ ಇಟ್ಟು ಮತ್ತೆ ಓಡಿಹೋಗಿ ಒಳ ಹೊಕ್ಕು ಇದ್ದ ಒಂದೇ ಒಂದು ಕುರ್ಚಿಯನ್ನು ತಂದು ಬೆಂಚಿನ ಪಕ್ಕದಲ್ಲಿರಿಸಿದ. ಮತ್ತೆ ಮೂರನೇ ಬಾರಿ ಓಡಿಹೋಗುವಷ್ಟರಲ್ಲಿ ವೆಂಕಣ್ಣ ಜೋಯಿಸರೇ ಮನೆಯೊಳಗಿಂದ ಬಂದರು. ನಾಗರಬೆತ್ತ ಊರಿಕೊಂಡು ತತ್ತರಿಸುತ್ತ ಮೆಟ್ಟಲುಗಳನ್ನಿಳಿದು ಬಂದರು. ಕೆಳಗಿಳಿಯುವಾಗ ಬಿಚ್ಚಿ ಹೋಗಿದ್ದ ಕೌಪೀನವನ್ನು ಸರಿಪಡಿಸಿಕೊಳ್ಳಲು ಬೆತ್ತವನ್ನು ಅಲ್ಲೇ ಹೊಂಚು ಹಾಕುತ್ತಿದ್ದ ಮಗನ ಕೈಗೆ ಕೊಟ್ಟು, ಸೊಂಟದ ಮೇಲಕ್ಕೆತ್ತಿ ಕಟ್ಟಿಕೊಂಡಿದ್ದ ಮಲಿನವಾದ ವಸ್ತ್ರವನ್ನು ಮೊಳಕಾಲತನಕ ಇಳಿಬಿಟ್ಟು, ರಾಘವೇಂದ್ರರಾಯರ ಎದುರು ಬಂದು ನಿಂತು ಕೈಜೋಡಿಸಿ ನಮಸ್ಕಾರ ಮಾಡಿ, ಅನಂತರ ಮಿಕ್ಕ ವಕೀಲರುಗಳಿಗೆ ಬೇರೆ ಬೇರೆಯಾಗಿ ವಂದನೆಗಳನ್ನು ಸಲ್ಲಿಸಿದರು. ಆಮೇಲೆ ತನಗೆ ರಸ್ತೆತನಕ ನಡೆಯುವಷ್ಟು ತ್ರಾಣವಿಲ್ಲ, ಆಗುತ್ತ ಬಂತು ವರ್ಷ ಅರವತ್ತೆರಡು, ಅದೇ ಬರುವ ವಿಟ್ಟಲದ ಅಯನಕ್ಕೆ, ಅಂದರು. ಅಪ್ಪನ ದೊಣ್ಣೆಯನ್ನು ಬಂದೂಕಿನಂತೆ ಭುಜದ ಮೇಲೇರಿಸಿ ನಿಂತಿದ್ದ ಮಗನನ್ನು ನೋಡುತ್ತ ಮನೆಗೆ ಯಾರಾದರೂ ದೊಡ್ಡ ಮನುಷ್ಯರು ಬಂದರೆ ಕಕ್ಕಾಬಿಕ್ಕಿಯಾಗಿ ಗಾಳಿಸೋಂಕಿದ ಕೋಣನ ಮರಿಯ ಹಾಗೆ ಓಡಾಡೋದು ಒಂದೇ ಗೊತ್ತು, ದೊಣ್ಯನಿಗೆ, ಅಂದರು ನಿರಾಶೆಯಿಂದ. ಕೈಕಾಲು ತೊಳೆ

ಯೋದಕ್ಕೆ ನೀರು ತರಹೇಳಿದರು, ಬೈದು. ಆದರೆ ಹೆಗಲೇರಿದ ಡೊಣ್ಣೆ ಯನ್ನೇನು ಮಾಡೋದೆಂತ ಗೊತ್ತಾಗದೆ ಕಂಗಾಲಾಗಿದ್ದರಿಂದ ತಕ್ಷಣ ಓಡಿಹೋಗಿ ನೀರುತರಲು ಮಗನಿಗೆ ಸಾಧ್ಯವಾಗಲಿಲ್ಲ. ಅಪ್ಪ ಡೊಣ್ಣೆಯನ್ನು ಕುಲತಿಲಕನ ಕೈಯಿಂದ ಕಿತ್ತುಕೊಂಡ ಮರುಕ್ಷಣದಲ್ಲಿಯೇ ಮೂರು ತಂಬಿಗೆ ಗಳಲ್ಲಿ ನೀರು ಬಂತು.

ಒಂದು ತಂಬಿಗೆಯನ್ನು ಜೋಯಿಸರು ತಗೊಂಡು ತನ್ನ ವಕೀಲ ಮಹಾ ಶಯರ ಪಾದಪ್ರಕ್ಷಾಳನವನ್ನು ತಾವೇ ಸ್ವತಃ ಮಾಡುವುದರಲ್ಲಿದ್ದರು. ಆದರೆ ಅವರ ಕೈತಡೆದು ರಾಘವೇಂದ್ರರಾಯರು ತನ್ನ ಹೊಸ ಪಾದರಕ್ಷೆಗಳಿಗೆ ಅಭಿಷೇಕವಾಗುವ ಪ್ರಮೇಯವನ್ನು ತಪ್ಪಿಸಿಕೊಂಡರು. ಜೋಯಿಸರು ಅಷ್ಟಕ್ಕೇ ಬಿಡಲಿಲ್ಲ. ರಾಘವೇಂದ್ರರಾಯರ ಕಾಲು ತೊಳೆಯುವ ಪುಣ್ಯ ಲಭಿಸದಿದ್ದರೂ ಅವರು ಕಾಲು ತೊಳಕೊಂಡ ಮೇಲೆ ಅವುಗಳನ್ನು ಉಜ್ಜುವ ಭಾಗ್ಯವಾದರೂ ಸಿಗಬೇಕೆಂಬ ಹಾರೈಕೆಯಿಂದ ತನ್ನ ಹೆಗಲಗೂಟದ ಮೇಲಿದ್ದ ಒದ್ದೆ ಅಂಗವಸ್ತ್ರವನ್ನು ಬಿಡಿಸಿ ಹಿಡಿದು ಅವರ ಕಾಲಿಗೆ ಬಗ್ಗಿದರು. ರಾಘವೇಂದ್ರರಾಯರು ಸರಕ್ಕನೆ ಹಿಮ್ಮೆಟ್ಟಿದರು. ಜೋಯಿಸರು ಗುಡು ಗುಡು ಮುಂದರಿದರು. ರಾಘವೇಂದ್ರರಾಯರು ಅಂಗಳದ ಅಂಚಿನಿಂದಾಚೆ ತಪ್ಪಿಸಿಕೊಳ್ಳಲಾರದೆ ಹಿಂತಿರುಗಿ ಬಂದರು ಮುಖ ಕೆಂಪೇರುತ್ತ. ಜೋಯಿ ಸರು ಕೈಗಳನ್ನು ಚಾಚಿಕೊಂಡು ಆವರ ಪಾದಗಳು ಹೋದೆಡೆ ದಿಡಿದಿಡೀಂತ ವಾಪಸು ಬಂದರು. ಈ ಪೇಚಿನಲ್ಲಿದ್ದ ರಾಘವೇಂದ್ರರಾಯರ ಮೇಲೆ ಕನಿಕರ ಪಟ್ಟು ಕೃಷ್ಣಯ್ಯ ನಗುತ್ತ,

"ಜೋಯಿಸರೆ, ನೀವೀ ರೀತಿ ಇಲ್ಲೇ ಹೊತ್ತು ಕಳೆದರೆ ಬಿಸಿಲೇರುತ್ತೆ. ಒಳಗೆ ನಡೀರಿ ನೋಡೋಣ" ಅಂದರು.

ಎಲ್ಲರೂ ಒಳಗೆ ಹೋಗಿ ನಸುಗತ್ತಲಾಗಿ ತಂಪಾಗಿದ್ದ ಚಾವಡಿಯಲ್ಲಿ ಹಾಸಿದ್ದ ಕಂಬಳಿಗಳ ಮೇಲೆ ಕುಳಿತರು. ಬಾಳೆಎಲೆಗಳಲ್ಲಿ ಸಜ್ಜಿಗೆ ಉಪ್ಪಿಟ್ಟು, ಒಗ್ಗರಣೆ ಅವಲಕ್ಕಿ, ಹಲಸಿನಕಾಯಿ ಹಪ್ಪಳ, ಬಾಳೆಹಣ್ಣುಗಳು, ದೊಡ್ಡ ದೊಡ್ಡ ಕಂಚಿನ ಗಿಂಡಿಗಳಲ್ಲಿ ಕಾಫಿ, ಎಲ್ಲವೂ ಬಂತು. ಜೋಯಿಸರು ತನ್ನಬಟ್ಟೆ ಯನ್ನು ಪುನಃ ಸೊಂಟದಮೇಲೆತ್ತಿಕೊಂಡು ಗೋಡೆಗೆ ಆತುಕೊಂಡು ಕುಳಿತು ಒಂದು ಮರದ ಒರಳಲ್ಲಿ ಅಡಿಕೆಲೆಯನ್ನು ಗುದ್ದುತ್ತ ಉಪಚಾರಮಾಡಿದರು.

ಆದರೆ ಉಪ್ಪಿಟ್ಟಿಗೂ ಅವಲಕ್ಕಿಗೂ ಈರುಳ್ಳಿ ಬೆರಸಿತ್ತು. ಹಪ್ಪಳ ಕೊಬರಿ ಎಣ್ಣೇಲಿ ಕರಿದಿತ್ತು. ಆದ್ದರಿಂದ ರಾಘವೇಂದ್ರರಾಯರು ಮುಟ್ಟಿ ನೋಡಲಿಲ್ಲ. ಎರಡು ಬಾಳೆಹಣ್ಣು ತಿಂದು ಕಾಫಿ ರುಚಿನೋಡಿ, ಕರವಸ್ತ್ರದಿಂದ ಬೆರಳುಗಳನ್ನು ಒರೆಸುತ್ತ ಸೂರನ್ನು ನೋಡುತ್ತ ಕುಳಿತರು. ಕಮ್ತಿಯರು ಎಲೆ ಖಾಲಿಮಾಡಿ ಬಿಟ್ಟು ಎರಡನೇ ಸಲ ಅವಲಕ್ಕಿಯನ್ನೂ ಕಾಫಿಯನ್ನೂ ಕೇಳಿ ತರಿಸಿ ಕೊಂಡು ಮುಗಿಸಿದರು. ಜೋಯಿಸರ ಮಗ ಒಳಗಿನಿಂದ ಒಂದು ಬಾಳೇ ಹಣ್ಣಿನ ಗೊನೆಯನ್ನು ನೇಲಿಸಿಕೊಂಡು ಬಂದಾಗ,

" ಅಯ್ಯೋ---ಯೋ-ಯೋ ! ಸಾಧ್ಯವಿಲ್ಲಪ್ಪ ! ಇಲ್ಲ! ಈ ನನ್ನ ಸ್ಟೋರಿ ನಲ್ಲಿನ್ನು ಜಾಗವಿಲ್ಲ. ಇಲ್ಲಿಟ್ಟು ಬಿಡು ಆ ಗೊನೆ. ವಾಪ್ಸು ಹೋಗ್ತಾ ಬಸ್ಸಿನಲ್ಲಿ ಹಾಕಿಬಿಡು. ಅದರಲ್ಲಿ ಜಾಗವಿದೆ ಬೇಕಾದಷ್ಟು " ಅನ್ನುತ್ತ ಹಳೇ ಬಸ್ಸಿಗೆ ಗೀಯರ್ (Gear) ಹಾಕಿದಂತೆ ಗರ್‍ರ‍್ಕನೆ ತೇಗಿದರು.

ಫಲಾಹಾರದ ಪ್ರಕರಣವಾದ ಮೇಲೆ ಎಲ್ಲರೂ ವ್ಯಾಜ್ಯದ ಜನ್ಮಸ್ಥಾನ ವಾದ ಜೋಯಿಸರ ಮನೆಯ ಮುಂದಿನ ಅಡಿಕೆ ತೋಟಕ್ಕಿಳಿದರು. ಅಲ್ಲಿ ಸುಬ್ಬಾಭಟ್ಟರೂ ಬಂದು ಸೇರಿದರು. ಆ ತೋಟಕ್ಕೆ ಸುಬ್ಬಾಭಟ್ಟರ ಮೇಲಿನ ಭೂಮಿಯಿಂದ ಹಾದು ಬರುವ ಕಾಲುವೆಯ ನೀರಿಲ್ಲದೆ ಬೇರೆ ನೀರಾಶ್ರಯ ವಿರಲಿಲ್ಲ. ಈ ಹಕ್ಕು ಬಾಧ್ಯತೆಯೇ ದಾವೆಗೆ ಮೂಲ. ಆಸುಪಾಸಿನ ಆಸ್ತಿಗಳ ನ್ನೆಲ್ಲ ಕ್ರಯಕ್ಕೋ ಭೋಗ್ಯಾದಿಗೋ ಒಳಗೆ ಹಾಕಿದ್ದ ಸುಬ್ಬಾಭಟ್ಟರಿಗೆ ಈ ಬಡ ಮುದುಕನೊಬ್ಬ ತನ್ನ ದಿಗ್ವಿಜಯಕ್ಕೆ ಅಡ್ಡ ನಿಂತನಲ್ಲ ಎಂಬ ಕೋಪ. ಆ ದ್ವೇಷಸಾಧನೆಗಾಗಿ ತನ್ನ ಬೆಟ್ಟುಗದ್ದೆಗಳಲ್ಲಿ ಎರಡನೇ ಬೆಳೆ ಬೆಳೆಸುವ ನೆಪ ಕಲ್ಪಿಸಿಕೊಂಡು ನೀರ ಕಾಲುವೆಗೆ ಹೊಸ ಅಣೆಕಟ್ಟು ಹಾಕಿಸಿ ನೀರು ಕೆಳಗೆ ಹರಿಯದಂತೆ ಮಾಡಿದ್ದರು.

ಕೋರ್ಟಕಮೀಶನರ ಸಮಕ್ಷಮ ಇತ್ತಂಡದವರೂ ತಮ್ಮ ತಮ್ಮ ಸುಖ ದುಃಖಗಳನ್ನು ಹೇಳಿಕೊಂಡರು ವಾದವಿವಾದಗಳನ್ನು ಸಮರ್ಥಿಸಿದರು. ಪರಸ್ಪರ ಬೈದುಕೊಂಡರು. ಕೃಷ್ಣಯ್ಯ ಸಾವಧಾನದಿಂದ ಕೇಳಿ ಕೊನೆಗೆ,

" ಜೋಯಿಸರೆ, ನಿಮ್ಮದು ಒಂದು ದೊಡ್ಡ ತಪ್ಪಿದೆ ಕೋಪಿಸಿಕೊಳ್ಳದೇ ಇದ್ರೆ ಹೇಳ್ತೀನೆ " ಅಂದರು ಗಂಭೀರವಾಗಿ.

" ತಪ್ಪೇ? ನನ್ನದು ಎಂದು ಸ್ವಲ್ಪ ಕೋಪದಿಂದಲೂ ಆಶ್ಚರ್ಯದಿಂದಲೂ ಚಕಿತರಾಗಿ ಜೋಯಿಸರು ಕೇಳಿ, " ಹೇಳಿಬಿಡಿ, ಸ್ವಾಮಿ; ನೀವು ಏನು

ಹೇಳಿದ್ರೂ ಕೇಳ್ತೀನೆ. ಕೋಪವೆಲ್ಲಿಂದ ಬಂದೀತು, ಈ ಬತ್ತಿದ ರಕ್ತದಲ್ಲಿ? ಹತ್ತುವರ್ಷಕ್ಕೆ ಮುಂಚೆ ಇಂತಹ ಅತ್ಯಾಚಾರಕ್ಕೆ ಕೈಹಾಕುವುದಕ್ಕೆ ಧೈರ್ಯ ವಿತ್ತೇ ಈ ಪರದೇಶಿಗೆ ?" ಅನ್ನುತ್ತ ಸುಬ್ಬಾಭಟ್ಟರನ್ನು ಬೆರಳಿಂದ ಸೂಚಿಸುತ್ತ "ಈಗ ನಾನು ಮುದುಕ, ನನ್ನ ಮಗ ಮುಟ್ಟಾಳಾಂತ ಮೀಸೆ ಮಿಡೀತಿದ್ದಾನೆ, ಮೂಗಿಲಿ. ನನ್ನದೊಂದು ಅರಿಕೆ ಸ್ವಾಮಿ ಕಮಿಶನರರೆ. ಈತ ಧರ್ಮಸ್ಥಳದಲ್ಲಿ ಪ್ರಮಾಣ ಮಾಡಲಿ: ನನ್ನ ತೋಟಕ್ಕೆ ನೀರಿನ ಮಾಮೂಲು ಇಲ್ಲಾಂತ. ಮಾಡಲಿ. ನಾಳೆಯೇ ನಮ್ಮಜ್ಜ ಪಜ್ಜ ಮುತ್ತಜ್ಜನ ಕಾಲದಿಂದಲೂ ಅಂಟಿಕೊಂಡಿದ್ದ ಈ ಕಾಲುಧೂಳು ಜಾಡಿಸಿ ದೇಶಾಂತರ ಹೋಗ್ತೇನೆ. ಮನೆ ಬಾಗಲು, ಗದ್ದೆ ತೋಟ, ಸಂಸಾರ ಸಂಪತ್ತು, ಎಲ್ಲ ಶ್ರೀಮಂತರಿಗೇ ಇರಲಿ. ನಮ್ಮಂತಹವರು ಬೇಡಿ ತಿಂದರೆ ಸಾಕು. ಮಾಡಲಿ ಪ್ರಮಾಣ" ಅನ್ನುತ್ತ ಸೊಂಟದ ಬಟ್ಟೆ ಬಿಗಿದುಕೊಂಡರು.

"ನೀವು ನನ್ನ ಹತ್ತರ ಕುಸ್ತಿಗೆ ನಿತ್ತರೆ ಹೇಗೆ ಜೋಯಿಸರೆ ನಾನು ಹೇಳೋದು ?"

"ಹಾಗಲ್ಲ ಸ್ವಾಮಿ. ತಾವು ಬೇಜಾರ ಮಾಡಬಾರದು. ಉಕ್ಕಿ ಬಂತು ಒಳಗಿಂದ; ಕರುಳಿನ ಕೂಗು. ಹರಕುಬಾಯಿ ನನ್ನದು. ಏನೋ ಒದರಿಬಿಟ್ಟೆ. ಹೇಳಿ. ನೀವೇನು ಹೇಳಿದರೂ ಹಿತವೆ. ನನ್ನ ಸತ್ಯಕ್ಕೆ ಆ ಮಹಾದೇವನೊಬ್ಬನೇ ಸಾಕ್ಷಿ. ಹೇಳಿ ಬಿಡಿ. ನನ್ನ ಕತ್ತೂ ಕತ್ತಿಯೂ ಎರಡೂ ನಿಮ್ಮ ಕೈಲಿ. ನಿಮ್ಮಿಷ್ಟ; ಹೇಳಿ." ಎಂದನ್ನುತ್ತ ಹರಕೆಯ ಕುರಿ ಆಹುತಿಗೆ ತಯಾರಾದಂತೆ ತಲೆಬಾಗಿ ನಿಂತರು.

"ಸಹಿ ಹಾಕುವಷ್ಟು ನಿಮ್ಮ ಕೈಬೆರಳಿಗೆ ಶಕ್ತಿ ಇದೆಯಷ್ಟೆ ?"

"ಹೂಂ."

"ಸರಿ. ರಿಜಿಸ್ಟ್ರಿ ಆಫೀಸಿಗೆ ಹೋಗುವಷ್ಟು ಕಾಲಿಗೆ ತ್ರಾಣವಿದೆಯಷ್ಟೆ?"

"ಹೂಂ"

"ಸರಿ. ಮತ್ತೇನು? ನಿಮ್ಮ ತೋಟ ಸುಬ್ಬಾಭಟ್ರಿಗೆ ಯಾಕೆ ಮಾರಿಬಿಡಬಾರದು? ಕೇವಲ ನೆರೆಯವರು. ಅಷ್ಟೊಂದು ಪ್ರೀತಿಯೂ ಅವರ ಮೇಲಿಲ್ಲಾಂದ್ರೆ? ಎಂತಹ ಕಲ್ಲೆದೆ ನಿಮ್ಮದು!"

ಜೋಯಿಸರು ನಿಧಾನವಾಗಿ ತಲೆಯೆತ್ತಿ ಕಣ್ಣು ಪಿಳಿ ಪಿಳಿ ಮಾಡುತ್ತ,

"ನಿಮ್ಮ ಹೆಸರು ನಿಮಗೊಪ್ಪುತ್ತೆ ಸ್ವಾಮಿ" ಎಂದು ಗಂಟಲೊಳಗೇ ನಕ್ಕರು. ಸುಬ್ಬಾಭಟ್ಟರು ಮುಂದೆ ಬಂದು,

“ ನಿಮ್ಮ ಮಾತು ಸಾವಿರಕ್ಕೊಂದು ಕಮಿಶನರೆ. ಎಷ್ಟು ಹೇಳಿದೆ. ಯಾರ್‍ಯಾರ ಮುಖಾಂತ್ರ ಹೇಳಿಸಿದೆ. ಹತ್ತು ಸಾವಿರ, ಹನ್ನೊಂದು ಸಾವಿರ, ಕೊನೆಗೆ ಹನ್ನೆರಡು ಸಾವಿರ ತಗೊಳ್ಳಿ, ಆಸ್ತಿಕೊಟ್ಟು ಬಿಡೀಂದೆ. ಊಂಹೂಂ. ಅವರ ಹಟ ಅವರಿಗೆ. ಈಗಲೂ ತಯಾರಿದ್ದೇನೆ ಸ್ವಾಮಿ. ನೀವು ಹೇಳಿದ ಕ್ರಯ ಕೊಟ್ಟು ಬಿಡ್ತೇನೆ. ” ಅನ್ನುತ್ತ ಎದೆ ತಟ್ಟಿಕೊಂಡರು.

ಜೋಯಿಸರಿಗೆ ಬಂದ ನಗು ಜಾಸ್ತಿಯಾಗಿಬಿಟ್ಟು ಅವರು ಹೊಟ್ಟೆ ಅವುಚಿ ಹಿಡಿದು ಕೆಮ್ಮಲಾರಂಭಿಸಿದರು. ಸ್ವಲ್ಪ ಸುಧಾರಿಸಿಕೊಂಡಮೇಲೆ,

“ ಸ್ವಾಮಿ ಕೃಷ್ಣಯ್ಯ, ಶ್ರೀಕೃಷ್ಣಯ್ಯ, ನೀವೇ ತೀರ್‍ಸಿಬಿಡಿ; ನನ್ನೀ ಸಂಕಷ್ಟ. ವ್ಯಾಜ್ಯ ಬೇಡ, ವಕೀಲರು ಬೇಡ, ಕಚೇರಿ ಕಾನೂನು ಯಾವುದೂ ಬೇಡ. ನೀವು ಹೇಗೆ ಹೇಳ್ತಿರೋ ಹಾಗೆ. ” ಅಂದರು.

ತನ್ನ ಫೀಜು ಪೂರಾ ಮುಂಜಾಗ್ರತೆಯಿಂದ ವಸೂಲು ಮಾಡಿದ್ದ ಕಮ್ತಿಯರು,

“ ಒಪ್ಪಿಕೊಳ್ಳಿ ಸುಬ್ಬಾಭಟ್ರೆ, ಒಪ್ಪಿಕೊಳ್ಳಿ. ಕಮಿಶನರೇ ತೀರಿಸಿಬಿಡಲಿ” ಎಂದು ಸೂಚನೆ ಕೊಟ್ಟಿದ್ದರಿಂದ ಸುಬ್ಬಾಭಟ್ಟರೂ ಸಮ್ಮತಿಸಿದರು. ಆದರೆ ಕೃಷ್ಣಯ್ಯಗೆ ಒಬ್ಬರಿಗೇ ಈ ಜವಾಬದಾರಿಯ ಭಾರ ಹೊರುವ ಮನಸ್ಸಿರ ಲಿಲ್ಲ. ಆದ್ದರಿಂದ ಈ ವಿಚಾರದಲ್ಲಿ ಸ್ವಲ್ಪ ಚರ್ಚೆ ನಡೆದು ಕೊನೆಗೆ ಗೋಪಿ ನಾಥರಾಯರ ತೀರ್ಮಾನಕ್ಕೆ ಒಪ್ಪಿಸುವುದೆಂತ ಸರ್ವಾನುಮತದಿಂದ ನಿರ್ಣ ಯವಾಯಿತು.

೨

ಮರುದಿನ ಶನಿವಾರವೂ ರಜಾದಿನವಾದ್ದರಿಂದ ರಾಘವೇಂದ್ರರಾಯರು ಮನೆಯಲ್ಲೇ ಇದ್ದರು. ಅವರು ಮನೆಯಲ್ಲೇ ಇದ್ದರೆ ಅವರ ತಾಯಿ ಶಾರ ದಮ್ಮಗೂ ಹೆಂಡತಿ ಮಾಲತಿಗೂ ಅಡುಗೆಯ ಭೀಮಾಚಾರ್ಯರಿಗೂ ಎಲ್ಲ ರಿಗೂ ವಿಶ್ರಾಂತಿ, ನೆಮ್ಮದಿ. ಕಚೇರಿ ದಿನಗಳೆಂದರೆ ಬೆಳಗ್ಗಿನಿಂದ ಹನ್ನೊಂದು ಗಂಟೆಯವರೆಗೆ ಮನೆತುಂಬ ಗಡಿಬಿಡಿ, ಯಾರಿಗೂ ಬಿಡುವಿಲ್ಲ, ಸುಖವಿಲ್ಲ. ಕಕ್ಷಿಗಾರರು ಬರೋದು ಹೋಗೋದು, ಗುಜು ಗುಜು ಮಾತನಾಡೋದು, ಟ್ಯಾಪರ್‍ರ್ಯಾಟರು ಕಟಪಟ ಅನ್ನೋದು, ಅಂತೂ, ಆಫೀಸಿಗೆ ಮೀಸಲಾಗಿದ್ದ ಮನೆಯ ಒಂದು ಭಾಗದಲ್ಲಿ ಭಾರೀ ಕೆಲಸದ ಅವಾಂತರ. ಈ ನಡುವೆ

ರಾಘವೇಂದ್ರರಾಯರು ಎಗರೋದು, ರೇಗೋದು, ಮೇಜು ಬಡಿಯೋದು, ಇತ್ಯಾದಿ ಅಧಿಕಾರದ ಮುಂಗೋಪವನ್ನು ಚಲಾಯಿಸೋದು. ಹತ್ತುವರೆ ಆದಕ್ಷಣ ದಢದಢಾಂತ ಒಳಗೆ ಬಂದು ತಾಯಿಗೂ ಹೆಂಡತಿಗೂ ಕೆಲಸದವ ರಿಗೂ ಒಬ್ಬೊಬ್ಬರಿಗೊಂದೊಂದು 'ಹುಕುಂ' ಏಕಕಾಲದಲ್ಲಿ 'ಜಾರಿ' ಮಾಡಿ ಚಲ್ಲಾಪಿಲ್ಲಿಯಾಗಿ ಚದರಿಸಿ ಬಿಡೋದು. ಎಲೆ ಮುಂದೆ ಕೂತಾಗ ಪ್ರತಿ ನಿತ್ಯವೂ "ಇವೊತ್ತು ಲೇಟಾಯ್ತು. ತುಂಬ ಲೇಟು" ಎಂದು ಗೊಣ ಗುಟ್ಟುತ್ತ ನಾಲ್ಕು ತುತ್ತು ಉಂಡು ಬಿಟ್ಟು, ಎದ್ದು, ಕೈ ತೊಳೆದು, ಸೂಟು ಬೂಟು ಹ್ಯಾಟು ಹಾಕಿಕೊಂಡು ಒಂದು ಕೈಯಿಂದ ತಾಯಿ ತಂದುಕೊಟ್ಟ ಲೋಟ ನೀರನ್ನು ಬಸುಕೊಂಡು, ಮತ್ತೊಂದು ಕೈಯಿಂದ ಹೆಂಡತಿ ತಯಾ ರಿಸಿ ಕೊಟ್ಟ ಬೀಡವನ್ನು ಬಾಯಿಗೆ ತುರುಕಿಕೊಂಡು, ಹಾಲಿನ ನಡುಮೇಜಿನ ಮೇಲೆ ಹೆಂಡತಿ ತಂದಿಟ್ಟ ಕೈಗಡಿಯಾರವನ್ನು ಕಟ್ಟಿಕೊಂಡು, ಫೌಂಟನ್ ಪೇನನ್ನು ಜೇಬಿಗೆ ಸಿಕ್ಕಿಸಿಕೊಂಡು, 'ಅಬ್ಬ! ಏನು ಸೆಕೆ!" ಅನ್ನುತ್ತ ಕರ ವಸ್ತ್ರದಿಂದ ಮುಖ ಒರೆಸಿಕೊಂಡು, ಕೆಂಪು ಕೆಂಪಾಗಿ, ಹಾಜರಿದ್ದ ಜಟಕ ವನ್ನು ಹತ್ತಿಕೊಂಡು ಕಚೇರಿಗೆ ಹೋಗುವುದು ವಾಡಿಕೆಯಾಗಿತ್ತು.

ಅವರ ಸವಾರಿ ಹೋಗಿಬಿಟ್ಟಿತು ಅಂದರೆ ಮನೆಮಂದಿಗೆಲ್ಲ ದೊಡ್ಡ ದಿಬ್ಬಣ ಕಳುಹಿಸಿಕೊಟ್ಟಷ್ಟು ಹಗುರವಾಗುತ್ತಿತ್ತು. ಆದರೆ ಮನಸ್ಸು ಹಗುರಾದಷ್ಟೇ ಬರಿದಾಗುತ್ತಿತ್ತು. ನಾಲ್ಕೋ ಐದೋ ಗಂಟೆಗೆ ಅವರು ಹಿಂತಿರುಗಿ ಬರುವ ವರೆಗೆ ಶಾರದಮ್ಮ ಹೇಳಿದಹಾಗೆ ಮನೇಲಿ ಲಕ್ಷಣವಿರಲಿಲ್ಲ. ಬಂದ ಬೀಗರು ಹೊರಟುಹೋದರೆ ಹೇಗೋ ಹಾಗೆ ಆ ದೊಡ್ಡ ಮನೆ ನಿರ್ಜನವಾಗಿ ಕಾಣು ತ್ತಿತ್ತು. ಮನೆತುಂಬ ಮಕ್ಕಳಿದ್ದರೆ ಸರಿ, ಹಾಗಾಗುವುದಿಲ್ಲ. ಆದರೆ ಇಲ್ಲದ ಮಕ್ಕಳು ಮರಿಗಳನ್ನು ಎಲ್ಲಿಂದ ತರೋದು? ಹಂಬಲಿಸಿ ಪ್ರಯೋಜನವಿಲ್ಲ. ಮಾಲತಿ ಮನೆಗೆ ಬಂದು ವರ್ಷ ಐದಾದರೂ ಬಸುರಾಗಿರಲಿಲ್ಲ. ಮೊದ ಮೊದಲು ಇದೊಂದು ಕೊರತೆಯಾಗಿ ಯಾರಿಗೂ ತೋರಲಿಲ್ಲ. ಮಾಲತಿಗೂ ಈ ಚಿಂತನೆಗೆ ಎಡೆಯಿರಲಿಲ್ಲ. ಬಂದ ಒಂದೆರಡು ವರ್ಷಗಳ ಕಾಲ ತನ್ನ ಸ್ವಂತ ಗುಣಲಕ್ಷಣಗಳನ್ನೂ ತವರುಮನೆಯ ರೀತಿನೀತಿಗಳನ್ನೂ ಗಂಡನ ಮನೆಯ ಕ್ರಮನಿಯಮಗಳಿಗೆ ಹೊಂದಿಸಿಕೊಳ್ಳುವುದ ರಲ್ಲೇ ಕಳೆದಳು. ಮುಖ್ಯವಾಗಿ ಗಂಡನ ಮರ್ಜಿ ಗೊತ್ತುಹಿಡಿಯು ವುದಕ್ಕೂ ಗಂಡನ ಒಡನಾಟ ಅಭ್ಯಾಸ ಮಾಡಿಕೊಳ್ಳುವುದಕ್ಕೂ ಸ್ವಲ್ಪ

ಪ್ರಯಾಸವಾಯಿತು. ಈ ಭಾಗದಲ್ಲಿ ಆಕೆ ಆವರೆಗೆ ಓದಿ ಕೇಳಿ ತಿಳಿದದ್ದು ಯಾವುದೂ ಸಹಾಯಕ್ಕೆ ಬರಲಿಲ್ಲ. ದಾಂಪತ್ಯ ಒಡನಾಟದ ಮಟ್ಟಿಗಂತು ಆಕೆ ಗುಟ್ಟಿನಲ್ಲಿ ಅತ್ಯಾತುರದಿಂದ ಓದಿ ಸಂಗ್ರಹಿಸಿದ ಕಲ್ಪನೆಗಳು ಒಂದಿಷ್ಟು ಕಣ್ಣುಕಪಟವಾಗಿಯೇ ಉಳಿಯಿತೇ ವಿನಾ ಪ್ರಯೋಜನಕಾರಿಯಾಗಲಿಲ್ಲ. ಮದುವೆಯಾದ ಗಂಡನಾದರೂ ರಾಘವೇಂದ್ರರಾಯರು ಆಕೆಗೆ ಬಹುಸಮಯ ಕೇವಲ ಅಪರಿಚಿತ ಪರಪುರುಷನಂತೆಯೆ ಇದ್ದರು. ಅವರೊಂದಿಗೆ ರಾತ್ರಿ ಏಕಾಂತದಲ್ಲಿ ಒಂದೇ ಹಾಸಿಗೆಯ ಮೇಲೆ ಮಲಗಿಕೊಳ್ಳುವುದೇ ಒಂದು ದೊಡ್ಡ ವಿಚಿತ್ರ ಸಂಘಟನೆಯಾಗಿ ತೋರುತ್ತಿತ್ತು, ಆರಂಭದಲ್ಲಿ. ಅವರು ಸಹ ಚಿಕ್ಕಂದಿನಿಂದಲೂ ಹೆಣ್ಣುಜಾತಿಯಿಂದ ದೂರವಾಗಿಯೇ ಇದ್ದವರಾದ್ದರಿಂದ ಈ ಸಮಸ್ಯೆಗಳನ್ನು ಪರಿಹರಿಸಲು ಅಶಕ್ತರಾಗಿದ್ದರು. ಒಂದೊಂದು ವೇಳೆ ತಾನು ಓದಿದ್ದನ್ನಾದರೂ ಪ್ರಸ್ತಾಪಿಸಿ ಗಂಡನೊಡನೆ ಚರ್ಚಿಸಬೇಕೆಂದು ಮಾಲತಿಗೆ ಉದ್ರೇಕವಾಗುತ್ತಿತ್ತು ಆದರೆ ಸೈಸಲಿಗೆ ಇಲ್ಲದೆ ಅಂತಹ ವಿಷಯಗಳಲ್ಲಿ ಮಾತಿನ ಸಲಿಗೆ ಸಾಧ್ಯವಿಲ್ಲ. ಮಾತಿನ ಸಲಿಗೆಯಿಲ್ಲದೆ ಸೈಸಲಿಗೆ ಬಾರದು. ಹೀಗಾಗಿ ಅದೊಂದು ಹೇಳಲಾಗದ ನ್ಯೂನತೆ ಅನುಭವಿಸಲೇಬೇಕಾದ ಅತೃಪ್ತಿಯ ರೂಪದಲ್ಲಿ ಅವರಿಬ್ಬರ ಚೇತನದಲ್ಲೂ ಒಂದೆಡೆ ಗೌಪ್ಯವಾಗಿ ಅನಿವಾರ್ಯವಾಗಿ ಉಳಿದುಬಿಟ್ಟಿತು.

ಈಮಧ್ಯೆ ತಾನು ಬಸುರಾಗಲಿಲ್ಲವೆಂದು ಯೋಚನೆ ತಲೆದೋರಿದ್ದರೂ ಅದು ನಿತ್ಯ ಜೀವನದ ನೆಮ್ಮದಿಭಂಗ ಮಾಡುವಷ್ಟಿರಲಿಲ್ಲ. ಏನೋ ಆಗಲಿಲ್ಲ, ಇನ್ನು ಮುಂದೆ ಆಗಬಹುದು, ಎಂದು ಸಮಾಧಾನ ತಂದುಕೊಳ್ಳುತ್ತಿದ್ದಳು. ಅವರ ಕೆಲಸಗಿತ್ತಿ ತಿಮ್ಮಕ್ಕ ಹೇಳಿದಂತೆ ತಿಂಗಳು ತಿಂಗಳಿಗೆ ಹೊರಗಾಗುವವರಿಗೂ ಬಡವರ ಹೆಣ್ಣುಮಕ್ಕಳ ಹಾಗೆ ಊಟ ಮಾಡುವವರಿಗೂ ಸಾಲೆಮಕ್ಕಳ ಹಾಗೆ ಓಡಾಡುತ್ತಿರುವವರಿಗೂ ಬಂಜೆತನದ ಹೆದರಿಕೆಯಿಲ್ಲವೆಂತೆ ತನ್ನಷ್ಟಕ್ಕೆ ತಾನೇ ಆಶ್ಚರ್ಯಪಡುತ್ತಿದ್ದಳು. ಆದರೆ ಬರಬರುತ್ತ ಈ ಚಿಂತೆಯ ಎಳೆನಾಗರ ಬೆಳೆದು ವಿಷ ಕಾರಲು ಆರಂಭಿಸಿ ಹೊಟ್ಟೆ ಸಂಕಟಕ್ಕೆ ಸುರುವಾಯಿತು. ತಿಂಗಳು ಮೇಲೆ ತಿಂಗಳು ಸರಿದಂತೆಲ್ಲ ಆಕೆಯ ಧೈರ್ಯ ಹೋಗುತ್ತ ಅಪಧೈರ್ಯ ಹುಟ್ಟಿಕೊಂಡಿತು. ಚಿಕಿತ್ಸಾತೀತವಾದ ಈ ಹೊಟ್ಟೆ ಹುಣ್ಣಿಗೇನು ಮಾಡಬೇಕು? ಗಂಡನಿಗೆ ಹೇಳೋದಕ್ಕೆ ಗರ್ವ

ಬಿಡದು. ಅತ್ತೆಗೆ ತಿಳಿಸೋದಕ್ಕೆ ನಾಚಿಕೆ ಬಿಡದು. ಗೆಳತಿ ಸುಮಿತ್ರೆಗೆ ತಿಳಿಸೋದಕ್ಕೆ ಹೆದರಿಕೆ ಬಿಡದು. ಸುಮಿತ್ರೆ ಒಂದು ದಿನ ಚೇಷ್ಟೆ ಮಾಡಿದ್ದಳು. "ಈ ರೇಶನ್ ಕಾಲದಲ್ಲಿ ಸಂತತಿಗೆ ಮಾತ್ರ ಕಂಟ್ರೋಲ್ ಇಲ್ಲಾಂತ ತಿಳಿದಿದ್ದೆ. ನೀನು ಅದಕ್ಕೂ ಕಂಟ್ರೋಲ್ ಹಾಕಿದ್ದೀಯೇನೇ ?" ಅನ್ನುತ್ತ. ಮಾಲತಿ ಏನುತ್ತರ ಕೊಡೋದು ? ನಕ್ಕು ಸುಮ್ಮಗಿದ್ದುಬಿಟ್ಟಳು. "ಸಂತತಿ ಕಂಟ್ರೋಲೇ ಸರಿ. ! ಅವಳಿಗೇನು ಸುಮಿತ್ರೆಗೆ ! ಡಾಕ್ಟರ ಹೆಂಡತಿ; ಅಂತಹ ಪ್ರಶ್ನೆ ಕೇಳೋದು ನ್ಯಾಯ. ಅವಳೇನೋ ಮಾಡುತ್ತಿರಬೇಕು, ಒಂದು ಹೆತ್ತು ಹೋದಮೇಲೆ ಸುದ್ದಿಯೇ ಇಲ್ಲ, ವರ್ಷ ಮೂರಾಯಿತು. ಆದರೆ ತನ್ನ ಪತಿಗೆ ಗರ್ಭನಿರೋಧದ ಸಾಧಕಗಳಿವೆಯೆಂಬುದೇ ಗೊತ್ತಿದೆಯೋ ಇಲ್ಲವೋ? ಹೇಗೆ ಗೊತ್ತಾಗಬೇಕು ? ಹದಿನೆಂಟನೆ ವಯಸ್ಸಿನವರೆಗೆ ಮಂಗಳೂರು ಗವರ್ನ್ಮೆಂಟು ಕಾಲೇಜಿನಲ್ಲಿ. ತಾನಾಯಿತು ತನ್ನ ಪಾಠಪುಸ್ತಕಗಳಾಯಿತು. ಆಮೇಲೆ ಮೂರು ವರ್ಷ ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ, ಎರಡು ವರ್ಷ ಲಾ ಕಾಲೇಜಿನಲ್ಲಿ, ಅದೇ ರೀತಿ ಅವಿಶ್ರಾಂತ ವ್ಯಾಸಂಗ. ಆಮೇಲೆ ಮತ್ತೆ ಮಂಗಳೂರಲ್ಲಿ ಒಂದು ವರ್ಷ ಎಪ್ರೆಂಟೀಸು. ಎಪ್ರೆಂಟೀಸು ಮುಗಿದಮೇಲೆ ಹೇಳೋದೇನು, ಅವರಾಯಿತು, ಆಫೀಸಾಯಿತು, ಕಚೇರಿಯಾಯಿತು. ಅಂದಮೇಲೆ ಆಧುನಿಕ ಸುಧಾರಣೆಗಳ ರಹಸ್ಯ ಹೇಗೆ ತಾನೇ ಗೊತ್ತಾಗಬೇಕು ? ಮಾತ್ರವಲ್ಲ, ನಿಜವಾದ ನಿತ್ಯಪ್ರಯೋಜನಕಾರಿಯಾದ ವ್ಯವಹಾರಜ್ಞಾನ ಸಂಪಾದನೆಯಾದರೂ ಯಾವಾಗ ಮಾಡಬೇಕು ? ಅವರಿಗೆ ಡಿಗ್ರಿಗಳೇನೋ ಡಬ್ಬತಿದ್ದೂ ಗೊತ್ತಿರದ ಸಂಗತಿಗಳು ಒಂದು ಬ್ರಹ್ಮಾಂಡವಾಗಬಹುದು" ಎಂದು ಲೆಕ್ಕ ಹಾಕುತ್ತಿದ್ದಳು.

ಶಾರದಮ್ಮನ ಪಾಲಿಗಂತು ರಾಘವೇಂದ್ರರಾಯರು ಅರ್ಧಚಡ್ಡಿ ತುಂಡು ಶರಟಿನ ರಾಘುವೇ ಆಗಿದ್ದರು, ಈಗಲೂ "ಶಾಲೆಗೆ ಹೋಗ್ತಿದ್ದಾಗಲೂ ಹೀಗೇ ಮಾಡ್ತಿದ್ದ ರಾದ್ಧಾಂತ. ಆಗ ಮಾತ್ರ ಬೈದರೆ ಅತ್ತುಬಿಡುತ್ತಿದ್ದ. ಈ ಬೈಯೋರು ಇಲ್ದೇ ಇರೋದ್ರಿಂದ ಅಳೋಬದಲು ಅವನೇ ಬೈದು ಬಿಡ್ತಾನೆ, ಅಷ್ಟೆ. ಅದೇ ರಾಘು ಈಗ ಮಾತ್ರ ಊರಿಗೆಲ್ಲ ದೊಡ್ಡವನಾಗಿ ಬಿಟ್ಟಿದ್ದಾನೆ." ಅನ್ನುತ್ತಿದ್ದರು. ನಿಜ, ತಾಯಿ ಮಟ್ಟಿಗೇನೋ ಸರಿಯೆ, ಆದರೆ ತನ್ನ ಮಟ್ಟಿಗೂ ಹಾಗಿದ್ದರೇನು ಗತಿ, ಎಂದು ಮಾಲತಿ ವಿಷಾದ

ಪಡುತ್ತಿದ್ದುದೂ ಉಂಟು. "ಅವರ ಸ್ವಭಾವ ಮಕ್ಕಳಂತಿರಬಹುದು, ವರ್ತನೆಯೂ ಬಹಳಮಾಡಿ ಹಾಗೆಯೇ ಇರಬಹುದು. ಆದರೆ ನನ್ನ ಪಾಡಿಗೆ ತಾಯ್ತನ ಇಲ್ಲಿಗೇ ಮುಗಿಯಿತೆಂದರೆ ?" ಇಂತಹ ದಾರುಣವಾದ ಶಂಕೆಯ ಛಳಿಗಾಳಿ ಎದೆಯೊಳಗೆ ಹೊಕ್ಕಾಗ ಮಾಲತಿಗೆ ಹೃದಯಕೋಶ, ಶ್ವಾಸಕೋಶ, ಅನ್ನಕೋಶ. ಪ್ರಾಣಪಾತ್ರೆಗಳೆಲ್ಲವೂ ಕವುಚಿ ಬಿಟ್ಟಂತಾಗುತ್ತಿತ್ತು.

ಆದರೆ ಅಂತಹ ವಿಷಗಳಿಗೆಗಳು ವಿರಳ. ಗಂಡುಹೆಣ್ಣಿನ ಮಕ್ಕಳುಮರಿಗಳ ಸಮಸ್ಯೆಗಳು, ಅತೃಪ್ತಿ ಅಸಂತೋಷಗಳು ಆಗಾಗ ಆಕೆಯ ಎದೆಯನ್ನು ಹಿಂಡುತ್ತಿದ್ದರೂ ಆಕೆ ಅಸುಖವನ್ನು ತೋರಿಸಿದ್ದು ಯಾರೂ ಕಂಡಿರಲಿಲ್ಲ. ಮಾಲತಿ ಹುಟ್ಟುವಾಗ ತಂದ ನಿತ್ಯೋಲ್ಲಾಸವನ್ನು, ಧೈರ್ಯವನ್ನು, ಕುತೂಹಲವನ್ನು ಅಡಗಿಸುವಂತಹ ಮೋಡ ಅದುವರೆಗೆ ಆಕೆಯ ದಿಗಂತದಲ್ಲಿ ಮೂಡಿರಲಿಲ್ಲ. ಯಾವಾಗ ನೋಡಿದರೂ ಆಕೆಯ ನೀಳ್ಗಣ್ಣುಗಳಿಗೂ ತುಂಬು ತುಟಿಗಳಿಗೂ ಏನೋ ಸಂಕೇತವಿದ್ದಂತೆ, ತಮ್ಮಷ್ಟಕ್ಕೆ ತಾವೇ ಸುತ್ತಮುತ್ತಲಿನವರನ್ನು ಪರಿಶೀಲಿಸುತ್ತ ಟೀಕಿಸುತ್ತ ನಗುತ್ತಿದ್ದಂತೆ ಭಾಸವಾಗುತ್ತಿತ್ತು. ಮಾಲತಿಯ ಈ ಚಿರಪ್ರಸನ್ನತೆಯೇ ಶಾರದಮ್ಮಗೆ ಅವರ ಮನೆ ಬೆಳಕಾಗಿತ್ತು. ಅವರಿಗೆ ಬೇರೆ ಹೆಣ್ಣುಮಕ್ಕಳಿರಲಿಲ್ಲ. ಮಾಲತಿಗೆ ಬೇರೆ ತಾಯಿ ಇರಲಿಲ್ಲ. ಬೇಕೆಂತ ಕಾಣುತ್ತಲೂ ಇರಲಿಲ್ಲ.

ರಾಘವೇಂದ್ರರಾಯರು ಮನೆಯಲ್ಲೇ ಇದ್ದರು ಎಂದರೆ ಆಫೀಸಿನಲ್ಲೇ ಇದ್ದರು ಎಂದರ್ಥ. ಅವರಿಗೆ ಮನೆಗಿಂತ ಆಫೀಸೇ ಹಿತ. ಆಫೀಸು ಬಿಟ್ಟು ಒಳಗೆ ಬಂದರು ಅಂದರೆ ತಪ್ಪಿ ನೀರಿನಿಂದ ಮೇಲೆ ಬಿದ್ದ ಮೀನಿನಂತೆ ಚಡಪಡಿಸುತ್ತಿದ್ದರು. ಮನೆಯವರಲ್ಲಿ ಯಾವ ವಿಷಯ ಪ್ರಸ್ತಾಪಿಸೋದು, ಯಾರ ಹತ್ರ ಮಾತನಾಡೋದು; ಅಷ್ಟೇ ಅಲ್ಲ—ಯಾಕೆ ಮಾತನಾಡೋದು ಎಂಬುದೇ ಅವರಿಗೆ ತಿಳಿಯುತ್ತಿರಲಿಲ್ಲ. ಶಾರದಮ್ಮನ ಹತ್ತಿರ ಒಂದು ರೀತಿ ಬೇರೆ. ಆತ್ಮೀಯತೆ ಇದ್ದುದರಿಂದ ಹೆಚ್ಚು ಮಾತಿನ ಅವಶ್ಯಕತೆಯಿರಲಿಲ್ಲ. ಮಾತಿಗೆ ಮೀರಿದ ವಿಚಾರಗಳನ್ನು ಮೌನದಿಂದ ಸೂಚಿಸಬಹುದು. ಆದರೆ ಮಾಲತಿ ಹತ್ತಿರ ಹಾಗಲ್ಲ. ಆಕೆಯೊಡನೆ ಮಾತೆತ್ತುವುದೇ ತಡ ತರ್ಕಕ್ಕಿಳಿಯುತ್ತಿತ್ತು. ಯಾವ ಕಾರಣದಿಂದಲೋ ಚರ್ಚೆಯ ಚಟ ಅತಿ ಸುಲಭವಾಗಿ ಹುಟ್ಟಿ ಇಬ್ಬರ ಮಾತೂ ಬಿಸಿ ಬಿಸಿಯಾಗುತ್ತಿತ್ತು. ರಾಘವೇಂದ್ರರಾಯರು

ವಿವರಿಸುತ್ತ ಸಮರ್ಥಿಸುತ್ತ ಹೋದ ಹಾಗೆಲ್ಲ. ಸ್ವರವನ್ನು ಏರಿಸುತ್ತಿದ್ದರು, ಬಿರುಸಾಗುತ್ತಿದ್ದರು, ಸಿಟ್ಟಾಗುತ್ತಿದ್ದರು. ಆದರೆ ಅಷ್ಟು ಸುಲಭವಾಗಿ ಮಾಲತಿಯ ಬಾಯಿ ಮುಚ್ಚಿಸಲಾಗುತ್ತಿದ್ದಿಲ್ಲ. ಅವರು ತಾಳ್ಮೆ ಕಳಕೊಂಡಷ್ಟೂ ಆಕೆ ಸಹನೆ ತಂದು ಕೊಳ್ಳುವಳು. ಸ್ವರ ಏರಿಸಿದಷ್ಟು ತಗ್ಗಿಸುವಳು. ಸಿಟ್ಟುಗೊಂಡಷ್ಟು ಮುಗುಳ್ನಗುವಳು. ಹೀಗಾಗಿ ರಾಘವೇಂದ್ರರಾಯರಿಗೆ ತಾನು ಹೆಂಡತಿಯ ಗಣನೆಯಲ್ಲಿ ಎಷ್ಟರವನು ಎಂಬುದು ಗೊತ್ತಾಗಿರಲಿಲ್ಲ. ಆಕೆಯೆಂದರೆ ಸ್ವಲ್ಪ ಅಂಜಿಕೆ, ಸ್ವಲ್ಪ ಹೆಮ್ಮೆ, ಅತಿಯಾಗಿ ಮೆಚ್ಚುಗೆ ಎಲ್ಲವೂ ಮಿಶ್ರಿತವಾಗಿತ್ತು. ಪ್ರೀತಿಯಿತ್ತು; ಆದರೆ ಅನ್ಯೋನ್ಯತೆ ಇರಲಿಲ್ಲ. ಆಕೆಯೊಂದಿಗೆ ಬಿಡುಸಮಯವನ್ನು ಪರಸ್ಪರ ಆಪ್ತಪರಿಚಯಕ್ಕಾಗಿ ವಿನಿಯೋಗಿಸುವಷ್ಟು ರಸಿಕತನ ಅವರಲ್ಲಿರಲಿಲ್ಲ.

ಒಬ್ಬರೇ ಆಫೀಸಿನಲ್ಲಿ ಬರೆಯುತ್ತಿದ್ದರು. ಮನೆಯೆಲ್ಲ ನಿಶ್ಶಬ್ದವಾಗಿತ್ತು. ನಡುಹಾಲಿನ ಬಲಗಡೆ ಇದ್ದ ತನ್ನ ಕೊಠಡಿಯಲ್ಲಿ ಒಂದು ಡ್ರೆಸ್ಸಿಂಗ್ ಸ್ಟೂಲಿನ ಮೇಲೆ ಕುಳಿತು ಮಾಲತಿ ಬ್ರಶ್ಶಿನಿಂದ ತಲೆಸಿಕ್ಕು ಬಿಡಿಸಿಕೊಳ್ಳುತ್ತಿದ್ದಳು. ಸ್ನಾನಮಾಡಿ ಬಂದವಳು ನಿರಾಭರಣಳಾಗಿದ್ದಾಗ ಒಂದಿಷ್ಟೂ ಲಜ್ಜೆಯಿಲ್ಲದೆ ಮೂರು ಕಡೆಗಳಿಂದಲೂ ಇಣಿಕಿ ನೋಡುತ್ತಿದ್ದ ಡ್ರೆಸ್ಸಿಂಗ್ ಮೇಜಿನ ನಿಲುಗನ್ನಡಿಗಳಿಗೆ ಬೆನ್ನು ಮಾಡಿ ಕುಳಿತಿದ್ದಳು. ಆಗ ಕೆಲಸಗಿತ್ತಿ ತಿಮ್ಮಕ್ಕ ಬಂದು ಅಗ್ಗಿಷ್ಟಿಕೆಯಲ್ಲಿಷ್ಟು ಕೆಂಡವನ್ನೂ ಒಂದು ಕೈಬುಟ್ಟಿಯನ್ನೂ ತಂದು ಮೂಲೆ ಮೇಜಿನ ಮೇಲೆ ಮಡಗಿ ಸದ್ದು ಮಾಡದೆ ಹಿಂತಿರುಗಿದಳು. ಹೀಗೆ ನಿಯಮಿತ ಕೆಲಸಗಳನ್ನು ಸಕಾಲಕ್ಕೆ ಸದ್ದಿಲ್ಲದೆ ಮಾಡುವಂತೆ ತಿಮ್ಮಕ್ಕನಿಗೆ ಹೇಳಿಕೊಡಲು ಮಾಲತಿ ಮೂರು ವರ್ಷ ಕಷ್ಟಪಟ್ಟಿದ್ದಳು. ಸುಮಾರು ನಲವತ್ತು ವರುಷಗಳಿಂದ ಶಾರದಮ್ಮನ ಸೇವೆ ಮಾಡಿದ್ದ ತಿಮ್ಮಕ್ಕನಿಗೆ ಮಾಲತಿಯನ್ನು ಮೆಚ್ಚಿಸುವ ಕೆಲಸ ಒಂದು ವಿಶೇಷವೆಂತನಿಸಲಿಲ್ಲ, ಆರಂಭದಲ್ಲಿ. ಆದರೆ ಮಾಲತಿಯ ನವಸುಧಾರಣೆಯ ಚಪಲ ಮನೆಯ ಕ್ರಮನಿಯಮಗಳನ್ನು ಬದಲಿಸುವುದನ್ನು ನೋಡಿ ಆಕೆಗೆ 'ಚಿಕ್ಕಮ್ಮ'ನ ಮೇಲಿದ್ದ ಪ್ರೀತಿ ವಿಶ್ವಾಸ ಬಹಳ ಮಟ್ಟಿಗೆ ಆರಿಹೋಯಿತು. ಒಂದು ವಿಧದ ಅಸಹಕಾರ ಚಳುವಳಿಯನ್ನೇ ಹೂಡಿದಳು. ಇಲ್ಲದ ದುರ್ಬುದ್ಧಿಗಳನ್ನು ಮಾಡಿದಳು. ಒಗೆದ ಸೀರೆಯನ್ನು ಒಣಗಿಸಿದ ಮೇಲೆ ಪದರುಪದರಾಗಿ ಮಡಚಿ ಇಡೊಂದ್ರೆ

ಬೇಕೆಂತಲೇ ಸುರುಳಿಮಾಡಿ ತಿರುಪಿ ಇಡೋದು, ಸ್ನಾನಕ್ಕೆ ನೀರು ಉಗುರು ಬೆಚ್ಚಗಿದ್ದರೆ ಸಾಕೂಂದ್ರೆ ಕುದಿ ನೀರನ್ನೇ ತೋಡಿಡೋದು. ಕಣ್ಣು ತಪ್ಪಿಸಿ ಮೇಜಿನ ಮೇಲಿದ್ದ ತಿಂಡಿಗಳ ರುಚಿ ನೊಡೋದು. ಹೀಗೆಲ್ಲ ಉಪ ದ್ರವ ಕೊಡಲು ತೊಡಗಿದಳು.

ಮಾಲತಿ ಇದನ್ನೆಲ್ಲ ನೋಡಿಯೂ ನೋಡದಂತೆ ನಟಿಸಿ ತನಗೆ ಹೇಗಾಗ ಬೇಕೆಂಬುದನ್ನು ಹೇಳುತ್ತಲೇ ಇದ್ದಳು. ಆದರೆ ಈ ಸಹನೆಗೆ ತಿಮ್ಮಕ್ಕ ಕಲ್ಪಿಸಿ ಕೊಂಡ ಅರ್ಥವೇ ಬೇರೆ. "ಚಿಕ್ಕಮ್ಮಗೆ ಮೂಗು ಕದ್ರೂ ಗೊತ್ತಾಗೋದಿಲ್ಲ. ಗೊತ್ತಾದ್ರೂ ಹಿಡಿದು ಜೋರುಮಾಡುವ ತಾಕತ್ತಿಲ್ಲ." ಅಂತವಳ ಅಭಿ ಪ್ರಾಯ. ಒಂದು ದಿನ ಸಂಜೆ ಆಕೆ ಎಂದಿಗಿಂತ ಒಂದರ್ಧಗಂಟೆ ಮುಂಚಿತ ವಾಗಿ ಮಾಲತಿಯ ಕೋಣೆ ಗುಡಿಸುವುದಕ್ಕೆಂತ ಬಂದಾಗ ಒಳಗೆ ಅತ್ತೆ ಸೊಸೆ ತನ್ನ ವಿಷಯ ಮಾತನಾಡುತ್ತಿದ್ದುದು ಕಿವಿಗೆ ಬಿದ್ದು ನಿಂತು ಕೇಳಿದಳು.

"ತಿನ್ನಲೀಮ್ಮ, ಪಾಪ. ಅವಳು ಒಂದುವೇಳೆ ನನ್ನ ಒಡಹುಟ್ಟಿದವಳೇ ಆಗಿದ್ದರೆ? ಹೇಳದೆ ಕೇಳದೆ ನನಗಾಗಿ ಮುಚ್ಚಿಟ್ಟದ್ದನ್ನ ತಿನ್ನೋದು ಕಳ್ಳ ತನವೆ? ನಮ್ಮಂತೇ ನಾಲಗೆ ಚಪಲ. ಆಸೆಯಾದಾಗ ಕೇಳಿದ್ರೆ ಸಿಗುತ್ತೋ ಇಲ್ಲವೋ ಎಂಬ ಅನುಮಾನ. ಅದರಲ್ಲೂ ಮುದುಕಿ, ಪಾಪ. ನಾನು ಪಕ್ಕನೆ ಕೈಹಿಡಿದು ಗದರಿಸಿದೇ ಅನ್ನು. ಅವಳು ಆಮೇಲೆ ಈ ಮನೇಲಿರುವುದು ಸಾಧ್ಯವೆ? ಅಥವಾ ನೀನು ಕಳ್ಳೀಂತ ನಾನು ಬೆಟ್ಟು ತೋರಿಸಿದ ಮೇಲೆ ಅವಳ ಮೂತಿ ನಾವಾದರೂ ಹೇಗೆ ನೋಡೋದು? ತಿನ್ನಲಿ. ಇನ್ನು ಮುಂದೆ ಮನೇಲಿ ಏನು ಮಾಡಿದ್ರೂ ಅವಳ ಪಾಲು ಅವಳಿಗೆ ಕೊಟ್ಟೇತೀರ ಬೇಕು. ಅಲ್ವೇ?" ಅನ್ನುತ್ತಿದ್ದಳು ಮಾಲತಿ. ಅಂದಿನಿಂದ ತಿಮ್ಮಕ್ಕನಿಗೆ 'ಚಿಕ್ಕಮ್ಮ'ನ ಮೇಲೆ ಅಸದೃಶಭಕ್ತಿ.

ಮಾಲತಿ ಕೆಂಡದಮೇಲೆ ಲೋಭಾನದ ಪುಡಿಯನ್ನೊಂದಿಷ್ಟು ಚಿಮುಕಿಸಿ ಬುಟ್ಟಿಯನ್ನು ಅದರ ಮೇಲೆ ಕವುಚಿ ಹಾಕಿ ಬುಟ್ಟಿಯ ಮೇಲೆ ತನ್ನ ಕೇಶ ರಾಶಿಯನ್ನು ಹರವಿ ಹೊಗೆಯಿಂದ ಒದ್ದೆತಲೆಯನ್ನು ಒಣಗಿಸಿಕೊಳ್ಳುತ್ತಿರು ವಾಗ ಶಾರದಮ್ಮ ಬಂದರು. ರಾಘವೇಂದ್ರರಾಯರ ಗಂಭೀರ ಮುಖಮುದ್ರೆ ದೋಷರಹಿತವಾದ ಮೈಬಣ್ಣ ಎಲ್ಲಿಂದ ಬಂತೆಂಬುದು ಶಾರದಮ್ಮನನ್ನು

ನೋಡಿದೊಡನೆ ವ್ಯಕ್ತವಾಗುತ್ತಿತ್ತು. ತನ್ನ ಸೊಸೆ ತಲೆ ಬಿಚ್ಚಿಹಾಕಿ ಕೊಂಡದ್ದನ್ನು ಕಂಡು ಶಾರದಮ್ಮಗೆ ಆಶ್ಚರ್ಯವಾಯಿತು.

" ತಲೆಗೆ ಸ್ನಾನಮಾಡಿದೆಯಾ, ಮಾಲತಿ ? "

" ಹೌದಮ್ಮ, ಬರೀ ತಲೆಗೆ. ನಿನ್ನೆದು ಜಿಡ್ಡು ಪೂರಾ ಹೋಗಿರಲಿಲ್ಲ" ಅಂದಳು ಮಾಲತಿ ತಲೆಎತ್ತದೆ, ಕೂದಲನ್ನು ಕೈಬೆರಳುಗಳಿಂದ ಬಿಡಿಸಿ ಕೊಳ್ಳುತ್ತ.

" ಶನಿವಾರ ಯಾಕಮ್ಮ ಮಾಡಿದಿ ? "

ಅತ್ತೆಯ ಮಾತಿನಲ್ಲಿ ಬೇಸರದ ಧ್ವನಿ ಆಕೆಯ ಕಿವಿಗೆ ನಾಟಿದ್ದರಿಂದ ತಲೆಯೆತ್ತಿ ಕೂದಲನ್ನು ಹಿಂದಕ್ಕೊತ್ತಿ ಮುಗುಳು ನಗುತ್ತ,

" ಪರವಾಯಿಲ್ಲಮ್ಮ. ಶನಿವಾರ ಎಣ್ಣೆ ಹಾಕಬಾರದೂಂತ ಶಾಸ್ತ್ರ ವಿನಾ ಎಣ್ಣೆ ತೆಗೀಕೂಡದೂಂತ ಇಲ್ಲವಷ್ಟೇ ? " ಎಂದು ಕ್ಷಮೆ ಬೇಡುವವಳಂತೆ ಕೇಳಿದಳು.

" ಹೋಗಲಿ ಬಿಡು. ಎಲ್ಲಿ ಬ್ರಿಸ್ಸು? ನಿನಗೆ ಮುಡಿಹಾಕಿಬಿಟ್ಟು ಸ್ನಾನಕ್ಕೆ ಹೋಗ್ತೇನೆ " ಅಂದರು ಶಾರದಮ್ಮ.

ಆಕೆ ಕೂತಿರುವಾಗ ಅತ್ತೆ ನಿಂತು ತಲೆ ಬಾಚುತ್ತಿರೋದು ಚೆಂದಕಾಣದೆ ಮಾಲತಿ ಎದ್ದು ಅಲ್ಲೇ ನೆಲಕ್ಕೆ ಹಾಸಿದ್ದ ಜಮಖಾನದ ಮೇಲೆ ಕೂತಳು.

" ನಿನ್ನೆ ರಾಘು ಎಲ್ಲಿಗೋ ಹೋಗಿದ್ದನಲ್ಲ ? " ಎಂದು ಶಾರದಮ್ಮ ಕೇಳಿದರು ಬ್ರಶ್ಶು ಹಾಕುತ್ತ.

" ಹೌದಮ್ಮ ಏನೋ ಹೇಳಿದ್ರು. ನೀರಕಂಭವೋ ವೀರಕಂಭವೋ ಅಂತ. ಯಾವುದೋ ಒಂದು ಹವೀಕರ ಹುತ್ತವಿರಬೇಕು. ಬಸ್ಸಿನಲ್ಲೇ ಹೋಗಿಬಂದೆ. ಸಾಕು ಸಾಕಾಯಿತು, ಅಂದ್ರು. "

" ಅವನೇ ಮಾಡಿಕೊಂಡದ್ದು, ಅನಾನುಕೂಲ. ಹೋಗೋ ಮುಂಚೆ ಒಂದಿಷ್ಟು ಅವಲಕ್ಕಿಮೊಸರು ತಿಂದುಕೊಂಡು ಹೋಗೂಂದೆ. ಬೇಕಿಲ್ಲ, ಲೇಟಾಯ್ತು, ಬೇಗ ಬಂದುಬಿಡ್ತೇನೆಂದ. ಬರುವಾಗ ಗಂಟೆ ಮೂರು. ಅವರೆಗೂ ಉಪವಾಸ. "

" ಹ್ಯಾ ! ಕೈಯಿಂದ ಬಿಡಿಸೀಮ್ಮ ; ಬ್ರಶ್ಶು ಬೇಡ. ಒಂದಲ್ಲ ಒಂದು ದಿನ ಈ ತಲೆ ಬಾಬ್ (Bob) ಮಾಡ್ಸಿಬಿಡ್ತೇನೆ. ಆವರಿಗೆ ಹಾಗೇ ಆಗ

ಬೇಕು. ಎಷ್ಟು ಮೊಂಡತನ ಮತ್ತೆ? ಹೆಂಗಸರು ಹೇಳಿದ್ದು ಆಗದು. ಸ್ವತಹ ಒಂದೂ ತಿಳೀದು. ಹೆಚ್ಚಿಗೆ ಹೇಳೋದಕ್ಕೆ ಹೋದರೆ ಬಾಯಿ ಹೊಡೆದು ಬಿಡ್ತಾರೆ "

"ಅಲುಗಾಡಿಸಬೇಡ. ನಿನ್ನೆ ಏನು ಹೇಳಿದ?"

"ಏನಿಲ್ಲ. ಹಳ್ಳೀಲಿ ಅಷ್ಟು ಹೊತ್ತು ಮಾಡಿದ್ದೇನೂಂತ ಕೇಳಿದೆ. ನಿನಗ್ಯಾಕೆ ಅದೆಲ್ಲ ತಲೆಹರಟೆ ಅಂದುಬಿಟ್ರು. ಹರಟೆಯಾದ್ರೆ ಹರಟೆ. ಅರ್ಧಾಂಶಕ್ಕೆ ನನಗೂ ಹಕ್ಕಿದೆ, ಹೇಳಿಬಿಡೀಂದೆ. ಹೂಂ ಹೂಂ ಅಂತ ಗೊಣಗುತ್ತ ಅರ್ಧಮನಸ್ಸಿನಿಂದ ಹೇಳಿದ್ರು. ಹೋಗಬೇಕೂಂತಲೇ ಇರಲಿಲ್ಲವಂತೆ. ಕೇಸು ತೀರ್ಮಾನಕ್ಕೆ ಗೋಪಿನಾಥರಾಯರನ್ನ— ಹಾ, ಬಿಗೀಬೇಡಮ್ಮ— ನಿಶ್ಚಯಿಸಿಕೊಂಡರಂತೆ."

"ಗೋಪಿ ಅನ್ನುವಾಗ ನೆನಪಾಗುತ್ತೆ. ಮೊನ್ನೆ ರಾಘು ಹತ್ರ ಹೇಳಿದ್ದೆ, ಅವನ್ನ ಒಂದು ಸರ್ತಿ ಬಂದುಹೋಗೋದಕ್ಕೆ ಹೇಳಿಬಿಡೂಂತ. ಎಷ್ಟೋ ತಿಂಗಳಾಗಿರಬೇಕು, ಅವನ್ನ, ಅವನ ಕೂಸಿನ್ನ ಇಂದಿರಾಬಾಯಿನ ನೋಡದೆ."

"ಅದೇನಮ್ಮ, ಗೋಪಿನಾಥರಾಯರು ಮೊದಲಿನ ಹಾಗೆ ಬಂದುಹೋಗಿ ಮಾಡೋದಿಲ್ಲ?"

"ಏನೋಪ್ಪ. ಹೆಂಡತಿ ತೀರಿಹೋದ ಮೇಲೆ ಅವನ ಮರ್ಜಿಯೇ ಬದಲಾಗಿದೆ. ಇಂದಿರಾಬಾಯಿಯೂ ಅಷ್ಟೆ, ಮುಂಚಿನಂತಿಲ್ಲ. ಆದರೆ ಅವಳಿಗಾದರೂ ಬೆಳಗ್ಗಿಂದ ಸಂಜೆವರೆಗೂ ಮನೆಕೆಲಸ, ಪುರಸೊತ್ತಿಲ್ಲ ಅನ್ನಬಹುದು. ಗೋಪಿನಾಥಗೇನಾಗಿದೆ ಬರದೆ ಇದ್ದಹಾಗೆ?"

"ಅವರಿಗೆ ಅಡಿಗೆಗೆ ಪರಿಚಾರಕರಿಗೆ ಒಬ್ಬನನ್ನಿಟ್ಟುಕೊಳ್ಳುವಷ್ಟು ಅನುಕೂಲವಿಲ್ವೇನಮ್ಮ?"

"ಹಾಗೇನೂ ಇರಲಾರದು. ಆದರೂ ಗೋಪಿ ತಂದು ಹಾಕಿದರೇನೇ ಉಂಟು ಊಟಕ್ಕೆ. ಪಿತ್ರಾರ್ಜಿತ ಯಾವುದೂ ಇಲ್ಲ. ಆದರೆ ಮನೇನಂತೂ ಬಲು ಸೊಗಸಾಗಿಟ್ಟುಕೊಂಡಿದ್ದಾನೆ."

"ಅದಕ್ಕೇನು, ಹಣದ ಅನುಕೂಲತೆ ಅಷ್ಟೊಂದು ಬೇಕಾಗೋದಿಲ್ಲ. ಬುದ್ಧಿ ಅಚ್ಚುಕಟ್ಟಾಗಿದ್ರೆ, ಕಣ್ಣುಕೈ ನಾಜೂಕಾಗಿದ್ರೆ ಸಾಕು."

ಮಾಲತಿಯ ಈ ವ್ಯಾಖ್ಯಾನ ಶಾರದಮ್ಮನ ಕಿವಿಗೆ ಬಿತ್ತೋ ಇಲ್ಲವೋ ಗೊತ್ತಾಗಲಿಲ್ಲ. ಅವರ ಮನಸ್ಸು ಐದು ವರ್ಷಗಳ ಹಿಂದಿನ ಕಾಲದಲ್ಲಿ ಸಂಚರಿಸುತ್ತಿತ್ತು. ಮಾಲತಿಯ ತಂದೆ ಶ್ಯಾಮರಾಯರು ವರ ಹುಡುಕಿಕೊಂಡು ತಮ್ಮ ಹಳೇ ಸ್ನೇಹಿತರಾಗಿದ್ದ ವೆಂಕಟ್ರಾಯರ ಮಂಗಳೂರು ಮನೆಗೆ ಬಂದಿಳಿದದ್ದು; ಅಲ್ಲಿ ಅವರ ಮಗ ಗೋಪಿನಾಥನನ್ನು ನೋಡಿ ಮೆಚ್ಚಿ ನೆಂಟಸ್ತಿಕೆ ಪ್ರಸ್ತಾಪಿಸಿದ್ದು; ಸಗೋತ್ರವಾದ್ದರಿಂದ ಆ ಪ್ರಸ್ತಾಪ ಅಲ್ಲಿಗೇ ಮುರಿದು, ಆಮೇಲೆ ರಾಘವೇಂದ್ರರಾಯರ ಜಾತಕ ತರಿಸಿಕೊಂಡು ಲಗ್ನ ನಿಶ್ಚಯ ಮಾಡಿಕೊಂಡು ಹೋದದ್ದು; ಎಲ್ಲವೂ ನೆನಪಾಯಿತು. ಶಾರದಮ್ಮ ಹಳೇ ಕ್ರಮದವರಾಗಿದ್ದರೂ ಕುರುಡು ಸಂಪ್ರದಾಯಕ್ಕೆ ಕಟ್ಟುಬಿದ್ದಿರಲಿಲ್ಲ. ಈ ಗೋತ್ರವೆಂಬ ಹಳೇ ಕಲ್ಲುಗೋಡೆಯನ್ನು ಒಡೆದು ಕೆಡವಿ ಹಾಕಲಾರದೆ ಎಷ್ಟು ಎಳೆಜೀವಿಗಳು ನಿರಾಶೆಯ ಹೊಯಿಗೆಯಲ್ಲಿ ಬತ್ತಿಹೋಗಿವೆಯೋ ಎಂದು ಚಿಂತಿಸಿದರು. ಆದರೆ ಆ ಚಿಂತೆಯ ನೆರಳು ಮಾಲತಿಯಂತಹ ಸೊಸೆ ಮನೆಗೆ ಬಂದ ಭಾಗ್ಯವನ್ನು ನೆನಸುತ್ತ ಮಾಯವಾಯಿತು. ಮಾಲತಿಯಂತಹ ಸುಮಂಗಲೆ ಇರುವಲ್ಲಿ ತಲೆಸೆರಗಿನ ಅವಲಕ್ಷಣ ಇಲ್ಲದಿರುವುದೇ ಸಮಂಜಸ, ತಾನು ಮಗನ ಒತ್ತಾಯದಂತೆ ಸಕೇಶಿಯಾಗಿದ್ದುದೇ ಸರಿ ಅಂದುಕೊಂಡರು.

ಮುಡಿ ಹಾಕಿ ಮಾಲತಿಯ ಬೆನ್ನು ತಟ್ಟಿ ದೂಡಿದರು. "ನೀವು ಸ್ನಾನಕ್ಕೆ ಹೋಗಿ ಇನ್ನು" ಅನ್ನುತ್ತ ಕೆಳಗೆ ಬಿದ್ದಿದ್ದ ಕೂದಲಿನ ಸಿಕ್ಕನ್ನು ಕೈಬೆರಳಿಗೆ ಸುತ್ತಿ ಸುರುಳಿಮಾಡಿ ಪಕ್ಕದ ಮಲಗುವ ಕೋಣೆಯಲ್ಲಿದ್ದ ಕಸದ ಬುಟ್ಟಿಗೆ ಹಾಕಿ ಬಂದಳು ಮಾಲತಿ. ಆಗಲೂ ಅತ್ತೆ ಅಲ್ಲೇ ಇದ್ದುದನ್ನು ನೋಡಿ, "ಏನಮ್ಮ?" ಎಂದಳು.

"ಏನಿಲ್ಲ. ನಿನ್ನದೆಲ್ಲ ಆದಮೇಲೆ ದೇವರಮನೆಗೆ ಹೋಗಿ ಎರಡು ನೀಲಾಂಜನಕ್ಕೆ ತುಪ್ಪ ಹೂಬತ್ತಿ ಹಾಕಿಟ್ಟದ್ದನ್ನು ಹಚ್ಚಿಬಿಟ್ಟು ಬಾ" ಅಂದರು ತುಸ ಸಂಕೋಚದಿಂದ.

"ನಾನು ಶನಿವಾರ ತಲೆಗೆ ಸ್ನಾನ ಮಾಡಿದ ತಪ್ಪಿಗೇನು?" ಎಂದು ಅರೆ ಚೇಷ್ಟೆಗಾಗಿ ಕೇಳಿದಳು.

" ಛೆ! ನೀನು ತಲೆಗೆ ಸ್ನಾನ ಮಾಡ್ತೀಂತ ನನಗೇನು ಸ್ವಪ್ನವೆ? ಇವೊತ್ತು ಎದ್ದವಳೇ ದೇವರಮನೆ ಗುಡಿಸಿ, ರಂಗೋಲೆ ಹಾಕಿ, ನೀಲಾಂಜನಕ್ಕೆ ಬತ್ತಿ ಹಾಕಿಟ್ಟುಬಿಟ್ಟು ಬಂದಿದ್ದೇನೆ. ಅದಕ್ಕೆಲ್ಲಾ, ಆದರೂ— " ಅನ್ನುತ್ತ ಶಾರದಮ್ಮ ಅನ್ಯಮನಸ್ಕರಾಗಿ ಮಾತು ತೇಲಿಸಿಬಿಟ್ಟರು.

ಏನೋ ಇರಬೇಕು. ಅವರೆಷ್ಟು ಇಲ್ಲಾಂದ್ರೂ ಅವರ ಕಣ್ಣಿನಲ್ಲಿ ಕಳವಳ ತುಂಬಿದ್ದು ಕಾಣುತ್ತೆ ಎಂದು ತೋರಿದ್ದರಿಂದ ಮಾಲತಿ ಒಂದು ಕುರ್ಚಿಯನ್ನು ತಂದು ಅತ್ತೆಯ ಹಿಂದಿಟ್ಟು ತನ್ನ ಡ್ರೆಸ್ಸಿಂಗ ಸ್ಟೂಲನ್ನು ಅದರೆದುರು ಎಳೆದುಕೊಂಡಳು.

" ಹೇಳಿಬಿಡಿ. "

" ಏನು ಹುಡುಗಾಟ ಮಾಲತಿ ? ಸ್ನಾನಕ್ಕೆ ಹೊತ್ತಾಯಿತು. " ಅನ್ನುತ್ತ ಶಾರದಮ್ಮ ನಿಧಾನವಾಗಿ ಕುಳಿತರು. ಮಾಲತಿ ಅವರೆದುರು ಕಿವಿ ನೆಟ್ಟಗೆ ಮಾಡಿಕೊಂಡು ಕುಳಿತು,

" ದಮ್ಮಯ್ಯ ! " ಅಂದಳು.

ನಿರ್ವಾಹವಿಲ್ಲದೆ ಶಾರದಮ್ಮ ತುಸ ನಕ್ಕು ಜ್ಞಾಪಿಸಿಕೊಳ್ಳುತ್ತ ಗಂಭೀರ ವಾಣಿಯಿಂದ ಹೇಳತೊಡಗಿದರು.

" ನಿನ್ನೆ ರಾತ್ರೆ ಒಂದು ವಿಚಿತ್ರ ಕನಸು ಕಂಡೆ ನೋಡು. "

ಮಾಲತಿ, ಹೂಂ ಅನ್ನುತ್ತ ಇನ್ನಷ್ಟು ಹತ್ತಿರ ಸೇರಿಕೊಂಡಳು.

"ಯಾವುದೋ ಒಂದು ಮನೆ.ಇದಕ್ಕಿಂತಲೂ ದೊಡ್ಡದಾಗಿತ್ತು, ಸೊಗಸಾಗಿತ್ತು. ಬೆಳದಿಂಗಳಲ್ಲಿ ಕಂಡ ಅರಮನೆಯಂತಿತ್ತು. ಆದರ ಒಂದು ದೊಡ್ಡ ಕೋಣೇಲಿ ನೀನು, ನಾನು, ರಾಘು, ಮತ್ತಿನ್ಯಾರ್ಯಾರೋ ಸಾಲುಸಾಲಾಗಿ ಮಂಚಗಳ ಮೇಲೆ ಮಲಗಿದ್ದೆವು: ಆಸ್ಪತ್ರೆಯಂತೆ. ಅಲ್ಲಿಗೆ ಯಾವನೋ ಒಬ್ಬ– ಮೂವತ್ತು ಮೂವತ್ತೈದು ವರ್ಷ ವಯಸ್ಸಿರಬಹುದು–ಬಂದು ಮಂಚದ ಸಾಲುಗಳ ನಡುವೆ ನಡೆದು ನೇರ ಬಂದು ಪಕ್ಕದ ಕೋಣೇಲಿದ್ದ ಕಬ್ಬಿಣದ ಸೇಫಿದ್ದಲ್ಲಿಗೆ ಹೋದ. ಆ ಕೋಣೆಯೊಳಗೆ ನಡದ್ದೆಲ್ಲಾ ಕಾಣತ್ತಿತ್ತು, ಕನ್ನಡಿಯ ಗೋಡೆಗಳು ಇದ್ದಹಾಗೆ. ಹೋಗಿ, ಬಾಯೊಳಗಿಂದ ಏನೋ ತೆಗೆದ. ಹಲ್ಲೂಂತ ಮಾಡಿ ಹೆದರಿದೆ. ಆದರೆ ಹಲ್ಲಲ್ಲ, ತೆಗೆದದ್ದು. ಕೀಲಿಕೈ, ಬೆಳ್ಳೀದು. ಸೇಫಿಗೆ ಹಾಕಿ ಮೀಟಿದ. ' ಟ್ರಿನ್ ' ಅಂತ ಹೊಡೆದೆಬ್ಬಿಸುವ ಹಾಗೆ ಎಲರ-

ಮಾಯಿತು. ಆದರೆ ಯಾರಿಗೂ ಎಚ್ಚರವಾಗಲಿಲ್ಲ. ನಾನು ಮಾತ್ರ ಮಲಗಿ ದಲ್ಲಿಂದಲೇ ಪಿಳಿಪಿಳೀಂತ ನೋಡ್ತಾ ಇದ್ದೆ; ಸಿನೆಮಾ ನೋಡ್ತಿದ್ದ ಹಾಗೆ. ಒಂದಿಷ್ಟೂ ಗಾಬರಿಯಾಗಲಿಲ್ಲ. ವಿಶೇಷ ಆಶ್ಚರ್ಯವೂ ಆಗ್ಲಿಲ್ಲ.

ಸೇಫಿನೊಳಗೆ ಕೈಹಾಕಿ ಹರಡಿ ನೋಡಿದ. ಬೇಕಾದ್ದು ಸಿಗಲಿಲ್ವೋ ಏನೋ. ಬಾಗಿಲು ಮುಚ್ಚಿಬಿಟ್ಟು ಹತಾಶನಾಗಿ ದಿಕ್ಕು ತೋರದವನಂತೆ ಒಂದು ಕೈಯಿಂದ ತಲೆಗೆದರಿಕೊಳ್ಳುತ್ತ ಸುತ್ತಮುತ್ತ ನೋಡುತ್ತ ನಿಂತ. ನನಗವನ ಮೇಲೆ ಒಂದು ವಿಚಿತ್ರ ಮಮತೆ, ಕರುಣೆ ಹುಟ್ಟಿತು ನೋಡು. ಯಾರೋ ಏನೋ ! ಹುಟ್ಟಿದ ಮೇಲೆ ಕಂಡವನಲ್ಲ ಕೇಳಿದವನಲ್ಲ. ಆದರೂ ಕೇವಲ ನಮ್ಮವನಂತೆ ಕಾಣುತ್ತಿದ್ದ. ಅಲ್ಲಿಂದ ದೇವರ ಮನೆಗೆ ಹೋದ. ಮಂಟಪಸ್ನ ಎಲ್ಲಾದ್ರೂ ಮುಟ್ಟಿಬಿಡ್ತಾನೋಂತ ಕಸವಿಸಿಲಿ ಎದ್ದೇಳ ಬೇಕೂಂತನಿಸಿತು. ಆದರೆ ಆಲಸ್ಯ. ಕೈಕಾಲು ಅಲುಗಾಡಿಸೋದಕ್ಕೂ ಆಲಸ್ಯ. 'ಮಡಿ, ಮುಟ್ಟಬೇಡವೋ, ಮಹಾರಾಯಾ' ಅಂತ ಕೂಗಿ ಹೇಳಿದೆ, ಮಲಗಿದಲ್ಲೇ ಕೂಗಿದ್ದೇನೋ ನಿಜ, ಸ್ವರ ಮಾತ್ರ ಹೊರಡಲಿಲ್ಲ. ಅವನು ಹೋದವನು ದೇವರಿಗೇರಿಸಿದ್ದ ಒಂದು ಬಿಳಿ ಗುಲಾಬಿ ಹೂವನ್ನು ಅತಿ ಕೋಮಲವಾಗಿ ಎತ್ತಿಕೊಂಡು ಮೂಸುತ್ತ ಆನಂದಪಡುತ್ತ ಹೊರಗೆ ಬಂದ. ಬಂದಹಾಗೇ ಹೋಗುತ್ತಿದ್ದನೋ ಏನೋ, ಅಷ್ಟರಲ್ಲಿ ನೀನು ಅತಿ ಮುದ್ದಿನಿಂದ ಸಾಕಿದ ಗಿಳಿ—"

"ನಾನು ಸಾಕಿದ್ದೇ ? ಅಯ್ಯೋ, ಹಕ್ಕಿಗಳನ್ನು ಹಿಡಿದು ಗೂಡಿನಲ್ಲಿಟ್ಟು ಹಿಂಸಿಸೋದಂದ್ರೆ ನನಗೆ ಕಂಡರಾಗದಲ್ಲ ?" ಎಂದು ಮಾಲತಿ ವಿಸ್ಮಿತಳಾಗಿ ಅಡ್ಡ ಮಾತಾಡಿದಳು.

"ನೀನು ಮಧ್ಯ ಮಧ್ಯ ಬಾಯಿ ಹಾಕಿದರೆ—" ಎಂದು ಶಾರದಮ್ಮ ಗದರಿಸಿದಂತೆ ಮಾಡಿದರು. ಮಾಲತಿ ಪಶ್ಚಾತ್ತಾಪಪಟ್ಟವಳಂತೆ,

"ಇಲ್ಲ ಇಲ್ಲ. ಚಾಚೂ ಅನ್ನೋದಿಲ್ಲ. ಆಮೇಲೆ ?" ಎಂದು ಮಗು ಕತೆ ಕೇಳುವಷ್ಟು ಆತುರದಿಂದ ಕೇಳುತ್ತ ಕುಳಿತಳು.

"ನಿನ್ನ ಮುದ್ದಿನ ಗಿಳಿ ಚಿಟ್ಟನೆ ಚೀರಿತು. ಆತ ಬೆಚ್ಚಿಬಿದ್ದು ಒಂದು ಕ್ಷಣ ಸ್ತಬ್ಧನಾಗಿಬಿಟ್ಟ. ಚೀರಾಟ ಎಲ್ಲಿಂದ ಎಂಬುದು ಥಕ್ಕನೆ ಗೊತ್ತಾಗ ಲಿಲ್ಲವ್ರೋ ಏನೋ. ಮರುಕ್ಷಣ ಚಕಿತನಾಗಿ ಕೈಲಿದ್ದ ಗುಲಾಬಿಹೂವು ಎಸೆದು

ಬಿಟ್ಟು ಗಿಳಿಯಿದ್ದಲ್ಲಿ ಹಿಂದಿನ ಹಜಾರಕ್ಕೆ ಓಡಿದ. ಪಂಜರದ ಬಳಿ ನಿಂತು ಗಿಳಿಯ ಹೆಸರೆತ್ತಿ ಕರೆದ, ಹೆಸರೀಗ ನನಗೆ ನೆನಪಿಲ್ಲ. ಗಿಳಿ ತನ್ನ ಗೂಡಿನ ಬಾಗಿಲು ತಾನೇ ಕೊಕ್ಕಿನಿಂದ ತೆಗೆಯಿತು. ಆತನ ಮುಂಗೈಮೇಲೆ ಹಾರಿ ಕೂತಿತು; ರೆಕ್ಕೆ ಬಡಕೊಂಡಿತು; ಮೆತ್ತಗೆ ಕಿರ್‍ರ್ ಅಂತು. ಅದನ್ನು ತನ್ನೆದೆಗೆ ತಬ್ಬಿಕೊಂಡು ಬಂದು ತಿರುಗಿ ಮಂಚಗಳ ನಡುವಿಂದ ಹಾದು ಹೊರಗೆ ಹೋದ. ಮಂಚಗಳ ಸಾಲು ದಾಟುವುದೇ ತಡ, ಓಡೋದಕ್ಕೆ ಆರಂಭಿಸಿದ. ನಾನು ಆತನ ಹಿಂದೆ ಓಡೋದಕ್ಕೇಂತ ಎದ್ದೆ. ಆದರೆ ಕಾಲೇ ಬರಲಿಲ್ಲ. ಎಷ್ಟು ಪ್ರಯತ್ನಪಟ್ಟರೂ ಆಗಲಿಲ್ಲ ಕೈಕಾಲುಗಳು ಮರದ ಕೊರಡುಗಳಂತೆ ಭಾರವಾಗಿ ನಿರ್ಜೀವವಾಗಿದ್ದವು. ಆಗ ನೀನು ಎಚ್ಚತ್ತು 'ಅಯ್ಯೋ ನನ್ನ ಗಿಳಿ, ನನ್ನ ಪ್ರಾಣ ಅಂತ ಚೀರಿದಿ. ನಿನ್ನ ಚೀರಾಟ ನೆನಿಸಿಕೊಂಡರೆ ಈಗಲೂ ನನ್ನ ಮೈಯೆಲ್ಲ ಜುಮ್ಮೆನ್ನುತ್ತೆ ಮಾಲತಿ. ಚೀರುತ್ತಾ ಆತನ ಬೆನ್ನುಹಿಡಿದು, ಓಡಿದಿ ಹುಚ್ಚಿಹಾಗೆ. ನಾನು ಸತ್ತಿದ್ದೆನೋ ಬದುಕಿದ್ದೆನೋ ಒಂದೂ ಗೊತ್ತಿಲ್ಲ. ಹಾಗೇ ಎಷ್ಟು ಕಾಲ ಜಾರಿತೋ ದೇವರೇಬಲ್ಲ. ನೀನಂತೂ ಹಿಂತಿರುಗಿ ಬಂದಿ. ನಿನ್ನ ಗಿಳಿ ನಿನ್ನ ಕೈಲಿತ್ತು. ಅದರ ಬೆನ್ನು ನೇವರಿಸುತ್ತ, ಅದರ ಭಾಷೇಲೇ ಚಿಲಿಪಿಲೀಂತ ಮಾತಾಡುತ್ತ ಮಾತಾಡುತ್ತ ನಿದ್ದೇಲಿ ನಡೆದುಬರುವಂತೆ ಬಂದಿ. ನಿನ್ನ ಹಿಂಬಾಲಿಸಿ ಆತನೂ ಬಂದ; ಗಿಳೀನ ಮುದ್ದುಮಾಡುವ ನಿನ್ನೇ ಮುದ್ದಿನಿಂದ ಎವೆಯಿಕ್ಕದೆ ನೋಡುತ್ತ. ಆತನ ಮುಖದಮೇಲೆ ಉಗುರು ಗೀರಿದಲ್ಲಿ ರಕ್ತ ಮಣಿಮಣಿಯಾಗಿ ನಿಂತಿತ್ತು. ಆತನ ಶರಟು ಹರಿದು ರಿಬ್ಬನ್ನಾಗಿತ್ತು. ಹಾಗಿದ್ದರೂ ಆತನ ಮುಖದಲ್ಲೂ ನಿನ್ನ ಮುಖದಲ್ಲೂ ಒಂದು ಅಪೂರ್ವ ಅದ್ಭುತ ವೀರ ಆನಂದದ ಕಾಂತಿಯಿತ್ತು; ದೇವಲೋಕದ ತೇಜಸ್ಸಿನಂತೆ."

"ಅಬಬ!" ಅನ್ನುತ್ತ ಮಾಲತಿ ನಡುಗಿದಳು.

"ಮಾಲತೀ, ಏನಾಯಿತು? ಇದ್ಯಾರು ನಿನ್ನ ಹಿಂದೆ? ಈ ಗಿಳಿ ಯಾವುದು?" ಅಂತ ಕೇಳ್ತಿದ್ದ ಹಾಗೆ ತಟ್ಟನೆ ಎಚ್ಚರಿಕೆಯಾಗಿಬಿಟ್ಟಿತು. ಅಂದರು ಶಾರದಮ್ಮ.

ಸ್ವಪ್ನಫಲ ಹಲ್ಲಿಶಕುನ ಅಂದರೆ ಮಾಲತಿಗೆ ಅಪಹಾಸ್ಯ ಅಪನಂಬಿಕೆಗಳಿಗೆ ಆಸ್ಪದ. ಆದರೆ ಈ ಕನಸಿನ ಕತೆಕೇಳಿ ಆಕೆಗೆ ಒಂದು ಅಸ್ಪಷ್ಟವಾದ ಅವರ್ಣ

ನೀಯುವಾದ ಭೀತಿಯೂ ಕಳವಳವೂ ಉಂಟಾಗಿ ಕಣ್ಣುಗಳು ಅರೆಮುಚ್ಚಿ ಕೊಂಡವು. ಮಾತೆತ್ತದೆ ಚಿಂತಿಸುತ್ತ ಕಾಲುಬುಡ ನೋಡುತ್ತ ಕುಳಿತಳು. ಶಾರದಮ್ಮ ಕುರ್ಚಿ ಬಿಟ್ಟು ಏಳುವುದನ್ನು ನೋಡಿ ಅತ್ಯಾತುರದಿಂದ,

"ಸ್ವಲ್ಪ ಇರೀಮ್ಮ. ಆ ಕನಸಿನ ಕಳ್ಳನ ಹೆಸರೇನು? ನೋಡೋದಕ್ಕೆ ಹೇಗಿದ್ದ? ಬಾಂಬೇ ಟಾಕೀಸಿನವನೋ ಅಥವಾ ಹಾಲಿವುಡ್ಡಿನವನೋ, ಹೇಳಿ" ಎಂದು ನಗುತ್ತ ಕೇಳಿದಳು.

"ಇದಕ್ಕೇ ನೋಡು. ನಾನು ಹೇಳೋದಿಲ್ಲಾಂದಿದ್ದು. ಆತನ ವಿಳಾಸ ಕೇಳಿ ಬರೆದಿಟ್ಟುಕೋಬೇಕಿತ್ತೇನು?"

"ತಮಾಷೆಗಾಗಿ ಅಲ್ಲಮ್ಮ. ಆತನಮೇಲೆ ನಿಮಗೇನೋ ಪ್ರೀತಿ ಅಂತಃಕರಣ ಅಂದ್ರಲ್ಲ ಅಂತಹವನ್ಯಾರಿರಬಹುದು, ಅಂತಷ್ಟೇ ಕುತೂಹಲ. ಅಂತಹ ಸ್ವಪ್ನಸರ್ದಾರ ಹೇಗಿದ್ದ ಅಂತಷ್ಟೇ."

"ಸರ್ದಾರ ಗಿರ್ದಾರ ಒಂದೂ ಗೊತ್ತಾಗಲಿಲ್ಲಪ್ಪ. ಅದೆಷ್ಟು ಹೊತ್ತೀತಿರೋದು? ಹತ್ತೇನು? ನೋಡಿದಿಯಾ, ಇನ್ನೂ ಸ್ನಾನವಾಗಲಿಲ್ಲ" ಅನ್ನುತ್ತ ಶಾರದಮ್ಮ ಎದ್ದು ಅವಸರದಿಂದ ಹೊರಟು,

"ದೀಪ ಹಚ್ಚಿಟ್ಟು ನಮಸ್ಕಾರ ಮಾಡಿಬಿಡಪ್ಪ; ಮರೀಬೇಡ. ಇನ್ನೊಂದು ಸಂಗ್ತಿ. ಅಲ್ಲಾ ಈ ನನ್ನ ಮರವು, ಜಾಸ್ತಿ ಆಗ್ತಾ ಬರುತ್ತೆ. ನೀನು ಸ್ನಾನಕ್ಕೆ ಹೋಗಿದ್ದೀ ನೋಡು, ಆಗ ರಾಘು ಎರಡು ಸರ್ತಿ ಒಳಗೆ ಬಂದು ಕೇಳಿದ ನಿನ್ನ. ಯಾಕೇಂತ ಹೋಗಿ ಕೇಳಿಬಿಡು" ಎಂದು ಹೇಳಿ ಹೋದರು.

೩

ಅತ್ತೆ ಕಂಡ ಕನಸೇನೋ ಸ್ವಾರಸ್ಯವಾಗಿತ್ತು; ಆದರೆ ಅವರಿಗೆ ಆಗುವ ಬದಲು ತನಗೇನೇ ಆಗಿದ್ದರೆ ಆ ಅನುಭವ ಇನ್ನಷ್ಟು ಚೆನ್ನಾಗಿರುತ್ತಿತ್ತು. ಅದರ ಕಥಾನಾಯಕನಾರೂ ಇರಲಿ, ಕಥಾನಾಯಕಿಯಂತೂ ತಾನೇ ಆದ ಮೇಲೆ ಆ ಸ್ವಪ್ನ ತನ್ನ ಪಾಲಿಗೇನೇ ಬೀಳದೆ ಇದ್ದುದು ಅರ್ಥವಿಲ್ಲ! ಬಹುಶಃ ಈ ಕೊಂಕುತನ ಕನಸುಗಳಿಗೆ ಸ್ವಾಭಾವಿಕವಾದ್ದು, ಎಂದು ಯೋಚಿಸುತ್ತ ಸ್ನಾನಕ್ಕೆ ಮೊದಲು ಕಳಚಿಟ್ಟದ್ದ ಬೆಂಡೋಲೆ, ಮೂಗುತಿ, ಹಾರ, ಬಳೆ, ಉಂಗುರ ಮೊದಲಾದ ನಗಗಳನ್ನು ಮಾಲತಿ ಹಾಕಿಕೊಂಡಳು. ಇನ್ನು ದೇವರಿಗೆ ದೀಪ ಹಚ್ಚಿಟ್ಟು ಬರಬೇಕು, ಅತ್ತೆಯವರ ಕಟ್ಟಪ್ಪಣೆ. ನಾವು ನಿದ್ದೇಲಿ

ಎಚ್ಚರ ತಪ್ಪಿ ಬಿದ್ದಿರುವಾಗ ಅಂಕೆಯಿಲ್ಲದೆ ಹುಚ್ಚುಹಚ್ಚಾಗಿ ಸಂಚರಿಸುವ ನಮ್ಮ ಸುಪ್ತಚೇತನಕ್ಕೆ ದೇವರ ಮಂಟಪದ ಎದುರು ನಾವು ಕುರುಡು ಭಕ್ತಿಯಿಂದ ಹಚ್ಚುವ ದೀಪಗಳಿಗೂ ಏನು ಗಂಟೋ, ದುಃಸ್ವಪ್ನಫಲಪ್ರಾಪ್ತಿಯು ಈ ಸಾಂಪ್ರದಾಯಿಕ ಸೇವೆಯಿಂದ ಹೇಗೆ ಪರಿಹಾರವಾಗುವುದೋ. ಎಂದು ಆಶ್ಚರ್ಯಪಡುತ್ತ ದೇವರ ಕೋಣೆಗೆ ಹೋದಳು. ಹೋಗುತ್ತ ರಾಘವೇಂದ್ರ ರಾಯರು ಒಳಗೆ ಬಂದು ಅವಳನ್ನು ಕೇಳಿದ್ದು ನೆನಪಾಯಿತು, ಪರವಾಯಿಲ್ಲ ದೇವರಮನೆ ಸೇವೆ ಆದಮೇಲೆ ತಾನೇ ಮನೆದೇವರ ಸೇವೆ ಅಂದುಕೊಂಡು ಮುಂದುವರಿದು ಹೋದಳು. ಆದರೆ ದೇವರ ಸೇವೆಯುನ್ನಾಗಲಿ, ಪತಿಯ ಸೇವೆಯನ್ನಾಗಲಿ ಪ್ರಾಚೀನಪದ್ಧತಿ ಅಥವಾ ಸತೀಧರ್ಮಾಚರಣೆಗಾಗಿಯೇ ಸಲ್ಲಿಸತಕ್ಕ ಮನೋಧರ್ಮ ಮಾಲತಿಗೆ ಇರಲಿಲ್ಲ. ಹಾಗೆಂತ ಅವಳು ಭಕ್ತಿಹೀನಳು, ವಿನಯಹೀನಳು ಎಂದಲ್ಲ. ನಿತ್ಯಕಟ್ಟಳೆಯ ತುಲಸೀ ಪ್ರದಕ್ಷಿಣೆಯನ್ನೋ ದೇವರ ನಮಸ್ಕಾರವನ್ನೋ ಶ್ರದ್ಧೆಯಿಂದಲ್ಲದಿದ್ದರೂ ಸಂತೋಷದಿಂದ ಮಾಡುತ್ತಿದ್ದಳು. ಈ ಅನುಸರಣೆಯಿಂದ ದೇವರನ್ನು ಒಲಿಸಿಕೊಳ್ಳುವ ನಂಬಿಕೆಯಿಲ್ಲದಿದ್ದರೂ ಅತ್ತೆಯನ್ನು ಒಲಿಸಿಕೊಳ್ಳುವ ಆಶಯವಿತ್ತು. ಅತ್ತೆ ಬಹಳ ಕಾಲದಿಂದ ದೇವರ ಸೇವೆ ಮಾಡಿದವರು. ಅವರಿಗೆ ದೇವರ ಮರ್ಜಿ ಸ್ವಲ್ಪವಾದರೂ ಗೊತ್ತಿರಬೇಕು. ಅವರಿಗೆ ತೃಪ್ತಿಯಾದರೆ ದೇವರಿಗೆ ತೃಪ್ತಿಯಾದಂತೆಯೇ ಎಂದು ತಿಳಿದುಕೊಂಡಿದ್ದಳು. ಸೇವೆಯೆಂತ ಹೆಸರಿಟ್ಟುಕೊಂಡು ಬಯಸಿದ್ದನ್ನೆಲ್ಲಾ ದೇವರ ಹತ್ತಿರ ಬೇಡಿ, ಬೇಡಿದ್ದೆಲ್ಲಾ ಬಾರದೆ ಇದ್ದರೆ ಬೈಯುವ ಚಾಳಿ ಅವಳಲ್ಲಿ ಇರಲೇ ಇಲ್ಲ. ನಾವು ಬೆಳೆದ ಹಾಗೆಲ್ಲ ನಮ್ಮ ಎದೆಯೊಳಗೆ ಹೇರಿಕೊಳ್ಳುವ ಆಸೆಗಳ ಹೊರೆಯನ್ನು ದೇವರ ಮಂಟಪದ ಎದುರು ಕಾಲುದೀಪಗಳಲ್ಲೋ, ಸೊಡರುಗಳಲ್ಲೋ ಆರತಿಗಳಲ್ಲೋ ಇಳಿಸಿ ತುಂಬಿಸಿ ಹಚ್ಚಿಸಿ ಉರಿಸಿ ಇಷ್ಟಸಿದ್ಧಿಗಾಗಿ ಬಾಯಿಕಳೆದುಕೊಂಡು ಕೈನೀಡಿಕೊಂಡು ಕಾದಿರುವ ಚಪಲ ಎಷ್ಟು ವಿಚಿತ್ರವಾದ್ದು ಎಂತ ಆಶ್ಚರ್ಯಪಡುತ್ತಿದ್ದಳು.

ಪತಿಸೇವೆಯ ಮಟ್ಟಿಗೂ ಅಷ್ಟೆ. ಲೋಕವಾಡಿಕೆಯಂತೆ ಗಂಡಂದಿರು ಯಾವ ಯಾವ ತಮ್ಮ ಸ್ವಂತ ದೇಹೋಪಚಾರಗಳನ್ನು ಅತಿ ಸುಲಭದಲ್ಲಿ ತಾವೇ ಮಾಡಿಕೊಳ್ಳುವ ಬದಲು ತಮ್ಮ ಹೆಂಡಂದಿರಿಂದ ಮಾಡಿಸಿಕೊಳ್ಳುವರೋ

ಅವನ್ನೆಲ್ಲಾ ಪೂರೈಸಿಬಿಡುತ್ತಿದ್ದಳು. ಶ್ರದ್ಧೆಯಿಂದಲ್ಲದಿದ್ದರೂ ಸಹನೆಯಿಂದ; ತನಗೆ ಸಂತೋಷವಿಲ್ಲದಿದ್ದರೂ ಗಂಡನಿಗೆ ಸಂತೋಷವಾಗುತ್ತದೆಂಬುದರಿಂದ.

ದೇವರಿಗೆ ನಮಸ್ಕರಿಸಿ ಎದ್ದು ನಿಲ್ಲುವಾಗ ಮಾಲತಿಯ ಮುಖ ಬಾಡಿತ್ತು. ಅವಳಿಗೆ ದೇವರ ಸನ್ನಿಧಿಯಲ್ಲಿ ಯಾವಾಗಲೂ ಹೀಗೆಯೇ ಆಗುತ್ತಿತ್ತು. ನಗುನಗುತ್ತಾ ದೇವರ ದರ್ಶನಕ್ಕೆ ಹೋದರೆ ಅಭಾಸವಾದೀತೆಂದು ಹೆದರಿ ಗಂಭೀರಭಾವವನ್ನು ನಟಿಸುವ ಪ್ರಯತ್ನದಲ್ಲಿ ಮ್ಲಾನವದನಳಾಗಿಬಿಡುತ್ತಿದ್ದಳು. ಆದರೆ ದೇವರಮನೆಯ ತಗ್ಗಾದ ಬಾಗಿಲನ್ನು ದಾಟಿ ಹೊರಗೆ ಬರುವಾಗ ಅವಳ ಮುಖದಲ್ಲಿ ನಿತ್ಯೋಲ್ಲಾಸದ ಕಾಂತಿಯಿತ್ತು. ಅಲ್ಲಿಂದ ಭೋಜನ ಸಾಲೆ. ಭೋಜನಸಾಲೆಯಿಂದ ಹಾಲು, ಹಾಲಿನಿಂದ ಹೊರಗಡೆ ಹಜಾರಿನ ಒಂದು ಪಕ್ಕದಲ್ಲಿದ್ದ ಆಫೀಸಿಗೆ ಸಾಕಷ್ಟು ದೂರವಿದ್ದರೂ ನೋಡುತ್ತಿದ್ದಂತೆ ಅವಳು ಕ್ಷಣದಲ್ಲಿ ಹೋಗಿಬಿಟ್ಟಳು. ಅವಳು ಸೊಂಟದಿಂದ ಕಾಲುಗಳನ್ನು ಬೀಸಿ ಅತಿ ಸುಲಭವಾಗಿ ನಡೆಯುವ ಲಾಸ್ಯವನ್ನು ನೋಡುವವರಿಗೆ ಅವಳಿಷ್ಟು ವೇಗದಲ್ಲಿ ನಡೆಯಬಲ್ಲಳೆಂದು ಗೊತ್ತಾಗದು. ಅವಳ ಪ್ರತಿಯೊಂದು ಅಂಗಚಲನೆಯಲ್ಲಿಯೂ ಅದೇ ರೀತಿಯ ಪರಿಶ್ರಮವಿಲ್ಲದ ವಿಲಾಸವಿತ್ತು; ತುಂಬುಯೌವನದ ಘನತೆಯೊಂದಿಗೆ ಕೌಮಾರ್ಯದ ಲಘುತನವೂ ಇತ್ತು.

ರಾಘವೇಂದ್ರರಾಯರು ಕುರಿತಾಗಿ ಒಳಗೆ ಬಂದು ಒಂದಲ್ಲ ಎರಡಾವರ್ತಿ ಕೇಳಿ ಹೋಗಲು ಕಾರಣವೇನು? ಅವರಿಗೆ ಇಷ್ಟರ ಒಳಗೆ ಆಗುವ ಉಪಚಾರವೆಲ್ಲವೂ ಆಗಿ ಹೋಗಿದೆ. ಎರಡನೆಯ ಸಲ ಕಾಫಿ, ಜತೆಗೆ ತಿಂಡಿ ಮುಗಿದಿದೆ. ಸಂಜೆ ಯಾರಾದರೂ ದೊಡ್ಡ ಮನುಷ್ಯರ ಮನೆಗೆ ಹೋಗುವವೇಳೆ ತನ್ನನ್ನೂ ಬರಬೇಕೆಂತ ಒತ್ತಾಯ ಮಾಡುತ್ತಾರೋ ಏನೋ! ಪತ್ನೀ ಸಮೇತರಾಗಿ ಶ್ರೀಮಂತರ ಸಂದರ್ಶನಕ್ಕೆ ಹೋಗೋದೆಂದರೆ ಅವರಿಗೆ ಇಷ್ಟ; ದುಡ್ಡು ಸೊಕ್ಕಿದವರಲ್ಲಿಗೆ—ಎಂದು ಕುತೂಹಲ ಪಡುತ್ತ ಆಫೀಸಿಗೆ ಹೋದಳು. ಮೇಜಿನ ಮೇಲೆ ಎಡ ಮೊಳಕೈಯೂರಿ ಹಸ್ತದ ಅಂಚಿನ ಮೇಲೆ ಹಣೆಯನ್ನಿಟ್ಟು ಬರೆಯುತ್ತಿದ್ದ ರಾಘವೇಂದ್ರರಾಯರು ಮಾಲತಿಯನ್ನು ನೋಡಿ, ಬರೆಯುತ್ತಿದ್ದ ಕಾಗದವನ್ನು ಅಲ್ಲೇ ಮುಗುಚಿಟ್ಟು, " ಕೂತಕೋ " ಎಂದು

ಆಜ್ಞಾಪಿಸಿ ಕುರ್ಚಿಗೆ ಒರಗಿದರು. ಕಾಗದವನ್ನು ಮಗುಚಿ ಹಾಕಿದ್ದೂ ಕೂತು ಕೊಳ್ಳಲು ಹೇಳಿದ ದರ್ಪವೂ ಮಾಲತಿಗೆ ರುಚಿಸಲಿಲ್ಲ. ಮೇಜಿನ ಬಳಿ ಸುಮ್ಮನೆ ನಿಂತಳು.

"ಕೂತುಕೋ ಅಂದೆನಲ್ಲಾ!" ಎಂದು ಸ್ವಲ್ಪ ಬಿರುಸಾಗಿ ಹೇಳಿದರು.

" ಹೌದು. ಕೇಳಿಸಿತು" ಅಂದಳು. ಇವರಿಗೆ ಏನಾಗಿದೆ ಇವತ್ತು ? ಎಂದು ಆಶ್ಚರ್ಯಪಡುತ್ತಿದ್ದಳು.

"ಹಾಗಾದರೆ ಕೂತುಕೋಬಾರದೇ.? " ಅನ್ನುತ್ತ ರಾಘವೇಂದ್ರರಾಯರು ಅವರೆದುರು ಮೇಜಿನ ಆಚೆಯಿದ್ದ ಒಂದು ಕುರ್ಚಿಯನ್ನು ಬೆರಳಿನಿಂದ ಸೂಚಿಸಿದರು.

"ಇಲ್ಲ ನಿಂತಿರುತ್ತೇನೆ, ಆಗದೆ ? "

"ನಿನ್ನಿಷ್ಟ" ಎಂದು ಮತ್ತೆ ಮುಂದರಿಸಲಾರದೆ ಬಾಯಿಮುಚ್ಚಿದರು. ಅವರು ಮನಸ್ಸಿನಲ್ಲಿ ಕಟ್ಟಿಕೊಂಡಿದ್ದ ಭಾಷಣಸೂತ್ರ ತಪ್ಪಿಹೋಯಿತು, ಮಾಲತಿಯ ಈ ಅನಿರೀಕ್ಷಿತ ಮೊಂಡತನದಿಂದ. ಅವಳು ಶುದ್ಧ ತುಂಟತನದಿಂದ ಅವರು ಕವುಚಿಟ್ಟ ಕಾಗದಕ್ಕೆ ಕೈಕೊಟ್ಟು "ಇದೇನೋ ಬರೀತಾ ಇದ್ರಲ್ಲ ? "ಎಂದು ಕೇಳಿದೊಡನೆ ಅವರಿಗೆ ಕಾಣೆಯಾದ ಮಾತಿನ ಸರಣಿಯು ಸಿಕ್ಕಿತು. ಆ ಕಾಗದದ ಮೇಲೆ ಕೈಯನ್ನು ಅಮರಿ, "ಅದನ್ನ ಮುಟ್ಟಬೇಡ. ನಿನ್ನೆ ಏನು ನಡೀತು ? ನಿಮ್ಮ ಕ್ಲಬ್ಬಿನಲ್ಲಿ? ಬಾಯಿಗೆ ಬಂದಂತೆ ಇದ್ದವರನ್ನೆಲ್ಲಾ ಬೈದು ಬಂದಿಯೇನು? ಸ್ಥಳ ಸಂದರ್ಭವನ್ನು ನೋಡದೆ ಎಕ್ಕಸಕ್ಕ ಎಗರಿಬೀಳೋದೆ?" ಎಂದು ಕಣ್ಣರಳಿಸಿಕೊಂಡು ಕೇಳಿದರು.

ಕ್ಲಬ್ಬಿನ ಹೆಸರನ್ನೆತ್ತಿದಾಕ್ಷಣ ಮಾಲತಿಯ ಮೈ ಬಿಸಿಯಾಯಿತು. ಯಾರೋ ಇವರ ಹಿತ್ತಾಳಿ ಕಿವಿಗೆ ತನ್ನ ಚಾಡಿ ಹೊಯ್ದಿರಬೇಕು. ಆಗಲಿ ನೋಡೋಣ, ಅಂದುಕೊಂಡು ಗಂಡ ಸ್ವಲ್ಪ ಮೊದಲೇ ತೋರಿಸಿಕೊಟ್ಟ ಕುರ್ಚಿಯಲ್ಲಿ ಕುಳಿತಳು.

" ಈಗೇನು ಕೂತುಕೊಂಡಿ? " ಎಂದು ಅಣಕಿಸಿದರು.

" ನಾನೊಬ್ಬಳು ಕಕ್ಷಿಗಾರಳು. "

" ಕಕ್ಷಿಗಾರಳು ?"

" ಅಲ್ಲದೆ ಮತ್ತೇನು ? ಕ್ಲಬ್ಬಿನವರು ನನ್ನ ಮೇಲೆ ಫಿರ್ಯಾದು ದಾಖಲು ಮಾಡಿದ ಹಾಗಿದೆ, ನಿಮ್ಮ ಮಾತು ಕೇಳಿದರೆ. "

“ ಕೋಪ ಬೇರೆ ಬಂತೇ ? ತಪ್ಪು ಮಾಡೋದು ಬೇರೆ, ವಿಚಾರಿಸಿದರೆ ಕೋಪಿಸಿ ಕೊಳ್ಳೋದು ಬೇರೆ !”

“ ಇನ್ನೂ ಬರಲಿಲ್ಲ ಕೋಪ. ಬಂದಿದ್ದರೆ ಚೆನ್ನಾಗಿತ್ತು. ಅಲ್ಲಾಂದ್ರೆ ನನ್ನ ಹತ್ರ ಒಂದು ಮಾತೂ ಕೇಳದೆ ಹೇಳದೆ ನಾನು ಕ್ಲಬ್ನಲ್ಲಿ ಬಾಯಿಗೆ ಬಂದ ಹಾಗೆ ಜೈದೇಂತ ನಿಮ್ಮಿಷ್ಟಕ್ಕೇ ತೀರ್ಮಾನ ಮಾಡಿಕೊಂಡೀದ್ದೀರಲ್ಲಾ, ಇದ್ಯಾವ ನ್ಯಾಯ ?”

“ ಹಾಗಾದರೆ ಅವರು ಹೇಳಿದ್ದೆಲ್ಲಾ ಸುಳ್ಳೇ ?”

“ ಯಾರು ಹೇಳಿದ್ದೆಲ್ಲಾ ಸುಳ್ಳೆ ?”

“ ಅವರೇ ನಿಮ್ಮ ಕ್ಲಬ್ಬಿನ ಅಧ್ಯಕ್ಷರು, ಮತ್ತೆ ಕಾರ್ಯದರ್ಶಿ. ”

“ ಸುಶೀಲಮ್ಮ ಮತ್ತೆ ಡೇಸ?” ಎನ್ನುತ್ತ ಆಶ್ಚರ್ಯಾತಿಶಯದಲ್ಲಿ ಎದ್ದು ನಿಂತಳು. “ಯಾವಾಗ ಬಂದರು? ನನಗೆ ಗೊತ್ತೇ ಇಲ್ಲವಲ್ಲ?” ಎಂದು ಕೇಳಿದಳು.

“ ನೀನು ಸ್ನಾನಕ್ಕೆ ಹೋದಾಗ. ” ರಾಘವೇಂದ್ರರಾಯರ ಸ್ವರ ಸಪ್ಪಗಾಗಿತ್ತು. ಈ ಸಂಭಾಷಣೆ ತಾನು ನೆನಿಸಿದಂತೆ ನಡೆಯುತ್ತಿಲ್ಲ, ಆಗಲೇ ತನ್ನ ಕೈ ಮೀರಿಬಿಟ್ಟು, ತಾನು ತನಿಖೆ ಮಾಡುವ ಬದಲು ತನ್ನನ್ನೇ ಅಡ್ಡ ವಿಚಾರಣೆ ಮಾಡುತ್ತಿದ್ದಾಳೆ ಹೆಂಡತಿ ಎಂದು ಕೊಂಚ ಕಂಗಾಲಾಗಿದ್ದರು.

“ ಸಮಯ ಸಾಧಿಸಿ ಬಂದ ಹಾಗಿದೆ. ನಾನು ಬರುವವರೇಗೆ — ”

“ ಇಲ್ನೋಡೇ ಮಾಲತಿ, ಅವರು ನನ್ನ ಹತ್ತಿರ ಹೇಳೋದಕ್ಕಾಗಿ ಬಂದರಲ್ಲದೆ ನಿನ್ನ ಹತ್ತಿರ ಮಾತನಾಡೋವಕ್ಕಲ್ಲ. ನಾನು ಸಮಾಜದ ಪೋಷಕರಲ್ಲೊಬ್ಬ. ಸಮಾಜಕ್ಕೆ ಅಪಮಾನವಾದರೆ ನನಗೆ ಆದ ಹಾಗೇನೇ. ಅಂಥ ಶೋಚನೀಯವಾದ ಪ್ರಸಂಗ ಇನ್ನೊಂದು ಬಾರಿ ಸಮಾಜದ ಪ್ರಖ್ಯಾತಿಗೆ ಕಳಂಕವನ್ನು ತಂದೊಡ್ಡದಂತೆ ನೋಡುವ ಕರ್ತವ್ಯ ನನ್ನದು. ಈ ಕರ್ತವ್ಯ ಪಾಲನೆಯಲ್ಲಿ— ” ಹೀಗೆಯೇ ಮಾತಿನ ಮದದಲ್ಲಿ ರಾಘವೇಂದ್ರರಾಯರು ಮೈಮರೆತು ತೇಲುತ್ತಿರುವಾಗ ಮಾಲತಿಯ ಕಣ್ಣುಗಳಲ್ಲಿ ಝಳಪಿಸುತ್ತಿದ್ದ ತೀಕ್ಷ್ಣವಾದ ಧಾರೆಯು ಅವರ ಭಾಷಣವನ್ನು ನಡುವಿನಲ್ಲಿಯೇ ಕತ್ತರಿಸಿ ಬಿಟ್ಟಿತು.

“ ತರಳೆ ತಾಟಕಿಯರು ! ” ಎಂದು ಅತಿ ಸಣ್ಣ ಸ್ವರದಲ್ಲಿ ಉಸುರಿದಳು. “ ಅಲ್ಲಾ, ಅವರು ಹೇಳಿದ್ದೆಲ್ಲಾ ನಿಜವೆಂತ ನೀವು ನಂಬಿದ್ರೀ ಅಂದ್ರೆ ? ನನ್ನ

ಹೆಸರಿಗೆ ಅವರು ಕೆಸರು ಬಳೀತಿರುವಾಗ ನೀವು ಕೇಳುತ್ತ ಸುಮ್ಮನಿದ್ರಿ, ಒಂದು ಅಡ್ಡ ಮಾತೂ ಆಡದೆ, ಅಲ್ವೇ? ಆಶ್ಚರ್ಯ, ಪರಮಾಶ್ಚರ್ಯ!"

"ನಿನಗೆ ಇನ್ನೂ ಗೊತ್ತಾಗೋದಿಲ್ಲ, ಮಾಲತಿ, ಅವರನ್ನ ನಂಬದ ಹಾಗೇನಿದೆ? ಅವಂಗ್ಯಾತಕೆ ಸುಳ್ಳಾಡಬೇಕು?" ರಾಘವೇಂದ್ರರಾಯರು ಆಗಲೇ ಪೇಚಿನಲ್ಲಿದ್ದರು.

"ನಾನ್ಯಾತಕೆ ಸುಳ್ಳಾಡಬೇಕು? ಹೇಳಿ."

"ಯಾರಿಗೆ ಗೊತ್ತು?" ಎಂದು ಅವಳನ್ನು ಎದುರಿಸಲಾರದೆ ಮುಖ ತಿರುಗಿಸಿ ಬಿಟ್ಟರು. ಮಾಲತಿಗೆ ಇದು ವಿಪರೀತವಾಗಿಬಿಟ್ಟಿತು. ಅವರು ತಿರುಗಿದ ಕಡೆ ಸರ್ರನೆ ಹೋಗಿ ನಿಂತು, "ನಾವಿಬ್ಬರೂ ಐದು ವರ್ಷಗಳಿಂದಲೂ ಸಲಿಗೆ ಸಹವಾಸದಿಂದ ಕೂಡಿಟ್ಟ ಸುಖವನ್ನು ಅವರಿಬ್ಬರು ಪರಸ್ತ್ರೀಯರು ಬಂದು ಐದುನಿಮಿಷದಲ್ಲಿಯೇ ಕೆಡುವಿಹೋದರೆ? ನನಗಿಂತಲೂ ಆ ಮಂಥರೆ ಸುಶೀಲಮ್ಮ ಹೆಚ್ಚಾದಳೇ ನಿಮಗೆ?" ಎಂದು ಆರ್ತಸ್ವರದಿಂದ ಪ್ರಶ್ನಿಸಿದಳು.

ರಾಘವೇಂದ್ರರಾಯರು ಚಕಿತರಾಗಿ ಮತ್ತೇನು ಹೇಳುವುದಕ್ಕೂ ತೋಚದೆ ಮುಷ್ಟಿಯಿಂದ ಮೇಜಿಗೆ ಬಲವಾಗಿ ಗುದ್ದಿ, "ಹೇಳಬಾರದೆ ಹಾಗಾದರೆ, ನಿನ್ನೆ ನಡದದ್ದೇನೂಂತ? ಇಷ್ಟೆಲ್ಲ ರಂಪ ಏತಕ್ಕೆ?" ಎಂದು ಬಿರುಸಾಗಿ ಕೇಳಿದರು. ತನ್ನ ಹೆಂಡತಿ ಇಲ್ಲದಿರುವ ವೇಳೆ ಅವಳು ಅಪಾದಿತಳೆಂತ ಏಕಪಕ್ಷವಾಗಿ ತೀರ್ಮಾನಿಸಿಕೊಂಡದ್ದು ನ್ಯಾಯಸಮ್ಮತವಲ್ಲವೆಂತ ಅವರ ನೈಯ್ಯಾಯಿಕ ಬುದ್ಧಿಗೆ ಹೊಳೆದರೂ ಹೆಂಡತಿಯೊಡನೆ ತಪ್ಪನ್ನು ಒಪ್ಪಿಕೊಳ್ಳಲು ಮನಸ್ಸಿರಲಿಲ್ಲ.

"ನನ್ನ ಪಕ್ಷ ಕೇಳೋ ಮೊದಲೇ ಕೇಸು ಕ್ಲೋಜು ಮಾಡಿದರೆ? ಯಾವಾಗ ಹೇಳೋದು? ಯಾರ ಹತ್ತಿರ? ಒಳಗೆ ಹೋಗೋಣ ಬನ್ನಿ. ಎಲ್ಲಾನೂ ಹೇಳ್ತೀನೆ, ಕೇಳಿ" ಎನ್ನುತ್ತ ಅವರು ಅರೆಮನಸ್ಸಿನಿಂದ ಎದ್ದು ಹೊರಟ ಮೇಲೆ ಅವರನ್ನು ಹಿಂಬಾಲಿಸಿದಳು.

ಇವರ ಸಂವಾದದ ಗಲಭೆಯನ್ನು ಒಳಗಿನಿಂದ ಕೇಳಿ, ಏನೋ ಗಂಡ ಹೆಂಡಿರ ಕಲಹ, ಇದ್ದೇ ಇದೆ; ಇವರಿಬ್ಬರಂತೂ ಅವರವರ ದಾರಿ ಹಿಡಿದು ವಾದಿಸುತ್ತಾರೆಯೇ ವಿನಹ, ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡು ಹೋಗುವ ಅಭ್ಯಾಸವೇ ಇಲ್ಲ. ಸ್ವಲ್ಪ ತಣ್ಣಗಾದ ಮೇಲೆ ಸ್ವತೀವ ಬರುತ್ತಾರೆ

ಒಳಗೆ. ನಾನೇತಕ್ಕೆ ಪ್ರವೇಶವಾಗಬೇಕು? ಎಂದು ಸ್ನಾನ ತೀರಿಸಿ ಆಗ ತಾನೇ ಬಂದಿದ್ದ ಶಾರದಮ್ಮ, ಇವರಿಬ್ಬರು ಹಾಲಿನೊಳಗೆ ಬಂದೊಡನೆ, "ಏನಪ್ಪ ರಾಘು, ಇದೇನು ನಿಮ್ಮ ಜಗಳ?" ಎಂದು ಅವರ ಕದಡಿದ ಕಣ್ಣುಗಳನ್ನು ನೋಡುತ್ತ ಕೇಳಿದರು.

"ಇವಳನ್ನು ಕೇಳು" ಅನ್ನುತ್ತ ರಾಘವೇಂದ್ರರಾಯರು ಹಾಲಿನ ಒಂದು ಕುರ್ಚಿಯಲ್ಲಿ ಬಿದ್ದರು. ಶಾರದಮ್ಮ ಸೊಸೆಯ ಕಡೆಗೆ ತಿರುಗಿನೋಡಲು ಅವಳ ಕಣ್ಣುಗಳು ನಗುತ್ತಲಿದ್ದುವು.

"ಒಂದು ಚಿಕ್ಕ ಬಿರುಗಾಳೀಮ್ಮ, ನಮ್ಮ ಕ್ಲಬ್ಬಿನಿಂದ ಬೀಸಿದ್ದು. ಅದು ಬಡಿದು ನಮ್ಮ ದಾಂಪತ್ಯದ ದೋಣಿ ಲಟಲಟಾಂತು. ಅಷ್ಟೇ." ಎಂದಳು.

"ಅವಳಿಗೆ ಎಳ್ಳಷ್ಟಾದರೂ ಬುದ್ಧಿ ಇಲ್ಲಾಮ್ಮ. ನಾನು ಹೇಳ್ತೀನೆ, ಕೂತುಕೋ" ಎಂದು ರಾಘವೇಂದ್ರರಾಯರು ಜುಗುಪ್ಸೆಯಿಂದ ಹೇಳಿದಮೇಲೆ ಶಾರದಮ್ಮ ಕುಳಿತರು. ಅವರು ಕುಳಿತಮೇಲೆ ಮಾಲತಿಯೂ ಒಂದು ಕುರ್ಚಿಯನ್ನು ಅವರ ಬಳಿ ಎಳೆದುಕೊಂಡು, 'ಬಂದಿದ್ದು ಬರಲಿ, ನಾನೇನೂ ಅಂಜುವವಳಲ್ಲ.' ಎಂಬಂತೆ ಕುಳಿತಳು. ಅವಳು ಸ್ನಾನಕ್ಕೆ ಹೋಗಿದ್ದಾಗ ಭಗಿನೀ ಸಮಾಜದ ಅಧ್ಯಕ್ಷರೂ ಕಾರ್ಯದರ್ಶಿಯೂ ಬಂದು ಮುನ್ನಿನ ದಿನ ಮಾಲತಿಯು ಕ್ಲಬ್ಬಿನಲ್ಲಿ ಅಸಭ್ಯತನದಿಂದ ವರ್ತಿಸಿದ್ದರಿಂದ ಅವಳ ಸದಸ್ಯತ್ವವನ್ನು ತೆಗೆದುಹಾಕಿದರೆಂತ ತಿಳಿಸಿಹೋದರೆಂಬುದಾಗಿ ರಾಘವೇದ್ರರಾಯರು ಹೇಳಿದರು.

"ಓಹೋ! Dismissed with costs!" ಮಾಲತಿ ತನ್ನಷ್ಟಕ್ಕೇ ಅಂದುಕೊಂಡಳು. ಮದುವೆಯಾಗಿ ಬಂದಮೇಲೆ ಸ್ವಲ್ಪ ಸಮಯ ಅವಳು ಗಂಡನ ಗುಮಾಸ್ತಗಿರಿ ಮಾಡೋದಕ್ಕೆ ಯತ್ನಿಸಿ, ಕೋರ್ಟುಕನ್ನಡವನ್ನು ಸಹಿಸಲಾರದೆ ಬಿಟ್ಟುಬಿಟ್ಟಿದ್ದಳು.

"ಏನಂದೀ ಮಾಲತಿ?" ಎಂದು ಶಾರದಮ್ಮ ಕೇಳಿದರು.

"ಏನೂ ಇಲ್ಲ, ನನ್ನ ಕ್ಲಬ್ಬಿನಿಂದ ಹೊರಗೆ ಹಾಕಿದ್ದಾರೇಂತ ಈಗ ತಾನೇ ಗೊತ್ತಾಯಿತು. ನಾನೇ ರಾಜಿನಾಮೆ ಕೊಡಬೇಕೂಂತಿದ್ದೆ. ಅನುಕೂಲವೇ ಆಯಿತು. ಕಾಗದ ಉಳಿಯಿತು" ಎಂದು ದೀರ್ಘ ನಿಟ್ಟುಸಿರು ಬಿಟ್ಟಳು.

ಮಾಲತಿ ರಾಜಿನಾಮೆಯ ವಿಚಾರ ಹೇಳಿದ್ದನ್ನು ಕೇಳಿ ರಾಘವೇಂದ್ರರಾಯರಿಗೆ ಸಭಾಸಂಸ್ಥೆಗಳ ಸಾಮಾನ್ಯ ಕ್ರಮನಿಯಮಗಳು ನೆನಪಾಗಿ,

“ಆದರೆ, ಮಹಾಸಭೆಯ ಅನುಮತಿಯಿಲ್ಲದೆ ಮೆಂಬರಿಕೆಯನ್ನು ಹೇಗೆ ರದ್ದು ಮಾಡಿದರು ?” ಎಂದು ಯೋಚನೆ ಮಾಡತೊಡಗಿದರು.

“ತಾನೊಬ್ಬಳಿದ್ದರೆ ಸಾಕು, ಮಹಾಸಭೆಯಷ್ಟು ಭರ್ತಿ ಆಗಿಬಿಡುತ್ತೇಂತ ತಿಳಿದಿರಬೇಕು, ಸುಶೀಲಮ್ಮ.” ಎಂದು ಮಾಲತಿ ಕೆಣಕಿದಳು. ಆದರೆ ರಾಘವೇಂದ್ರರಾಯರಿಗೆ ಅದರ ಸಾರ ಅರ್ಥವಾಗದೆ “ಛೆ! ಅದು ಹೇಗಾಗುತ್ತೆ! ರೂಲ್ಸಿಗೆ ತೀರಾ ವಿರುದ್ಧ!” ಎಂದು ಖಂಡಿಸಿಬಿಟ್ಟರು. ಆಗದೆ ಏನು, ಇನ್ನೂರು ಪೌಂಡು ತೂಕವಿದ್ದಾಳೆ, ಹಿಡಿಂಬಿ, ಎಂದು ಹೇಳಿಬಿಡೋಣಾಂತನ್ನಿಸಿತು ಮಾಲತಿಗೆ.

“ಏನು ರೂಲ್ಸೋ, ಏನು ಮಹಾಸಭೆಯೋ ಯಾವ ಸುಶೀಲಮ್ಮನೋ, ಒಂದೂ ಗೊತ್ತಾಗೋದಿಲ್ಲವಲ್ಲ ?” ಎಂದರು ಶಾರದಮ್ಮ.

“ಈ ಕತೆ ಇವತ್ತು ನಿನ್ನೆ ಶುರುವಾದ್ದಲ್ಲ. ನಾನು ಕ್ಲಬ್ಬಿಗೆ ಸೇರಿದಾಗಿಂದಲೇ ಶುರು.” ಎಂದು ಮಾಲತಿ ಪುರಾಣ ಬಿಚ್ಚಿದಳು. “ಒಂದು ಮೂರು ವರ್ಷಗಳ ಹಿಂದೆ ನಮ್ಮ ಕ್ಲಬ್ಬಿನಲ್ಲಿ ಹೊಲಿಗೆ ಕ್ಲಾಸುಗಳನ್ನು ತೆರೆದರು. ಕಲಿಸೋದಕ್ಕೆ ಕೊನ್ವೆಂಟಿನಿಂದ ತಾಯಿಯೋ ತಂಗಿಯೋ ಯಾವಳೋ ಒಬ್ಬಳು ನನ್ನ—ನನ್ನೂಂತ್ರೆ ಬಂಧುಬಳಗ ಯಾರೂ ಇಲ್ಲದವಳು, ಹೆಣ್ಣು ಬೈರಾಗಿ—ಬರುತ್ತಿದ್ದಳು. ಅವಳು Queens Gown, Queens frock, Queens chemise, Princess Petticoat, ಇವನ್ನೆಲ್ಲಾ ಕತ್ತರಿಸಿ ಹೊಲಿಯೋದಕ್ಕೆ ಹೇಳಿಕೊಡೋದನ್ನ ನೋಡಿ ಸಹಿಸಲಾರದೆ ನಾನು ಕಲಿಯೋದಿಲ್ಲಾಂದುಬಿಟ್ಟೆ. ನಾನು ಬಿಟ್ಟದ್ದೇ ತಡ, ಒಬ್ಬೊಬ್ಬರೇ ಹೊಲಿಗೆ ಕ್ಲಾಸಿನಿಂದ ಹೊರಗೆ ಬಿದ್ದರು. ತನಗೆ ಹೇಗೂ ಅಪಮಾನ ಮಾಡಿದರಲ್ಲಾಂತ ಆ ನನ್ನು ಅವಳ ಕೊನ್ವೆಂಟು ಕೊಲೇಜಿಗೆ ಹೋಗುತ್ತಿದ್ದ ಸುಶೀಲಮ್ಮನ ಮಗಳ ಮೇಲೆ ರೇಗಿದಳಂತೆ. ಸುಶೀಲಮ್ಮಗೆ ನನ್ನ ಮೇಲಿನ ಸಿಟ್ಟಿಗೆ ಇದೇ ಆರಂಭ. ಕಳದ ವರ್ಷ, ನಿಮಗೆ ನಾನು ಹೇಳಿರಬೇಕು, ಬಡವರಿಗೆ ಹಳೇಬಟ್ಟೆಗಳನ್ನು ಹಂಚುವಾಗ ಹರಕಲು ಚಿಂದಿಗಳನ್ನು ಸರ್ವಥಾ ಕೊಡಕೂಡದು, ಬೇರೆ ಇಲ್ಲವಾದರೆ ಹರಿದಲ್ಲಿ ಹೊಲಿಸಿ, ಗುಂಡಿಗಳು ಹೋದಲ್ಲಿ ಹಾಕಿಸಿ, ಆಮೇಲೆ ಕೊಡಬೇಕೂಂತ ಹಟಹಿಡಿದು ವಾದಿಸಿದೆನಲ್ಲಾ, ಅದು ಎರಡನೇ ಅಸಮಾಧಾನ ಮೂರನೇದಾಗಿ ‘Cottage Industries’ ಅಂತ ಹೊರಡಿಸಿದರು. ಒಲೆ

ಉರಿ ಮಾಡೋದು ಹೇಗೇಂತ ತಿಳಿಯದಿದ್ದ ಇವರು ಮನೇಲಿ ಅಡಿಗೆಯವ ನಿಂದಲೋ ಇನ್ಯಾರಿಂದಲೋ, ಹಪ್ಪಳ, ಸಂಡಿಗೆ, ಉಪ್ಪಿನಕಾಯಿ, ಜ್ಯಾಮು, ಹಲ್ವ, ಬರ್ಫಿಗಳನ್ನು ಮಾಡಿಸಿ ಡಬ್ಬಗಳಲ್ಲೋ ಸೀಸೆಗಳಲ್ಲೋ ತುಂಬಿ, 'ಸುಶೀಲಮ್ಮ ಮಾಡಿದ್ದು,' 'ಸುಭದ್ರಮ್ಮ ತಯಾರಿಸಿದ್ದು,' 'ಪಾವಮ್ಮನ ಪಾಕ' ಎಂತ ಲೇಬಲ್ ಅಂಟಿಸಿಬಿಟ್ಟು, ಬಂದವರ ಕುತ್ತಿಗೇಗೆ ಕಟ್ಟಿ,ಒಂದಕ್ಕೆ ನಾಲ್ಕು ಇಸ್ಕೊಂಡು, ಒಂದು ಫಂಡು ಮಾಡಿದ್ದರಲ್ಲ, ಅವರ ಬಲವಂತಕ್ಕೆ ಒಂದು ದಿನ ನಾನು ನೇರವಾಗಿ ತಾಜ ಮಹಾಲು ಹೋಟೇಲಿನಿಂದ ಒಂದು ಸೇರು ಮಿಠಾಯಿ ತರಿಸಿ, ಅದಕ್ಕೆ 'ಮಾಲತಿ ಸ್ವತಹ ತರಿಸಿದ್ದು' ಅಂತ ಚೀಟಿ ಅಂಟಿಸಿಟ್ಟದ್ದೂ ಒಂದು ಅಪ ವಾದ. ಅಮೇಲೆ, ಇದೇ ಜನವರಿ ತಿಂಗಳಲ್ಲಿ ಅಕ್ಕಿ ಡಿಪೋಗಳು ಏರ್ಪಾ ಟಾಗುವ ಮುಂಚೆ ರೇಶನ್ ಅಕ್ಕಿ ಹಂಚೋಣಕ್ಕೆ ಸಾಕಷ್ಟು ಜನರಿಲ್ಲದೆ ಸ್ವಯಂಸೇವಕರನ್ನು ಕಳುಹಿಸಿ ಕೊಡೀಂತ ಸೆಂಟ್ರಲ್ ಸ್ಟೋರ್ಸಿನಿಂದ ಬೇಡಿಕೆ ಬಂದಿತ್ತಲ್ಲ? ಆಗ ಈ ಚದುರೆಯರನ್ನೆಲ್ಲ ನಾನೆಷ್ಟು ಬಗೆಯಲ್ಲಿ ಬೇಡಿಕೊಂಡೆ ಗೊತ್ತೇ? ಅವರ ಕಾಲುಹಿಡಿದು ದಮ್ಮಯ್ಯಾ ಅನ್ನೋದು ಮಾತ್ರ ಬಾಕಿ ಯಿತ್ತು. ಏನೇನೋ ಕುಂಟುನೆಪ ಹೇಳಿ ತಪ್ಪಿಸಿಕೊಂಡರು. ಕೊನೆಗೆ ನಾನೊ ಬ್ಬಳೇ ಹೋದೆ, ನೆನಪಿರಬಹುದು. ಅದೇ ನಾಲ್ಕನೇ ಕಾರಣ, ನನ್ನಮೇಲಿನ ಕೋಪಕ್ಕೆ. ಈ ಸೇಡು ಒಂದಲ್ಲ ಒಂದು ದಿನ ತೀರಿಸಿಕೊಳ್ಳಬೇಕೂಂತ ಹೊಂಚು ಹಾಕುತ್ತಲೇ ಇದ್ದರು, ಇದೇ ಸುಶೀಲಮ್ಮನೂ ಅವರ ಸುತ್ತಿನ ವರೂ. ಅವರ ಓರೆನೋಟ, ನಂಜುಮಾತು, ಅಡ್ಡಕಾಲು ಇತ್ಯಾದಿ ಕಿರುಕುಳ ಯಾವಾಗಲೂ ಇದ್ದೇ ಇತ್ತು ನನ್ನ ವಿಷಯದಲ್ಲಿ. ಆದರೆ ನಾನು ಸುಲಭದಲ್ಲಿ ಸಿಕ್ಕಿ ಬೀಳಲಿಲ್ಲ. ನಿನ್ನೆ ಮಾತ್ರ ಸಿಕ್ಕಿಬಿದ್ದೆ, ಅವರ ಕತ್ತರಿಗೆ.

"ಅವರು ಇತ್ತೀಚೆಗೆ ಒಂದು 'ಗೃಹಪರಿಷ್ಕರಣ ಸಮಿತಿ' ಅಂತ ಹೊಸ ತೊಂದು ಹಗರಣ ಹೂಡಿದ್ದಾರೆ. ಸುಶೀಲಮ್ಮ, ಡೇಸರೇ ಅದರ ಆಧಾರ ಸ್ತಂಭಗಳು. ನಿನ್ನೆ ಈ ಸಮಿತಿಗೆ ಕಾರ್ಯದರ್ಶಿನಿಯ ಆಯ್ಕೆ. ನನಗೂ ಬರ ಹೇಳಿದ್ರು. ಹೋದೆ. ಹೋಗಿ ನೋಡಿದರೆ ಏನು ಆಡಂಬರ! ದೇವಿಕಾರಾಣಿ ಸೀರೆಗಳೇನು, ಶಾಂತಾ ಆಪ್ಟೇ ಸೀರೆಗಳೇನು! ಏನು ಶಿಲ್ಕು ಸೆಟಿನು ಜಾರ್ಜೆಟು! ನೀವೀವರೆಗೆ ಕಂಡಿರದ ನವನೂತನ ಪಾದರಕ್ಷೆಗಳು. ಪಾದ ರಕ್ಷೆಗಳಿಗೊಪ್ಪುವಂತಹ ಕರವಸ್ತ್ರಗಳು. ಕರವಸ್ತ್ರಗಳಿಗೊಪ್ಪುವಂತಹ ಕೈ

ಚೀಲಗಳು. ಎಲ್ಲಿ ನೋಡಿದರೂ ಸಳಸರ, ಥಳಥಳ, ಗಮಗಮ ಅನ್ನುತ್ತಿತ್ತು. ಈ ಪ್ರದರ್ಶನದ ನಡುವೆ ನನ್ನದೊಂದು ಕೈಮಗ್ಗದ ಸೀರೆ, ನವಿಲುಗಳ ನಡುವೆ ಗುಬ್ಬಚ್ಚಿ ಇದ್ದ ಹಾಗೆ."

"ಅಲ್ಲಾ, ಕ್ಲಬ್ಬಿಗೆ ಕೈಮಗ್ಗದ ಸೀರೆ ಉಟ್ಟುಕೊಂಡು ಹೋಗೋದೇನೇ?" ಎಂದು ರಾಘವೇಂದ್ರರಾಯರು ಉದ್ಗಾರ ತೆಗೆದರು.

"ಬಡವರ ಉದ್ಧಾರಕ್ಕೆ ಹೋಗುವಾಗಲಾದರೂ ಸಂಪತ್ತಿನ ಶೃಂಗಾರ ಬೇಡಾಂತ ಮಾಡಿ ಹೋದ್ದು." ಎಂದುತ್ತರ ಕೊಟ್ಟಳು ಮಾಲತಿ.

"ಹೋಗಲಿ ಬಿಡು, ರಾಘು. ಸುಮ್ಮನಿರು. ಆ ಮೇಲೆ ?" ಅಂದರು ಶಾರದಮ್ಮ.

ಅಷ್ಟರವರೆಗೆ ಉತ್ಸಾಹದಿಂದ ಹೇಳುತ್ತಿದ್ದ ಮಾಲತಿಗೆ ಥಕ್ಕನೆ ತನ್ನ ಮೇಲೆ ತನಗೇ ಜುಗುಪ್ಸೆಯುಂಟಾಯಿತು. ಹೋಗಲೇ ಬಾರದಿತ್ತು, ಆ ಸಭೆಗೆ. ಹೋದಮೇಲಾದರೂ ಬಾಯಿ ತೆಗೆಯದೆ ಬಂದಿದ್ರೆ ಚೆನ್ನಾಗಿತ್ತು. ಅಹುದು; ಆವರೆ ಅವರೆಲ್ಲ ನಾಲ್ಕು ದಿಕ್ಕುಗಳಿಂದಲೂ ಚುಚ್ಚಿ ಮಾತಾಡು ವಾಗ?—ಮುಂದರಿಸಿದಳು:

"ಆ ಮೇಲೆ—ಹೌದು—ಮಿಸ್ ಡೇಸ್ ಸಮಿತಿಯ ಧ್ಯೇಯಗಳನ್ನ ಇಂಗ್ಲಿಷಿನಲ್ಲಿ ವಿವರಿಸಿದಳು. 'ಭಾಗ್ಯಹೀನರಾದ ನಮ್ಮ ಬಡಭಗಿನಿಯರ ಉದ್ಧಾರಕ್ಕಾಗಿ ನಮ್ಮ ಬಿಡು ಸಮಯವನ್ನು ಸದ್ವಿನಿಯೋಗ ಮಾಡುವುದೇ ನಮ್ಮ ಮುಖ್ಯೋದ್ದೇಶ. ಬಡಹೆಂಗಸರ ದಿನಚರ್ಯದಲ್ಲಿ ಉಲ್ಲಾಸವನ್ನು ತುಂಬುವ ಬಗೆ ಹೇಗೆ? ವಿಲಾಸಸೌಂದರ್ಯವನ್ನು ತರುವ ರೀತಿ ಯಾವುದು ಅವರು ವಿರಾಮಕಾಲವನ್ನು ವೃಥಾ ಅಶಿಕ್ಷಿತ ವ್ಯಾಸಂಗಗಳಲ್ಲಿ ಕಳೆಯದೆ ಮುನ್ನಡೆಯ ಮಾರ್ಗಕ್ಕೆ ಅನ್ವಯಿಸಿಕೊಳ್ಳುವ ಉಪಾಯವೇನು? ಎಂಬಿವೇ ಮೊದಲಾದ ವಿಷಯಗಳನ್ನು ನಾವು ನಿಶ್ಚಯಿಸಿಕೊಂಡು ಅವರಿಗೆ ಕಲಿಸ ಬೇಕೆಂಬುದೇ ನಮ್ಮ ಉದಾತ್ತಸಂಕಲ್ಪ' ಅಂತೇನೇನೋ ಉದ್ದುದ್ದ ಭಾಷಣ ಮಾಡಿ ಆ ಮೇಲೆ ಇದ್ದಕಿದ್ದ ಹಾಗೆ ಅವಳ ರಥ ನನ್ನ ಕಡೆಗೆ ತಿರುಗಿಸಿ ಹೊಡೆದಳು. 'ನಮ್ಮ ಮೈಸೂರಿನ ಮಾಲತಿಬಾಯಿಯವರು ಈ ಸಮಾಜದ ಕಾರ್ಯಕಲಾಪಗಳಲ್ಲಿ ಹೆಚ್ಚಿನ ಭಾಗ ವಹಿಸದೇ ಇದ್ದರೂ ಅವರ ಪ್ರಗತಿ ಪರ ಸಲಹೆಗಳಿಂದ ನಮ್ಮ ಚಳುವಳಿಗೆ ಹೊಸ ದಾರಿಯನ್ನು ತೋರಿಸಿ

ಕೊಡುತ್ತಲೇ ಇದ್ದಾರೆ. ಅವರ ಮಾರ್ಮಿಕವಾದ ಮಾತುಗಾರಿಕೆಯಂತೂ ನಿಮ್ಮೆಲ್ಲರಿಗೆ ಅನುಭವವಾಗಿರುವ ವಿಷಯವೇ. ನಾವೀಗ ಕೈಗೊಂಡ ಸಮಾಜಸೇವೆಯ ಹೊಸ ಸಾಹಸದಲ್ಲಿಯಾದರೂ ಅವರು ಸ್ವತಃ ಭಾಗ ವಹಿಸಿ ನಮಗೆ ಸರ್ವವಿಧದಲ್ಲೂ ನೆರವಾಗಿ, ತಮ್ಮ ತನುಮನಧನಗಳನ್ನರ್ಪಿಸಿ ನಮ್ಮ ಸಾಧನೆ ಸಫಲವಾಗುವಂತೆ ಸಹಕರಿಸಬೇಕೆಂಬುದೇ ನಮ್ಮ ವಿನೀತ ವಿಜ್ಞಾಪನೆ.' ಅನ್ನುತ್ತ ಕಟ್ಟಿಕೊಂಡು ಬಂದ ಮಾತುಗಳನ್ನಿಷ್ಟು ನನ್ನ ಮುಖಕ್ಕೆ ಎರಚಿಬಿಟ್ಟು, ತನ್ನ ಕುರ್ಚಿಯನ್ನು ಸೇರಿದಳು. ಆ ಮೇಲೆ ಇದ್ದೇ ಇದೆಯಲ್ಲ ಕೈಚಪ್ಪಾಳೆಯ ಸುರಿಮಳೆ.

"ಅಷ್ಟಾದರೂ ನಾನು ಕೂತಲ್ಲಿಂದ ಕದಲಲಿಲ್ಲ. ಅವರು ಹೂಡಿದ ತಂತ್ರಕ್ಕೆ ತುತ್ತಾಗಬಾರದೂಂತ ತಗಣೆ ಹಾಗೆ ಕುರ್ಚಿಗೆ ಅಂಟಿಕೊಂಡೆ. ಇದನ್ನ ನೋಡಿ ಸುಶೀಲಮ್ಮ ಸ್ವತಹ ಎದ್ದು ನಿಂತಳು, ಪಟ್ಟದ ಆನೆ ಹಾಗೆ. 'ಮಾಲತಿ ಬಾಯಿಯವರು ನಾನ್‌ಕೊಆಪರೇಶನು ಮಾಡೋದು ನಮ್ಮ ದೌರ್ಭಾಗ್ಯ ಅನ್ನಬೇಕು. ಮನೆಯ ತಾಪತ್ರಯಗಳಿಂದಲೋ, ಅಥವಾ ಮಕ್ಕಳು ಮರಿಗಳ ಕಾಟದಿಂದಲೋ, ಯಾವ ಕಾರಣದಿಂದಲೋ, ಪಾಪ ಕೈಕಟ್ಟಿ ದೂರ ಕೂತುಬಿಟ್ಟಿದ್ದಾರೆ. ಮಿಸ್ ಡೇಸರು ಹಾರೈಸಿದಂತೆ ಮಾಲತಿಬಾಯಿಯವರು ನಮ್ಮ ಸದುದ್ದೇಶಗಳ ಸಾಧನೆಗೆ ತಮ್ಮ ತನುಮನ ಗಳನ್ನು ನೀಡಲು ಇಷ್ಟಪಡದಿದ್ದರೂ ಉದಾರಹಸ್ತದಿಂದ ಧನಸಹಾಯ ವನ್ನಾದರೂ ದಯಪಾಲಿಸಿ ನಮ್ಮ ಸಮಿತಿಯನ್ನು ಪ್ರೋತ್ಸಾಹಿಸಲಿ ಎಂತ ನನ್ನ ಪ್ರಾರ್ಥನೆ' ಎಂದು ಅತಿ ವಿನಯ ವಯ್ಯಾರದಿಂದ ಮುಖ ಸೊಟ್ಟಗೆ ಮಾಡಿಕೊಂಡು ಕೂತಳು. ಆಗ ಕರತಾಡನದ ನಡುವೆ ಅಪಹಾಸ್ಯದ ನಗೆಯೂ ಅಲ್ಲಲ್ಲಿ ಕೇಳಿಸುತ್ತಿತ್ತು. ಇನ್ನೂ ತೆಪ್ಪಗೆ ಕೂತರೆ ಸ್ವಾರಸ್ಯ ವಿಲ್ಲಾಂತ ತಟ್ಟನೆ ಎದ್ದು ನಿಂತೆ."

"ಎದ್ದು ನಿಂತಿ, ಸಿಕ್ಕಾಪಟ್ಟೆ ಒದರಿದಿ. ಗೊತ್ತು." ಅಂದರು ರಾಘವೇಂದ್ರ ರಾಯರು. ಆದರೆ ಈ ಮಾತಿನಲ್ಲಿ ಅಸಮಾಧಾನವಾಗಲಿ ಸಿಟ್ಟಾಗಲಿ ಇರ ಲಿಲ್ಲ. ಹೆಂಡತಿಯ ಕತೆ ಕೇಳಿದಹಾಗೆಲ್ಲ ಅವರಿಗೆ ಆಕೆ ಮೇಲೆ ಅಭಿಮಾನವೂ ಪಶ್ಚಾತ್ತಾಪವೂ ಹೆಚ್ಚುತ್ತಾ ಬಂತು.

"ಒದರಿದ್ದು ಯಾರು? ನಾನು ಒದರಲಿಲ್ಲ. ರಕ್ತ ಬಿಸಿಯಾಗಿ ಕುದಿ ಯುತ್ತಿದ್ರೂ, ಮನಸ್ಸು ಮಂಜಿನಂತಿತ್ತು. ನಾನೆದ್ದು ನನ್ನ ಸುತ್ತುಮುತ್ತಲಿದ್ದ

ಹಲ್ಲು ಕಿರೀತಾ ಕೂತಿದ್ದವರನ್ನ ಒಂದು ಬಾರಿ ಕಣ್ಣು ತಿರುಗಿಸಿ ನೋಡಿದ ಗಳಿಗೆಯಲ್ಲಿ ಗುಜುಗುಜು ಮಾತೆಲ್ಲ ನಿಂತು ನಿಶ್ಶಬ್ದವಾಯಿತು. ಆಗ ನನಗೆ ಮನಸ್ಸಿದ್ದಿದ್ದರೆ ಒಬ್ಬೊಬ್ಬಳನ್ನೇ ಹಿಡಿದು ನೆಲಕ್ಕೆ ಅಪ್ಪಳಿಸಿ ಬಿಡಬಹುದಿತ್ತು ಆದರೆ ಯಾಕೋ ಹಿಂತೆಗೆದೆ. ಅಷ್ಟು ಮುಂದಿ Heavy Tanksಉ, Light Tanksಉ, Medium Tanksಉ ಇರುವಲ್ಲಿ ನನ್ನದೊಂದೇ ಒಂದು Hand Grenade ಏನು ತಾನೇ ಮಾಡೀತು ?"

ಶಾರದಮ್ಮ ನಕ್ಕರು. ಆದರೆ ರಾಘವೇಂದ್ರರಾಯರಿಗೆ ಈ ದಿಟ್ಟತನ ಅಶ್ಲೀಲವೆಂದು ತೋರಿತು. ಆದರೂ ಸುಮ್ಮನಿದ್ದರು.

"ನಿಂತುಬಿಟ್ಟಮೇಲೆ ಏನಾದ್ರೂ ಹೇಳಬೇಕಲ್ಲ; ಹೇಳಿದೆ. 'ನನ್ನ ಸ್ತುತಿ ಸ್ತೋತ್ರ ಶ್ರವಣದಿಂದ ನೀವೆಲ್ಲರೂ ಕೃತಾರ್ಥರಾದುದು ನನ್ನ ಭಾಗ್ಯ. ಇನ್ನು ನನ್ನ ಪಾಲಿನ ನಿಮ್ಮ ಸಹಸ್ರನಾಮ ಸಂಕೀರ್ತನೆ ಮಾಡಿ ನಮ್ಮೊಳಗಿನ ಲೆಕ್ಕಾಚಾರ ತೀರಿಸಿದರೆ ನಾನು ಧನ್ಯಳು. ಇದಕ್ಕಾಗಿಯೇ ಎಂಬಂತೆ ಅನುಕೂಲವಾಗಿ ಈ ಗೋಷ್ಠಿಯನ್ನೇರ್ಪಡಿಸಿ ಸುಸಂದರ್ಭವನ್ನು ಒದಗಿಸಿ ಕೊಟ್ಟ ಸುಶೀಲಮ್ಮನವರ ಉಪಕಾರವನ್ನು ನಾನೆಂದೂ ಮರೆಯಲಾರೆನು.' ಹೀಗನ್ನುವಷ್ಟರಲ್ಲೇ ಆರಾಮವಾಗಿ ಕಾಲು ಚಾಚಿಕೊಂಡು ಕುಳಿತವರು ಕೂಡಾ ಎಚ್ಚತ್ತು ಸರಳು ನುಂಗಿದವರಂತೆ ನೆಟ್ಟಗೆ ಕುಳಿತು ಶ್ವಾಸ ನಿಲ್ಲಿಸಿ ಕಿವಿಗೊಟ್ಟು ಕೇಳಿದರು. ನಾನು ಆಗ ಹೇಳಿದೆನಲ್ಲ ನಿಮ್ಮ ಹತ್ರ ಅದನ್ನೆಲ್ಲ ಒಂದೊಂದಾಗಿ ಕಾಸಿ ಬರೆ ಎಳೆದೆ, ಅವರ ಮುಖದ ಮೇಲೆ. ಅಕ್ಕಿ ಡಿಪೋಗಳ ಕುರಿತು ಹೇಳ್ತಾ 'ನಾಜೂಕಿನ ಚರ್ಮಕ್ಕೆ Coty ಪವುಡರಿನಷ್ಟು ಅಕ್ಕಿ ಧೂಳು ಒಗ್ಗೋದಿಲ್ಲವೆಂತ ನನಗೂ ಗೊತ್ತು. ಆದರೆ ಒಂದೇ ಒಂದು ದಿನದ ಮಾತಿಗಾದರೂ ನೀವು ನನ್ನ ಜತೆಗೆ ಬಂದು ನಿಮ್ಮ ಪವಡರು ಕ್ರೀಮು ಲಿಪ್‌ಸ್ಟಿಕ್ಕುಗಳನ್ನು ಮರೆತುಬಿಡಬಹುದಾಗಿತ್ತು. ಹೊಟ್ಟೆಗಿಲ್ಲದ ಅಕ್ಕ ತಂಗಿಯಂದಿರು ಒಂದು ಹಿಡಿ ಅಕ್ಕಿಗಾಗಿ ಅಂಗಲಾಚುವುದನ್ನು ನೋಡಿಯಾದರೂ ಬಡವರ ಕುಲಕೋಟಿ ಉದ್ಧಾರಕ್ಕಾಗಿ ಜನ್ಮವೆತ್ತಿದ ನೀವು ಬಡವರ ಸೇವೆಯ ಸವಿಯನ್ನುಣ್ಣಬಹುದಿತ್ತು. ಆ ದಿನ ನನ್ನ ಮುಖದ ಮೇಲಿನ ಅಕ್ಕಿಯ ಧೂಳೆಲ್ಲ ಕಣ್ಣೀರಿನಿಂದ ತೊಳೆದುಹೋಗಿಬಿಟ್ಟಿತು. ಆದರೆ ನೀವು ಯಾರೂ ಬರಲಿಲ್ಲ. ಈಗ ನೀವು ಅದೇ ಹೆಣ್ಣುಮಕ್ಕಳ ಜೀವನೋದ್ಧಾರಕ್ಕೆ

ಸೆರಗು ಕಟ್ಟಿದ್ದೀರಿ; ಅಲ್ಲವೇ? ಬೆಳಗ್ಗಿನಿಂದ ಸಂಜೆವರೆಗೆ ಬೆನ್ನು ಮುರಿದು ಬೆವರು ಸುರಿಸಿ, ಅರೆಹೊಟ್ಟೆ ಅನ್ನಕ್ಕೂ ಹರಕು ಬಟ್ಟೆಗೂ ಬೇಕಾಗಿ ದಿನ ಬಿಡದೆ ದುಡಿಯುವ ದರಿದ್ರರಿಗೆ ಬಿಡುಸಮಯವಿದೆಯೆಂತ ನಿಮಗೆ ಯಾರು ಹೇಳಿದರು, ಹೇಗೆ ಗೊತ್ತುಮಾಡಿದಿರಿ ? ಅಂತಹ ಹೆಂಗಸರನ್ನು ಹಿಂಡಿದರು ಕೂಡ ಒಂದು ತೊಟ್ಟು ಉಲ್ಲಾಸದ ರಸ ಸಿಕ್ಕೀತೇ ? ಒಂದು ವೇಳೆ ಅವರಿಗೆ ವಿರಾಮಕಾಲ ಇದ್ದರೂ ಅದರ ಸದ್ವಿನಿಯೋಗ ಕಲಿಸುವುದಕ್ಕೆ ಹೊರಟವರು ಯಾರು? ನಿಮ್ಮಂತಹ ಬಣ್ಣದ ಬೀಸಣಿಕೆಗಳು; ಸೊಕ್ಕಿನ ಸೋಮಾರಿಗಳು. ದುಡ್ಡಿನ ದರ್ಪದಿಂದ ಸುಖದ ಅಮಲಿನಿಂದ ನಿಮ್ಮ ಕಾಲು ಬುಡವೇ ನಿಮಗೆ ಕಾಣುವುದಿಲ್ಲ. ಅಂದವೇಲೆ ಕ್ರೂರಸಮಾಜದ ಹಾಸುಗಲ್ಲಿನ ಬುಡದಲ್ಲಿರುವ ಕಸ-ಕುಪ್ಪೆ, ಕ್ರಿಮಿ-ಕೀಟ ನಿಮ್ಮ ಕಣ್ಣಿಗೆ ಹೇಗೆ ಬಿದ್ದೀತು? ಸ್ವಾರ್ಥದಿಂದ ಕಲ್ಲಾಗಿರುವ ನಿಮ್ಮೆದೆಯಲ್ಲಿ ನಿಜಾಂತಃಕರಣ ಹೇಗೆ ಚಿಗುರೀತು ? ನೀವು ಸಮಾಜಸುಧಾರಕರು ಅಂದರೆ ನನಗೆ ಅಳಬೇಕೋ ನಗಬೇಕೋ ಗೊತ್ತಾಗುವುದಿಲ್ಲ.' ಅಂದೆ. ”

ಮಾಲತಿಗೆ ಈ ಮಾತುಗಳೆಲ್ಲ ತನ್ನ ಬಾಯಿಂದ ಹೇಗೆ ಹೊರಬಿತ್ತು ಎಂದು ಫಕ್ಕನೆ ಆಶ್ಚರ್ಯವಾಗಿ ಮೌನತಾಳಿದಳು.

“ ಅಷ್ಟಕ್ಕೇ ಮುಗಿಸಿದಿಯೇನು ? ” ಎಂದು ಶಾರದಮ್ಮ ಆತುರಪಟ್ಟು ಕೇಳಿದರು.

“ ಇಲ್ಲ. ಮಕ್ಕಳ ವಿಚಾರ ಮೂದಲಿಸಿದರಲ್ಲ; ಅದಕ್ಕೂ ಉತ್ತರ ಕೊಟ್ಟೆ. ' ಮನೆಗೆಲಸ, ಮಕ್ಕಳಕಾಟ ಯಾರಿಗೂ ತಪ್ಪಿದ್ದಲ್ಲ. ನಿಮಗೂ ಇದ್ದದ್ದೇ. ಆದರೆ ಪ್ರಾಯಶಃ ನಿಮಗದರ ಅನುಭವ ಇರಲಾರದು. ಮನೆ, ಮಕ್ಕಳು ಎಲ್ಲ ನೋಡಿಕೊಳ್ಳುವಷ್ಟು ಪುರಸತ್ತು ಬೇಕಲ್ಲ ನಿಮಗೆ. ಎಲ್ಲಿಂದ ? ದಿನಕ್ಕೆ ಹತ್ತು ಬಾರಿ ಬಗೆಬಗೆಯಾಗಿ ವೇಷ ಹಾಕಿಕೊಂಡು ಮನೆಯಿಂದ ಮನೆಗೆ, ಬೀದಿಯಿಂದ ಬೀದಿಗೆ ಅಂಡಲೆಯುತ್ತ, ಕ್ಲಬ್ಬಿನಲ್ಲೋ ಸಿನೆಮದಲ್ಲೋ ಶಾಪುಗಳಲ್ಲೋ ಆಟ ಚೇಷ್ಟೆಗಳಲ್ಲಿ ಜೀವಸವೆಯುತ್ತ ಬೆಡಗಿನ ಬಸವಿಗಳಂತೆ ಮೆರೆಯುವ ನಿಮಗೆ ವಿರಾಮವೆಲ್ಲಿಂದ ? ಆದ್ದರಿಂದಲೇ ಸಂಸಾರ ತಾಪತ್ರಯಕ್ಕೂ ಸಮಾಜಸೇವೆಗೂ ಸರಿಬೀಳೋದಿಲ್ಲವೆಂತ ನಿಮ್ಮ ತಪ್ಪು ಗ್ರಹಿಕೆಯುಂಟಾದ್ದು. ನಿಮ್ಮ ಅಜ್ಞಾನ ಅಷ್ಟು ವಿಶಾಲವಾದ್ದು. ಪರೋಪ

ಕಾರ ಮಾಡಬೇಕೂಂತ ಇದ್ದವರಿಗೆ ಸಂಸಾರದ ಕಷ್ಟವ್ಯಸನಗಳು ಎಂದೂ ಅಡ್ಡಿ ಬಂದದ್ದಿಲ್ಲ. ನಾನು ನಿಮ್ಮೊಂದಿಗೆ ನಿಮ್ಮ ಚಳುವಳಿಗಳಲ್ಲಿ ಸೇರದಿರಲು ನನ್ನ ಮನೆ ತಾಪತ್ರಯದಿಂದಾಗಿ ಅಲ್ಲವೇ ಅಲ್ಲ. ನನಗಾಗಿ ನೀವು ಕಂಣೀರು ಸುರಿಸಿ ನಿಮ್ಮ ಮುಖಬಣ್ಣ ಕೆಡಿಸಿಕೊಳ್ಳುವ ಅಗತ್ಯವಿಲ್ಲ. ಪರಸೇವೆಯ ಪುಣ್ಯ ಲಭಿಸದಿದ್ದರೂ ಪರವಾಯಿಲ್ಲ, ನಿಮ್ಮ ಸಹವಾಸದಿಂದ ಪರಪೀಡನದ ಪಾಪ ಕಟ್ಟಿಕೊಳ್ಳದಿದ್ದರೆ ಅಷ್ಟೇ ಪುಣ್ಯವೆಂತ ನನ್ನಷ್ಟಕ್ಕೇ ನಾನಿದ್ದುದು. ಆದ್ದರಿಂದ ನಿಮ್ಮ ವೃಥಾಲಾಪವನ್ನು ಇನ್ನಾದರೂ ಕೊನೆಗಾಣಿಸಿ ದಯ ವಿಟ್ಟು, ಅಂತ ಹೇಳಿಬಿಟ್ಟು, ಅತ್ತಿತ್ತ ನೋಡದೆ ನನ್ನ ಪತಾಕೆ ಕಿತ್ತುಕೊಂಡು ಅಲ್ಲಿಂದ ಪಲಾಯನ ಮಾಡಿದೆ." ಎಂದು ಮುಗಿಸಿದಳು ಮಾಲತಿ.

ಸ್ವಲ್ಪಹೊತ್ತು ಯಾರೂ ಮಾತೆತ್ತಲಿಲ್ಲ. ಯಾರಿಗೂ ಏನು ಹೇಳ ಬೇಕೆಂಬುದು ತೋಚಲಿಲ್ಲ. ಒಬ್ಬರ ಮುಖ ಇನ್ನೊಬ್ಬರು ನೋಡುವುದಕ್ಕೂ ಸಂಕೋಚ ಪಟ್ಟರು. ಕೊನೆಗೆ ಮಾಲತಿಯೇ ಮೆತ್ತಗೆ ಕೇಳಿದಳು.

"ಏನಮ್ಮ, ನನ್ನ ನಾಲಿಗೆಯ ನಾಗಾಲೋಟ ಕೊಂಚ ಜಾಸ್ತಿಯಾಯಿತೇ?"

"ಜಾಸ್ತಿಯೇನು, ಕಮ್ಮಿಯೇನು ? ಅವರು ನಿಷ್ಕಾರಣವಾಗಿ ಕೆಣಕಿದ್ದು ತಪ್ಪು. ನೀನೇನೂ ರಿಯಾಯಿತಿ ಮಾಡಲಿಲ್ಲ ಮಾತಿನಲ್ಲಿ. ಆದರೆ ಈಗೇ ತಕ್ಕೆ ಅದೆಲ್ಲ ಚರ್ಚೆ. ಆಗಿಹೋಯಿತಲ್ಲ ಇನ್ನಿಲ್ವಲ್ಲ. ಅಷ್ಟೇ ಸಾಕು. ನಾನು ಮೊದಲೇ ಹೇಳಿದ್ದೇನೆ: ಆ ಕ್ಲಬ್ಬು ಗರತೇರಿಗೆ ಹೇಳಿಸಿದ್ದಲ್ಲಾಂತ. ಗಂಡಸ ರಿಗೆ ಬೀದಿಗೊಂದು ಕ್ಲಬ್ಬಿರುವಾಗ ಹೆಂಗಸರಿಗೆ ಊರಿಗೊಂದಾದರೂ ಬೇಡ ವೇಂತ ಬಾಯಿಹೊಡೆದು ಬಿಟ್ಟೆ." ಅಂದರು ಶಾರದಮ್ಮ.

"ಆದರೀಗ ನಿನ್ನೆಯ ವಿಚಾರದಲ್ಲಿ ಅನುತಾಪವನ್ನು ಸೂಚಿಸಿ ಒಂದು ಕ್ಷಮಾಪತ್ರ ಬರೆದು ಕಳುಹಿಸೋದು ಉಚಿತವಲ್ಲವೆ?" ಎಂದು ಬಹಳ ಹೊತ್ತಿನಿಂದ ದೀರ್ಘಾಲೋಚನೆ ಮಾಡುತ್ತಿದ್ದ ರಾಘವೇಂದ್ರರಾಯರು ಕೇಳಿದರು. ಆದರೆ ಆ ವಿಪರೀತಕ್ಕೆ ಶಾರದಮ್ಮ ಒಪ್ಪಲಿಲ್ಲ. ಮಾಲತಿಯನ್ನು ಅವರು ಎಂದೂ ಬಿಟ್ಟುಕೊಟ್ಟವರಲ್ಲ.

"ಅಂದ್ರೆ ಆ ಶೂದ್ರತಿಗೆ ದಮ್ಮಯ್ಯ ಹಾಕಬೇಕೂಂತೀಯಾ ? ಏನಗತ್ಯ ವಿಲ್ಲ. ನನಗ್ಗೊತ್ತು ಆ ಸುಶೀಲಮ್ಮಾಂದ್ರೆ. ಕಲೆಕಟ್ರ ಹೆಂಡ್ತಿ ತಾನೇ ?"

"ಅಸಿಸ್ಟಾಂಟ್ ಕಲೆಕ್ಟ್ರ ಹೆಂಡ್ತಿ."

" ಹೌದಪ್ಪ. ಎತ್ತರ ದಪ್ಪನಾಗಿದ್ದಾಳೆ. ಸ್ವಲ್ಪ ಕಪ್ಪು. ಕೆಳತುಟಿ ಸ್ವಲ್ಪ ಮುಂದೆ. ಅಲ್ವೇನೇ ಮಾಲತಿ ? ಹೌದು, ಅವಳೇ. ನಮ್ಮ ಜಿಲ್ಲೆಯವಳು. ತಂದೆಜತೆಗೆ ತೆಲಗು ತಮಿಳು ದೇಶಗಳಲ್ಲಿ ಸುತ್ತಾಡಿ ಈಗ ಚೆಟ್ಟಿಯಾರು ಹೆಂಗಸಿನ ಹಾಗಿದ್ದಾಳೆ. ಮನೇಲಿ ಕನ್ನಡ ಮಾತು ಬೇರೆ. "

" ನೀನೆಲ್ಲಮ್ಮ ನೋಡಿದ್ದು, ಈ ಭಾರದ ಮಹಿಳೇನ್ನ ? " ಎಂದು ಮಾಲತಿ ಕೇಳಿದಾಗ ಶಾರದಮ್ಮನಿಗೆ ನಗು ಬಂತು.

ಅವಳ ಗಂಡನಿಗೆ ಇಲ್ಲಿಗೆ ವರ್ಗವಾಗಿ ಕೆಲವು ದಿನಗಳಲ್ಲಿ ಅವಳು ಗೋಪಿ ನಾಥನಲ್ಲಿಗೆ ಬಂದಿದ್ದಳು. ಆ ವರ್ಷದ ನಾಡಹಬ್ಬದಲ್ಲಿ ಒಂದು ದಿನ ತನ್ನ ಮಗಳ ಹಾಡುಗಾರಿಕೆ ಹಾಕ್ಸಬೇಕಾಗಿ ಒತ್ತಾಯ ಮಾಡೋದಕ್ಕೆ ಬಂದಿದ್ದಳು. ಆಗ ನಾನಲ್ಲಿದ್ದೆ. "

" ಗೋಪಿನಾಥರಾಯರ ಗುರ್ತವೇನೋ ? "

" ಮದ್ರಾಸಿನಲ್ಲಿ ಒಂದೇ ಕಾಲೇಜಿನಲ್ಲಿದ್ದರಂತೆ, ಒಂದು ವರ್ಷವೇನೋ."

" ಆಮೇಲೆ ? ಅವಳು ಬಂದ ಕೆಲಸವಾಯಿತೇ ? "

" ಹಾಗೆಲ್ಲ ಒಪ್ಪಿಕೊಳ್ಳೋದಕ್ಕೆ ಗೋಪೀನೇ ? ಸಂಗೀತಾಂದ್ರೆ ಜೀವ, ಅವನಿಗೆ. ಅತಿ ಪರಿಷ್ಕಾರ. ಮೊದಲು ತನ್ಮುಂದೆ ಹಾಡಿ ತೋರಿಸಬೇಕು ಅಂದನಂತೆ. ಇವಳು ಮರುದಿನವೇ ಮಗಳನ್ನ ಕರಕೊಂಬಂದು ಹಾಡಿಸಿದ ಳಂತೆ. ಒಂದೈದು ನಿಮಿಷ ಕೇಳಿಬಿಟ್ಟು ಆಮೇಲೆ ನಿಮ್ಮ ಮಗಳ ಶಾರೀರಕ್ಕೆ ತಕ್ಕ ಹಿಮ್ಮೇಳ ಸಿಗೋದು ಪ್ರಯಾಸ, ಈ ಜಿಲ್ಲೆಯೊಳಗೆ; ಅದೂ ಅಲ್ಲದೆ ದಕ್ಷಿಣಾದಿ ಸಂಗೀತಾಂದ್ರೆ ಈ ದೇಶದವರಿಗೆ ಅಷ್ಟಷ್ಟೇ. ಯಾಕೆ ಸುಮ್ಮನೆ ಶ್ರಮ, ಬೇಡ, ಅಂದನಂತೆ."

ಆಗ ಮಾಲತಿ ಹೊರಗಡೆ ನೋಡುತ್ತ, "ಯಾರೊ ಬಂದಿದ್ದಾರಮ್ಮ," ಅಂದಳು. ರಾಘವೇಂದ್ರರಾಯರು ಎದ್ದುಹೋಗಿ ಬಂದಿದ್ದವನ ಕೈಯಿಂದ ಒಂದು ಕವರನ್ನು ತಗೊಂಡು ಒಳಗೆ ತಂದು ಓದಿ,

" ಅಮ್ಮ, ಇವತ್ತು ನಾಲ್ಕಾರು ಜನಕ್ಕೆ ಕಾಫಿ ತಿಂಡಿ ಮಾಡು ಅಂತಿದ್ದೆನಲ್ಲ; ವಜಾಮಾಡು. ಆತ ಬರೋದಿಲ್ವಂತೆ; ಅಂದ್ರೆ ಯಾರೂ ಬರೋದಿಲ್ಲ. " ಅನ್ನುತ್ತ ಅಸಮಾಧಾನದಿಂದ ಹೇಳಿದರು.

" ಯಾರು ಬರೋದಿಲ್ಲ ?" ಎಂದು ಶಾರದಮ್ಮ ಕೇಳಿದರು.

" ಅವನೇ ಗೋಪಿ. ಏನೇನೋ ನೆಪ ಹೇಳ್ತಿದ್ದಾನೆ ಕಾಗದದಲ್ಲಿ ."

" ಏನನಾನುಕೂಲವೋ, ಪಾಪ !"

ಅಷ್ಟರಲ್ಲಿ ಮಾಲತಿ ಆ ಕಾಗದವನ್ನು ಗಂಡನ ಕೈಯಿಂದ ತಗೊಂಡು ಓದಿದಳು.

" ಬರದ್ದಾರಲ್ಲ ; ಮಗೂನ ಸಿನೆಮಾಕ್ಕೆ ಕರಕೊಂಡು ಹೋಗ್ತೇನೇಂತ ಮಾತು ಕೊಟ್ಟಿದ್ದೇನೆ; ಇನ್ನು ಹೋಗದೆ ಕಳೀದು; ಮೊದಲೇ ತಿಳಿಸಿದ್ರೆ ಚೆನ್ನಾಗಿತ್ತು ಅಂತ. " ಎಂದಳು.

ಆದರೆ ಬರದ್ದು ಹೌದಾಗಿದ್ರೂ ರಾಘವೇಂದ್ರರಾಯರಿಗೆ ಒಪ್ಪಿತವಾಗಿರಲಿಲ್ಲ.

" ಕೂಸಿಗೆ ಕೊಟ್ಟ ಮಾತು ಏನು ಮಹಾ ! ಅದೊಂದು ಕಾರಣವೇ ಬರದೇ ಇರೋದಕ್ಕೆ ?" ಎಂದು ಗೊಣಗಿದರು. ಚಿಕ್ಕಮಕ್ಕಳಿಗೆ ಕೊಟ್ಟ ಮಾತನ್ನು ಮನ್ನಿಸುವವರು ಸ್ವಲ್ಪ ಕಮ್ಮಿ. ಅಂತಹ ಕರುಣಾಶೀಲರೂ ಸೂಕ್ಷ್ಮ ಜ್ಞಾನಿಗಳೂ ಅತಿ ವಿರಳ. ಗೋಪಿನಾಥರಾಯರಾದರೂ ಅಂತಹವರೊಬ್ಬರು ಇದ್ದಾರೆಂಬುದು ಸಂತೋಷದಾಯಕವಾದ ವಿಷಯ. ಹಾಗಿರುವಾಗ ತನ್ನ ಗಂಡಗೆ ಈ ವಿಚಾರ ಮನಗಾಣದೆ ಹೋಯಿತಲ್ಲವೆಂತ ಮಾಲತಿ ಮನಸಿನೊಳಗೇ ನೊಂದುಕೊಂಡರೂ ಆ ದಿನ ಇನ್ನೊಂದು ಜಗಳ ಎಬ್ಬಿಸುವುದು ಅನುಚಿತವೆಂತ ಮಾತು ತಿರುಗಿಸಿದಳು.

" ಅದಿರಲಿ; ನೀವು ಇವೊತ್ತಿನ ಸಿನೆಮಕ್ಕೆ ಬರ್ತೀರಾ? ಪಿಕ್ಚರ್ ಚೆನ್ನಾಗಿದೆ ಅಂತಾರೆ. ಸಂಜೆ ಹೇಗೂ ಫ್ರೀ ತಾನೇ ? ಬನ್ನಿ. ನೀವು ಬರೋದಿದ್ರೆ ಸುಮಿತ್ರೆಗೆ ಹೇಳಿ ಕಳುಹಿಸ್ತೇನೆ, ಬರೋದು ಬೇಡವೆಂತ " ಎಂದು ಆತುರದಿಂದ ವಿಜ್ಞಾಪಿಸಿದಳು.

" ಇಲ್ಲ, ಇಲ್ಲ; ಸಾಧ್ಯವಿಲ್ಲ. ನಾವಿನ್ಯಾವಾಗ ಒಟ್ಟು ಸೇರೋದು, ಎಲ್ಲಿ ಅಂತ ಇವೊತ್ತೇ ನಿಶ್ಚಯಿಸಬೇಕು. ಹುಡುಗಾಟವಲ್ಲ. ಕೋರ್ಟಿನ ಕೆಲಸ. ನೀನು ಬೇಕಾದರೆ ಹೋಗು " ಎಂದು ಬಿರುಸಾಗಿ ನುಡಿಯುತ್ತ ತನ್ನ ಆಫೀಸಿಗೆ ಹೋದರು.

' ಯಾವಾಗಲೂ ಹೀಗೇನೇ ' ಅಂದುಕೊಂಡಳು ಮಾಲತಿ.

೪

ಸುಮಿತ್ರೆಗೆ ಎಚ್ಚರಿಕೆಯಾದರೂ ಕಣ್ತೆರೆಯಲು ಮನಸ್ಸಿರಲಿಲ್ಲ. ಕಣ್ತೆರೆದರೆ ಮೈಮೇಲೆಲ್ಲ ಚಿಕ್ಕ ಚಿಕ್ಕ ಅಲೆಗಳಾಗಿ ಉರುಳುತ್ತಿದ್ದ ಹಿಂದಿನ ರಾತ್ರಿ

ತಾನು ಸವಿದ ಸುಖದ ನೆನಪು ಎಲ್ಲಿ ಚದರಿ ಹೋಗುವುದೋ ಎಂಬ ಅಂಜಿಕೆ. ಆದ್ದರಿಂದ ಕನಸಿನ ಕಿಟಕಿಗಳನ್ನು ಮುಚ್ಚಿಕೊಂಡಿದ್ದಂತೇ ಕೆಳಗೆ ಜಾರಿದ್ದ ರಗ್ಗನ್ನು ಮೇಲೆಳೆಕೊಂಡು ಮಗ್ಗುಲಾಗಿ ಬರಿದಾದ ತೋಳುಗಳನ್ನು ಹೊದ್ದಿಕೆಯೊಳಗೆ ಹುದುಗಿಸಿಕೊಂಡಳು. ಆಚೆ ಮಗ್ಗುಲಲ್ಲಿ ತನ್ನ ಗಂಡ ವಾಸುದೇವ ಪೈ ಇದ್ದಾರೆಂತಲೇ ಆಕೆಯ ಭಾವನೆ. ಆದರೆ ಅವರಲ್ಲಿದ್ದ ಚಿಹ್ನೆ ಯಾವುದೂ ಕಂಡುಬಾರದೆ ಒಂದು ಕೈ ಹಿಂದಕ್ಕೆ ನೀಡಿ ಪರಡಿನೋಡಲು ಅವರು ಎದ್ದು ಹೋಗಿದ್ದರು. ತಟ್ಟನೆ ರಗ್ಗನ್ನು ಕಿತ್ತೆಸೆದು ಯಂತ್ರದ ಗೊಂಬೆಯಂತೆ ಎದ್ದು ಕುಳಿತು ಬಿರುಗಣ್ಣುಗಳಿಂದ ಅವರು ಹೋಗಿದ್ದ ಬಾಗಿಲನ್ನು ನೋಡಿದಳು.

"ಇವರಿಗೆ ಇನ್ಯಾವಾಗ ಬುದ್ಧಿ ಬರೋದೋ, ದೇವರೇ ಬಲ್ಲ! ಮಕ್ಕಳ ಹಾಗೆ ಬೆಳಗಾಗುವುದರೊಳಗೆ ಎದ್ದುಬಿಡೋದು, ಮನೆಯೆಲ್ಲಾ ರಂಪ ಮಾಡೋದು; ನಾಚಿಕೆಗೇಡು" ಎಂದು ಬೆಕ್ಕಿನಂತೆ ಮೈಮುರಿದುಕೊಳ್ಳುತ್ತ ಗಂಡ ಆಚೆ ಕೋಣೆಯಲ್ಲೇ ಇದ್ದರೆ ಕೇಳಲಿ ಅಂತ ಗಟ್ಟಿಯಾಗಿ ಟೀಕಿಸಿದಳು.

ಡಾಕ್ಟರು ವಾಸುದೇವ ಪೈ ಪಕ್ಕದ ಕೋಣೆಯಲ್ಲಿದ್ದರು. "ಯಾರದ್ದೇ, ನಾಚಿಕೆಗೇಡಿತನ? ಗಂಟೆ ಏಳೂವರೆ ಆಗ್ತಾ ಬಂದ್ರೂ ಹೊರಳ್ತಾ ಇದ್ದೀಯಲ್ಲಾ, ಎಮ್ಮೆ ಹಾಗೆ" ಅಂದರು.

"ಏಳೂವರೆ ಹೇಗದು ಆಗೋದು, ನಾನೇಳದೆ? ಗಡಿಯಾರ ತಪ್ಪಿರಬೇಕು."

"ಗಡಿಯಾರಗಳನ್ನು ಮಾರಾಟಕ್ಕೆ ತರೋಮುಂಚೆ ಪರೀಕ್ಷೆ ಮಾಡಿದ ಹಾಗೆ ಹುಡುಗಿಯರನ್ನು ಮಂಟಪಕ್ಕೆ ತರೋಮುಂಚೆ ಬುರುಡೇ ಪರೀಕ್ಷೆ ಮಾಡ್ತಿದ್ರೆ ಕ್ಷೇಮವಿತ್ತು, ಲೋಕಕ್ಕೆ."

ಈ ಅಭಿಪ್ರಾಯಕ್ಕೆ ಸುಮಿತ್ರೆ ಮರುತ್ತರವಾಗಿ ಏನು ಹೇಳುತ್ತಿದ್ದಳೋ. ಅಷ್ಟರಲ್ಲಿ ಡಾಕ್ಟರು ಕೋಣೆಯ ಬಾಗಿಲನ್ನು ಧಡಕ್ಕನೆ ಹಾಕಿಕೊಂಡು ಬಚ್ಚಲುಮನೆಗೆ ಹೋದ್ದು ಕೇಳಿಸಿತು. ಆದ್ದರಿಂದ ಆಕೆ ಸಾವಕಾಶವಾಗಿ ಎದ್ದು ಆಕಳಿಸುತ್ತ ಹಾಸಿಗೆ ಒತ್ತರೆ ಮಾಡಿ, ಉಡುಪು ಸರಿಪಡಿಸಿಕೊಂಡು ಕನ್ನಡಿಯೆದುರು ನಿಂತು ಹಣಿಗೆಯಿಂದ ತಲೆ ಬಾಚಿಕೊಳ್ಳುತ್ತಿರುವಾಗ ಪಕ್ಕದ ಕೋಣೆಯಿಂದ "ನನ್ನ ಬ್ಲೇಡು?" ಎಂದು ಡಾಕ್ಟರ ಗರ್ಜನೆ

ಕೇಳಿಸಿ ತಟಸ್ಥಳಾದಳು. ನಾಲಿಗೆ ಕಚ್ಚಿಕೊಂಡು ಕತ್ತುಕೊಂಕಿಸಿ ಕೇಳುತ್ತ ನಿಂತಳು.

"ಸುಮಿತ್ರೀ, ಎಲ್ಲೀ ನನ್ನ ಬ್ಲೇಡು?"

"ನನಗೇನು ಗೊತ್ತು?"

"ಇಲ್ಲೀ ಇಟ್ಟಿದ್ದೆನಲ್ಲಾ, ಈ ಕ್ಷೌರದ ಪೆಟ್ಟಿಗೇಲಿ?"

"ಅಲ್ಲೀ ಇರಬೇಕು, ಎಲ್ಲಿ ಹೋಗುತ್ತೆ?"

"ಇಲ್ಲೀ ಇದ್ರೆ ಹುಡಕುತ್ತೀನೇನೇ, ಬೆಪ್ಪು?"

ಅವರು ಧಡಬಡನೆ ಇದ್ದ ಡ್ರಾವರುಗಳನ್ನೆಲ್ಲಾ ಎಳೆದು ದೂಡಿ ಮಾಡೋದನ್ನು ಕೇಳಿ ಸುಮಿತ್ರೆಗೆ ಗಾಬರಿಯಾಯಿತು.

"ಎರಡನೆ ಡ್ರಾವರಿಗೆ ಬೀಗ ಹಾಕಿದೆಯೋ ಇಲ್ಲವೊ?" ಎಂದು ಕೂಗಿ ಕೇಳಿದಳು.

"ಅದೇ ನಾನೀಗ ಎಳದ್ದು, ಬೀಗ ಹಾಕಲಿಲ್ಲ."

"ಅಯ್ಯೋ! ಎರಡನೇ ಸಾಲಿಂದೇ?"

"ಇಲ್ಲ, ಮೇಲಿಂದು, ಮೂರನೇ ಸಾಲಿಂದು. ಇದ್ರಲ್ಲೂ ಕಾಣೋದಿಲ್ಲ ವಲ್ಲ ಹಾಳಾದ್ದು."

"ಉಸ್ಸಪ್ಪ! ನಾನು ಹೇಳಿದ್ರಲ್ಲಿ ಬಳೆಸುರುಳಿಯಿತ್ತು. ನಿಮ್ಮ ಒಂದು ಹೊಲಸು ಬ್ಲೇಡಿನ ಅವಾಂತರಕ್ಕೆ ನನ್ನ ಬಳೆ ಕಲೆಕ್ಕನ್ನೇ ಪುಡಿಪುಡಿಯಾದರೆ? ಗ್ರಹಚಾರ!"

"ಅಲ್ಲಾ, ನಿನ್ನ ಬಳೇಂತಿಯುಲ್ಲಾ, ನನ್ನ ಬ್ಲೇಡು ಹುಡುಕೋದು ಬಿಟ್ಟು! ಬಾ ಇಲ್ಲಿ." ಎಂದು ಆರ್ಭಟಿಸಿದರು.

ಸುಮಿತ್ರೆ ತ್ವರ್ಯದಲ್ಲಿ ರವಿಕೆ ಹಾಕಿಕೊಂಡು ಗಂಡನಿದ್ದ ಕೋಣೆಯ ಬಾಗಿಲು ತೆರೆದು ಹೊಸಲು ದಾಟಿ, "ನೀವು ಸ್ವಲ್ಪ ದೂರ ಸರಿದು ನಿಂತರೆ ಹುಡುಕಿಕೊಡ್ತೇನೆ" ಅಂದಳು. ಎದ್ದು ಇನ್ನೂ ಮುಖ ತೊಳೆಯದಿದ್ದರೂ ಆಕೆ ವಾರಣವಾಗಿದ್ದಳು. ಹಣೆಯ ಮೇಲೆ ಕುಂಕುಮವಿಲ್ಲದಿದ್ದರೂ ಲಕ್ಷಣ ವಾಗಿದ್ದಳು. ಡಾಕ್ಟರು ಕೊಂಚ ದೂರ ಸರಿದಮೇಲೆ ಅಂಜಿದವಳಂತೆ ಅಳುಕುತ್ತ ಬಳುಕುತ್ತ ಡ್ರೆಸ್ಸಿಂಗ್ ಬ್ಯುರೋವನ್ನು ಸಮೀಪಿಸುವಾಗ ಡಾಕ್ಟರು ಫಕ್ಕನೆ ಮುಂದೆಬಂದು ಆಕೆಯ ರಟ್ಟೆ ಹಿಡಿದು ನಿಲ್ಲಿಸಿ,

" ಎಲ್ಲಾದರೂ ತೆಂಗಿನಮರಕ್ಕೆ ತಾಳಿಮರಕ್ಕೇಂತ ನೀನು ಈ ಸರ್ತಿಯೂ ತೆಗೆದ್ರೆ ಹೌದಾದ್ರೆ ನಿನ್ನ ಬೆನ್ನ ಚರ್ಮ ಸುಲೀತೇನೆ, ನೋಡು " ಎಂದು ನಿರಾಶೆಯಿಂದ ಗದರಿಸಿದರು. ಮೊದಲೊಂದು ಬಾರಿ ಹಿತ್ತಲಿನ ತೆಂಗಿನ ಮರಗಳಿಂದ ಕಾಯಿಗಳು ಬೆಳೆದ ಹಾಗೆಲ್ಲ ಕಳವಾಗುತ್ತಿರುವುದನ್ನು ಕಂಡು ಡಾಕ್ಟರು ಬೇಡಿ ಕಾಡಿ ಜಮೆ ಮಾಡಿಟ್ಟ ಹೊಸ ಬ್ಲೇಡುಗಳನ್ನು ಸುಮಿತ್ರೆ ಕೀರ ಕದ್ದು ಬುಡದಿಂದ ಕೈ ಎಟಕುವಷ್ಟು ಎತ್ತರದ ವರೆಗೆ ಮರಗಳಿಗೆ ಅಲ್ಲಲ್ಲಿ ಚುಚ್ಚಿಟ್ಟಿದ್ದಳು.

" ಈಗ್ಯಾವುದಕ್ಕೂ ನನ್ನ ಕೈ ಬಿಡಿ."

" ಹೋಗು ನಡಿ, " ಅನ್ನುತ್ತ ಡಾಕ್ಟರು ಆಕೆಯ ತೋಳುಗಳನ್ನು ಬಿಟ್ಟರು. ಆಕೆ ತಕ್ಷಣ ನೇರ ಹೋಗಿ ಬ್ಯೂರೋವಿನ ಮೇಲೆ ಕುಂಕುಮದ ಕರಡಿಗೆ ಬುಡದಲ್ಲಿದ್ದ ಬ್ಲೇಡನ್ನು ತೆಗೆದುಹಾಕಿದಳು.

" ನಿಮ್ಮ ಕಣ್ಣೆದುರಿಗೇ ಇತ್ತು. " ಅಂದಳು ತುಸು ನಗುತ್ತ.

" ಯಾಕದನ್ನು ತೆಗೆದ್ದು ? " ಎಂದು ಆಶ್ಚರ್ಯದಿಂದ ಕೇಳಿದರು.

" ಕುಂಕುಮ ಹಚ್ಚಿಕೊಳ್ಳಬೇಕೋ ಬೇಡವೋ ?" ಎಂತ ಕೇಳಿದಳು.

ಡಾಕ್ಟರಿಗೆ ಮತ್ತೇನೂ ತೋಚದೆ, " ನಡೀ ಇಲ್ಲಿಂದ, ಹೂಂ " ಅಂದರು. ಸುಮಿತ್ರೆ ಅನ್ಯಾಯಕ್ಕೆ ಆಹುತಿಯಾದ ನಿರಪರಾಧಿಯಂತೆ ನಿಧಾನವಾಗಿ ಅದೃಶ್ಯಳಾದಳು.

ಡಾಕ್ಟರಿಗೆ ಸುಮಿತ್ರೆ ಒಂದು Stethescope ನ ಹಾಗಿದ್ದಳು. ಯಾವಾಗ ನೋಡಿದರೂ ಅವರ ಜೇಬಿನಲ್ಲೋ ಕೊರಳಿಗೆ ನೇತುಕೊಂಡೋ ಇರುವಂತಿದ್ದಳು. ಪರಸ್ಪರ ಒಬ್ಬರನ್ನೊಬ್ಬರು ಬಿಟ್ಟಿದ್ದುದೇ ಅಪೂರ್ವ. ಆಕೆಯ ವಿಚಕ್ಷಣತೆಯ ಸಹಾಯವಿಲ್ಲದೆ ಅವರಿಗೆ ಮಾನವತೆಯ ಎದೆಬಡಿತದ ಪರೀಕ್ಷೆ ಸಾಧ್ಯವಾಗುತ್ತಿರಲಿಲ್ಲ; ಜೀವಿತದ ನಾಡಿ ಕೇಳಿಸುತ್ತಿದ್ದಿಲ್ಲ. ಅವರು ಬೆಂಗಳೂರಲ್ಲಿ ಮದುವೆಮಾಡಿಕೊಂಡು ಆಕೆಯೊಡನೆ ಮಂಗಳೂರ ತಮ್ಮ ಮನೆಗೆ ಬಂದಾಗ ತನ್ನ ಮನೆವೈದ್ಯರು ಎಂತಹ ಹೆಂಡತಿಯನ್ನು ಸಂಪಾದಿಸಿದ್ದಾರೆ ಎಂತ ನೋಡಿಕೊಂಡು ಬರೋದಕ್ಕೆ ಮಾಲತಿ ಹೋಗಿದ್ದಳು. ಅಲ್ಲಿ ಪ್ರಥಮ ದೃಷ್ಟಿಯಲ್ಲೇ ಆಕೆಗೂ ಸುಮಿತ್ರೆಗೂ ಆಪ್ತಗೆಳೆತನ ಅಂಟಿಕೊಂಡಿತ್ತು. ಮದುವೆಯಲ್ಲಿ ಏನೇನು ಚಿನ್ನ ಸಿಕ್ಕಿತು ಅಂತ ಮಾಲತಿ ಕೇಳಿದ್ದಕ್ಕೆ " ಸ್ವಲ್ಪ ಇರು,

ತೋರ್‍ಸ್ತೇನೆ" ಅನ್ನುತ್ತ ಒಳಗೆ ಓಡಿಹೋಗಿ ಮತ್ತೊಂದು ನಿಮಿಷದಲ್ಲಿ ಗಂಡನ ಕೈಹಿಡಿದು ದರದರ ಎಳೆದುತಂದು ಮಾಲತಿಯ ಮುಂದೆ ನಿಲ್ಲಿಸಿ ಇದೇ ನನಗೆ ಸಿಕ್ಕಿದ ಚಿನ್ನ," ಅಂದಿದ್ದಳು ಡಾಕ್ಟರು ವಾಸುದೇವ ಪೈಗಳಿಗೆ ನಾಚಿಕೆಯಿಂದಲೂ ಸಂತೋಷದಿಂದಲೂ ಮೊದಲೇ ಕೆಂಪಗಿದ್ದ ಮುಖ ಮತ್ತಷ್ಟು ಕೆಂಪೇರಿತ್ತು.

ಹೆಂಡತಿಯ ಕೈ ಬಿಡಿಸಿಕೊಂಡು, "ಹೇಗಿದೆ, ನೋಡ್ತೀಯಲ್ಲ ಸಿಕ್ಕಿದ ಸಾಮಾನು ?" ಎಂದು ಕೇಳಿದರು. ಅದಕ್ಕೆ ಮಾಲತಿ, "ಆನೆ ಕೊರಳಿಗೆ ಮಲ್ಲಿಗೆಮಾಲೆ ಇದ್ದ ಹಾಗಿದೆ" ಅಂದಿದ್ದಳು.

ಈ ಉಪಮೆ ಒಪ್ಪುತ್ತಿತ್ತು. ಪೈಗಳು ಮೆಡಿಕಲ್ ಕಾಲೇಜಿನ ಪ್ರಖ್ಯಾತ ಪುಂಡರಾಗಿದ್ದರು, ಮದುವೆಗೆ ಮುಂಚೆ ದೇಹದಲ್ಲಿ ದಾಂಡಿಗರಾಗಿದ್ದರು. ಆದರೆ ವೈಗೆ ಮುಖಕ್ಕೆ ತಕ್ಕ ಕಣ್ಣುಗಳಿರಲಿಲ್ಲ. ದಪ್ಪವಾದ ಮೂಗು, ವಿಶಾಲವಾದ ಎತ್ತರ ತಗ್ಗಾದ ಹಣೆ, ಮಾಂಸಯುತವಾದ ಕೆನ್ನೆಗಳ ನಡುವೆ ಹೂತುಹೋದ ಸೀಗೇಕಾಯಿ ಬೀಜಗಳಂತಿದ್ದುವು ಅವರ ಕಣ್ಣುಗಳು. ಸುಮಿತ್ರೆ, ಚಿಕ್ಕದಾಗಿ ಅಚ್ಚುಕಟ್ಟಾಗಿದ್ದ ಆಕಾರವುಳ್ಳವಳಾಗಿ, ಎಸಳಾದ ಕಣ್ಣು ಮೂಗು ತುಟಿಗಳಿದ್ದು, ಯಾವಾಗಲೂ ಶುಚಿಯಾದ ಶುಭ್ರವಾದ ಸಾಲಂಕೃತಳಾದ ಶಾಲಾ ಕನ್ನಿಕೆಯಂತೆ ತುಂಟತನವನ್ನು ಬೀರುತ್ತಿದ್ದಳು. ಆಕೆಯ ಆಕೃತಿ ಆರೋಗ್ಯನೆಟ್ಟಗಿದ್ದರೂ ಬುದ್ಧಿ ಕೊಂಚ ವಕ್ರವೆನ್ನಬಹುದು. ತನ್ನ ಮನೆಮಂದಿಯ ಶಿಷ್ಟಾಚಾರಗಳ ಹಾವಳಿಯನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಕಾಲೇಜು ಹಾಸ್ಟೆಲಿಗೆ ಸೇರಿದ್ದಳು. ಆದರೆ ಅಲ್ಲಿಯ ಹೊಸ ಹುಚ್ಚುಗಳು ಮನೆಯ ಹಳೆ ಹುಚ್ಚುಗಳಿಗಿಂತಲೂ ವಿಪರೀತವೆಂತ ತೋರಿ ಹಾಸ್ಟೆಲನ್ನೂ ಕಾಲೇಜನ್ನೂ ಎರಡನ್ನೂ ತೊರೆದಳು. ಕಲಿಯಬೇಕೆಂತ ಕಾಲೇಜಿಗೆ ಸೇರಿದ್ದೇ ಅಲ್ಲ; ವಿದ್ಯಾರ್ಜನೆಯಲ್ಲಿ ಆಸಕ್ತಿ ಇದ್ದರೆ ತಾನೆ. ಯಾರ ಅಂಕೆ ಅಡ್ಡಿ ಇಲ್ಲದೆ ಇಷ್ಟ ಬಂದಹಾಗೆ ಓಡಾಡುವ ಅನುಕೂಲತೆಗಾಗಿ ಕಾಲೇಜಿಗೆ ಸೇರಿದ್ದಳು. ಆಕೆಯ ತಾಯಿಗೆ ಆಕೆ ಕಾಲೇಜಿಗೆ ಸೇರುವುದು ಹಿತಕರವಾಗಿರಲಿಲ್ಲವೆಂಬುದೇ ಆಕೆ ಇಂಟರ್ ಕ್ಲಾಸಿಗೆ ಸೇರುವುದಕ್ಕೆ ಎರಡನೇ ಕಾರಣವಾಗಿತ್ತು. ಆಕೆ ಅಸಾಧಾರಣ ಮೂರ್ತಿಯಾಗಿದ್ದಳು. ಯಾವ ಸನ್ನಿವೇಶದಲ್ಲಿ ಏನು ಮಾಡಿಯಾಳು, ಏನು ಹೇಳಿಯಾಳೆಂತ ಯಾರಿಗೂ

ಊಹಿಸಲು ಸಾಧ್ಯವಿಲ್ಲ. ಆದರೆ ಏನೇ ಹೇಳಲಿ, ಏನೇ ಮಾಡಲಿ ಆಕೆಯ ಮುಖದಿಂದ ಹೊರಹೊಮ್ಮುವ ಉಲ್ಲಾಸದಿಂದಲೂ ಆಕೆಯ ಅಂತರ್ಯದ ನಿರ್ಮಲತೆಯಿಂದಲೂ ಯಾರೂ ಅಪಾರ್ಥ ಕಲ್ಪಿಸಿಕೊಳ್ಳುತ್ತಿರಲಿಲ್ಲ.

ಡಾಕ್ಟರು ಗಡ್ಡ ಕೆರೆದು ಮುಗಿದ ಮೇಲೆ ಸುಮಿತ್ರೆ ಇಬ್ಬರಿಗೆ ಬೇಕಾಗು ವಷ್ಟು ಬ್ರೆಡ್ಡು, ಜಾಮು, ಕಾಫಿಯನ್ನು ಮಲಗುವ ಕೋಣೆಯ ಮಗ್ಗುಲಿನ ಕೋಣೆಯಲ್ಲಿ ಒಂದು ಕೈಮೇಜಿನ ಮೇಲೆ ತಂದಿಟ್ಟಳು. ಇಬ್ಬರೂ ಎದುರೆದು ರಾಗಿ ಕುಳಿತು ಸ್ವಲ್ಪ ಕಾಲ ಸದ್ದಿಲ್ಲದೆ ತಿನ್ನುವುದರಲ್ಲೇ ಮಗ್ನರಾದರು. ಓರೆ ಗಣ್ಣಿನಿಂದ ಗಂಡನನ್ನೇ ನೋಡುತ್ತಿದ್ದ ಸುಮಿತ್ರೆಗೆ ಅವರು ಅಷ್ಟೊಂದು ನಿಧಾನವಾಗಿ ಮೆಲ್ಲುತ್ತಿರುವುದನ್ನು ಕಂಡು ಸಂಶಯವಾಯಿತು; ಆಶ್ಚರ್ಯ ವಾಯಿತು.

“ಇದೇನಿವತ್ತು ? ನೀವು ತಿನ್ನೋ ಡೌಲನ್ನು ನೋಡಿದರೆ ನಿಮ್ಮನ್ನ ನಂಬಿ ಕೊಂಡಿರೋ ಪಾಪಿಗಳನ್ನು ತೀರ ಮರೆತುಬಿಟ್ಟ ಹಾಗಿದೆ. ಡಿಸ್ಪೆನ್ಸರಿಗೆ ಹೊತ್ತಾಗಲಿಲ್ಲವೇನು ?”



ಡಾಕ್ಟರು ಇನ್ನಷ್ಟು ಭದ್ರವಾಗಿ ಒರಗಿದರು. ಕಾಲು ಕುಣಿಸುತ್ತ ಅತಿ ಹಿಗ್ಗಿನಿಂದ ಜಗಿಯುತ್ತಲೇ ಇದ್ದರು ವಿನಹ ಮಾತುಬೇರೆ ಆಡಲಿಲ್ಲ.

“ಇವೊತ್ತೊಂದಿನ ಹೋಗದಿದ್ರೆ ಏನಾಗುತ್ತೆ ?”

ಡಾಕ್ಟರು ಬಾಯಿ ತುಂಬಿಸಿಕೊಂಡಿದ್ದರೂ ಮುಗುಳ್ನಕ್ಕರು.

“ನಾಳೆ ಶನಿವಾರದ ರಜೆ ಇವತ್ತಿಗೆ ಹಾಕ್ಕೊಳ್ಳಿ. ಇವೊತ್ತಿನ ಬದಲಿಗೆ ನಾಳೆ ಹೋದರಾಯಿತು ಡಿಸ್ಪೆನ್ಸರಿಗೆ. ಆಗದೆ ? ಹೇಳೀಂದ್ರೆ !”

ಡಾಕ್ಟರ ಕಾಲಿನ ಕುಣಿತದೊಂದಿಗೆ ಹೆಗಲೂ ಹಾರಲಾರಂಭಿಸಿತು. ಸುಮಿತ್ರೆಗೆ ತಡೆಯಲಾರದ ಕೋಪ ಬಂದಂತೆ ಹಲ್ಲು ಕಚ್ಚಿಕೊಂಡು ಮೇಜಿನ ಬುಡಕ್ಕಿದ್ದ ಅವರ ಕಾಲನ್ನು ಒದ್ದಳು. ಆದರೂ ಅವರು ಬಾಯಿ ಬಿಡಲಿಲ್ಲ.

“ದಮ್ಮಯ್ಯ, ಇನ್ಮುಂದೆ ನಿಮ್ಮ ಬ್ಲೇಡಿನ ಸುದ್ದಿಗೇ ಹೋಗೋದಿಲ್ಲ” ಅಂತ ಬೇಡಿದಳು. ಅದೂ ನಿಷ್ಪ್ರಯೋಜನವಾದ್ದನ್ನು ನೋಡಿ, “ಕೊತಿರಿ, ಹಲ್ಲುಕಿರೀತಾ, ಮೆಲುಕು ಹಾಕ್ತಾ. ಇಂದು ಡಾಕ್ಟ್ರು ಬರೋದಿಲ್ಲ; ಅವರಿಗೆ ಸ್ವಸ್ಥವಿಲ್ಲಾಂತ ಚೀಟು ಬರೆದು ಕಳುಹಿಸುತ್ತೇನೆ, ಈ ಕ್ಷಣ.” ಅನ್ನುತ್ತ ಕಾಫಿ ಕುಡಿಯದೆ ಎದ್ದು ಬಾಗಿಲ ಬಳಿ ಹೋಗುವಷ್ಟರಲ್ಲಿ ಹೊರಗಿಂದ ಯಾರೋ ಬಾಗಿಲು ತಟ್ಟಿದ ಸದ್ದಾಯಿತು. ಒಂದು ಹೆಜ್ಜೆ ಹಿಮ್ಮೆಟ್ಟಿ,

“ ಅಯ್ಯೋ, ನೀವೇ ಬನ್ನಿ, ನನ್ನಿಂದಾಗದು ” ಎಂಬಂತೆ ತಿರುಗಿ ಗಂಡನನ್ನು ನೋಡಿದಳು.

“ ಬಾಗಿಲು ತೆರೆಯು ಯಾರೂಂತ ನೋಡೇ. ಕಂಭದ ಹಾಗೆ ನಿಂತಿದ್ದೀಯಲ್ಲ ” ಅಂದರು.

ಆದರೆ ಸುಮಿತ್ರೆ ಮುನ್ನಡೆಯುವ ಬದಲು ಹಿಂತಿರುಗಿ ಗಂಡನ ಬಳಿಗೆ ಓಡಿಬಂದು, “ ಇವೊತ್ತು ಏನು ವಾರ, ಶುಕ್ರವಾರವೋ, ಶನಿವಾರವೋ ತಕ್ಷಣ ಹೇಳಿ ” ಅಂತ ಕಿವಿಹತ್ತಿರ ಬುಸುಗುಟ್ಟಿದಳು.

“ ವಾಸೂ ” ಅಂತ ಕೂಗು ಕೇಳಿಸಿತು ಹೊರಗಿಂದ. ಡಾಕ್ಟರು ಆ ಸ್ವರ ಗುರುತಿಸಿ ನೆಗೆದೆದ್ದು ಪಕ್ಕದಲ್ಲಿದ್ದ ಸುಮಿತ್ರೆಯನ್ನು ಹಿಡಿದಪ್ಪಿ ಆಶ್ಚರ್ಯದಿಂದ ಅರೆತೆರೆದ ಆಕೆಯ ತುಟಿಗಳಿಂದ ಮುತ್ತೊಂದನ್ನು ಕಿತ್ತುಕೊಂಡು ದಢ ದಢ ಹೋಗಿ ಬಾಗಿಲು ತೆರೆದರು. ಗೋಪಿನಾಥ ಒಳಗೆ ಬರುತ್ತ ಗಂಡ ಹೆಂಡಿರ ಮುಖವನ್ನು ಸೂಕ್ಷ್ಮವಾಗಿ ಪರಿಶೀಲಿಸಿದ.

“ ಬರಬಾರದ ಹೊತ್ತಿಗೆ ಬಂದೇಂತ ತೋರುತ್ತೆ ” ಎಂದನ್ನುತ್ತ ಸಸುನಕ್ಕ.

“ ಈ ಮೊದ್ಲೇ ಹೇಳದೆ ಕೇಳದೆ ಬರಲಿಲ್ವೇನೋ ? ಬಾ, ಕೂತುಕೋ ” ಅನ್ನುತ್ತ ಡಾಕ್ಟರು ಆತನ ಹೆಗಲಮೇಲೆ ಒಂದು ಗುದಿಗೆ ಏಟು ಬಿಗಿದರು ಪ್ರೀತಿಯಿಂದ. ಇದೇ ರೀತಿ ಇವರು ಪ್ರೀತಿ ತನ್ನ ಮೇಲೆ ತೋರಿಸಿದರೆ ಬೆನ್ನು ಪುಡಿಯಾಗೋದೇ ಸರಿ ಅಂತಂದುಕೊಂಡಳು ಸುಮಿತ್ರೆ. ಆದರೆ ಗೋಪಿನಾಥನಿಗೆ ಈ ಪೆಟ್ಟು ನಾಟಿದಹಾಗೆ ತೋರಲಿಲ್ಲ. ನಿಧಾನವಾಗಿ ಕುಳಿತು,

“ ಯಾರಿಗೆ ಗೊತ್ತು ? ಎಲ್ಲಾ ಸಮಯ ಒಂದೇ ರೀತಿ ಇರೋದಿಲ್ಲ. ಅಲ್ವೇ ? ” ಅನ್ನುತ್ತ ಪಕ್ಕದಲ್ಲಿ ಕುಳಿತಿದ್ದ ಸುಮಿತ್ರೆಯನ್ನು ಪ್ರಶ್ನಿಸಿದ.

“ ಅವರ ಹತ್ರ ಕೇಳಿ. ಅಮೃತಗುಳಿಗೆ ವಿಷಗುಳಿಗೆ ಎಲ್ಲಾ ಅವರಿಗೇ ಗೊತ್ತು ” ಎಂದು ಆಕೆ ಗಂಡನನ್ನು ಕಣ್ಸನ್ನೆಮಾಡಿ ಸೂಚಿಸಿದಳು.

“ ಅಂತೂ ನಾವಿರೋವರೆಗೆ ನೀವು ಇದ್ದ ಅಲ್ಪಸ್ವಲ್ಪ ಬುದ್ಧೀನೂ ಖರ್ಚು ಮಾಡೋದಿಲ್ಲ. ಇರಲಿ. ಗೋಪಿಗೆ ಜವಾಬು ಕೊಡೋಣ ಪುರಸೊತ್ತಿನಲ್ಲಿ. ಸದ್ಯ ನೀನು ಹೋಗಿ ಕಾಫಿ ತಿಂಡಿ ತಗೊಂಬಾ. ”

“ ಟಿಫಿನು ಬೇಕಿಲ್ಲ. ಒಂದಿಷ್ಟು ಕಾಫಿ ತಂದ್ರೆ ಅಷ್ಟೇ ಸಾಕು.”

ಸುಮಿತ್ರೆ ಹೋದಮೇಲೆ ಡಾಕ್ಟರು, “ ಏನು ಬಂದಿಯೋ ? ” ಎಂದು ಕೇಳಿದರು.

“ ಇದ್ದೇ ಇದೆಯಲ್ಲ ಅಮ್ಮಂದು ವಾತ ಕೊಂಚ ನೋವದೆ ಅಂದಳು ಬೆಳಿಗ್ಗೆ.”

“ ಛಳಿ ಸಮಯ. ಪರವಾಯಿಲ್ಲ. ಇಲ್ಲೇ ಇದೆ ಲಿನಿಮೆಂಟು. ಆದರೆ ತುಂಬ ವಿಶ್ರಾಂತಿ ಬೇಕು. ನೋಡು, ಚಾಕರಿಗೆ ಯಾರನ್ನಾದ್ರೂ ಇಟ್ಕೋ.”

“ ಅಯ್ಯೋ, ಅದೆಲ್ಲ ಆಗಿಹೋಗೋ ಮಾತಲ್ಲ. ಇರೋದು ನೀವಿಬ್ರು. ನಿಮಗೆರಡು ಹೊತ್ತು ಮಾಡಿ ಹಾಕೋದಕ್ಕೂ ನನ್ನ ಕೈಲಾಗದೆ ಹೋದ್ರೆ ನಾನಿರೋದ್ಯಾತಕ್ಕೆ, ಅಂತಾಳೆ.” ಅನ್ನುವಾಗಲೇ ಸುಮಿತ್ರೆ ಕಾಫಿ ತಂದು ಕೊಟ್ಟು, “ ನಿಮ್ಮಮ್ಮ ಹೇಗಿದ್ದಾರೆ ? ” ಎಂದು ಕುಶಲಪ್ರಶ್ನೆ ಮಾಡಿದಳು.

“ ಅದೇ ಹೇಳ್ತಾ ಇದ್ದೆ. ವಾತದ ಉಪದ್ರ ಈ ಸಲ ಆಗಲೇ ಸುರುವಾದಂತಿದೆ. ”

“ ಹಾಗೇನು ? ಪಾಪ! ಅದಕ್ಕೊಂದು ಕೆಲಸ ಮಾಡಿ. ಈ ಸಲ ಇವರ ಕೈಲಿ ಹಚ್ಚಿಸಿಕೊಳ್ಳೋದು, ಚುಚ್ಚಿಸಿ ಕೊಳ್ಳೋದು ಒಂದೂ ಬೇಡ. ಆಯುರ್ವೇದ ಔಷಧಮಾಡಿ. ವಾತಕ್ಕೆ ಅದೇ ವಾಸಿ.”

ಡಾಕ್ಟರ ಗಟ್ಟಿಯಾಗಿ ನಕ್ಕರು. ಅದಕ್ಕೆ ಸುಮಿತ್ರೆ “ ಬಂದೀತು ನಗೆ, ಹೊಟ್ಟೆ ತುಂಬಿದ ಮೇಲೆ. ಗಂಡಸರನ್ನ ಬೆಳಗಾದ ತಕ್ಷಣ ಬೇಕಾದಷ್ಟು ಹೊಟ್ಟೆಗೆ ಹಾಕಿಬಿಟ್ಟು ಹೊರಗೆ ದಬ್ಬಿ ಬೀದಿಬಾಗಿಲು ಹಾಕಿಕೊಂಡು ಹಾಯಾಗಿರೋದೇ ಸುಖ, ಹೆಂಗಸರಿಗೆ. ನೀವೇನಂತೀರಿ ?” ಎಂದು ಗೋಪಿನಾಥನನ್ನು ನೋಡಿದಳು.

“ ಹೊಟ್ಟೆ ಹಸಿವು ಒಂದನ್ನು ಅಡಗಿಸಿ ಬಿಟ್ಟು ಅಟ್ಟಬಿಟ್ರೆ ಸಾಕೇ? ಲಾಲಸೆಯ ಬೆಂಕಿಗೆ ನಾಲ್ಕಾರು ನಾಲಗೆಗಳು. ” ಎಂದುತ್ತರ ಕೊಟ್ಟನು.

“ನಮ್ಮ ಎಲ್ಲಾ ಹಸಿವನ್ನೂ ಹೆಂಗಸರೇ ನೊಂದಿಸಬೇಕು. ಅದೇ ಪಜೀತಿ” ಎಂದು ಡಾಕ್ಟರು ವಿಷಾದಿಸಿದರು.

“ ಮಾತ್ರವಲ್ಲ. ಹೆಂಗಸರಿಗಾದರೂ ಗಂಡಸರನ್ನ ಬಿಟ್ಟು ಕಳೆದೀತೆ ? ” ಎಂದು ಗೋಪಿನಾಥ ಮುಂದರಿಸಿದನು.

“ ನೀವು ತಿಳಕೊಳ್ಳೋದು ಹಾಗೆ ಅನ್ನಿ; ನಿಮ್ಮಿಂದಲೇ ಜಗವೆಲ್ಲ ಬೆಳಗಾಗೋದೂಂತ. ಈ ಭೂದೇವಿ ಮಕ್ಕಳು, ಹಾಗೆ ನೋಡಿದರೆ, ನಾವು; ಹೆಂಗಸರು. ನೀವಲ್ಲ. ನೀವು ಅನ್ಯರು, ಪರಕೀಯರು ಪರದೇಶಿಯರು. ನಾವು ಜಾಗ ಕೊಟ್ಟರುಂಟು ನಿಮಗೆ; ಇಲ್ಲವಾದರೆ ಇಲ್ಲ. ” ಎಂದು ಸುಮಿತ್ರೆ ಅಂಜದೆ ಪ್ರತಿಪಾದಿಸಿದಳು.

“ ಆದರೆ ಈ ನಿನ್ನ ಪೃಥ್ವೀಬಾಯಿಯವರಿಗೆ ಹಗಲೊಬ್ಬರು ಭಾಸ್ಕರ ರಾಯರು, ರಾತ್ರಿಯೊಬ್ಬರು ಚಂದ್ರರಾಯರು ಬೇಕೇಬೇಕಲ್ಲ. ಅದಕ್ಕೇನು ಹೇಳ್ತೀ ?” ಎಂದು ಡಾಕ್ಟರು ಕೆಣಕಿದರು.

“ ಓಹೋ, ಸೂರ್ಯಚಂದ್ರ ನಕ್ಷತ್ರಾದಿಗಳಂದ್ರೆ ನಿಮ್ಮ ವಂಶವೇನೋ ! ಅವೂ ನಮ್ಮ ಜಗತ್ತಿಗೆ ಸೇರಿದ್ದೇ. ಜಗತ್ತಿನ ಕಣ್ಣುಗಳು. ”

“ ಗೋಪಿ, ನಮಗೆ ಈ ಭೂಮಂಡಲದಲ್ಲಿ ಮಾತ್ರ ಸ್ಥಾನವಿಲ್ಲಾಂತ ಅರ್ಥ ಮಾಡಿಕೊಂಡಿದ್ದೆ. ಆದರೆ ಈಗ ನೋಡುವಾಗ ಜಗತ್ತಿನಲ್ಲೆಲ್ಲೂ ಸೀಟಿಲ್ಲಾಂತ ತೋರುತ್ತಲ್ಲಾ ! ಎಲ್ಲಾ ಸ್ತ್ರೀಯರಿಗೇ ರಿಸರ್ವ್ ಆದ ಹಾಗಿದೆಯಲ್ಲಾ ! ಇನ್ನೇನು ಗತಿ !” ಎಂದು ಡಾಕ್ಟರು ಗಾಬರಿಗೊಂಡರು.

“ ಆದರೆ ಇಷ್ಟೊಂದು ನಿಜ. ವಾಸೂ ನಮಗೆ ಹೆಣ್ಣು ಮಕ್ಕಳು ಜಾಗಾ ಮಾಡಿ ಕೊಟ್ಟು, ಕಟ್ಟಿಹಾಕಿ, ಸಾಕಿದರೆ ಉಂಟು ಈ ಮಣ್ಣಿನ ಮೇಲೆ ಸ್ಥಾನ. ಇಲ್ಲವಾದ್ರೆ ನಾವು ಸದಾ ತಿರುಕುಳಿಗಳೇ : ಕಂಬಿ ಕಿತ್ಕೊಂಡು ಊರಿಂದೂರಿಗೆ, ವಿಚಾರದಿಂದ ವಿಚಾರಕ್ಕೆ ” ಎಂದು ಗೋಪಿನಾಥ ಸಮರ್ಥಿಸಿದನು.

“ ನಿಮ್ಮ ಹುಟ್ಟು ಸ್ವಭಾವವೇ ಹೀಗೆಂತ ಗೊತ್ತಿದ್ದ ಮೇಲೆ ಹೆಂಗಸರ ಬಲೆಗೆ ಸಿಕ್ಕಿಬಿದ್ದು ಸಂಸಾರದಲ್ಲಿ ಪೇಚಾಡೋದು ಯಾತಕ್ಕೆ? ಸಂಸಾರದಿಂದ ಹೊರಬೀಳೊದಕ್ಕೂ ನಾವು ಕಲಿಸಬೇಕೆ ?”

“ ಇಲ್ಲ, ಇಲ್ಲ. ಸಂಸಾರ ಸಾಗರವೋ ಕೂಪವೋ, ಏನೇ ಇರಲಿ. ಅದರಲ್ಲಿ ಮುಳುಗೋದಕ್ಕೆ ಹೆಂಗಸರ ಸಹಾಯವೇ ವಿನಹ ಅದರಿಂದ ಪಾರಾಗುವುದಕ್ಕೆ ಸರ್ವಥಾ ಇಲ್ಲ. ಬಿದ್ದಮೇಲೆ ನಮಗೆ ದೇವರೇ ಗತಿ. ಹೆಚ್ಚೇಕೆ? ದೊಡ್ಡದಾಗಿ ಹೇಳಿದರೆ ನಾವು ಪರಡೋದು, ಮುಕ್ಕರಿಸೋದು, ನೀವು ಹೇಳಿದಂತೆ ಪೇಚಾಡೋದು. ಎಲ್ಲವೂ ದೇವರನ್ನ ಹುಡುಕಿಕೊಂಡು ಹೋಗುವ ಯಾತ್ರೆಯ ವಿವಿಧಾನುಭವಗಳೇ. ಗಂಡಸಾದವನಿಗೆ

ಈ ಲೋಕದಲ್ಲಿ ಪರಿಪೂರ್ಣ ತೃಪ್ತಿಯನ್ನೀಯುವ ವಸ್ತುವೇ ಇಲ್ಲ ಅನ್ನಬಹುದು. ಅಲ್ವೇನೋ ವಾಸು ?

“ ಶಹಭಾಸ್ !” ಅಂದರು. ಡಾಕ್ಟರು ಹಿಗ್ಗುತ್ತ.

“ ನೋಡಿದಿರಾ, ನಿಮ್ಮಿಬ್ಬರ ಅಭಿಮತವೂ ಒಂದೇ ” ಎಂದು ಗೋಪಿನಾಥ ಸುಮಿತ್ರೆಗೆ ಹೇಳಿದನು.

“ ಅವರು ‘ ಶಹಭಾಸ್ ’ ಅಂದದ್ದು ಯಾತಕ್ಕೇಂತ ತಿಳಕೊಂಡ್ರಿ ? ನನ್ನ ಪಾಲಿನ ತಿಂಡಿನೂ ಗಿಟ್ಟಿಸಿಕೊಂಡ ಸಂತೋಷಕ್ಕೆ; ತಿಂದು ತೇಗಿದ್ದು. ನಿಮ್ಮ ಭಾಷಣಕ್ಕಲ್ಲ.” ಅನ್ನುತ್ತ ಸುಮಿತ್ರೆ ಗಂಡನನ್ನು ಮುದ್ದಿನಿಂದ ಕದ್ದು ನೋಡಿದಳು. ಗೋಪಿನಾಥನಿಗೆ ನಗು ಬಂತು. ಆತಗೆ ತನ್ನ ಈ ಇಬ್ಬರು ಗೆಳೆಯರ ಪರಸ್ಪರ ಪ್ರೇಮಮಯ ಮಾತಿನ ತಿವಿದಾಟ ಕಚ್ಚಾಟವೆಂದರೆ ಅತಿ ಸಂತೋಷ. ಅವರ ಇಂಥ ಮಾತಿನ ಮಲ್ಲಯುದ್ಧದಲ್ಲಿ ತಾನೂ ನುಗ್ಗಿಕೊಂಡು ಅವರ ಸರಸ ಸಂಭಾಷಣೆಯಲ್ಲಿ ತಾನೂ ಓಕುಳಿಯಾಡಿ ತನ್ನ ಬಂಟತನವನ್ನು ಆಗಾಗ ಪರಿಹರಿಸಿಕೊಳ್ಳುತ್ತಿದ್ದನು. ಅವರಿಗೂ ಗೋಪಿನಾಥನೆಂದರೆ ಅಮಿತ ಪ್ರೀತಿ, ವಿಶ್ವಾಸ. ಆತನೆದುರಿಗೆ ಸಂಕೋಚವಿಲ್ಲದೆ ವರ್ತಿಸುತ್ತಿದ್ದರು. ಮಾತ್ರವಲ್ಲ, ಆತನಿದ್ದಾಗ ಅವರ ಹರಟೆಗೊಂದು ಹೊಸ ಹುರುಪು ಬರುತ್ತಿತ್ತು. ಗಂಡ ಹೆಂಡಿರಿಬ್ಬರೂ ಆತನನ್ನು ಏಕರೀತಿಯಲ್ಲಿ ತನ್ನ ಸ್ನೇಹಮಯ ಮನ್ನಣೆಯಿಂದ ಗೌರವಿಸುತ್ತಿದ್ದರು. ಆತ ಒಬ್ಬಂಟಿಗ, ಆತನ ನಿತ್ಯಜೀವನದಲ್ಲಿ ಸಹಭಾಗಿನಿಯಿಲ್ಲ, ಆತನ ಬದುಕಿನಲ್ಲಿ ಸಾರವಿಲ್ಲ, ಕಾಣುವುದಕ್ಕೆ ತ್ಯಾಗಿಯಂತಿದ್ದರೂ ಕರೆದರೆ ಭೋಗಿ ಎಂತ ಸುಮಿತ್ರೆಗೆ ತೋರಿ, ಆತನಲ್ಲಿ ಒಂದು ಅಪೂರ್ವ ಕರುಣಾಜನಿತವಾದ ಮಮತೆಯನ್ನಿಟ್ಟಿದ್ದಳು. ಆಕೆಗೆ ಆತ ಅರ್ಥಮಾಡಲಾಗದ ಒಗಟೆಯಾಗಿದ್ದನು, ಒಂದೊಂದು ವೇಳೆ ಹರ್ಷದಿಂದ ಮಾತನಾಡುತ್ತಿರುವಂತೆ ಇದ್ದಕ್ಕಿದ್ದ ಹಾಗೆ ಪಕ್ಕದ ಪರದೆಯ ಹಿಂದೆ ಮರೆಯಾದ ನಟನಂತೆ ಧ್ಯಾನ ಪರನಾಗಿ ಮಾತು ತೇಲಿಸಿಬಿಟ್ಟು ಎಲ್ಲೆಲ್ಲೋ ಮಗ್ನನಾಗುವನು. ಆತನ ಮಾತಿನಲ್ಲಿ ಹಿರಿತನದ ಬಿಗುವೂ ಭಾರವೂ ತೋರಿ ಬಂದರು ಕೂಡ ಆತನ ನಗೆಯಲ್ಲಿ ಹುಡುಗಾಟಿಕೆಯ ನೈಜ ಸವಿಯಿತ್ತು. ಆತಗೂ ಸುಮಿತ್ರೆಯ ನಿಷ್ಕಪಟ ನಿರ್ದಾಕ್ಷಿಣ್ಯ ರೀತಿ ನೀತಿಗಳನ್ನು ಕಂಡರೆ ಅಕ್ಕರೆ, ಅಭಿಮಾನ. ಹೀಗಾಗಿ ಈ ಮೂವರು ಸಲಿಗೆಯಿಂದ ಒಡನಾಡುವುದು ಸ್ವಾಭಾವಿಕವಾಗಿತ್ತು.

"ನೀನು ಇದೇ ರೀತಿ ಟಿಫಿನುಹೊತ್ತಿಗೆ ಸರಿಯಾಗಿ ಬರ್‍ತಾ ಇರು, ಗೋಪಿ. ಬಂದು ಇವಳನ್ನು ಮಾತಿಗೆಬ್ಬಿಸಿಬಿಡು. ಆಗ ನಿಮ್ಮ ತರ್ಕ ಕೇಳಿದ ಹಾಗೂ ಆಗುತ್ತೆ, ಒಂದಕ್ಕೆ ಇಮ್ಮಡಿ ತಿಂಡೀನೂ ಗಿಟ್ಟಿಸಿದ ಹಾಗಾಗುತ್ತೆ." ಅಂದರು ಡಾಕ್ಟರು.

"ಸಾಕೆ, ನಿಮ್ಮ ಮಾತಿಗೆ ಸಿಕ್ಕಿದ ಮರ್ಯಾದೆ?" ಎಂದು ಸುಮಿತ್ರೆ ಗೋಪಿನಾಥನನ್ನು ಚುಚ್ಚಿದಳು.

"ಸುಮಿತ್ರೆ, ನೀನು ಹೀಗೆ ಹುಚ್ಚುಹುಚ್ಚಾಗಿ ಮಾತಾಡಿ ನಿಮ್ಮ ಜಾತಿಯ ಮಾನವನ್ನೇ ಕಳಕೊಳ್ಳುತ್ತಿ." ಅಂತ ಡಾಕ್ಟರು ಎಚ್ಚರಿಸಿದರು.

"ಅವರ ಜಾತಿಯ ಮೇಲೆ ನನಗಿರುವ ಅಭಿಮಾನ ಅಷ್ಟು ಸುಲಭದಲ್ಲಿ ನಷ್ಟವಾಗದೆಂತ ಅವರಿಗೆ ಗೊತ್ತು." ಎಂತ ತನಗೆ ತಾನೇ ಅಂದುಕೊಂಡಂತೆ ಗೋಪಿನಾಥ ಹೇಳಿದ. ಅವನ ಮುಖದ ಮೇಲೆ ಚಿಮ್ಮುತ್ತಿದ್ದ ಮಂದಹಾಸ ವನ್ನು ನೋಡಿ ಸುಮಿತ್ರೆಗೆ ತಾನು ಬಹಳ ಸಮಯದಿಂದ ಕೇಳಬೇಕೆಂದಿದ್ದ ಪ್ರಶ್ನೆಯನ್ನು ಆಗಲೇ ಕೇಳಿ ಬಿಡಬೇಕೆಂತನಿಸಿ,

"ನೀವು ಎರಡನೇ ಲಗ್ನ ಯಾತಕ್ಕೆ ಮಾಡಿಕೊಳ್ಳಲಿಲ್ಲ, ಹೇಳಿ" ಅಂದಳು.

ಈ ಅನಿರೀಕ್ಷಿತ ಪ್ರಶ್ನೆ ಗೋಪಿನಾಥಗೆ ಮುಖದ ಮೇಲೆ ನೀರ್ಗುಳ್ಳೆ ಯೊಂದು ಸಿಡಿದ ಹಾಗಾಯಿತು. ಒಂದು ಕ್ಷಣ ಅವಾಕ್ಕಾದನು. ಡಾಕ್ಟರ ರಿಗೂ ಅಸಮಾಧಾನವಾಗಿ ಹೆಂಡತಿಯನ್ನು ದುರುಗಟ್ಟಿ ನೋಡಿದರು. ಆದರೆ ಆಕೆ ನಿರಪರಾಧಿಯಂತೆ ಗೋಪಿನಾಥನನ್ನೇ ನೋಡುತ್ತಿದ್ದವಳು ಮುಖ ತಿರುಗಿಸಲೇ ಇಲ್ಲ. ಗೋಪಿನಾಥನ ಹೆಂಡತಿ ತೀರಿಕೊಂಡು ಮೂರು ವರ್ಷ ಗಳು ದಾಟಿದ್ದರೂ ಆತ ಎರಡನೇ ಲಗ್ನ ಮಾಡಿಕೊಂಡಿರಲಿಲ್ಲ. ಈ ವಿಷಯ ವನ್ನು ಆತನೊಡನೆ ಪ್ರಸ್ತಾಪಿಸಲು ಡಾಕ್ಟರು ಹಿಂಜರಿಯುತಿದ್ದರು.

ಗೋಪಿನಾಥ ನಗುತ್ತ, "ವಯಸ್ಸಾಗುತ್ತ ಬಂತು. ಮಗುವೊಂದಿದೆ ಬೇರೆ" ಅಂದನು.

"ವಯಸ್ಸು? ಯಾರ ಹತ್ರವೋ ಈ ಸುಳ್ಳು?" ಎಂದು ಡಾಕ್ಟರು ಗದರಿಸಿದರು.

"ದೇಹಕ್ಕಲ್ಲ; ಮನಸ್ಸಿಗೆ ಅವರಂದಿದ್ದು." ಎಂದು ಸುಮಿತ್ರೆ ಮಹಾ ತಿಳಿದವಳಂತೆ ಅರ್ಥ ಹೇಳಿ ಆ ಮೇಲೆ, "ಬೇರೇನೂ ಕಾರಣವಿಲ್ಲವೇನೋ" ಎಂದು ಗೋಪಿನಾಥನನ್ನು ಕೇಳಿದಳು.

" ಬೇರೆನು ಕಾರಣ ? ಅನುರೂಪರಾದ ಕನ್ನೆಯರು ಸಾವಿರಕ್ಕೊಬ್ಬರು. ಅಂಥವರು ಡಾಕ್ಟರ ಹಾಗೆ ಭಾಗ್ಯವಂತರ ಕೈ ಹಿಡೀತಾರೆ. "

ಸಂತೋಷದಿಂದ ಸುಮಿತ್ರೆ ಮುಖದ ಬಣ್ಣ ಏರಿದರೂ ಏನನ್ನೋ ಯೋಚಿಸುವಂತೆ ಅನ್ಯಮನಸ್ಕಳಾದಳು. ಡಾಕ್ಟರು ಗೋಪಿಬೆನ್ನಿಗೆ ಒಂದೇಟು ಬಾರಿಸಿ,

" ಭಲೆ, ಗೋಪಿ ! ಎಷ್ಟು ನಯವೋ ನಿನ್ನ ನಾಲಿಗೆ !" ಅಂದರು.

" ಇನ್ನು ಕೂತರೆ ನಾಲಿಗೆ ತೋರಿಸೂಂತಿ, ಹೋಗ್ತೇನೆ. ಬಹಳ ಹೊತ್ತಾಯಿತು. ಬಂದು " ಅನ್ನುತ್ತ ಗೋಪಿನಾಥ ಎದ್ದು ನಿಂತನು. ದಂಪತಿಗಳು ಎದ್ದು ನಿಂತರು.

" ಬರಲೆ ? ಇಲ್ಲಿ ಬಂದರೆ ಹೊತ್ತು ಹೋದ್ದೇ ಗೊತ್ತಾಗೋದಿಲ್ಲ. "

" ನೀವು ಇವೊತ್ತು ಬಂದು ಮಾಡಿದ ಉಪಕಾರ ಅಷ್ಟಿಷ್ಟಲ್ಲ. ನೀವಲ್ಲದಿದ್ರೆ ಇವರು ಅರ್ಧಗಂಟೆಗೆ ಮೊದಲೇ ಡಿಸ್ಪೆನ್ಸರಿಗೆ ಹೋಗಿ ಬಿಡುತ್ತಿದ್ರು " ಅಂದಳು ಸುಮಿತ್ರೆ ಕೃತಜ್ಞಳಾಗಿ.

" ಡಿಸ್ಪೆನ್ಸರಿ ? ಇದೋನೋ ನಾಸು ? ಶನಿವಾರವೂ ಡಿಸ್ಪೆನ್ಸರಿ ಇಟ್ಟು ಕೊಂಡಿದ್ದೀಯೇನೋ? "

"ಏನೋ, ಇವತ್ತೊಂದಿನ ಮಾತ್ರ. ಆ ಲಿನಿಮೆಂಟು ಕೊಡ್ತೇನೆ.ಮುಂದೆ ನಡಿ." ಅನ್ನುತ್ತ ಡಾಕ್ಟರು ತವಕದಿಂದ ಆತನನ್ನು ದೂಡಿಕೊಂಡು ಕೋಣೆಯ ಹೊರಗೆ ಹೋದರು. ಲಿನಿಮೆಂಟು ಕೊಟ್ಟು ಗೋಪಿನಾಥನನ್ನು ಕಳುಹಿಸಿ ಹಿಂತಿರುಗಿ ಕೋಣೆಗೆ ಬರುವಾಗ ಸುಮಿತ್ರೆ ಇರಲಿಲ್ಲ. ಡ್ರೆಸ್ಸಿಂಗ ರೂಮಿಗೆ ಹೋಗಿ ನೋಡಿದರು; ಅಲ್ಲೂ ಇರಲಿಲ್ಲ. ಬೆಡ್ರೂಮಿಗೆ ಹೋಗಿ ಹುಡುಕಿದರು; ಸಿಗಲಿಲ್ಲ. ಕೂಗಿ ಕರೆದರು ; ಉತ್ತರವಿಲ್ಲ. ತಿರುಗಿ ಡ್ರೆಸ್ಸಿಂಗ ರೂಮಿಗೆ ಬಂದು ನೋಡುವಾಗ ಮೇಜಿನ ಮೇಲೆ ಕ್ಷೌರದ ಬ್ರಶ್ಶಿನ ಬುಡಕ್ಕೆ ಒಂದು ಚಿಕ್ಕ ಕಾಗದವಿತ್ತು. ತೆಗೆದು ವಿಸ್ಮಯದಿಂದ ಓದಿದರು. " ನೀವು ಡಿಸ್ಪೆನ್ಸರಿಯಿಂದ ಮರಳಿ ಬರುವಷ್ಟರಲ್ಲಿ ಬಂದುಬಿಡುತ್ತೇನೆ. ಏನೋ ಇವತ್ತೊಂದು ದಿನ ಮಾತ್ರ. "

೫

ಗೋಪಿನಾಥ ಡಾಕ್ಟರ ಮನೆಯಿಂದ ಬಂದು ಕಾಲು ತೊಳಕೊಳ್ಳುವುದಕ್ಕೆ ಬಚ್ಚಲಿಗೆ ಹೋಗುವಾಗ ಅಡುಗೆಮನೆಯ ಹೊರಗಿನ ಜಗಲಿಯಲ್ಲಿ ಆತನ

ಘೂರುವರೆ ವರ್ಷದ ಮಗಳು ಪ್ರಭೆ ಕೈತೊಳೆಯುವ ಸೀರಿನ ಕವಳಿಗೆಯಲ್ಲಿ ಎರಡೂ ಕೈಗಳನ್ನದ್ದಿ ಅದರೊಳಗೆ ತಾನೇ ಹಾಕಿದ್ದ ಒಂದು ಸಾಬೂನುಬಿಲ್ಲೆಯನ್ನು ಹಿಡಿಯುವ ಪ್ರಯತ್ನದಲ್ಲಿ ತಳಮಳ ಮಾಡುತ್ತಿದ್ದಳು. ತಲೆ, ಮುಖ, ಎದೆ ಎಲ್ಲವೂ ತೊಯ್ದಿತ್ತು. ತಂದೆ ಬಂದುದನ್ನು ನೋಡಿಯೂ ನೋಡದ ಹಾಗೆ ಮಾಡಿ ಮತ್ತಷ್ಟು ಜೋರಾಗಿ ಕೈಯಾಡಿಸಿ ಕಿಚಿಕಿಚಿ ನಕ್ಕಳು. ಗೋಪಿನಾಥ ನೋಡಿ ನಿಂತು,

"ಅಮ್ಮಾ, ಪಂಬೀನ ನೋಡಿದೆಯೇನು?"

"ಏನು ಮಾಡ್ತಿದ್ದಾಳೆ?" ಎಂದು ಆತನ ತಾಯಿ ಇಂದಿರಮ್ಮ ಒಳಗಿಂದ ಕೇಳಿದರು,

"ಒದ್ದೆಮುದ್ದೆ."

"ಅಲ್ಲಾಂದ್ರೆ! ಈಗತಾನೆ ಉಣಿಸಿ ಕೈತೊಳಸಿ ಬಿಟ್ಟಿದ್ದೆ. ವಾಪ್ಸಬಂದಳೇನೋ ನೀರಿಗೆ?" ಅನ್ನುತ್ತ ಹೊರಗೆ ಬಂದು ನೋಡಿ ನಕ್ಕರು, ಮುದ್ದಿನ ಮೊಮ್ಮಗಳ ತಂಟೇನ. ಗೋಪಿನಾಥ ಮಗುವನ್ನೆತ್ತಿಕೊಂಡು ಬಂದು ಅಪರ ಕೈಗೊಪ್ಪಿಸಿ ಬಚ್ಚಲಿಗೆ ಹೋದನು.

ಕಾಲು ತೊಳೆದು ಬಂದು ಹೊರಗೆ ಆಫೀಸಿಗೆ ಹೋಗಿ ನೋಡಲು ಅಲ್ಲಿ ಆತನ ಗುಮಾಸ್ತನಲ್ಲದೆ ಬೇರೆ ಯಾರೂ ಇರಲಿಲ್ಲ. ನಿಶ್ಚಿಂತೆಯಿಂದ ಏನಾದರೂ ಓದುತ್ತಿರಬಹುದೆಂತ ತನ್ನ ಪಠನಗೃಹಕ್ಕೆ ಹೋಗಿ ಮೇಜಿನ ಮೇಲಿದ್ದ ಹಲವು ಕನ್ನಡ ಮತ್ತು ಇಂಗ್ಲೀಷು ಪತ್ರಿಕೆಗಳನ್ನು ತಗೊಂಡು ಒಂದು ಸೋಫ ಹಿಡಿದು ಕುಳಿತನು. ಅಷ್ಟರಲ್ಲಿ ಬತ್ತಲೆಯಾಗಿದ್ದ ಪಂಬಿ ಒಳಗಿಂದ ಓಡಿಬಂದಳು. ತೋಳುಗಳನ್ನು ಅರ್ಧಮಡಚಿ ಬೀಸುತ್ತ ಬರುವಾಗ ದುಂಡಗಾಗಿ ಕೆಂಪು ಕೆಂಪಗೆ ಮುದ್ದೆಮುದ್ದೆಯಾಗಿದ್ದ ಅವಳ ಪುಟ್ಟ ತೊಡೆಗಳು, ಹೊಟ್ಟೆ, ಎದೆ ಕುಲುಕುವುದನ್ನು ಕಂಡು ಆತಗೆ ನಗು ಬಂತು.

"ಏನೇ ಇದು? ಅಂಗಿ ಹಾಕಿಕೊಳ್ಳೋದಿಲ್ವೇನೇ?" ಎಂದು ಕೇಳಿದ.

"ನೀನೇ ಹಾಕು." ಎಂದಳು ಕೋಪದಿಂದ.

"ದೊಡ್ಡಮ್ಮ ಹಾಕೋದಿಲ್ವೇ?"

"ದೊಡ್ಡಮ್ಮ ಬಾದ. ಕೆಟ್ಟವಯು" ಎಂದು ಮುಖ ಗಂಟು ಮಾಡಿದಳು.

"ದೊಡ್ಡಮ್ಮ ಕೆಟ್ಟವಳೇ? ಛಿ ಛಿ! ಯಾಕಪ್ಪ?"

"ಚಂತಿ ಹಾಕೇಯೆ." ಅನ್ನುವಾಗ ದುಃಖಾತಿಶಯದಿಂದ ಮುಖ ಜೋಲು ಬಿತ್ತು.

"ಚಟ್ಣಿ ಹಾಕಲೇ ಇಲ್ವೆ? ಮಧ್ಯಾಹ್ನ ಊಟಕ್ಕೆ ಹಾಕಿಸೋಣ. ನೀನೀಗ ಹೋಗಿ ನಿನ್ನ ಪೆಟ್ಟಿಗೇಂದ ಒಂದಂಗಿ ತಗೊಂಬಾ; ಹೋಗು ಚಿನ್ನ."

"ಎಡ್ಡೆಡ್ಡು ಮೂಯು ಚಂತಿ ಬೇಕು" ಅನ್ನುತ್ತ ಕೈಯನ್ನೆತ್ತಿಹಿಡಿದು ಬೆರಳುಗಳಲ್ಲಿ ಯಾವುದನ್ನು ತೋರಿಸಬೇಕಂತ ಗೊತ್ತಾಗದೆ ಎಣಿಸುತ್ತ ಸ್ಥಾನವಾಗಿ ಹೋದಳು. ಒಂದೆರಡು ನಿಮಿಷಗಳಲ್ಲಿ ಒಂದು ಫ್ರಾಕು, ಒಂದು ಚಡ್ಡಿಯನ್ನು ತುದಿ ಬೆರಳಿಂದ ನೇಲಿಸಿಕೊಂಡು ನೆಲ ಬಳಿಯುತ್ತ ಎಳತಂದಳು. ಗೋಪಿನಾಥ ಅಂಗಿ ಹಾಕಿ ರೇಶ್ಮೆಯಂತೆ ಮೆತ್ತಗಿದ್ದ ಅವಳ ಗುಂಗುರು ಕೂದಲನ್ನು ಕೈಯಿಂದಲೇ ಬಾಚಿ, "ನನಗೀಗ ಓದಬೇಕು; ನೀನೇನ್ಮಾಡ್ತಿ?" ಎಂದು ಕೇಳಿದನು.

"ನಾನೂ ಓತೇನೆ" ಎಂದಳು ತಕ್ಷಣ.

"ಸರಿ, ಕ್ಷೇಮ" ಅಂತಂದುಕೊಂಡು ಅವಳನ್ನು ಬೇರೊಂದು ಸೋಫದಲ್ಲಿ ಕೂರಿಸಿ ಅವಳ ಕೈಗೊಂದು ಇಂಗ್ಲಿಷು ಪತ್ರಿಕೆಯನ್ನು ಹಚ್ಚಿ ತಾನು ತನ್ನ ಸೋಫದುದ್ದಕ್ಕೂ ಕಾಲು ಚಾಚಿ ಅಮೇರಿಕದ ಸಚಿತ್ರ ಮಾಸಪತ್ರಿಕೆಯೊಂದನ್ನು ಓದಲಾರಂಭಿಸಿದ.

'ಅಮೇರಿಕೆಯಲ್ಲಿ ಅಹಿಂಸಾ ತತ್ವ ಪ್ರಚಾರ!' ಇನ್ನೇನುಳಿಯಿತು? ಆಗಲಿ, ಅಲ್ಲೂ ಹರಡಲಿ ಈ ಹುಚ್ಚು! ಹೊಸತೇನಿದ್ದರೂ ಹಸಿ ಬುದ್ಧಿಗೆ ಅಂಟಿಕೊಳ್ಳುತ್ತೆ. ಪ್ರಚಾರಕರು ಯಾರೋ! ಯಾರಾದರೇನು ಮಾತು ಬಲ್ಲವನಾದರೆ ಅಲ್ಲೆಲ್ಲೂ ಉಪವಾಸ ಬೀಳಬೇಕಾಗಿಲ್ಲವಷ್ಟೆ. ಅಹಿಂಸೆ? ಒಂದಲ್ಲ ಒಂದು ಬಗೆಯಲ್ಲಿ ಪ್ರತಿಕ್ಷಣಕ್ಕೂ ಹಿಂಸೆ ಮಾಡುತ್ತಲಿರುವ ಮಾನವನಿಗೆ ಈ ಉಪದೇಶ ಅರ್ಥವಾಗುವದು ಕಷ್ಟ! ಗೀತೆಯನ್ನು ಬೋಧಿಸಿದ ಪುಣ್ಯಾತ್ಮನಿಗೆ ಈ ಧರ್ಮರಹಸ್ಯ ಗೊತ್ತಿರಲಿಲ್ಲವೆ? ಎಷ್ಟು ಕಾಲ ಬಾಳುವುದೋ ಈ ಬೌದ್ಧಮತ! ಗ್ರೀಕರ ಕಾರುಣ್ಯರಹಿತವಾದ ಸೌಂದರ್ಯೋಪಾಸನೆಯೂ ಹೆಚ್ಚುಕಾಲ ಬಾಳಲಿಲ್ಲ. ರೋಮನರ ನಿರ್ದಯ ಶಕ್ತಿ ಪೂಜೆಯೂ ಪ್ರಯೋಜನವಾಗಲಿಲ್ಲ. ಈಗಿನ ಡಾಲರು ಭಜನೆಯೂ ಶಾಶ್ವತವಲ್ಲ, ಅದರಿಂದ ಸುಖವಿಲ್ಲ, ಕ್ಷೇಮವಿಲ್ಲ ಎಂತ ಯಾವನಾದರೊಬ್ಬ ಆ ದೇಶದಲ್ಲಿ ಉಪನ್ಯಾಸ

ಮಾಡಿದ್ದರೆ ಸಾಧ್ಯಕವಿತ್ತು. ಪ್ರಪಂಚದಲ್ಲಿ ಈಗ ಬೇಕಾಗಿರೋದು ಅಂತಃಕರಣ. ಪ್ರಾಣವಿದ್ದಲ್ಲೆಲ್ಲಾ: ಪಶುವಾಗಲಿ, ಪಕ್ಷಿಯಾಗಲಿ, ಪ್ರಜೆಯಾಗಲಿ ಇರಬೇಕಾಗಿದ್ದು ಸೌಹಾರ್ದ; ಜೀವಬಂಧುತ್ವ. ಅಹಿಂಸೆ ತಾನಾಗಿಯೇ ಬರುತ್ತೆ.

ಈ ರೀತಿ ತನ್ನಷ್ಟಕ್ಕೆ ತಾನೇ ವ್ಯಾಖ್ಯಾನ ಮಾಡುತ್ತ ಪುಟಗಳನ್ನು ಮುಗುಚುತ್ತ ಓದಿದನು. 'ಮಿಸ್ ಕೆಲಿಫೋರ್ನಿಯಾ' ಎಂಬದೊಂದು ನಗ್ನನಾರೀಮಣಿಯ ಚಿತ್ರ ಕಣ್ಣಿಗೆಬಿತ್ತು. ಆಕೆ ಬೀರುತ್ತಿದ್ದ ಸಿವ್ಹಾರ್ಜ ಗೆಲವನ್ನು ನೋಡಿ 'ಎಂಥ ಜೀವನೋಲ್ಲಾಸ! ಎಂಥ ಮತಿಗೆಡಿಸುವ ಮೈಕಟ್ಟು! ನಿರ್ಲಜ್ಜ ಸೌಂದರ್ಯ!" ಎಂದನ್ನುತ್ತ ಪುಟ ತಿರುವಿದನು.

ಕನ್ನಡ ವಾರಪತ್ರಿಕೆಯೊಂದನ್ನು ಬಿಡಿಸಿದನು. 'ಮಾರುತಿ ಜ್ಯೋತಿಷ್ಯಾಲಯ' ಕಣ್ಮುಂದೆ ಕಂಡಿತು. ಕಿಡಿಗುಂಡಪ್ಪನ ವಾತಾತ್ಮಜನ ಬ್ರಾಂಚಾಗಿರಬಹುದು ಅಂತಂದುಕೊಂಡು ಅದರ ಕೆಳಗಡೆ ನೋಡಿದನು.

'ರಾಮಬಾಣ!' ಅಂತಿತ್ತು ಭೂತಾಕ್ಷರಗಳಲ್ಲಿ ಯಾವದಕಪ್ಪ! ಆತ ಆಶ್ಚರ್ಯದಿಂದ ಓದಲು, ಗುಪ್ತರೋಗಗಳಿಗೆ ಗೋನೋಹಾರಿ' ಎಂದು ಸ್ಪಷ್ಟವಾಯಿತು. ತಕ್ಷಣ ಪೇಪರನ್ನು ಪರಿಷ್ಕಾರವಾಗಿ ಮಡಚಿ ಮೇಜಿನ ಮೇಲಿಟ್ಟು ತನ್ನ ಕಾಲುಗಳನ್ನು ಕೆಳಕ್ಕಿಳಿಸಿದನು. ಈ ಜಾಹಿರಾತು ಆತನ ಪತ್ರಿಕಾ ಪ್ರಪಂಚಕ್ಕೇನೇ ರಾಮಬಾಣವಾಗಿ ಪರಿಣಮಿಸಿತು. ಆತನಕ ಹರ್ಷಚಿತ್ತದವನಾಗಿದ್ದವನು ಫಕ್ಕನೆ ವಿಚಾರಪರನಾಗಿ ಕುಳಿತು ಬಿಟ್ಟನು. ಸಾಮಾನ್ಯವಾಗಿ ಆತನ ಮುಖದ ಮೇಲೆ ಗೆಲವಿನ ಬೆಳಕಿದ್ದರೂ ಇದ್ದಕ್ಕಿದ್ದ ಹಾಗೆ ಎಲ್ಲಿಂದಲೋ ಯಾವುದೋ ಚಿಂತೆಯ ಮೋಡದ ನೆರಳು ಬಂದು ಕಳೆಗುಂದಿಸುವುದು ಆತನ ಸ್ವಭಾವಲಕ್ಷಣವಾಗಿತ್ತು. ಆಗ ಆತನ ಮುಖಮುದ್ರೆಯಲ್ಲಿ ಸ್ತ್ರೀಸಹಜವಾದ ಶೀಲ ಮಾರ್ದವಗಳು ಪುರುಷ ಸಹಜವಾದ ಉದ್ಧಟತನದೊಡನೆ ಕಾದಾಡುವಂತೆ ತೋರುತ್ತಿತ್ತು. ವಿಜ್ಞಾನಿಯ ವಿಶಾಲವಾದ ಲಲಾಟ, ಗಗನ ಸಂಚಾರಿಯ ಒಂದಕ್ಕೊಂದು ದೂರವಿದ್ದ ನೀಳವಾದ ಕಣ್ಣುಗಳು, ಇವು ಆತನ ಎಸಳಾದ ಮೆತ್ತಗಾದ ಮೂಗು ತುಟಿಗಳಲ್ಲಿ ಚಿತ್ರಿತವಾಗಿದ್ದ ವಿಷಯಾಸಕ್ತಿಯನ್ನು ನೋಡಿ ಹೇವರಿಸಿ ದವಡೆಯನ್ನೂ ಗದ್ದವನ್ನೂ ದೃಢ ಧೀರ ಪ್ರತಿಜ್ಞೆಯಿಂದ ಬಿಗಿದು ಹಿಡಿದಂತಿತ್ತು. ಎದ್ದುನಿಂತು

ವ್ಯಾಯಾಮ ಮಾಡುವವರಂತೆ ತೋಳುಗಳನ್ನಾಡಿಸಿದನು. ಮದ್ರಾಸಿನಲ್ಲಿ ವ್ಯಾಸಂಗ ಮಾಡುತ್ತಿರುವಾಗ ಮೂರುವರ್ಷಗಳ ಕಾಲ ಗಡಿಖಾನೆಯಲ್ಲಿ ಗಳಿಸಿದ್ದ ಮೈಕಟ್ಟು ಇನ್ನೂ ಶಿಥಿಲವಾಗಿರಲಿಲ್ಲ. ಮೈ ಬಣ್ಣದಲ್ಲಿ ಕಪ್ಪಿಗಿಂತ ಬಿಳುಪೇ ಜಾಸ್ತಿಯೆನ್ನಬಹುದು. ನಿಲವು ಆರಡಿಯಿತ್ತು. ಬಿ. ಎ. ಮಾಡಿದ ನಂತರ ಆತನ ಪ್ರೊಫೇಸರರ ಅಪೇಕ್ಷೆಯಂತೆ ಒಂದು ವರ್ಷ ಕಾಲ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಭಾಷಕನಾಗಿದ್ದನು. ಆ ಮೇಲೆ ಮಂಗಳೂರು ವಕೀಲರಲ್ಲಿ ಪ್ರಸಿದ್ಧರಾಗಿದ್ದ ಆತನ ತಂದೆ ವೆಂಕಟರಾಯರ ಬಲವಂತವನ್ನು ಮೀರಲಾಗದೆ ಬಿ. ಎಲ್. ಪಾಸು ಮಾಡಿದನು. ಬಿ. ಎಲ್. ಕ್ಲಾಸಿನಲ್ಲಿ ಆತನ ತಾಯಿ ಇಂದಿರಮ್ಮನ ಚಿಕ್ಕಪ್ಪನ ಮೊಮ್ಮಗನಾದ ರಾಘವೇಂದ್ರರಾಯರೂ, ಈಗ ಸಹೋದ್ಯೋಗಿಯಾಗಿರುವ ಕೃಷ್ಣಯ್ಯನವರೂ ಸಹಪಾಠಿಗಳಾಗಿದ್ದರು ಉದ್ದಾಮ ವಿದ್ಯಾರ್ಥಿಯಾಗಿದ್ದ ರಾಘವೇಂದ್ರರಾಯರಿಗೆ ಪರೀಕ್ಷೆಯಲ್ಲಿ ಪ್ರಥಮಸ್ಥಾನ ಲಭಿಸಿತು. ಮಿಕ್ಕವರು ಗೋಪಿನಾಥ ಹೇಳಿದಂತೆ 'ಹರಿ ಗುರು ಹಿರಿಯರ ಅನುಗ್ರಹದಿಂದ' ಮೇಲೆ ಬಿದ್ದರು. ಅನಂತರ ಮೂವರೂ ಸನದು ಪಡೆದು, ಕರಿಕೋಟು ಜರಿರುಮಾಲುಗಳನ್ನು ಸಜ್ಜುಗೊಳಿಸಿ, ಹಿತ್ತಾಳೆತಗಡುಗಳ ಮೇಲೆ ಬಿರುದು ಬಾವಲಿಗಳನ್ನು ಕೆತ್ತಿಸಿ, ಆಫೀಸಿನ ಮುಂಭಾಗದಲ್ಲಿ ತೂಗಹಾಕಿಸಿ, ವಕೀಲ ಸಂಘದ ಸದಸ್ಯರಿಗೆ ಮಾಮೂಲಿನ 'ಟೀ ಪಾರ್ಟಿ' ಸಲ್ಲಿಸಿ ಸುಸೂತ್ರವಾಗಿ ತಮ್ಮ ಕಾಯದೆ ಕೌಶಲಗಳ ಬಿಕರಿಗೆ ಸಿದ್ಧರಾದರು.

ಕಾಲಕ್ರಮೇಣ ಮೂವರೂ ಬೇರೆ ಬೇರೆ ದಾರಿ ಹಿಡಿದು ಉದ್ಯೋಗದ ಶಿಖರವನ್ನೇರಿದರು. ನ್ಯಾಯ ಕ್ಷೇತ್ರದಲ್ಲೇ ಪುರುಷಾರ್ಥ ಸಿದ್ಧಿಯಾಗುವುದೆಂದು ನಂಬಿದ ರಾಘವೇಂದ್ರರಾಯರು ಅವಿಶ್ರಾಂತ ಪರಿಶ್ರಮದಿಂದ ಕಾರ್ಯ ನಿರ್ವಹಿಸಿದರು. ಜನರ ವ್ಯಾವಹಾರಿಕ ಸಿಕ್ಕುಗಳನ್ನು ನ್ಯಾಯ ಇಲಾಖೆಗಳ ಮೂಲಕ ಯಥಾನುಶಕ್ತಿ ಬಿಡಿಸಿ ನಿವಾರಿಸುವುದೇ ತನ್ನ ಭಾಗಕ್ಕೆ ಬಂದ ಕೆಲಸವೆಂತ ಕರ್ತವ್ಯದೃಷ್ಟಿಯಿಂದ ಕೃಷ್ಣಯ್ಯ ದುಡಿದರು. ಗೋಪಿನಾಥಗೆ ತನ್ನ ವೃತ್ತಿಯಲ್ಲಿ ಇಂಥ ಯಾವ ಶ್ರದ್ಧೆಯೂ ಇರಲಿಲ್ಲವಾದರೂ ಆತನ ಜೀವನದ ನಿತ್ಯ ನಿರ್ಮಲ ರಸಿಕತನದ ಮೆರುಗಿನಿಂದಲೂ ಆತನ ಸಹಾಯವನ್ನು ಯಾಚಿಸಿ ಬಂದ ಪ್ರತಿಯೊಬ್ಬರಲ್ಲೂ ಆತ ತೋರುತ್ತಿದ್ದ ಸಹಾನು

ಭೂತಿ ಸೌಜನ್ಯ ಸವಿನಯದಿಂದಲೂ ಆರಂಭದಲ್ಲಿ ತನ್ನ ತಂದೆಯ ಬೆಂಬಲ ದಿಂದಲೂ ತಕ್ಕ ಮಟ್ಟಿನ ಸಂಪತ್ತೂ ಮೇಲಾಗಿ ಯಶಸ್ಸೂ ಕೈಸೇರಿತು.

ಆತ ವಕೀಲನಾಗಿ ಸ್ವಲ್ಪ ಸಮಯದಲ್ಲೇ ಮಾಲತಿಯ ತಂದೆ ಶಾಮ ರಾಯರು ವರಾನ್ವೇಷಿಯಾಗಿ ಆತನಲ್ಲಿಗೆ ಬಂದು ಲಗ್ನದ ವಿಚಾರ ಪ್ರಸ್ತಾ ಪಿಸಿದಾಗ ಸಗೋತ್ರವಾದ್ದರಿಂದ ಆತಗೂ ಇಂದಿರಮ್ಮಗೂ ತುಂಬ ಮನಸ್ಸಿ ದ್ದರೂ ವೆಂಕಟರಾಯರು ಸಮ್ಮತಿಸದಿದ್ದುದರಿಂದ ಆಮಾತು ಅಲ್ಲಿಗೇ ಮುರಿ ಯಿತು. ಆ ಬಳಿಕ ಇಂದಿರಮ್ಮನ ಬಳಗದ, ಬೆಂಗಳೂರು ಇಂಟರ್ ಕಾಲೇಜಿ ನಲ್ಲಿ ಓದುತ್ತಿದ್ದ ರಜನಿಯೆಂಬವಳನ್ನು ಮದುವೆಯಾದನು. ವಿದ್ಯಾವರ್ಷದ ಮಧ್ಯಕಾಲದಲ್ಲಿ ಗ್ರಹಪ್ರವೇಶವಾದ್ದರಿಂದ ಅವಳು ತಿರುಗಿ ಬೆಂಗಳೂರಿಗೆ ಹೋಗಿ ಅಲ್ಲೇ ಇದ್ದು ಪರೀಕ್ಷೆಯನ್ನು ದಾಟಿದಳು. ಬಿ. ಎ. ಕಲಿಯಬೇಕೆಂಬ ಪ್ರತ್ಯಾಸೆಯಿದ್ದರೂ ದೇಹದ ದುರ್ಬಲತೆಯಿಂದಲೂ ಗಂಡನನ್ನು ಬಿಟ್ಟಿರು ವುದು ಅನುಚಿತವೆಂಬದರಿಂದಲೂ ತವರುಮನೆ ಬಿಟ್ಟು ಬಂದಳು. ಆದರೆ ಮಂಗಳೂರಿನ ಹವಾಗುಣವೂ ಜನರ ರೀತಿನೀತಿಯೂ ಅವಳಿಗೆ ಸರಿಬೀಳದೆ ಬಾರಿಬಾರಿಗೂ ಬೆಂಗಳೂರನ್ನೇ ಜಪಿಸುತ್ತ ಗೊಣಗುತ್ತಿದ್ದಳು.

ಕಾಲೇಜು ಪಥ್ಯದಿಂದ ಕೃಶವಾದ ಅವಳ ತನುಮನಗಳು ಸುಧಾರಿಸಿ ಕೊಳ್ಳದ ವಿನಹ ಮಕ್ಕಳಾಗುವದು ಒಳ್ಳೇದಲ್ಲವೆಂತ ಗಂಡಹೆಂಡಿರಿಬ್ಬರೂ ತಮ್ಮೊಳಗೆ ನಿರ್ಧರಿಸಿ, ಆ ಪ್ರಕಾರದ ದಾಂಪತ್ಯದಲ್ಲಿದ್ದರು. ಆದರೆ ಅವಳ ನಿತ್ಯ ಅಸಂತೋಷಕ್ಕೂ ತವರೂರಿನ ಹಂಬಲಕ್ಕೂ ತಾಯ್ತನದ ಸಿಹಿಕಹಿ ಗಳೇ ಸಿದ್ಧೌಷಧಿಯೆಂತ ಇಂದಿರಮ್ಮ ಹೇಳುತ್ತಿದ್ದುದು ನಿಜವೆಂತ ಅವರಿಬ್ಬ ರಿಗೂ ಬರಬರುತ್ತ ಮನಗಂಡಿತು. ಬಿ. ಎ. ಬದಲಿಗೆ ಬಿ. ಎ. ಬಿ. ವೈ. ಪರೀಕ್ಷೆಯಾಗಲಿ ಅಂದ ಗೋಪಿನಾಥ. ಮಾತ್ರ ಈ ಪರೀಕ್ಷೆಯಲ್ಲಿ ಅವಳು ಹೇಗೆ ಉತ್ತೀರ್ಣಳಾಗುವಳೋ ಎಂಬ ಒಳಗಿನ ಭಯವನ್ನು ಯಾರಿಗೂ ತಿಳಿಸಲಿಲ್ಲ.

ತಿಂಗಳು ತುಂಬಿದಂತೆಲ್ಲ ಬಾಡಿದ ಹೂವಿನಂತಿದ್ದ ರಜನಿ ಮಾಗಿದ ಹಣ್ಣಿ ನಂತಾದಳು. ಅವಳ ಮುಖದ ನವಕಾಂತಿಯನ್ನೂ ಮೈಯ ಮಂದಸ್ನಿಗ್ಧ ತೆಯನ್ನೂ ಮಾತಿನ ಘನ ಮಾಧುರ್ಯವನ್ನೂ ನೋಡಿ ಎಲ್ಲರೂ ಹಿಗ್ಗಿದರು. ಎಂಟನೇ ತಿಂಗಳಲ್ಲಿ ಸೀಮಂತದ ಸಂಭ್ರಮ ಮುಗಿಸಿಕೊಂಡು ಹೆರಿಗೆಗೆ

ತಾಯಿಮನೆಗೆ ಹೋದಳು. ಅವಳನ್ನು ಬಿಟ್ಟು ಬರಲು ಹೋದ ಗೋಪಿನಾಥ ಹಿಂತಿರುಗಲು ಹೊರಟಾಗ ಬೆಳಗ್ಗಿಂದ ಎಡಬಿಡದೆ ಆತನೊಂದಿಗಿದ್ದವಳು ಎದೆ ಸೀಳಿದಂತೆ ಅತ್ತಳು. ಆತನ ಎರಡು ಕೈಗಳನ್ನೂ ಬಿಗಿಹಿಡಿದು ಕಣ್ಣೀರು ಸುರಿಸುತ್ತ, "ಹೋಗಬೇಡಿ. ಇನ್ಯಾವಾಗ ನಿಮ್ಮನ್ನ ನೋಡಲಿ? ನೀವು ಹೋಗಿಬಿಟ್ಟರೆ ನನ್ನ ಗತಿಯೇನು?" ಎಂದು ಮಗುವಿನಂತೆ ರೋದಿಸಿದಳು. ತಂದೆ, ತಾಯಿ, ಸುತ್ತಮುತ್ತಲಿನ ಹಿತಚಿಂತಕರು ಯಾರು ಎಷ್ಟು ಹೇಳಿದರೂ ಕೇಳಲಿಲ್ಲ. ಗೋಪಿನಾಥ ತನ್ನೊಳಗೂ ಉಕ್ಕುತ್ತಿದ್ದ ಶೋಕಾತಿಶಯವನ್ನು ನುಂಗಿಕೊಂಡು ಬಗೆಬಗೆಯಲ್ಲಿ ಸಂತೈಸಿದನು "ರಜನೀ, ಯಾತಕ್ಕಾಗಿ ಅಳುತ್ತೀ? ನನಗೆ ಹೋಗದೆ ಕಳದೀತೇ? ಬೇಕಾದಾಗ ಬರುವುದಿಲ್ಲವೇ? ಕಾಗದ ಹಾಕು; ತಂತಿ ಕಳುಹಿಸು; ತಕ್ಷಣವೇ ಬಂದುಬಿಡುವೆನು. ನೀನು ಹೀಗೆಲ್ಲ ಹೇಳಿ ಅತ್ತರೆ ನಿನ್ನ ಅಳುಮುಖದ ಮುದ್ರೆಯೆ ನನ್ನ ಹೃದಯದಲ್ಲಿ ಉಳಿಯುವುದಲ್ಲ? ರಜನೀ, ಪ್ರಿಯೆ, ಇಲ್ನೋಡು, ನಗುನಗುತ್ತ ಬೀಳ್ಕೊಡು. ಸಂತೋಷದಿಂದ ಹೋಗಿ ಬರುತ್ತೇನೆ. ದೇವರು ನಿನ್ನನ್ನು ಕಾಪಾಡಲಿ!" ಎಂದು ಅವಳ ಗಲ್ಲ ಹಿಡಿದೆತ್ತಿ ಬೇಡಿಕೊಂಡನು.

ಅನಂತರ ಆತ ಅವಳನ್ನು ನೋಡಲೇಇಲ್ಲ. ಆಸ್ಪತ್ರೆಯಲ್ಲಿ ಶಸ್ತ್ರಪ್ರಯೋಗ ಮಾಡಿ ಶಿಶುವನ್ನು ಜೀವ ಸಹಿತ ಹೊರಗೆ ತೆಗೆದರೂ ತಾಯಿಯನ್ನುಳಿಸಲು ಮಾತ್ರ ನಾಲ್ಕು ಮಂದಿ ಪ್ರಖ್ಯಾತ ಡಾಕ್ಟರುಗಳು ಶತಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲ. ಆ ಕೂಸೇ ಗೋಪಿನಾಥನ ಪ್ರಾಣಪುಷ್ಪ, ಪ್ರಭೆ; ಮುದ್ದಿನ 'ಪಂಬಿ.'

ರಜನಿ ಅಕಾಲ ಮೃತ್ಯುವಿಗೆ ತುತ್ತಾದಳೆಂತ ಆತ ತಂದೆಯ ಆಕಸ್ಮಿಕ ವಿಯೋಗದ ಆಘಾತದಿಂದ ತೀರ ಚೇತರಿಸಿಕೊಂಡಿರಲಿಲ್ಲ. ಈ ಎರಡು ಅಲೆಗಳ ಹೊಡೆತದಿಂದ ತೋಯ್ದ ಜೀವವನ್ನು ಒರೆಸಿಕೊಳ್ಳುವಷ್ಟರಲ್ಲಿ ಮೂರನೆಯ ತೆರೆಯೊಂದು ಆತನ ಮೇಲುರುಳಿತು.

ತನ್ನ ಸ್ಥಾನಬಲದ ಪ್ರಯೋಗದಿಂದ ಒಂದು ಹಳ್ಳಿಯಲ್ಲಿ ಹಾವಳಿ ಮಾಡಲುಪಕ್ರಮಿಸಿದ್ದ ಒಬ್ಬ ಪೋಲೀಸಿನವನನ್ನು ರೈತನೊಬ್ಬನು ಹೊಡೆದು ಆತನ ಕುಲಾವಿಯನ್ನು ನೆಲಕ್ಕುರುಳಿಸಿದ್ದನು. ರೈತನ ಮೇಲೆ ಪ್ರಚಂಡ ಮೊಕದ್ದಮೆಯಾಗಿ ಪೋಲೀಸಿನವನ ಪಕ್ಷವಾಗಿ ಸಾಕ್ಷಿ ನುಡಿಯಲು ಯಾವನೊಬ್ಬನೂ

ಸಿಗದಿದ್ದರು ಕೂಡ ರೈತನಿಗೆ ಆರು ತಿಂಗಳು ಕಠಿಣ ಸಜೆ ವಿಧಿಯಾಗಿಯೇ ಬಿಟ್ಟಿತು. ಮೇಲಿನ ಕೋರ್ಟಿಗೆ ಅಪೀಲು ಮಾಡಲು ಯಾರೊಬ್ಬರು ವಕೀಲರೂ ಶಿಫಾರಸು ಮಾಡಲಿಲ್ಲ. ಅಖಂಡ ಪೋಲೀಸು ಇಲಾಖೆಯನ್ನೇ ಎದುರಿಸಿ ನಿರಪರಾಧಿಯಾದ ಪ್ರಜೆಗಳ ಸಹಾಯಕ್ಕೆ ನಿಲ್ಲುವಷ್ಟು ಕೆಚ್ಚಿದೆ ಈಗಿನ ಕಾಲದಲ್ಲಿ ಯಾವ ವಕೀಲನಿಗೂ ಇರಲಾರದು. ಅಪೀಲು ಮಾಡಿ ಶಿಕ್ಷೆ ಜಾಸ್ತಿಯಾದರೂ ಆಗಬಹುದು ಎಂದು ಅಧೈರ್ಯಪಟ್ಟರು. ಆದರೆ ಗೋಪಿನಾಥ ಒಪ್ಪಿಕೊಂಡ. ಐನೂರು ರೂಪಾಯಿ ಫೀಸು ಗೊತ್ತುಮಾಡಿ, ಮುನ್ನೂರು ಮುಂಗಡವಾಗಿ ವಸೂಲು ಮಾಡಿದನು. ಅಪೀಲು ದಾಖಲು ಮಾಡಿ, ಆವೇಶದಿಂದ ಪ್ರತಿಪಾದಿಸಿ ಅಪ್ರತಿಮ ವಿಚಕ್ಷಣತೆ ವಾಗ್ಮಿತೆಯಿಂದ ಕಿಕ್ಕಿರಿದು ತುಂಬಿದ್ದ ಕಚೇರಿಯನ್ನೆಲ್ಲ ಬೆರಗುಗೊಳಿಸಿ ಗೆದ್ದನು. ಮರುದಿನ ಬೆಳಿಗ್ಗೆ ಬಾಕಿ ಉಳಿದ ಫೀಸನ್ನು ಕೇಳಿದಾಗ ರೈತನು ಕೈಮುಗಿದು ದೇವರ ಮುಂದೆ ಕಾಣಿಕೆಯನ್ನಿಡುವಂತೆ ನೂರೈವತ್ತು ರೂಪಾಯಿಗಳನ್ನು ಮೇಜಿನ ಮೇಲಿಟ್ಟು ಮಿಕ್ಕ ಐವತ್ತಕ್ಕೆ ಮಾಫಿ ಬೇಡಿದ. ಎಷ್ಟೋ ಕೇಸುಗಳನ್ನು ಬಡವರಿಗಾಗಿ ಕಾಸು ತಕ್ಕೊಳ್ಳದೆ ವ್ಯವಹರಿಸಿ ಉಪಕಾರ ಮಾಡಿದ್ದ ಗೋಪಿನಾಥನಿಗೆ ಆ ದಿನ ಏನಾಯಿತೋ ಏನೋ; "ಪೂರ್ತಿಯಾಗಿ ತಕ್ಷಣ ಕೊಟ್ಟುಬಿಡಬೇಕು. ಒಂದು ಚಿಕ್ಕಾಸೂ ಮಾಫಿ ಸಿಗಲಾರದು," ಅಂದುಬಿಟ್ಟನು, ಕೋಪದಿಂದ.

ಸಿಟ್ಟು ಮಾಡಬಾರದು, ನನ್ನ ತಂದೆ, ನನ್ನ ದೇವರು. ದೀಪ ಹಚ್ಚೋದರೊಳಗಾಗಿ ತಮ್ಮ ಪಾದಕ್ಕೆ ತಂದೊಪ್ಪಿಸುತ್ತೇನೆ" ಅನ್ನುತ್ತ ರೈತ ಕಾಲಿಗೆ ಬಿದ್ದು ಬೇಡಿಕೊಂಡನು. ಅಷ್ಟರಲ್ಲೇ ತನ್ನ ಕ್ರೋಧ ಲೋಭ ಮದಗಳಿಂದ ತಾನೇ ಸಂಕಟಪಡುತ್ತಲಿದ್ದ ಗೋಪಿನಾಥನು ಸುಮ್ಮನಿದ್ದು ಎದ್ದು ಒಳಗೆ ಹೋಗಿಬಿಟ್ಟನು.

ಸಂಜೆಗೆ ಆ ರೈತನು ತಪ್ಪದೆ ಐವತ್ತು ರೂಪಾಯಿಗಳನ್ನು ತಂದು ಮೇಜಿನ ಮೇಲೆಣಿಸಿ ಹಿಂದೆ ಸರಿದು ಕೈಕಟ್ಟಿ ನಿಂತನು. "ಬೇಕಿಲ್ಲ; ವಾಪ್ಸು ತಕೋ" ಅಂದ ಗೋಪಿನಾಥ. ರೈತನು ಭೂತಗ್ರಸ್ತನಾದವನಂತೆ ಮೇಜಿನಿಂದ ಹಣವನ್ನು ಬಾಚಿಕೊಂಡು ಒಂದೇ ಸವನೆ ಓಡಿಹೋದನು. ಗೋಪಿನಾಥನಿಗೆ ಈ ವರ್ತನೆ ಅರ್ಥವಾಗಲಿಲ್ಲ. ಮರುದಿನ ಬೆಳಗಾಗುತ್ತಲೇ ಬಂತು

ವರ್ತಮಾನ: ಆ ಪಾಪಿ ರೈತ ಬೇರೆಲ್ಲಿಯೂ ಹಣ ಸಿಗದೆ ತನ್ನ ಹೆಂಡತಿಯ ಮಂಗಳಸೂತ್ರವನ್ನು ಕೇಳಿದ; ಆಕೆ ಸರ್ವಥಾ ಸಮ್ಮತಿಸಲಿಲ್ಲ; ಆತ ರೇಗಿ ಆಕೆಯನ್ನು ಎಕ್ಕಸಕ್ಕ ಬಡಿದು ಮಂಗಳಸೂತ್ರವನ್ನು ಕೊರಳಿಂದ ಕಿತ್ತು ಕೊಂಡು, ಮನೇಲಿದ್ದ ಕೆಲವು ಪಾತ್ರೆಗಳನ್ನೂ ಹೊತ್ತುಕೊಂಡು ಹೋಗಿ ಸಮೀಪದ ಕಟ್ಟೆಯಲ್ಲಿ ಒತ್ತೆಯಿಟ್ಟು ವಕೀಲರ ಫೀಸಿನ ಬಾಕಿಯನ್ನು ಸಂಗ್ರಹಿಸಿದ; ಆತ ಮನೆಬಿಟ್ಟು ಹೋದ ಸ್ವಲ್ಪ ಸಮಯದಲ್ಲೇ ಸ್ಮೃತಿ ತಪ್ಪಿ ಬಿದ್ದಿದ್ದ ಅವನಾಕೆ ಎಚ್ಚತ್ತು ನರಳುತ್ತ ತೆವಳುತ್ತ ಮನೆ ಹಿಂದಿನ ಮಡಗಕ್ಕೆ ಬಿದ್ದು ಆತ್ಮಹತ್ಯೆ ಮಾಡಿಕೊಂಡಳು.

ಈ ಹೃದಯದ್ರಾವಕ ವರ್ತಮಾನ ಕೇಳಿದ ದಿನ ಗೋಪಿನಾಥನಿಗೆ ಅನ್ನ ರುಚಿಸಲಿಲ್ಲ; ಉಪವಾಸವಿದ್ದ. ನಿದ್ದೆ ಬರಲಿಲ್ಲ; ಜಾಗರ ಮಾಡಿದ. ಘೋರ ಪ್ರತಿಜ್ಞೆ ಮಾಡಿದ. ವಕೀಲವೃತ್ತಿಗೇ ತಿಲಾಂಜಲಿ ಕೊಟ್ಟ. ಒಂದು ವಾರ ಕಾಲ ಮನೆಬಿಟ್ಟು ಹೊರಗೆ ಕಾಲಿಡಲಿಲ್ಲ. ಕೃಷ್ಣಯ್ಯ ಬಿಟ್ಟು ಮತ್ತಾರು ಬಂದರೂ ಸ್ವಸ್ಥವಿಲ್ಲಾಂದು ಬಿಟ್ಟ. ಕೊನೆಗೆ ಎಂಟು ದಿನಗಳಾದಮೇಲೆ ಕೃಷ್ಣಯ್ಯನ ಒತ್ತಾಯಕ್ಕೆ ಕ್ರಿಮಿನಲ್ ಪ್ರಾಕ್ಟೀಸು ಮಾತ್ರ ಸಿವಿಲ್ ಪ್ರಾಕ್ಟೀಸಿಗೆ ಮತ್ತೆ ಸುರುಮಾಡಿದ. ಆದರೆ ಮೊದಲಿಂದ ಆಸಕ್ತಿ ಅಭಿರುಚಿ ಇಲ್ಲದವಗೆ ಈ ಅನಿರೀಕ್ಷಿತ ವಿಘ್ನವೊಂದು ಬಂದೊದಗಿ ತನ್ನ ಉದ್ಯೋಗ ಪ್ರವೃತ್ತಿಯಲ್ಲಿ ಇನ್ನಷ್ಟು ಉಪೇಕ್ಷೆಗೆ ಕಾರಣವಾಯಿತು. ತನ್ನ ಜನ್ಮಯಾತ್ರೆಯ ಆರಂಭದಲ್ಲಿಯೇ ಮೂರು ಜೀವವೃಕ್ಷಗಳು ದಾರಿಗೆ ಅಡ್ಡವಾಗಿ ಉರುಳಿ ಬಿದ್ದುದನ್ನು ನೋಡಿ ಗೋಪಿನಾಥಗೆ ಎದೆಗೆಟ್ಟಿತು. ತಂದೆ ಇರುವಲ್ಲಿವರೆಗೆ ಆತಗೆ ಸಂಸಾರದ ಭಾರವೇನೆಂಬುದು ಗೊತ್ತಿರಲಿಲ್ಲ. ಅವರು ಪೂರ್ವಾಚಾರ ಸಂಪ್ರದಾಯದವರಾದ್ದರಿಂದ ಜೀವನವು ಇಕ್ಕಟ್ಟಿನಲ್ಲಿ ಹರಿಯುವ ಕಾಲುವೆಯಂತೆ ಸೌಮ್ಯವಾಗಿಯೂ ನಿಯಮಬದ್ಧವಾಗಿಯೂ ಸಾಗುತ್ತಿತ್ತು. ಅವರ ಪ್ರೀತಿ ಗೌರವಗಳಿಗೆ ಪಾತ್ರರಾದ ಇಂದಿರಮ್ಮನ ಆಡಳಿತೆಯಲ್ಲಿ ಮನೆಯ ಕಲ್ಲು ಮುಳ್ಳು ಕಸಕಡ್ಡಿಯೇನಿದ್ದರೂ ಅದು ನೆರೆಯವರ ಕಣ್ಣಿಗೆ ಬೀಳುತ್ತಿರಲಿಲ್ಲ. ಹೀಗಾಗಿ ಸಂಸಾರದಲ್ಲಿ ಸ್ವಾರಸ್ಯವಿಲ್ಲದಿದ್ದರೂ ನೆಮ್ಮದಿಯಿತ್ತು. ಇಂಥ ತಂದೆಯೂ ಹಠಾತ್ತಾಗಿ ಹೋಗಿ ಬಿಟ್ಟರು. ಅವರು ಜಾತಕ ಹುಡುಕಿಸಿ ಶೋಧಿಸಿ ಶಾಸ್ತ್ರೋಕ್ತವಾಗಿ ಲಗ್ನ ಮಾಡಿಸಿದ ರಜನಿ ಅವರಿಲ್ಲದ ಮನೆಯಲ್ಲಿ

ತಾನಿರೆಯೆಂಬಂತೆ ತವರುಮನೆಗೆ ಹೋದವಳು ಮರಳಿ ಬರಲೇ ಇಲ್ಲ. ಒಂದೆಡೆ ಕಿವಿಗೆ ಕೇಳಿಸದ ತಾಯಿಯ ರೋದನ; ಇನ್ನೊಂದೆಡೆ ತಾಯಿಯ ಹಾಲಿಗಾಗಿ ಕೂಸಿನ ಕಿವಿಸೀಳುವ ರೋದನ. ಹೋದ ಹಾದಿಯಲ್ಲಿ ಹೆಣ ಬಿದ್ದರೆ, ಮುಟ್ಟಿದ್ದು ಮಸಣವಾದರೆ ಕಾಲಿಡುವುದೆಲ್ಲಿ, ಕೈನೀಡುವುದೇಕೆ ಎಂದು ಗೋಪಿನಾಥ ಕೃಷ್ಣಯ್ಯನನ್ನು ಪದೇ ಪದೇ ಪ್ರಶ್ನಿಸುತ್ತಿದ್ದನು. ಈ ಜಿಗುಪ್ಸೆ, ಅಪಧೈರ್ಯ, ನಿರಾಶೆಯ ನೆರಳು ಕೊನೆವರೆಗೆ ಆತನ ಬೆನ್ನು ಬಿಡಲಿಲ್ಲ.

ರಜನಿ ಇದ್ದರೆ ಹೇಗಿರುತ್ತಿತ್ತೋ! ಇರುವಾಗ ಆಕೆ ಮನೆಯವಳಾಗಿ ಮನೆದುಂಬಿರಲಿಲ್ಲ. ಯಾವಳೋ ಅತಿಥಿಯಾಗಿ ಬಂದು ನಿರ್ವಾಹವಿಲ್ಲದೆ ಹಲವು ತಿಂಗಳಿದ್ದು ತನ್ನ ಊರಿಂದ ಕರೆ ಬಂದೊಡನೆ ಹೊರಟುಹೋದಂತಿತ್ತು, ಆಕೆಯ ಮುಕ್ಕಾಮು. ಆಕೆಯ ಅಸ್ತಿತ್ವದಿಂದ ಗೋಪಿನಾಥನ ನೇಯಿಗೆಗೊಂದು ಹೊಸಬಣ್ಣ ಸೇರಿದಂತಾಯಿತು, ನಿಜ. ಆದರೆ, ಮಾಸಿ ಹೋಗದ ಯಾವ ಹೊಂದಿಕೆಯೂ ಆಗಲಿಲ್ಲ. ಆಕೆ ಸ್ವಭಾವದಲ್ಲಿ ವಿಲಾಸ ಪ್ರಿಯಳಾಗಿದ್ದರೂ ಅದರ ಸಾಧನೆಯಲ್ಲಿ ಅತಿ ಆಲಸ್ಯ ಅಂಜಿಕೆಯುಳ್ಳವಳಾಗಿದ್ದಳು. ಈಜು ಕಲಿತಿದ್ದವಳಾದರೂ ಒದ್ದೆಯಾದರೆ ಒರೆಸಿಕೊಳ್ಳಬೇಕಲ್ಲ ಎಂಬದರಿಂದ ನೀರಿಗೇ ಇಳಿಯದಂಥ ಮೈಗಳ್ಳತನ. ಬುದ್ಧಿ ಚುರುಕಾದರೂ ಮನಸ್ಸು ಚಂಚಲ. ಒಂದೊಂದು ವೇಳೆ ಮಕ್ಕಳಂತೆ ಮುಖದುಂಬ ನಗುವಳು; ಹುಲ್ಲೆಯಂತೆ ನೆಗೆಯುವಳು. ಒಂದೊಂದು ವೇಳೆ ಆಟದಲ್ಲಿ ಸೋತವರಂತೆ ನಿಟ್ಟುಸಿರುಬಿಡುತ್ತ, ತವುರೂರು ನೆನೆಯುತ್ತ ಹಂಬಲಿಸುತ್ತ ಕೂತುಬಿಡುವಳು. ನೋಡುವುದಕ್ಕೆ ಸ್ವಚ್ಛ ಹಾಲುಗುಲಾಬಿಯ ಮೈಬಣ್ಣ, ಬಳಕುವ ದೇಹ. ಇಟಲಿಯ ಗಾಜಿನ ಗೊಂಬೆಯಂತಿದ್ದಳು. ಆಕೆಯ ವಿಶಾಲವಾದ ಪುಸ್ತಕಪರಿಚಯ, ವ್ಯಕ್ತಿವಸ್ತು ತೀಕ್ಷ್ಣ ತರ್ಕವಿವೇಚನೆಗಳು, ಇವೆಲ್ಲವೂ ಗೋಪಿನಾಥನ ನಿತ್ಯಜೀವನಕ್ಕೆ ಒಂದು ಹೊಸ ಉಲ್ಲಾಸವನ್ನು ತಂದಿದ್ದುವೇನೋ ನಿಜ. ಆದರೆ ಆಕೆಯ ಒಡನಾಟದಲ್ಲಿ ಏನೋ ಒಂದು ಊನವಿತ್ತು. ಇರಬೇಕಾಗಿದ್ದ ಯಾವುದೋ ಒಂದು ಮುಖ್ಯಾಂಶ ಇರಲಿಲ್ಲವೆಂತ ಆತಗೆ ತೋರುತ್ತಿತ್ತು. ಆಕೆಯ ಸಮ್ಮತಿಯಿಲ್ಲದೆ ಸಂಭೋಗಕ್ಕೆಳಸುತ್ತಿರಲಿಲ್ಲವಾದರೂ ಆಕೆಯನ್ನು ಕೂಡಿದಾಗಲೆಲ್ಲ ತಾನೊಬ್ಬ ಪಶುವೆಂಬ ಆತ್ಮನಿಂದೆಯ ಕಹಿ ರುಚಿಗೆಡಿಸುತ್ತಿತ್ತು. ಸಮ ಸಂಯೋಗದ ಕಾವಿನಿಂದ ಕರಗಿ ಕೂಡಿ

ಒಂದಾಗುವ ನಲ್ಲನಲ್ಲೆಯರ ಅನ್ಯೂತಾನುಭವ ರಜನಿ ಗೋಪಿನಾಥರಿಗೆ ಅರಿಯದ ರಹಸ್ಯವಾಗಿತ್ತು.

ರಜನಿಗೆ ಸುಖಲಾಲಸೆಯ ಅರಿವು ಇರಲಿಲ್ಲವೆಂತಲ್ಲ. ಬೆಂಗಳೂರಿನಂಥ ಶಹರಿನ ಕಾಲೇಜಿನಲ್ಲಿ ಸ್ವೇಚ್ಛಾವರ್ತಿನಿಯಾಗಿದ್ದವಳಲ್ಲಿ ಇಂದ್ರಿಯವ್ಯಾಪಾರಗಳ ಕುರಿತು ಅಜ್ಞಾನ ಉಳಿಯಲು ಕಾರಣವಿಲ್ಲ. ಆದರೆ ಆಕೆಯ ವಿಷಯಾಸಕ್ತಿ ಕಾಲೇಜು ಹಾಸ್ಟೆಲುಗಳ ಪರಿಮಿತಿ, ಉಪವನ ಉದ್ಯಾನಗಳ ವಿಸ್ತರಣ, ನಾಟಕ ವಾಕ್ಚಿತ್ರಗಳ ಸರಹದ್ದನ್ನು ಬಿಟ್ಟು ಬೇರೊಂದೆಡೆಗೆ ರೆಕ್ಕೆಬಡಿಸಿರಲಿಲ್ಲ. ಮತ್ತೊಂದು ಕಾರಣ: ಇಂಟರಿಗೆ ಮೊದಲು ಆಕೆ ಪಾದ್ರಿಗಳ ಮಠದಲ್ಲಿ ಓದಿದವಳು. ಜೀವರಸವಿಹೀನವಾದ ಆ ಮರುಭೂಮಿಯಲ್ಲಿ ಪ್ರಪಂಚವೆಲ್ಲವೂ ಪಾಪಸಂಭವ, ಸುಖಾಪೇಕ್ಷೆಯು ಅಪವಿತ್ರ, ಚಿರಕನ್ಯಾವಸ್ಥೆಯೇ ಮುಕ್ತಿದಾಯಕವೆಂತ ಮೊದಲಾಗಿ ಉಪದೇಶಿಸಲ್ಪಟ್ಟು ಆಕೆಯ ಮನೋವೃತ್ತಿ ಸಂಕುಚಿತವಾಗಿತ್ತು. ಆದರೂ ಗಂಡ ಬಾ ಎನ್ನುವಾಗ ಎಷ್ಟು ಸಲ ಒಲ್ಲೆಯೆಂದಾಳು? ಜೂಜಿನ ಕುದುರೆ ನೀರಿಗೆ ಇಳಿಯುವಂತೆ ರತಿರಂಗಕ್ಕಿಳಿಯುತ್ತಿದ್ದಳು. ಆತ ತಣಿದರೆ ಆಕೆಗೆ ನೆಮ್ಮದಿ; ಆತಗೆ ಸಂತೋಷವಾದರೆ ಆಕೆಗೆ ಅದೇ ಸಂತೃಪ್ತಿ. ಆದರೆ ಆತನ ಆಲಿಂಗನದಲ್ಲೂ ತನ್ನನ್ನು ತಾನು ಒಂದು ಕ್ಷಣವೂ ಮರೆಯಲು ಅಶಕ್ತಳಾಗಿದ್ದಳು. ಗೋಪಿನಾಥನಿಗೆ ಆಕೆ ಕೊನೆವರೆಗೂ ಧರ್ಮಸೂತ್ರದಿಂದ ಬಂಧಿತಳಾದ ಗೆಳತಿಯಂತಿದ್ದಳೆ ವಿನಾ ಸರ್ವಸ್ವವನ್ನೂ ನಾಚಿಕೆಯಿಲ್ಲದೆ ಅಪನಂಬಿಕೆಯಿಲ್ಲದೆ ನಿವೇದಿಸಿ ತಲ್ಲೀನಳಾಗುವ ಅರ್ಧಾಂಗಿಯಾಗಿರಲಿಲ್ಲ. ನೋಡುವವರ ಕಣ್ಣಿಗೂ ಅವರಿಬ್ಬರು ಕಾಲೇಜಿನ ಸಹಪಾಠಿಗಳಂತಿದ್ದರೇ ಹೊರತು ನವದಂಪತಿಗಳಂತಿರಲಿಲ್ಲ. ಆಕೆ ಹಚ್ಚಿಬಿಟ್ಟುಹೋದ ಹಣತೆಮಾತ್ರ ದಿನೇದಿನೇ ಉಜ್ವಲಗೊಂಡು ಗೋಪಿನಾಥನ ಬದುಕನ್ನು ಬೆಳಗಿಸಿತು. ಪಂಬಿಗೆ ಆತನೇ ತಂದೆ, ಆತನೇ ತಾಯಿ. ಆತನಿಗೆ ಪಂಬಿಯೇ ಜೀವರತ್ನ, ಪಂಬಿಯೇ ಪ್ರೇಮಮೂರ್ತಿ.

೬

ಗೋಪಿನಾಥನು ಚಿಂತಾಮಗ್ನನಾಗಿ ಕುಳಿತಿರುವಾಗ ಹೊರಗೆ ಕಾಲು ಸಪ್ಪಳ ಕೇಳಿಸಿ ತಕ್ಷಣ ಬಂದು ಬಿಟ್ಟೆನೆಂತ ಪಕ್ಕದ ಸೋಫದಲ್ಲಿ ಪತ್ರಿಕೆಯೊಂದನ್ನು ಮೂಗಿಗೆ ಹಿಡಿದು ಅಡಿಗಣ್ಣಿನಿಂದ ಕಾವಲುಕುಳಿತಿದ್ದ ಪಂಬಿಗೆ

ಹೇಳಿ ಹಾಲಿಗೆ ಹೋದನು. ಅಲ್ಲೊಂದು ಸೋಫದಲ್ಲಿ ಆರಾಮವಾಗಿ ಕುಳಿತು ಗೇಣುದ್ದದ ಚುಟ್ಟವೊಂದನ್ನು ಒಂದು ಕೈಯಲ್ಲಿ ಹಿಡಿದು ಅದರ ಮೇಲೆ ಮತ್ತೊಂದು ಕೈಬೆರಳನ್ನಾಡಿಸುತ್ತ ಕೃಷ್ಣಯ್ಯ ಕೂತಿದ್ದರು.

" ಲೋ, ಇದೇನೋ, ಕೊಳಲೂದೋದಕ್ಕೆ ಅಭ್ಯಾಸವೊ ? "

" ಅಲ್ಲಾ ಗೋಪಿ, ಹಾಲಿನ ಮೇಜಿನಮೇಲೆ ಒಂದು ಬೆಂಕಿಪೊಟ್ಣವನ್ನಿಡೋದಕ್ಕೇನೋ ಧಾಡಿ ನಿನಗೆ ? "

" ತಡಿ, ತಂದೆ " ಅನ್ನುತ್ತ ಅಡುಗೆಮನೆಯಿಂದ ಒಂದು ಬೆಂಕಿಪೊಟ್ಣ ತಂದುಕೊಟ್ಟು ಕುಳಿತ. ಚುಟ್ಟವನ್ನು ಹಚ್ಚುತ್ತ ಹೊಗೆಬಿಟ್ಟರು ಕೃಷ್ಣಯ್ಯ.

" ಅಯ್ಯೋ, ಏನು ದುರ್ಗಂಧ ! ಹೇಗೆ ಸೇದುತ್ತೀಯೋ ಅದನ್ನ ? "

" ದುರ್ಗಂಧ ? ಅಷ್ಟೇ ಗೊತ್ತು ನಿನಗೆ. ಇದೇನು ಬಸ್ಸು ಭಂಡಸಾಲೆಗಳ ಪಾಮರರು ಸೇದೋ ಬತ್ತೀಂತ ತಿಳಕೊಂಡಿಯಾ ? "

" ಇಲ್ಲ. ಗುಡಿಗೋಪುರಗಳಲ್ಲಿ ಪುನೀತರು ಊದೋ ಕೊಳವೆಯಾಗಿರಬೇಕು. "

" ಚರ್ಚಿಲ್, ಚರ್ಚಿಲ್ ಮಾರ್ಕಿನ ಚುಟ್ಟಾ ಇದು. ಇಪ್ಪತ್ತೈದಕ್ಕೆ ಹತ್ತು ಹತ್ತು ರೂಪಾಯಿ ಮಾಲು. "

" ಹಾಗನ್ನು. ಅದೇ ಅಷ್ಟು ದುರ್ಗಂಧ. ಅದಿರಲಿ. ನೀನೇನು ಬಂದೆ ಹೇಳು. "

" ಸಬ್ ಕೋರ್ಟಿನಲ್ಲಿ ಒಂದು ನೀರಿನ ಕೇಸು ನಡೀತಾ ಇದೆ-- "

" ಅದೇನು ಸಬ್ ಕೋರ್ಟಲ್ಲಿ ? "

" ಏನೋ, ಎಲ್ಲಾದರೇನು ನಿನಗೆ ? ವಾದಿ ಕಡೆಯಿಂದ ರಾಘವೇಂದ್ರರಾಯರು ; ಪ್ರತಿವಾದಿ ಕಡೆಯಿಂದ ಕಮ್ತಿಯರು. ನಡುವೆ ನಾನು ಕಮ್ತಿಯರು. ನಿನ್ನೆ ಸ್ಥಳ ತನಿಖೆಗೆ ಹೋಗಿದ್ದೆವು, ವೀರಕಂಭಕ್ಕೆ. ಆಗ ನನಗನಿಸಿತು, ಈ ಕೇಸು ಮೂರು ಕೋರ್ಟುಗಳ ಸರ್ಕೀಟು ಮಾಡಿತಂದ್ರೆ ವಾದಿ ಜೋಯಿಸರ ಮನೆ ಗುಂಡಾಂತರಾಂತ. ಕೈಲಿ ಕಾಸಿಲ್ಲ, ಮೈಲಿ ತ್ರಾಣವಿಲ್ಲ; ಆದರೂ ಆ ಮುದುಕನೇನೂ ಬಿಟ್ಟುಕೊಡುವ ಹಾಗೆ ಕಾಣೋದಿಲ್ಲ. ಕೈಹಿಡಿದರೂ ಮುಷ್ಟಿ ಬಿಡದ ಹಟಮಾರಿ. ಎದುರುವಾದಿಯೋ ಸುಬ್ಬಾಭಟ್ಟ. ನಿನಗೆ ಗೊತ್ತಿರಬೇಕು—ಪಾದೆಗುಂಡಿ— "

"ಪಾದೆಗುಂಡಿ ಸುಬ್ಬಾಭಟ್ಟರೆ? ಗೊತ್ತು. ಕಳೆದ ವರ್ಷ ತನ್ನ ಕಾಹಿಲೆಯ ಹೆಂಡ್ತೀನ ವಾಸುದೇವ ಪೈಗೆ ತೋರಿಸಿ, ಒಪರೇಶನಿಗೆ ಚಿಕಿತ್ಸೆಗೆ ಎಲ್ಲಾ ಒಟ್ಟು ಸೇರಿ ಸುಮಾರು ಮುನ್ನೂರು ರೂಪಾಯಿ ಬೇಕಾಗಬಹುದೂಂತ ಕೇಳಿ, ಆ ಹೆಂಡತಿ ಸತ್ತರೆ ಸಾಯಲಿ, ಇನ್ನೂರು ರೂಪಾಯಿಯೊಳಗೆ ಇನ್ನೊಂದು ಹೆಂಡ್ತೀನ ತಂದೇನು ಅಂತ ಹೇಳಿಹೋದ ಪ್ರಾಣಿ ತಾನೆ? ಚೆನ್ನಾಗಿ ಗೊತ್ತು."

"ಅದೇ ಆಸ್ವಾಮಿ. ಚೆಲ್ಲುವಷ್ಟು ದುಡ್ಡಿದೆ. ಇನ್ನು ಇಬ್ಬರೂ ಹವೀಕರು. 'ಸೊಕ್ಕಿದರೆ ಹೈಗ ಹದನರಿಯ' ಅಂತ ನಾಣ್ಣುಡಿಯೇ ಇದೆಯಲ್ಲ. ಆದ್ದರಿಂದ ನೋಡು, ಈ ದಾವೇನ ನಿನ್ನ ಎವಾರ್ಡಿಗೆ ಕೊಟ್ಟರೆ ಅಪೀಲು ಗಿಪೀಲು ಇಲ್ಲದೇನೇ ಮುಗಿದೀತೂಂತ ಯೋಚಿಸಿ ಆ ಪ್ರಸ್ತಾಪ ಮಾಡಿದ್ದೇನೆ. ಪುಣ್ಯಕ್ಕೆ ಎಲ್ಲರೂ ಒಪ್ಪಿಕೊಂಡಿದ್ದಾರೆ. ನೀನೇನು ಹೇಳ್ತಿ? ಆಗಬಹುದಲ್ಲ?"

"ಆಗಬಹುದೂ—ಆದರೆ, ಇದರಲ್ಲೇನೋ ಪೀಕಲಾಟವಿದೇಂತ ಅನುಮಾನವಾಗುತ್ತಲ್ಲ? ತೀರ್ಪು ನಾನೇ ಬರೆದುಬಿಟ್ಟು ನನ್ನ ಸಹಿ ತಗೊಂಡು ಎರಡೂ ಕಡೆಯವರ ಬೈಗಳ ಬೆಟ್ಟ ನನ್ನ ತಲೇಮೇಲೆ ಹೊತ್ತುಹಾಕೋಣವೆಂತಲೇ, ನಿನ್ನ ಉಪಾಯ?"

"ಅಯ್ಯೋಯ್ಯೋ! ಅಂಥ ಅನ್ಯಾಯವುಂಟೆ? ಪೈಸ್ಲೆ ನನ್ನದು, ಹೆಸರು ನಿನ್ನದು ಹೇಗಾದೀತು? ಹಾಗೇನೂ ಇಲ್ಲ. ಎವಾರ್ಡು ನಿನ್ನದೇ ಇರಲಿ. ಸುಮ್ಮನೆ ಬೈಸಿಕೊಳ್ಳೋದ್ರಲ್ಲಿ ಅರ್ಥವಿಲ್ಲ."

"ಪರವಾಯಿಲ್ಲ. ನೀನೇ ಬರೆದುಬಿಡು, ತೀರ್ಮಾನ. ಸ್ಥಳ ಬೇರೆ ನೋಡಿಕೊಂಡು ಬಂದಿದ್ದೀ"

"ನಿನ್ನಿಷ್ಟ. ಹಾಗಾದ್ರೆ ಈ ಎವಾರ್ಡಿನ ಮೊದಲ ಸಭೆ ಇಂದು ಸಂಜೆ ರಾಘವೇಂದ್ರರಾಯರಲ್ಲಿ—"

"ಸಾಧ್ಯವಿಲ್ಲ. ಯಾಕೆಂತಿಯಾ? ಈ ಸಂಜೆ ಪಂಬಿಗೇ ಮೊಸಲು. ಸಿನೇಮಾಕ್ಕೆ ಆರುಗಂಟೆಗೆ ಕರಕೊಂಡು ಹೋಗ್ತೇನೇಂತ ಹೇಳಿಬಿಟ್ಟಿದ್ದೇನೆ."

"ಅರೆರೇ! ಎಂಥ ಶುಂಠನೋ ನೀನು! ನಿನ್ನಂಥ ಹೇಸರಕತ್ತೇನ ಹೊಡಕೊಂಡು ಹೊಳೆತನಕ ಹೋಗಬಹುದು, ಅಷ್ಟೆ. ನೀರು ಕುಡಿಸೋದಕ್ಕೆ

ಯಾರಿಗೆ ಸಾಧ್ಯ ? ಆಗಲಿ; ಈಗೊಂದು ಕೆಲಸಮಾಡು. ರಾಘವೇಂದ್ರರಾಯರಿಗೆ ಒಂದು ಚೀಟಿ ಬರೆದು ಕಳಿಸು. ಇವೊತ್ತು ಬರೋದಕ್ಕಾಗೋದಿಲ್ಲ ಅಂತ. ಏನೇನು ತಿಂಡಿ ಮಾಡಿಸುವುದರಲ್ಲಿದ್ದನೋ, ಮಹಾರಾಯ ಕುನ್ನಿ, ಪಾಪ, ಸಂಜೆ.ಬರ್ಜರಿ ಟಿಫಿನೂಂತ ಬೆಳಗ್ಗಿನಿಂದ ಉಪವಾಸ ಬಿದ್ದಿರಬೇಕು. ಎಷ್ಟು ಹೊಟ್ಟೆ ಸುಡುತ್ತೋ !" ಅನ್ನುತ್ತ ಕೃಷ್ಣಯ್ಯ ಹೊರಟಿದ್ದರು.

ಆಗ ಎದುರಂಗಳಕ್ಕೆ ಒಂದು ದೊಡ್ಡ ಕರಿಕಾರು ಬಿಸಿಲಲ್ಲಿ ಕನ್ನಡಿಯಂತೆ ಥಳಥಳಿಸುತ್ತ ಸರಸರನೆ ಬಂದುನಿಂತಿತು. ಅದನ್ನು ನೋಡಿ ಗೋಪಿನಾಥ ಒಳಗೆ ಓಡಿ ಹೋಗಿ ಬನೀನ ಮೇಲೊಂದು ಮುಸ್ಲಿನು ಜುಬ್ಬ ಹಾಕಿಕೊಂಡು ಬಂದನು. ಕೃಷ್ಣಯ್ಯ ಹೊರಗೆ ಹೋಗಿ ಕಾರಿನಿಂದ ಸಡಗರದಿಂದ ಇಳಿದು ಬಂದ ಮಹಿಳಾಸಮಾಜದ ಸುಶೀಲಮ್ಮನನ್ನೂ ಮಾರ್ಗರೆಟ್ ಡೇಸಳನ್ನೂ "ಒಳಗೆ ದಯಮಾಡಿಸಬೇಕು." ಅಂತ ಮರ್ಯಾದೆಯಿಂದ ಕರತಂದರು. ಕೃಷ್ಣಯ್ಯನ ಕೊಂಚ ಕೊಳೆಯಾದ ಪಂಚೆ, ತುಂಡು ಕೈಯ ಶರಟು, ಹೆಗಲ ಮೇಲೆಸೆದ ಅಂಗವಸ್ತ್ರ, ಬರುಡು ಪಚ್ಚೆಪಚ್ಚೆ ಕಾಣುವಂಥ ಕ್ರಾಪು, ಬಿಸಿಲಲ್ಲಿ ಒಣಗಿದಂತಿದ್ದ ಮೋರೆಯನ್ನು ನೋಡಿ ಡೇಸಳು ತಾತ್ಸಾರಭಾವದಿಂದ,

" ನಾವು ಗೋಪಿನಾಥರಾಯರ ಭೇಟಿಗಾಗಿ ಬಂದದ್ದು " ಅಂದಳು.

"ಅಲ್ವೇ ಮತ್ತೆ? ನನ್ನ ಭೇಟಿಗಾಗಿ ಇಲ್ಲಿಗೇತಕ್ಕೆ ಬರ್ತೀರಿ, ಪಾಪ! ಒಳಗೆ ದಯಮಾಡಿಸಿ, ರಾಯರಿದ್ದಾರೆ. ನಾನವರ ಬಟ್ಲರ್. ಆಕ್ಷೇಪವಿಲ್ಲವಷ್ಟೆ?"

ಗೋಪಿನಾಥನನ್ನು ನೋಡಿದೊಡನೆ ಸುಶೀಲಮ್ಮ ಪ್ರಸನ್ನರಾಗಿ ಕೈ ಜೋಡಿಸಿ 'ನಮಸ್ತೇ' ಅಂದರು. ಡೇಸಳು ಮೃದುಮಂದಹಾಸವನ್ನು ಬೀರಿದಳು. ಗೋಪಿನಾಥ ಆದರಾಶ್ಚರ್ಯವನ್ನು ಪ್ರಕಟಿಸುತ್ತ ತಲೆಬಾಗಿ 'ನಮಸ್ತೆ' ಅನ್ನುತ್ತ ಎರಡು ಸೋಫಗಳನ್ನು ಸೂಚಿಸಿದನು. ಅವರಿಬ್ಬರು ಕುಳಿತಮೇಲೆ ಅವರ ಬೆನ್ನಹಿಂದೆ ನಿಂತಿದ್ದ ಕೃಷ್ಣಯ್ಯ ಹೆದರಿ ಕಂಗಾಲಾದವರಂತೆ ಎದೆ ಗುಂಡಿಗೆಯನ್ನು ಮುಟ್ಟಿ ಎದೆ ಬಡಿತವನ್ನು ತೋರಿಸುತ್ತಿರುವುದನ್ನು ಕಂಡು ಗೋಪಿನಾಥ, "ಏನಿದು ಕೃಷ್ಣಯ್ಯ ! ಇವರು ಬಂದ ತಕ್ಷಣ ಹೊರಟು ಹೋಗೋದು ಚೆಂದವೆ? ನಮ್ಮ ಅಸಿಸ್ಟೆಂಟ್ ಕಲೆಕ್ಟರ್ರ ಪತ್ನಿ ಸುಶೀಲಮ್ಮನವರ ಪರಿಚಯವಿಲ್ಲವೆ ? ಮತ್ತಿವರು ಮಿಸ್ ಡೇಸರು. ಮಹಿಳಾಸಮಾಜದ

Mr. K. Srinivasa Rao



ಗೌರವಕಾರ್ಯದರ್ಶಿನಿ" ಎಂದು ಉರುಲು ಹಾಕಿದ್ದರಿಂದ ಕೃಷ್ಣಯ್ಯಗೆ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲದೆ ಎದುರುಬಂದು ಕುಳಿತರು.

"ಇವರೂ ವಕೀಲರೇ. ತುಂಬ ವಿಖ್ಯಾತರು" ಎಂದು ಗೋಪಿನಾಥ ಪರಿಚಯ ಮಾಡಿಕೊಟ್ಟನು.

"ತಾನು ಬಟ್ಲರ್ ಅಂದ್ರಲ್ಲಾ ಅವರು?" ಎಂದು ಡೇಸಳು ಆಕ್ಷೇಪಿಸಿದಳು.

"ಮಾರ್ಗರೆಟ್, ಮ್ಯಾ ಡಿಯರ್! ಅವರು ಚೇಷ್ಟೆಗಾಗಿ ಹಾಗಂದದ್ದು. ಅಷ್ಟೂ ಗೊತ್ತಾಗೋದಿಲ್ಲವೆ?" ಅನ್ನುತ್ತ ಸುಶೀಲಮ್ಮ ರಾಗ ಎಳೆದಳು.

"ನಾವು ಲಾಯರ್ಸ್. ನಾಲ್ಕು ಕೈಗಳು, ಏಳು ನಾಲಿಗೆಗಳು ನಮಗೆ" ಎಂದ ಗೋಪಿನಾಥ.

"ಅಷ್ಟೇ ಅಲ್ಲ. ನಿಮ್ಮ ಲಾರ್ಡ್ ಏಸುವಿಗೆ ನಾವು ಅತಿ ಹತ್ತಿರದವರು. ಮದ್ರಾಸಿನ ಹೈಕೋರ್ಟಿನಲ್ಲಿ ಲಾಯರ್ಸ್ಸೆಲ್ಲ 'ಮ್ಯಾ ಲಾರ್ಡ್, ಮ್ಯಾ ಲಾರ್ಡ್' ಅಂತ ಜಪ ಮಾಡುತ್ತಲೇ ಇರ್ತಾರೆ" ಅಂದರು ಕೃಷ್ಣಯ್ಯ ಡೇಸಳನ್ನು ನೋಡುತ್ತ.

ಡೇಸಳಿಗೆ ಸಿಟ್ಟುಬಾಯಿತು. "ನಿಮ್ಮ ಕೋರ್ಟು ಕಚೇರೇಲಿರೋದೆಲ್ಲಾ ಸುಳ್ಳು ಸುಳ್ಳು ದಾವೆಗಳು, ಸುಳ್ಳು ಸಾಕ್ಷಿಗಳು, ಸುಳ್ಳು ಸಾಧನೆಗಳು. ನಮ್ಮ ಏಸುವಿಗೆ ಎಂದಿಗೂ ಪ್ರೀತಿಯಾಗಲಾರದು."

"ಮ್ಯಾ ಗುಡ್ನೆಸ್, ಮಾರ್ಗರೆಟ್!—" ಎಂದು ಸುಶೀಲಮ್ಮ ಎಗರಿದರು. ಆದರೆ ಕೃಷ್ಣಯ್ಯ ಅಡ್ಡ ಮಾತನಾಡುತ್ತ,

"ಹಾಗಲ್ಲ. ನಾನು ಓದಿ ತಿಳಿದಮಟ್ಟಿಗೆ ನಿಮ್ಮ ಬೈಬಲ್ಲಿನಲ್ಲಿರೋದು, ಸುಳ್ಳು ಸಾಕ್ಷಿ ನುಡಿಯಬಾರದೂಂತ. ಸುಳ್ಳು ಸಾಕ್ಷಿ ಹೇಳೋವರನ್ನ ಷಿಕಾರಿ ಮಾಡೋದೇ ನಮ್ಮ ಕಸಬು." ಅಂದರು.

"ಬೈಬಲ್ಲು ಓದುತ್ತೀರೇನು ನೀವು? ಹಾಗಾದರೆ ನಮ್ಮ ಚರ್ಚಿಗೆ ಒಂದು ದಿನ ಬರಲೇಬೇಕು." ಅನ್ನುತ್ತ ಅವರ ಮೇಲೆ ಆರಂಭದಲ್ಲಿದ್ದ ಅನಾದರವನ್ನು ಮರೆತು ತನ್ನ ಕೈಗಳನ್ನು ಹಿಸುಕುತ್ತ ಅಂಗಲಾಚಿದಳು.

" ಮಾರ್ಗರೆಟ್, ನೀನು ಬಂದ ಕೆಲಸ ಮಾಡ್ತೀಯೋ ಅಥವಾ ಇವರನ್ನ ನಿಮ್ಮ ಜಾತಿಗೆ ಸೇರಿಸಿಕೊಳ್ಳುವ ಪ್ರಯತ್ನ ಮಾಡುತ್ತೀಯೋ? ಹೇಳು." ಎಂದು ಅವಳ ಮತಾಂತರಗೊಳಿಸುವ ವಿಶನೆರಿ ಚಸಲಕ್ಕೆ ಅಸಹ್ಯ ಪಟ್ಟು ಸುಶೀಲಮ್ಮ ಎಚ್ಚರಿಸಿದರು.

ತನ್ನ ಅಧ್ಯಕ್ಷರು ಕೋಪಗೊಂಡುದು ನೋಡಿ ಡೇಸಳ ಉತ್ಸಾಹವೆಲ್ಲ ಇಂಗಿ ಹೋಯಿತು. " ತಪ್ಪಾಯಿತು. ನಾನು ಸುಮ್ಮಗಿದ್ದು ಬಿಡ್ತೇನೆ. ನೀವೇ ಹೇಳಿ ಬಿಡಿ, ನಾನು ಹೇಳಿದ್ರೂ ಸರಿಯಾಗಲಾರದು. "

ಈ ಮನೋಭಾವಗಳ ಏರಿಳಿತ, ಸ್ವಭಾವದ ಸರಳತೆ ಡೇಸಳ ಲಕ್ಷಣಗಳು. ಹಾಲಿವುಡ್ಡಿಗೆ ಹೇಗಾದರೂ ಮಾಡಿ ಹೋಗಿ ಅಲ್ಲಿಯ ತಾರಾವೃಂದಕ್ಕೆ ಸೇರುವ ಹಿರಿ ಹಂಬಲವಿತ್ತು, ಆಕೆಗೆ ಒಂದೆರಡು ವರ್ಷಗಳ ಹಿಂದೆ. ಕಿಡಿ ಕಣ್ಣುಗಳ, ಕುಡಿಮೀಸೆಯ ಮೌನವೀರನೊಬ್ಬ ತನ್ನ ರೂಪಲಾವಣ್ಯಕ್ಕೆ ಮನ ಸೋತು ಉದ್ಯಾನವನದ ಸ್ನಿಗ್ಧ ತನಿ ಬೆಳದಿಂಗಳಲ್ಲಿ ಉಗ್ರಪ್ರೇಮಾವೇಶದಿಂದ ಎಲುಬುಗಳು ನುಚ್ಚುನುರಿಯಾಗುವಂತೆ ತನ್ನನ್ನು ಬಿಗಿದಪ್ಪಿದಂತೆಯೂ ತಾನು ಮೋಹಮೂರ್ಛೆವನ್ನು ಮೊರೆಯಿಡುತ್ತ ಆತನ ಬಾಹುಬಂಧನದಲ್ಲೇ ಮೂರ್ಛಿತಳಾದೆನೆಂದೂ ಆಕೆಗೆ ಈಗಲೂ ಆಗಾಗ ಸ್ವಪ್ನವಾಗುತ್ತಿತ್ತು. ಆದರೆ ಗೊಡ್ಡು ಹಿಂದುಗಳ ರಾಜ್ಯದಲ್ಲಿ ಇಂಥ ಬಯಕೆಗಳು ಸಿದ್ಧಿಸಲು ಅವಕಾಶವೆಲ್ಲಿ? ಆಕೆಯ ಆಸುಪಾಸಿನಲ್ಲಿ, ಸ್ವಜಾತಿಯ ತರುಣರಲ್ಲಿ ಕ್ಲಾರ್ಕ ಗೇಬಲ್‌ನಂಥ ಆದರ್ಶನಾಯಕರು ಯಾರೂ ಆಕೆಯ ಗೋಚರಕ್ಕೆ ಬಿದ್ದಿರಲಿಲ್ಲ. ಹೀಗಾಗಿ ಹತಾಶಳಾಗಿ, ಆಕೆ ಯಾವುದಾದರೊಂದು ಸನ್ಯಾಸಿನಿಯರ ಮಠಕ್ಕೆಸೇರಿ ಏಸುಪ್ರಭುವನ್ನೇ ಮಾನಸಪ್ರೇಮಿಯಾಗಿ ವರಿಸಿ ಅನವರತವೂ ಆತನ ಸೇವೆಯಲ್ಲೇ ಜೀವ ಸವೆಸುವದೇ ತನ್ನ ಹಣೆಯಲ್ಲಿ ಬರೆದ ಭಾಗ್ಯವೆಂತ ನಿರ್ಧಾರಕ್ಕೆ ಬಂದಿದ್ದಳು. ಗೋಪಿನಾಥ ಕ್ರೈಸ್ತನಾಗಿದ್ದರೆ ಆಕೆಯಲ್ಲಿ ಈ ತ್ಯಾಗ ಬುದ್ಧಿ ಮೂಡುತ್ತಿತ್ತೋ ಇಲ್ಲವೋ, ಹೇಳುವುದಕ್ಕೆ ಬಾರದು. ತನಗೆ ಅನುರೂಪನಾದ ನಾಯಕನಿದ್ದರೆ ಈತ; ಆದರೆ ಮಾಡುವುದೇನು? ಜಾತಿ ತಪ್ಪಿ ಹುಟ್ಟಿಕೊಂಡಿದ್ದಾನೆ ಎಂಬ ಗುಪ್ತವೇದನೆ ಬೇರೆ ಇತ್ತು ಡೇಸಳಿಗೆ. ಆಕೆ ಶಿರಸಾವಹಿಸಿದ ವೈರಾಗ್ಯಮತ ಶರೀರಕ್ಕೆ ಹೊಂದಿಕೊಂಡಹಾಗಿರಲಿಲ್ಲ. ಮೈಯ ಉಬ್ಬುಪ್ರದೇಶಗಳು ಎದ್ದು ತೋರುವಂತೆ ಬಿಗಿಯಾದ ಬ್ಲೌಸುಪ್ರಾಕು

ಕೊಟ್ಟು ಗೋಪಿನಾಥನೆದುರಿಗೆ ಕೈಜೋಡಿಸಿ ತೊಡೆಯಮೇಲಿಟ್ಟುಕೊಂಡು ಕುಳಿತು, ಕತ್ತು ಓರೆಮಾಡಿ, ಅರೆಮುಚ್ಚಿದ ಕಣ್ಣುಗಳಿಂದ ಹೇಳಲಾಗದ ಹಂಬಲಗಳನ್ನು ಹೊರಹೊಮ್ಮಿಸುತ್ತಿದ್ದ ಹರೆಯದ ಹೆಣ್ಣಿಗೆ ಮರಳದ ಮೃತ್ಯು ಶಯ್ಯೆಯಲ್ಲಿ ಜೀವ ಬಲಿದಾನ ಮಾಡುವ ಧ್ಯೇಯ ಇದ್ದಹಾಗಿರಲಿಲ್ಲ.

ಆಕೆಯ ಬಳಿ ಕುಳಿತಿದ್ದ ಸುಶೀಲಮ್ಮ ಅಗ್ರಾಸನಗಳ ಅಲಂಕಾರಕ್ಕಾಗಿಯೇ ಜನ್ಮವೆತ್ತಿದರೆಂಬಂತಿತ್ತು. ಅಧ್ಯಕ್ಷಸ್ಥಾನಕ್ಕೊಪ್ಪುವಂಥ ಗುರುತ್ವ, ದರ್ಪ, ಪ್ರಸನ್ನತೆ ಎಲ್ಲವೂ ಬೇಕಾದಷ್ಟಿತ್ತು ಅವರಲ್ಲಿ. ಆದರೆ ಪಕ್ವವಾದ ಹಣ್ಣಿನಲ್ಲಿ ಮಿಡಿಗಾಯಿಯ ಹಸರುಗೆರೆ ಒಂದೊಂದು ವೇಳೆ ಉಳಿದು ಹೋಗುವಂತೆ ಅವರ ಗಾಂಭೀರ್ಯದ ಎಡೆಯಲ್ಲಿ ಕನ್ಯಾಚೇಷ್ಟೆಯು ಕೆಲವುಸಲ ಮೈ ಕುಲುಕಿ ಸುವುದರಲ್ಲಿ, ಮುಖವಿಕಾರ ಮಾಡುವುದರಲ್ಲಿ ಹೊರಬೀಳುತ್ತಿತ್ತು ಕಾರ್ಯ ದರ್ಶಿನಿಯು ಕಾರ್ಯಭಾರವನ್ನು ತನ್ನ ಹೆಗಲಮೇಲಿಳಿಸಿದ್ದನ್ನು ನೋಡಿ ಸೆರ ಗೆಳೆದುಕೊಂಡು ಕೊರಳನ್ನುಬ್ಬಿಸಿಕೊಂಡರು.

" ಅವಸರವಿಲ್ಲ " ಎಂದರು ಕೃಷ್ಣಯ್ಯ ಮೆತ್ತಗಾಗಿ. ಆದರೆ ಈ ಅಧಿಕ ಪ್ರಸಂಗವನ್ನು ಗಣ್ಯಮಾಡದೆ ಸುಶೀಲಮ್ಮ ತಮ್ಮ ಕೆಲಸವನ್ನು ಸಂಕ್ಷೇಪ ವಾಗಿ ಅರುಹಿದರು. ಬಡ ಭಗಿನಿಯರ ವೈಯಕ್ತಿಕ ಬೆಳವಣಿಗೆಗೆ ಸಹಾಯ ಮಾಡುವ ಸದುದ್ದೇಶದಿಂದ ಸ್ಥಾಪಿಸಲ್ಪಟ್ಟ ಅವರ 'ಗೃಹಪರಿಷ್ಕರಣ ಸಮಿತಿ'ಯ ಆರಂಭೋತ್ಸವವನ್ನುನಾಡಿದು ಬೆಳಗ್ಗೆ ಜರಗಿಸುವುದಿದೆಯೆಂದೂ ಅದರೊಂದಿಗೆ ಸಮಾಜದ ಮಹಿಳೆಯರು ತಾವೇ ತಯಾರಿಸಿದ ತಿಂಡಿಗಳ ಪ್ರದರ್ಶನವು ಆಗತಕ್ಕದ್ದಿದೆಯೆಂದೂ ಆ ಸುಸಂದರ್ಭದಲ್ಲಿ ಗೋಪಿನಾಥ ರಾಯರು ಅಗ್ರಾಸನವನ್ನು ವಹಿಸಬೇಕೆಂದೂ ಆಗ್ರಹದಿಂದ ಹೇಳಿ ಮುಂಜಾ ಗ್ರತೆಯಾಗಿ ಮೊದಲೇ ಪೋಣಿಸಿಟ್ಟುಕೊಂಡಿದ್ದ ಚಿಕ್ಕ ಭಾಷಣವನ್ನು ಗೋಪಿನಾಥನ ಕೊರಳಿಗೆ ಹಾಕಿದರು.

" ಕ್ಷಮಿಸಬೇಕು. ನಿಮ್ಮ ವಿಶ್ವಾಸಕ್ಕೆ ತಕ್ಕ ಅರ್ಹತೆ ನನ್ನಲ್ಲಿಲ್ಲ. ನನ್ನ ಜ್ಞಾನವೂ ವಿಸ್ತಾರವಾದ್ದಲ್ಲ. ಗೊತ್ತಿದ್ದನ್ನು ಹೇಳೋಣವೆಂದರೆ ಮಾತು ಗಾರನೂ ಅಲ್ಲ. ದಯವಿಟ್ಟುಇನ್ನಾರನ್ನಾದರೂ ಕೇಳಿಕೊಳ್ಳಿ" ಎಂದು ವಿನಯ ದಿಂದ ಖಂಡಿತವಾಗಿ ನುಡಿದುಬಿಟ್ಟ ಗೋಪಿನಾಥ.

" ಸುಶೀಲಮ್ಮ, ನಮಗಿವರಾಗಬಹುದು; ಕೃಷ್ಣಯ್ಯ. " ಎಂದು ಡೇಸಳು ಅತ್ಯಾತುರದಿಂದ ಸೂಚನೆಕೊಟ್ಟಳು.

"ಓಹೋ, ಏನಡ್ಡಿ? ಆದರೆ ನಿಮ್ಮ ಕಾರ್ಯಕಲಾಪದ ಎರಡನೇ ಭಾಗಕ್ಕೆ ಮಾತ್ರ. ತಿಂಡಿಗಳ ಪರೀಕ್ಷಕರಾಗಿ ಬೇಕಾದರೆ ನನ್ನ ಆರಿಸಿಕೊಳ್ಳಿ. " ಎಂದು ಒಪ್ಪಿಕೊಂಡರು ಕೃಷ್ಣಯ್ಯ. ಆದರೆ ಅವರ ಬ್ಯಾಬಲು ಪಾರಾಯಣಕ್ಕೆ ಡೇಸಳು ಮೆಚ್ಚಿದ್ದರೂ ಸುಶೀಲಮ್ಮಗೆ ಅದು ಸಾಕೆನಿಸಲಿಲ್ಲ. ಅವರು ಮಾತೆತ್ತುವುದರೊಳಗಾಗಿ ಗೋಪಿನಾಥ ಒಂದು ಸಲಹೆಯಿತ್ತನು.

" ನಿಮಗೆ ಒಟ್ನಲ್ಲಿ ಸುಲಕ್ಷಣವಾಗಿ, ಸುಭಾಷಿತರಾಗಿ, ಸುಪ್ರಸಿದ್ಧರಾಗಿ ರೋವ್ರು ಬೇಕು ತಾನೆ ? ಎಡ್ವೊಕೇಟ್ ರಾಘವೇಂದ್ರರಾಯರನ್ನು ಕೇಳಿಕೊಳ್ಳಿ" ಎಂದನು.

" ಓಹ್, ಮ್ಯಾ ಗಾಡ್!" ಅನ್ನುತ್ತ ಡೇಸಳು ಗಾಳಿಹೋದ ಚಂಡಿನಂತೆ ಕುಳಿತಲ್ಲೇ ಕುಸಿದುಬಿಟ್ಟಳು. ಸುಶೀಲಮ್ಮ ಕುಪಿತರಾಗಿ " ಮಾರ್ಗರೆಟ್ !" ಎಂದು ಗದರಿಸಿದರು. ಗೋಪಿನಾಥ ಆಶ್ಚರ್ಯದಿಂದ ಸುಮ್ಮಗಿದ್ದ. ಆದರೆ ಕೃಷ್ಣಯ್ಯ ಕೇಳಿದರು,

" ಏನು ಸಮಾಚಾರ ? ಮೈ ಚೆನ್ನಾಗಿಲ್ವೇನು ? "

" ಮೈ ಚೆನ್ನಾಗಿಲ್ಲದೆ ಏನು ಧಾಡಿ. ಹೇಳಿ ಬಿಡೇ, ಇನ್ನೇನು, " ಎಂದು ನಿರಾಶರಾಗಿ ಡೇಸಳಿಗೆ ಆಜ್ಞೆಯಿತ್ತರು. ಸುಶೀಲಮ್ಮ.

"ಮತ್ತೇನೂ ಇಲ್ಲ. ನೀವು ಹೇಳಿದ ರಾಘವೇಂದ್ರರಾಯರ ಹೆಂಡತಿ ಮಾಲತಿಬಾಯಿ ನಿನ್ನೆ ನಮ್ಮ ಆಡಳಿತ ಸಭೆಯಲ್ಲಿ ಇದ್ದವರನ್ನೆಲ್ಲ ಬಾಯಿಗೆ ಬಂದಂತೆ ಬಯ್ದು ಅಪಮಾನಗೊಳಿಸಿದ್ದಾರೆ. ಅವರ ಮೆಂಬರಿಕೆಯನ್ನು ನಾವು ತೆಗೆದುಹಾಕಿದ್ದೇವೆ." ಎಂದು ಚುಟುಕಾಗಿ ಡೇಸಳು ಹೇಳಿದಳು. ಆದರೆ ಸುಶೀಲಮ್ಮಗೆ ಸಮಾಧಾನವಾಗದೆ, " ಬೈದರೊಂತಲ್ಲ, ನಮ್ಮಾಕ್ಷೇಪ. ನಮಗೇನು ಬೈಗಳು ಕಡಿಮೆಯೇ ? ಸಮಾಜಸೇವೆಗೆ ಬೆನ್ನುಬಗ್ಗಿದವರಿಗೆ ಬೈಗಳ ಹೊರೆ ತಪ್ಪಿದ್ದಲ್ಲ. ಮಾಲತಿಬಾಯಿಯು ನಮ್ಮ ಮೂಲಧ್ಯೇಯವನ್ನೇ ಖಂಡಿಸಿ, ಹೀಯಾಳಿಸಿ ತುಚ್ಛೀಕರಿಸಿದವಳು. ಇಡೀ ಸಭೆಯ ಮುಖಕ್ಕೇ ಮಣ್ಣೆರಚಿದಳು." ಎಂದರು.

ಸ್ವಲ್ಪ ಸಮಯ ಕೋಣೆ ನಿಶ್ಶಬ್ದವಾಗಿತ್ತು. ಸುಶೀಲಮ್ಮ ಯಾವುದಾದರೊಂದು ನೆಪ ಕಲ್ಪಿಸಿಕೊಂಡು ಪೂರ್ವಪರಿಚಯವನ್ನು ಪುಷ್ಟೀಕರಿಸುವ ಚಪಲದಿಂದ ಆಗಿಂದಾಗ ಗೋಪಿನಾಥನಲ್ಲಿಗೆ ಬರುತ್ತಿರುವುದನ್ನು ನೆನೆಸುತ್ತ ಕೃಷ್ಣಯ್ಯ ತನ್ನಷ್ಟಕ್ಕೇ ನಗುತ್ತಿದ್ದರು. ಗೋಪಿನಾಥನಿಗೆ ಮಾಲತಿ ಹೀಗೂ ಮಾಡಿರಬಹುದೇ, ಅಥವಾ ಇವರಿಬ್ಬರು ಸತ್ಯದೊಡನೆ ಸುಳ್ಳನ್ನು ಬೆರಸಿ ಹೇಳಿರಬಹುದೆ, ಎಂಬ ಯೋಚನೆ ತಲೆದೋರಿತ್ತು. ಕೊನೆಗೆ,

" ನಿಮ್ಮ ಕಾರ್ಯಕ್ರಮ, ನಿಮ್ಮ ಉದ್ದೇಶಗಳಿಗೆ ವಿರೋಧವಾಗಿ ನುಡಿಯುವುದಕ್ಕೂ ನಿಮ್ಮನ್ನೆಲ್ಲ ಬೈಯುವುದಕ್ಕೂ ವ್ಯತ್ಯಾಸವಿದೆಯಲ್ಲ ? " ಎಂದು ಕೇಳಿದನು.

" ಬಣ್ಣದ ಬೀಸಣಿಕೆ, ಬೆಡಗಿನ ಬಸವಿ, ಅಂದ್ರೆ ಬೈಗಳು ತಾನೆ ? " ಎಂದು ಸುಶೀಲಮ್ಮ ಬಿರುಸಾಗಿ ಮರುಪ್ರಶ್ನೆ ಮಾಡಿದರು.

" ನಿಜ, ನಿಜ. ರಾಘವೇಂದ್ರರಾಯರನ್ನು ಕೇಳಬೇಕೆಂತಲೇ ಇಲ್ಲ. " ಅಂದರು ಕೃಷ್ಣಯ್ಯ.

" ನಾವಲ್ಲಿ ಹೋಗಿದ್ದೆವು. ನೇರ ಅಲ್ಲಿಂದಲೇ ಬಂದದ್ದು. ಅವರ ಹೆಂಡತಿ ಮಾಡಿದ ಅನ್ಯಾಯ ಮುಚ್ಚುಮರೆಯಿಲ್ಲದೆ ಹೇಳಿಬಿಟ್ಟು ಬಂದೆವು. ನಮಗ್ಯಾರ ಹಂಗು, ಹೆದರಿಕೆ ? " ಅಂದರು ಸುಶೀಲಮ್ಮ.

' ಅವರೇನಂದರು ' ಅಂತ ಕೃಷ್ಣಯ್ಯ ಕೇಳಿದ್ದಕ್ಕೆ " ಅನ್ನೋದೇನು ? ತುಂಬ ವ್ಯಥೆಪಟ್ಟರು. ಇಂದೋ ನಾಳೆಯೋ ಒಂದು ಕ್ಷಮಾಪತ್ರ ಬರೆಸಿ ಕಳುಹಿಸುತ್ತೇನೆ. ಅಂದರು. "

ಅಶ್ಲೀಲಶಬ್ದಗಳು ಮಾಲತಿಯ ಬಾಯಿಂದ ಬರಲು ಕಾರಣವೇನು ? ಮಿತಿ ತಪ್ಪಿ ಮಾತನಾಡುವಷ್ಟು ಅವಳಿಗೇನಾಯಿತು ? ಎಂದು ತನ್ನೊಳಗೇ ಚಿಂತಿಸುತ್ತಿದ್ದ ಗೋಪಿನಾಥಗೆ ಈ ಕ್ಷಮಾಪತ್ರದ ಸಮಾಚಾರ ಕಿವಿಗೆ ಬಿದ್ದು ಏಕಕಾಲದಲ್ಲಿ ಕೋಪವೂ ಕೌತಕವೂ ಉದ್ರೇಕವಾಯಿತು.

" ಬರೆಸಿ ಕಳುಹಿಸೋದು, ಅಂದ್ರೆ, ರಾಘವೇಂದ್ರರಾಯರು ಒಬ್ಬರೇ ಇದ್ದರೇನು ಮನೇಲಿ ? " ಎಂದು ಆದಷ್ಟು ಸಮತೆಯಿಂದ ವಿಚಾರಿಸಿದನು.

" ಮಾಲತಿಬಾಯಿಯೂ ಇದ್ದರು. " ಎಂದರು ಸುಶೀಲಮ್ಮ.

" ಸ್ನಾನಕ್ಕೆ ಹೋಗಿದ್ರಂತೆ " ಎಂದಳು ಡೇಸ.

" ಬರುವಷ್ಟರಲ್ಲಿ ನೀವು ವಾಪ್ಸು ಬಂದಿರೇನೋ ? " ಎಂದರು ಕೃಷ್ಣಯ್ಯ. "ಒಳ್ಳೇದೇ ಮಾಡಿದಿರಿ. ಅಲ್ಲಿ ಮತ್ತೆ ಪುನಃ ಜಟಾಪಟಿಯಾದರೇನು ಗತಿ ! "

ಅಷ್ಟರಲ್ಲಿ ಒಳಗಿಂದ ' ಪಪ್ಪ, ಪಪ್ಪ ' ಎಂಬ ಪಂಬಿಯ ಕೂಗು ಕೇಳಿಸಿ ಎಲ್ಲರೂ ಆಕಡೆಗೇ ನೋಡಿದರು. ಎಡಪಾದವನ್ನು ಅರ್ಧ ಊರುತ್ತ ಕುಂಟುತ್ತ ಬರುತ್ತಿದ್ದ ಪಂಬಿ ಹೊಸ ಮುಖಗಳನ್ನು ಕಂಡು ಹೊಸಲಾಚೆಗೇ ಸ್ತಬ್ಧಳಾದಳು.

" ಏನು ಪಂಬಿ ? ಬಾ, ಮುದ್ದು, ಬಾ " ಎಂದು ಗೋಪಿನಾಥ ಕರೆದ ಮೇಲೆ ಮೆಲ್ಲಗೆ ಒಂದೂವರೆ ಕಾಲಿಂದ ಬಂದಳು.

" ಏನಾಯ್ತಮ್ಮಾ ಪುಟ್ಟಕಾಲಿಗೆ ? "

" ಮುಯ್ಯು ಕಚ್ಚಿತು."

" ಮುಳ್ಳು ಕಚ್ಚಿತೇ, ಎಲ್ಲಿ ಹೋಗಿದ್ದಿ ? " ಅನ್ನುತ್ತ ಎತ್ತಿಕೊಂಡು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಕೆಂಪಗಿದ್ದ ಎಡಪಾದವನ್ನೆತ್ತಿ ಪರೀಕ್ಷಿಸಿದನು

" ಮುಳ್ಳು ಚುಚ್ಚಿತು, ಚುಚ್ಚಿತೂಂತನ್ನ ಬೇಕು, ಬೇಬಿ, ಕಚ್ಚಿತೂಂತಲ್ಲ" ಎಂದು ಸುಶೀಲಮ್ಮ ಮಗುವಿನ ಮಾತಿನ ಶೈಲಿಯನ್ನು ತಿದ್ದಿದರು. ಪಂಬಿ ಅಡಿಗಣ್ಣಿನಿಂದ ಒಂದು ಕ್ಷಣ ಅವರನ್ನು ನೋಡಿ ತಂದೆಯನ್ನು ಇನ್ನಷ್ಟು ಆತುಕೊಂಡಳು. ಗೋಪಿನಾಥ ಆಕೆಯ ಪಾದವನ್ನು ಒತ್ತೊತ್ತಿ ನೋಡಿ " ಏನೂ ಇಲ್ಲವಲ್ಲ ? ಎಲ್ಲಿಗೆ ಹೋಗಿದ್ದಿ ? " ಎಂದು ಮತ್ತೆ ಕೇಳಿದನು.

" ಅಂಗಕ್ಕೆ ಇವಿಯೆ ನೋಯಕ್ಕೆ " ಅನ್ನುವಾಗ ಗಲ್ಲಗಳ ಭಾರಕ್ಕೆ ತುಟಿ ಮೂಲೆಗಳು ಜಗ್ಗಿದವು.

" ಇರುವೆ ನೋಡೋದಕ್ಕೆ ಅಂಗಳಕ್ಕೆ ಹೋಗಿ—? "

" ಮುಯ್ಯು ಕಚ್ಚಿತು " ಪಂಬಿ ಸುಶೀಲಮ್ಮನನ್ನು ಧಿಕ್ಕರಿಸಿ ನೋಡಿದಳು. ಕೃಷ್ಣಯ್ಯಗೆ ತಡೆಯಲಾರದ ನಗು ಉಕ್ಕಿಬಂತು. ಮಿಸ್ ಡೇಸಳಿಗೂ ನಗು ಬಂತು. ಸುಶೀಲಮ್ಮಗೆ ಉಂಟಾದ ಸಿಟ್ಟನ್ನು ಆಕೆಯ ಮೇಲೆ ತೆಗೆದರು.

" ಮಾರ್ಗರೆಟ್ ! ನಗೋದಕ್ಕೇನಾಗಿದೆ; ಹುಚ್ಚೇ, ನಿನಗೆ ? " ಎಂದು ಬೆದರಿಸಿ ಗೋಪಿನಾಥನನ್ನು ನೋಡಿ "ನೀವು ನಿಮ್ಮ ಮಗುವಿನ ಮಾತನ್ಯಾಕೆ

ತಿದ್ದೋದಿಲ್ಲ? ಹಾಗೇ ಬಿಟ್ಟುಬಿಟ್ಟರೆ ಮುಂದಕ್ಕೆ ಕಷ್ಟವಾಗೋದಿಲ್ವೇ?"

"ನನಗೆ ಸಾಕಷ್ಟು ತಾಳ್ಮೆಯೂ ಇಲ್ಲ, ತಿಳುವಳಿಕೆಯೂ ಇಲ್ಲ, ಆ ಕೆಲಸಕ್ಕೆ. ತನ್ನಷ್ಟಕ್ಕೇ ಸರಿಹೋಗಲೀಂತಿದ್ದೇನೆ."

"ಬಾ ಜೇಬಿ, ಕಾರಿನಲ್ಲಿ ಕೂಡ್ರಿಸಿ ಕರಕೊಂಡು ಹೋಗ್ತೇನೆ, ಬಾ." ಕೈ ನೀಡಿ ಕರೆದರು ಸುಶೀಲಮ್ಮ.

ಮಗು ಅವರನ್ನೇ ದಿಟ್ಟಿಸಿ ನೋಡಿ, "ಬಯದಿಯ" ಅಂದುಬಿಟ್ಟಳು.

"ಕಾರಿದೆ, ಹೊಸ ಕಾರು, ಚೆಲೋ ಕಾರು."

"ಕಾಯು ಕೆತ್ತ ವಾತ್ನೆ."

ಸುಶೀಲಮ್ಮಗೆ ಅರ್ಥವಾಗದೆ ಹುಬ್ಬಗಳನ್ನೆತ್ತಿದರು.

"ನಿಮ್ಮ ಕಾರು ಕೆಟ್ಟ ವಾಸನೇಂತೆ, ಅವಳ ಅಭಿಪ್ರಾಯ" ಎಂದು ಬಹು ಪಟ್ಟಿಗೆ ಅವಳ ಭಾಷೆಯನ್ನು ಅಭ್ಯಾಸಿಸಿದ್ದ ಕೃಷ್ಣಯ್ಯ ತಿಳಿಸಿ ನಕ್ಕರು.

"ಹಾಗೇನು? ಅದಕ್ಕೇನು ಗೊತ್ತು ಪಾಪ!" ಎಂದು ಪಶ್ಚಾತ್ತಾಪ ಪಡುತ್ತ ಮಗುವಿನ ಪ್ರಕರಣವನ್ನೇ ತೀರ ಮರೆತು ಎದ್ದುನಿಂತರು. ಡೇಸಳೂ ಎದ್ದುನಿಂತಳು ಗೌನನ್ನು ಸರಿಪಡಿಸಿಕೊಳ್ಳುತ್ತ.

"ನಿಮ್ಮಿಬ್ಬರನ್ನೂ ಬಹಳ ಹೊತ್ತು ನಿಲ್ಲಿಸಿಕೊಂಡೆ" ಅನ್ನುತ್ತ ಮಗುವನ್ನೆತ್ತಿಕೊಂಡು ಗೋಪಿನಾಥನೂ ಎದ್ದನು. ಅವರಿಬ್ಬರು "ನಮಸ್ತೇ" ಎಂದು ವಂದಿಸಿ ಹೊರಟುಹೋದರು. ಕೃಷ್ಣಯ್ಯ ಎದ್ದುನಿಂತವರು ಕೈ ಜೋಡಿಸಿ ತಲೆಬಾಗಿ ನಮಸ್ಕರಿಸಿದರು.

ಅವರ ಕಾರು ಹೋದ ತಕ್ಷಣ ಕೃಷ್ಣಯ್ಯ, "ಗೋಪಿ, ಒಂದು ಕೆಲಸ ಮಾಡು, ಈ ಕ್ಷಣ ಪಂಬೀನ ಒಳಗೆ ಕರಕೊಂಡು ಹೋಗಿ ನಿಮ್ಮಮ್ಮನ ಹತ್ರ ದೃಷ್ಟಿ ನಿವಾಳಿಸಿ ಹಾಕೋದಕ್ಕೆ ಹೇಳು. ಯಕ್ಷಿಣಿಯರ ಕಣ್ಣು ಕೆಟ್ಟದು. ಆಮೇಲೆ ಇನ್ನೊಂದು ವಿಷಯ. ನೀನು ಎರಡನೇ ಮದುವೆಯಾಗೋದಿದ್ರೆ ಬಹಳದೂರ ಹುಡುಕಬೇಕಾಗಿಲ್ಲ. ಶೇಕಡ ಐವತ್ತರಷ್ಟು ನಿಶ್ಚಯವಾದ ಹಾಗೇನೇ. ನೆನಪಿರಲಿ." ಅಂದರು.

"ಯಾರು, ಮಿಸ್ ಡೇಸಳೇ?"

"ಮತ್ತ್ಯಾರು, ಸುಶೀಲಮ್ಮಗೆ ಅದೊಂದು ವಿಚಾರದಲ್ಲಿ ಮಾತ್ರ ಡೇಸಳ ಮೇಲೆ ಸೇಡು."

"ಚರ್ಚಿಗೆ ಆಮಂತ್ರಣ ಕೊಟ್ಟದ್ದು ನನಗೋ ನಿನಗೋ? ಏನು ಹಾರಿಸಿ ಬಿಟ್ಟೆಯೋ? ಬ್ಯಾಬಲ್ಲು ಹೇಗಿದೆಯಂತಾದರೂ ನೋಡಿದ್ದೀಯೇನೋ, ಈವರೆಗೆ? ಅದಿರಲಿ ಈಗ ಅವರು ಮಾಲತಿಬಾಯಿ ಕುರಿತು ಹೇಳಿದ್ದೆಲ್ಲಾ ನಿಜವಾಗಿರಬಹುದೇ?"

"ಯಾತಕ್ಕಿರಬಾರದು?"

"ತುಂಬಿದ ಸಭೇಲಿ ಹಾಗೂ ದುರ್ನೀತಿಯ ಮಾತುಗಳನ್ನಾಡಿರ ಬಹುದೇ?"

"ದುರ್ನೀತಿಯೆಂದರೇನೋ? ನಿನಗೀ ಸಮಾಜದ ಸ್ವಯಂಪ್ರಭೆಯರ ವಿಷಯ ಸಾಕಷ್ಟು ಗೊತ್ತಿಲ್ಲವೆಂದು ತೋರುತ್ತೆ. ಒಂದಲ್ಲ ಒಂದು ದಿನ ಹೇಳ್ತೀನೆ. ಈಗ ಪುರಸೊತ್ತಿಲ್ಲ. ಸಂಜೆ ಬರ್ತೀತಾನೇ ಕ್ಲಬ್ಬಿಗೆ? ಹೋ, ಸಿನೇಮಾಂದಿಯಲ್ಲ, ಏನು ಚಿತ್ರ?"

"'Thief of Bhagdad', ಸಾಬೂಚಿತ್ರ."

"ಹಾಗನ್ನು, ಮೈಸೂರಿನವರಿಗೆಲ್ಲ ಫ್ರೀ ಇರಬೇಕು. ಅಲ್ವೇ?"

"ಇರಬಹುದು. ಆದರೆ ಆ ಜೆಂಕಿಪೊಟ್ಣ ಜೇಬಿಗೆ ಸೇರಿಸಿಕೊಂಡದ್ದನ್ನು ಹೊರತೆಗಿ ನೋಡೋಣ. ಅದು ಫ್ರೀಯಲ್ಲ."

"ಯಾವುದು, ಇದೇ? ನಾನು ಬರುವಾಗ ತಂದಿದ್ದು." ಅನ್ನುತ್ತ ಎರ ಡನೇ ಚುಟ್ಟವನ್ನು ಬಾಯಿಗಿಟ್ಟು ಬಿರುಸಾಗಿ ಹೊಗೆಬಿಡುತ್ತ ಹೋದರು.

೭

ಅಂದು ಸಂಜೆ ರಾಘವೇಂದ್ರರಾಯರು ಹೊರಟುಹೋದಮೇಲೆ ಮಾಲತಿ ಸಿನೇಮಾಕ್ಕೇ ಹೋಗಲು ಸಿದ್ಧಳಾದಳು. ಸುಮಿತ್ರೆ ಬಂದೊಡನೆ ಇಬ್ಬರೂ ಸುಖವಾಗಿ ಕೈಕಾಲು ಬೀಸಿಕೊಂಡು ಪರಡಿಹೊಡೆಯುತ್ತ ಒಂದರ್ಧ ಮೈಲಿ ಸಮೀಪವಿದ್ದ ಚಿತ್ರಾ ಟಾಕೀಸಿಗೆ ನಡೆದುಹೋಗಬೇಕೆಂದಿದ್ದಳು. ಆದರೆ ಆಗ ಒಂದು ಜಟಕ ಬಂದು ಹೊರಗೆ ನಿಂತುದನ್ನು ನೋಡಿ ಆಕೆಯ ಉತ್ಸಾಹವೆಲ್ಲ ಆರಿಹೋಯಿತು. ಆಕೆಗೆ ಗೊತ್ತು: ಗಂಡನೇ ಕಳುಹಿಸಿರಬೇಕೂಂತ. ಒಂದು ಗಳಿಗೆ ಸಿಟ್ಟಿನಲ್ಲಿ ಏನು ಮಾಡಬೇಕೋ ತಿಳಿಯಲಿಲ್ಲ. ಯಾರಿಗೆ ಬೇಕೀ

ಜಟಕ ? ಬಾದದ್ದನ್ನ ಏನಂತ ವಾಪ್ಸು ಕಳುಹಿಸೋದು ? ಅಥವಾ ಕುದುರೆ ಬಿಚ್ಚಿಬಿಟ್ಟು ರಾಯರು ಬರೋತನಕ ಕಾದಿರು ಅನ್ನೋದೇ ? ಇಲ್ಲ, ಗದರಿಸಿ ಕಳುಹಿಸಿಬಿಡೋದೇ ? ಇಲ್ಲಾ, ಜಟಕ ಹತ್ತಿಕೊಂಡು ರಾಯರಿದ್ದಲ್ಲಿಗೆ ಹೊಡಿ ಅನ್ನೋದೇ ? ಅಥವಾ ಕೋಣೆ ಅಗಳಿ ಹಾಕ್ಕೊಂಡು ಹಲ್ಲುಕಡೀತಾ ಕೂತುಕೊಳ್ಳೋದೇ ? ಯಾವುದೂ ಗೊತ್ತಾಗಲಿಲ್ಲ.

ಈ ತೆರನ ಚಿತ್ರಹಿಂಸೆ ರಾಘವೇಂದ್ರರಾಯರ ಕೈಲಿ ಅನುಭವಿಸಿ ಆಕೆಗೆ ಸಾಕಾಗಿತ್ತು. ಒಂದೊಂದು ವೇಳೆ ಜಗಳವಾಡುತ್ತಿದ್ದಳು. ಒಂದೊಂದು ವೇಳೆ ನಕ್ಕು ನಕ್ಕು ಕಣ್ಣೊರಸಿಕೊಳ್ಳುತ್ತಿದ್ದಳು. ಆದರೆ ರಾಘವೇಂದ್ರರಾಯರಿಗೆ ಈ ಕಲಹ, ಈ ನಗು, ಅರ್ಥವಾಗುತ್ತಿರಲಿಲ್ಲ. ಹೆಂಗಸರೇ ಹಾಗೆ, ಚಂಚಲಿಯರು, ಅಬಲೆಯರು, ಅಂದುಕೊಂಡು ಸಮಾಧಾನ ತಂದುಕೊಳ್ಳುತ್ತಿದ್ದರು. ಹೆಂಡತಿಗೆ ಪ್ರಿಯವಾಗಿರಬಹುದು, ಹಿತವಾಗಿರಬಹುದು, ಅನುಕೂಲವಾಗಿರಬಹುದು, ಎಂತ ತನ್ನ ಊಹೆಗೆ ತೋರಿದ ಹಾಗೆ ಆಕೆ ಹೇಳುವ ಮೊದಲೆ ಒದಗಿಸಿಕೊಡುವ ಚಪಲ ಅವರಿಗೆ. ಮಾಡುವುದೆಲ್ಲವೂ ಆಕೆಯ ಪ್ರೇಮ ಪ್ರಶಂಸೆಗಾಗಿ. ಆದರೆ ಆಕೆಯ ಆಸಕ್ತಿ, ಅಭಿರುಚಿ, ಆವಶ್ಯಕತೆಗಳನ್ನು ಗ್ರಹಿಸುವಷ್ಟು ಸೂಕ್ಷ್ಮತೆ ಅವರಿಗಿರಲಿಲ್ಲ. ಹೀಗಾಗಿ ಅವರ ಸರಳ ಹೃದಯದ ಆದರ ಔದಾರ್ಯಗಳು ಅನೇಕ ವೇಳೆ ಅಶಿಕ್ಷಿತ ವೈದ್ಯನ ಚಿಕಿತ್ಸೆಯಂತೆ ಉರಿಗೆದರುತ್ತಿದ್ದುವು.

ಒಂದು ದಿನ ಒಬ್ಬರು ಶ್ರೀಮಂತ ಕ್ರೈಸ್ತರ ಮದುವೆಗೆ ಹೋದವರು ಅಲ್ಲಿ ಕೆಲವು ಸ್ತ್ರೀಯರು ಚುಚ್ಚಿಕೊಂಡಿದ್ದ ಬ್ರೋಚುಗಳನ್ನು ನೋಡಿ ಮರುಳಾಗಿ ಹಿಂತಿರುಗಿ ಮನೆಗೆ ಬರುವಾಗ ಒಂದು ಭಾರೀ ಬ್ರೋಚನ್ನು ಕೊಂಡರು. ಮನೆಗೆ ಬಂದು ಮಾಲತಿಯನ್ನು ಕರೆದು ವೆಲ್ವೆಟಿನ ಪೆಟ್ಟಿಗೆಯನ್ನು ಆಕೆಯ ಕೈಮೇಲಿಟ್ಟು ಹಿಗ್ಗುತ್ತ ಹಿಂದೆ ಸರಿದು ನಿಂತರು. ಆಕೆ ವಿಸ್ಮಯದಿಂದ ಮುಚ್ಚಳ ತೆರೆದಳು. ಒಳಗೆ ರೇಶ್ಮೆಯ ತಲ್ಪದಲ್ಲಿ ವಜ್ರಕೆಂಪುರತ್ನಾದಿಗಳಿಂದ ಶೋಭಿಸುವ ಗೇಣುದ್ದದ ಬ್ರೋಚು ಪಿಳಿಪಿಳಿ ಅನ್ನುತ್ತಿತ್ತು. ಮಾಲತಿಗೆ ವರ್ಜ್ಯವಾದ ನಗಗಳಲ್ಲಿ ಬ್ರೋಚು ಪ್ರಥಮಸ್ಥಾನವನ್ನು ಪಡೆದಿತ್ತು. ಆಕೆ ಈ ವಿಲಕ್ಷಣವಾದ ಆಭರಣವನ್ನು ಕಣ್ಣಿಟ್ಟು ನೋಡಿ ಮರಿನಾಗರವನ್ನು ಕಂಡಂತೆ ಟಪ್ಪನೆ ಪೆಟ್ಟಿಗೆ ಮುಚ್ಚಿಬಿಟ್ಟು ತುದಿಬೆರಳುಗಳಿಂದ ಗಂಡನಿಗೆ

ವಾಪ್ಸುಕೊಟ್ಟಳು. ಇಬ್ಬರೂ ಮುಖ ಮುಖ ನೋಡುತ್ತ ನಿಂತರು. ಆಶಾ ಭಂಗವಾಗಿ ಮಾತೇ ಹೊರಡಲಿಲ್ಲ. ರಾಘವೇಂದ್ರರಾಯರ ಮುಖ ಸಪ್ಪಗಾಗಿತ್ತು. ಮಾಲತಿ ಮುಖ ಕೆಂಪಡರಿತ್ತು.

" ಯಾರಿಗಿದು ? " ಎಂದು ಕೇಳಿದಳು.

" ನಿನಗೆ. ಇನ್ಯಾರಿಗೆ ? "

" ಯಾರು ಬೇಕೂಂದ್ರು ? "

" ನಿನಗಿರಲೀ ಅಂತ—ನಾನು—" ಮಾತು ತೇಲಿಸಿಬಿಟ್ಟರು.

" ಏನು ಕೊಟ್ರಿ ? "

" ಇನ್ನೂರರವತ್ತು ರೂಪಾಯಿ. " ಅವರ ಸ್ವರ ಸಣ್ಣದಾಗುತ್ತ ಬಂತು.

" ಇನ್ನೂ—ರ—ಅರವತ್ತು ! "

" ಹೌದು. "

" ಹುಚ್ಚೇ ನಿಮಗೆ ? ನನ್ನ ಹತ್ರ ಹೇಳದೆ ಕೇಳದೆ ತರೋದೂಂದ್ರೆ ? "

" ಈಗ ತಂದುಬಿಟ್ಟದ್ದೇನಲ್ಲ, ಇನ್ನೇನ್ಮಾಡೋದು ? ಇಟ್ಕೊಂಡುಬಿಡು."

" ಈ ಚಿನ್ನದ ಕೊಂಡಿಚೇಳನ್ನ ? ನಾನೇನು ಉಪಾಧ್ಯಾಯಿನಿಯೇ, ಅಥವಾ ಸೂಲಗಿತ್ತಿಯೇ, ಇದನ್ನ ಚುಚ್ಚಿಕೊಂಡು ಮೆರೆಯೋದಕ್ಕೆ ? "

ಇಬ್ಬರಿಗೂ ದಿಕ್ಕು ತೋರದೆ ನಕ್ಕುಬಿಟ್ಟರು.

" ಈಗೇನು ಮಾಡಲಿ ? ವಾಪ್ಸು ಕೊಡೋದಕ್ಕಾಗೋದಿಲ್ಲ. "

" ಯಾಕಾಗೋದಿಲ್ಲ ? ನನಗೆ ಬಿಟ್ಟುಬಿಡಿ ಆ ಕೆಲಸ. ಅದರ ಬಿಲ್ಲು ಇದ್ದರೆ ಇತ್ತಕೊಡಿ. " ಅನ್ನುತ್ತ ಪೆಟ್ಟಿಗೆಯನ್ನು ಅವರ ಕೈಯಿಂದ ತಗೊಂಡಳು.

ಆಕೆ ಮಹಿಳಾ ಸಮಾಜಕ್ಕೆ ಸೇರಿದ್ದೂ ಗಂಡನ ಬಲವಂತಕ್ಕೆ. ಇಂಟರ್ ಕಾಲೇಜಿನಲ್ಲಿ ಬಿಟ್ಟುಬಂದಿದ್ದ ಟೆನ್ನಿಸ್ ಅಭ್ಯಾಸವನ್ನು ಪುನರಪಿ ಸುರು ಮಾಡಿದ್ದೂ ಅವರಿಗಾಗಿಯೇ. ಸಮಾಜದ ಮುಂದಾಳುಗಳೊಡನೆ ಪಾರ್ಟಿ ಪರಿಷತ್ತುಗಳಲ್ಲಿ ಭಾಗವಹಿಸಿದ್ದು ಕೂಡ ಗಂಡನ ಒತ್ತಾಯಕ್ಕೇ. ಆದರೆ ಒಂದೊಂದು ಸಲ ಅವರ ಜನಮೆಚ್ಚುಗೆಯ ಚಪಲ ಮಿತಿಮೀರಿ ಆಕೆಗೆ ಪಂಚೇತಿಯಾಗುತ್ತಿತ್ತು.

ಕಳೆದ ವರ್ಷ ಜಿಲ್ಲಾ ಜಡ್ಜರಿಗೆ ವರ್ಗವಾದಾಗ ಕೊನೆಯ ವಂದನೆಗಳನ್ನ ರ್ಪಿಸುವುದಕ್ಕೆ ರಾಘವೇಂದ್ರರಾಯರು ಒಂದು ಕೂಟವನ್ನೇರ್ಪಡಿಸಿದ್ದರು. ಪುರ ಪ್ರಮುಖರೆಲ್ಲರೂ ಚಿತ್ತೈಸಿದ್ದರು. ಹಾಲಿನಲ್ಲಿ ಸಭೆ ಕೂಡಿತ್ತು. ಕಾಫಿ ತಿಂಡಿಯಾಗಿ, ಎಲೆ ಅಡಿಕೆ ಮೆಲ್ಲುತ್ತ, ಸಿಗರೇಟು ಸೇದುತ್ತ, ಮಾತನಾಡುತ್ತ ಆರಾಮವಾಗಿ ಕುಳಿತಿದ್ದರು. ರಾಘವೇಂದ್ರರಾಯರು ಒಳಗೆ ಹೋಗಿ ಮನೆಯ ಯಜಮಾನತಿ ಎಲ್ಲೀಂತ ಕೇಳ್ತಿದ್ದಾರೆ, ಪರಿಚಯ ಮಾಡಿಸಬೇಕಂತೆ, ಅಂತ ಬುಸುಗುಟ್ಟಿದರು ಆತುರದಿಂದ.

"ನೀವು ಹೋಗಿಬಿಡಿ, ಅಮ್ಮಾ" ಅಂದಳು ಮಾಲತಿ ಮುಗುಳುನಗುತ್ತ.

"ರಾಘು, ನಿನ್ನಿಷ್ಟಕ್ಕೇ ನೀನು ಹೋಗು. ಮನೆಹೆಂಗಸರನ್ನು ಪರಗಂಡಸರಿಗೆ ಪರಿಚಯ ಮಾಡಿಸೋದಂದ್ರೇನು, ಅಸಹ್ಯ!" ಎಂದು ಶಾರದಮ್ಮ ಬೇಸರಪಟ್ಟು ಹೇಳಿದರು.

"ನೀನಲ್ಲಮ್ಮ, ನಾನು ಹೇಳಿದ್ದು ಮಾಲತಿ."

ಮಾಲತಿ ಗಂಟಲೊಳಗೇ ನಗುತ್ತಿದ್ದಳು.

"ಮಾಲತಿಯಾದರೇನು? ಹೋಗಿನ್ನು ಕಂಡವರ ಕೈ ಹಿಸುಕಬೇಕೇನೋ?"

"ಬೇಕಾಗಿಲ್ಲಮ್ಮ, ಸುಮ್ಮನೆ ಬಂದ್ರೆ ಸಾಕು."

"ಏನೋ! ಬೇಕಾದ್ದು ಮಾಡು." ಅನ್ನುತ್ತ ಶಾರದಮ್ಮ ಮುಖ ತಿರುಗಿಸಿದರು. ರಾಘವೇಂದ್ರರಾಯರು ಬೆದರಿದ ಕಣ್ಣುಗಳಿಂದ ಪೇಚಿನಲ್ಲಿದ್ದುದನ್ನು ನೋಡಿ ಮಾಲತಿ,

"ಬನ್ನಿ, ಹೋಗೋಣ" ಅಂದಳು.

"ಇದೇ ಸೀರೆ ಸಾಕೇ?"

"ನೀವೇ ತಂದಿದ್ದು, ಒಂದಕ್ಕೆ ನಾಲ್ಕು ಕೊಟ್ಟು. ಇನ್ನು ಬೇರೆ ಉಡೋದೂಂದ್ರೆ ಅವರನ್ನೆಲ್ಲಾ ಒಂದು ಗಂಟೆ ಕಾಯಿಸಬೇಕು. ಸಾಕಿದೇ; ಬನ್ನಿ ಹೋಗೋಣ."

"ಸರಿ, ಸರಿ. ಬಾ, ಬಾ, ಬಾ," ಎಂದು ಪತ್ನಿಸಮೇತರಾಗಿ ಸಭೆಗೆ ಹೋದರು. ಕ್ರಮದಂತೆ ಪರಸ್ಪರ ಪರಿಚಯ ಮಾಡಿಕೊಟ್ಟರು. ಆಗ ಹಲವರು ಕೂತಲ್ಲಿ ಕದಲದೆ ಆದರದ ಮಾತುಗಳನ್ನು ಬಾಯೊಳಗೇ ಉರುಳಿಸಿ

ನುಂಗಿಬಿಟ್ಟರು. ಹಲವರು ಪೂರ್ತಿಯಾಗಿ ಎದ್ದುನಿಂತರೆ ಗೌರವಕ್ಕೆ ಕೊರತೆಯಾದೀತೆಂಬ ಶಂಕೆಯಿಂದ ತಮ್ಮ ಹಿಂಭಾಗವನ್ನು ಅರ್ಧ ಎಬ್ಬಿಸಿ ತಲೆಬಾಗಿಸಿದರು. ಒಬ್ಬ ಮಹಾಶಯರು ತಮ್ಮ ದೃಷ್ಟಿ ಮಾಲತಿಯ ಲಾವಣ್ಯದ ಮೇಲೆ ನೆಟ್ಟು ಹೋದೀತೆಂಬ ಭಯದಿಂದ ಸೂರಿನ ಜಂತಿಗಳನ್ನು ಎಣಿಸಲುಪಕ್ರಮಿಸಿದರು. ಇನ್ನೊಬ್ಬರು ಅಟ್ಟಹಾಸದಿಂದ ಎದ್ದುನಿಂತು ಮೈ ಬಗ್ಗಿಸಿ ಧನ್ಯನಾದೆನೆಂದು ಇಂಗ್ಲಿಷಿನಲ್ಲಿ ಹೇಳಿ ಕೈ ನೀಡಿದರು. ಗಂಡನ ಜತೆಗೆ ಕುರ್ಚಿಯಿಂದ ಕುರ್ಚಿಗೆ ನಮಸ್ಕಾರ ಸಲ್ಲಿಸುತ್ತ ಮಂದಹಾಸದ ಸೇಚನೆ ಮಾಡುತ್ತ ಬಂದ ಮಾಲತಿ ಇವರನ್ನು ನೋಡಿಯೂ ನೋಡದಂತೆ ನಟಿಸಿ ಮುಂದೆ ಸರಿದಳು. ಅವಮಾನಿತವಾದ ತಮ್ಮ ಕೈಯನ್ನೆಲ್ಲಿಡುವುದೆಂದು ತೋರದೆ ಅವರು ಒಂದು ಕ್ಷಣ ಕಂಗಾಲಾಗಿ ಕೊನೆಗೆ ಅದನ್ನು ಕಿಸೆಯೊಳಗೆ ಅಡಗಿಸಿಟ್ಟುಕೊಂಡರು. ಪಕ್ಕದಲ್ಲಿದ್ದ ಅವರ ಗೆಳೆಯರೊಬ್ಬರು

“ಏನು ರಾಘವೇಂದ್ರರಾವ್, ನಿಮ್ಮ ಮಿಸೆಸ್ಸಿಗೆ shake hand ಮಾಡೋದಕ್ಕೆ ಇನ್ನೂ ಕಲಿಸಿಲ್ಲವೆ ?” ಎಂದು ಕೇಳಿ ನಕ್ಕರು. ಎರಡು ಕುರ್ಚಿ ಮುಂದೆ ಸರಿದಿದ್ದ ಮಾಲತಿ ತಕ್ಷಣ ಹಿಂತಿರುಗಿ ನೋಡಿ “ಕಲಿಸಿದ್ದಾರೆ. ಆದರೆ ಕೊಟ್ಟ ಕೈ ಹಿಂದಕ್ಕೆ ಬರುವಾಗ ಬೆರಳುಗಳು ಕಾಣೆಯಾದೀತೆಂಬ ಭಯ ನನಗೆ.” ಎಂದು ಪರಿಹಾಸ್ಯದಿಂದ ಆ ಸನ್ನಿವೇಶದ ಬಿಕ್ಕಟ್ಟಿನಿಂದ ಗಂಡನನ್ನು ಪಾರು ಮಾಡಿದಳು.

ಮೈಸೂರಿನವಳಾದ ಮಾಲತಿಗೆ ಪರಪುರುಷರೊಡನೆ ಸಲಿಗೆಯಿಂದ ಒಡನಾಡಿ ಕೈಕುಲುಕಿಸುವಂಥ ನವಸುಧಾರಣೆ ಒಗ್ಗಲಿಲ್ಲ. ಅದು ಅಶ್ಲೀಲವೆಂತಲ್ಲ; ಗಂಡಸರನ್ನು ನೋಡಿದ ಕ್ಷಣ ಮೈಮೇಲೆ ಕೈಹಾಕಿದಂತೆ ಮೈಮುದುರಿಸಿ, ಸೆರಗು ಸರಿಪಡಿಸಿಕೊಂಡು ಒಳಗೆ ಓಡಿಹೋಗುವುದಕ್ಕಿಂತ ಮುಖಕ್ಕೆ ಮುಖ ಕೊಟ್ಟು ಕೈಗೆ ಕೈಕೊಟ್ಟು ಮಾತನಾಡುವದೇ ಚೆಂದವೆನ್ನುತ್ತಿದ್ದಳು ಆದರೆ ಅಂಥ ಸರಳವರ್ತನೆ ಬಾಲ್ಯದಿಂದ ಗಂಡಸರೊಡನೆ ಬೆರತು ಬೆಳೆದು ಬಂದವರಿಗೇನೇ ಸುಲಭ ವಿನಾ ಗಂಡುಜಾತಿಯೇ ಬೇರೆ ಎಂಬ ಭಾವನೆಯಿಂದ ಚಿಕ್ಕಂದಿನಿಂದಲೂ ದೂರವಿದ್ದವರಿಗೆ ಹೇಳಿಸಿದ್ದಲ್ಲವೆನ್ನುತ್ತಿದ್ದಳು.

ಆಕೆ ತವರೂರಿನಿಂದ ಬರುವಾಗ ಸದುದ್ದೇಶಗಳ, ಸತ್ಸಂಕಲ್ಪಗಳ ಒಂದು ಸಿಕ್ಕನ್ನೇ ತಂದಿದ್ದಳು. ಆದರೆ ಬಂದು ಐದು ವರ್ಷಗಳು ದಾಟಿದ್ದರೂ ಅದರ

ತುಂಡು ತುಂಡು ನೂಲುಗಳನ್ನು ಇನ್ನೂ ಬಿಡಿಸುತ್ತಲೇ ಇದ್ದಳು. ಗೊಡ್ಡು ಸಂಪ್ರದಾಯಗಳು ಹೆಂಗಸರ ಚಿತ್ತಚಲನೆಗೆಷ್ಟೋ ಅಂಗಚಲನೆಗೂ ಅಷ್ಟೇ ಅಭ್ಯಂತರಗಳು. ಅವುಗಳ ಸಂಕಲಿಸೆರೆಯಿಂದ ತಪ್ಪಿಸಿಕೊಳ್ಳುವದೇ ಪ್ರಥಮ ಕರ್ತವ್ಯ. ಅಡುಗೆ ಮನೆಗೂ ದೇವರ ಮನೆಗೂ ಅಂಟಿಕೊಂಡಿರುವ ವಿಷಮ ಸಂಬಂಧವನ್ನು ಮುರಿಯುವದೇ ಎರಡನೇ ಕರ್ತವ್ಯ. ವಸ್ತುವಿಜ್ಞಾನ ಮನೋವಿಜ್ಞಾನಗಳ ವಲಯವು ವಿಸ್ತಾರವಾದ ಹಾಗೆಲ್ಲ ಜೀವನಕ್ರಮವೂ ಕಾಲ ಕಾಲಕ್ಕೆ ಬದಲಾಗಬೇಕು. ಹೆಂಗಸರು ಗಂಡಸರಂತೆ ತಮ್ಮ ತನುಮನಗಳ ವಿನಿಯೋಗಕ್ಕೆ ತಾನೇ ಸರ್ವಾಧಿಕಾರಿಗಳಾಗಬೇಕು. ಪತಿವ್ರತಾ ಧರ್ಮದ ಪೂರ್ವಾಚಾರದ ಅಪಾರ್ಥಕ್ಕೆ ಬಲಿಯಾಗಿ ಗಂಡನಪ್ರಭುತ್ವಕ್ಕೂ ಲಂಪಟ ತನಕ್ಕೂ ಪ್ರೋತ್ಸಾಹ ಕೊಟ್ಟು ಆಹುತಿಯಾಗಿ ಇಬ್ಬರೂ ಸ್ಮಶಾನಕ್ಕಿಳಿಯ ಬಾರದು. ಅತ್ತೆ ಸೊಸೆಯ ಬೆನ್ನಮೇಲೆ, ಸೊಸೆ ಗಂಡನ ತಲೆ ಮೇಲೆ, ಇಲ್ಲವೆ ಅತ್ತೆ, ಮಾವ, ಅತ್ತಿಗೆ, ನಾದಿನಿ ಗಂಡಹೆಂಡಿರ ಜೀವಿತಶವಗಳ ಮೇಲೆ, ಈ ಪ್ರಕಾರದ ನರಕಸಂಸಾರಗಳನ್ನು ತನ್ನ ಊರಿನಲ್ಲಿ ನೋಡಿ ನೋಡಿ ಮಾಲತಿ ಸಂಕಟಪಟ್ಟಿದ್ದಳು. ಈ ದಾರುಣ ಸಮಸ್ಯೆಯನ್ನು ನಿವಾರಿಸಬೇಕೆಂದು ನಿಶ್ಚಯಿಸಿದ್ದಳು.

ಈ ನವಚೈತನ್ಯ ಧ್ಯೇಯಗಳನ್ನು ಪ್ರಗತಿಶೀಲ ಮಂಗಳೂರಲ್ಲಿ ಪೂರೈಸಿ ಕೊಳ್ಳಲು ಹೆಚ್ಚಿನ ಅವಕಾಶವಿರಬಹುದೆಂತ ನಂಬಿದ್ದಳು. ಆದರೆ ಬಂದ ಕೆಲವು ವಾರಗಳೊಳಗೆ ಮಂಗಳೂರಿನವರಿಗೆ ತಮ್ಮದೇ ಆದ ಸಮಸ್ಯೆಪರಂಪರೆಗಳಿದ್ದು ವೆಂದೂ ಮಂಗಳೂರಿನ ವ್ಯಾಧಿಗಳಿಗೆ ಮೈಸೂರಿನ ಚಿಕಿತ್ಸೆ ಸಲ್ಲದೆಂದೂ ವಿಶದವಾಯಿತು. ಮೈಸೂರಿನ ಹೆಣ್ಣುಮಕ್ಕಳಲ್ಲಿ ಅದೃಷ್ಟಫಲ ಕಣ್ಣೆದುರಿ ಗಿದ್ದರೂ ಕೈನೀಡಿ ಕೊಯ್ಯುವಷ್ಟು ಚೈತನ್ಯವಿರಲಿಲ್ಲ. ಅದು ತಾನಾಗಿ ಕೊಳೆತು ಬೀಳಬೇಕು. ಇಲ್ಲವೇ ಪ್ರಾಕೃತ ಪುಣ್ಯಗಾಳಿಯೋ, ಕೋತಿಯೋ, ಕಾಗೆಯೋ ಯಾವದಾದರೊಂದು ರೂಪದಿಂದ ಕೆಳಕ್ಕುರುಳಿಸಬೇಕು. ಮಂಗ ಳೂರಿನ ಹೆಣ್ಣುಮಕ್ಕಳು ಹಾಗಲ್ಲ. ಫಲವು ಪಕ್ವವಾಗುವುದರೊಳಗೇ ಕಿತ್ತು ಯಾರಿಗೂ ತೋರಿಸದೆ ತಿನ್ನುವ ಸ್ವೇಚ್ಛಾ ಸ್ವಾರ್ಥ ಅವರದು. ಅಲ್ಲಿ ನವ ಯೌವನದ ಲಲನೆಯರು ಕೂಡ ತಮ್ಮ ಮೈಕಟ್ಟು ಮೈಬಣ್ಣದ ಅರಿವಿಲ್ಲದೆ ಅಸ್ತವ್ಯಸ್ತವಾಗಿ ಸಿಂಗರಿಸಿಕೊಂಡು ಕಣ್ಣು ಬೇನೆಯುಂಟು ಮಾಡಿದರೆ ಇಲ್ಲಿ ಮೈಸಿರಿ ಎದ್ದು ತೋರುವಂತೆ ನಿರ್ಲಜ್ಜ ನೈಪುಣ್ಯದಿಂದ ಸಿಂಗರಿಸಿಕೊಂಡು

ಕಣ್ಣು ಕೊರೆಯುತ್ತಿದ್ದರು. ಅಲ್ಲಿ ತಿಂಗಳೊಂದರ ನಲವತ್ತು ರೂಪಾಯಿ ತರುವವನ ಹೆಂಡತಿ ಅರವತ್ತು ರೂಪಾಯಿಯ ಸೀರೆಯನ್ನುಟ್ಟು ಗೊಡ್ಡು ಸಾರನ್ನ ಉಂಡರೆ, ಇಲ್ಲಿ ಗಿರಣಿಯ ಕೆಲಸಗಿತ್ತಿಯೂ ಪವುಡರು ಕ್ರೀಮು ಗಳನ್ನು ಹಾಕದೆ ಬೀದಿಗೆ ಕಾಲಿಡುತ್ತಿರಲಿಲ್ಲ. ತವರೂರಿನವರು ಮುನ್ನೋಡು ವುದಕ್ಕೆ ಹಿಂತೆಗೆಯುವಂತಿದ್ದರೆ ಗಂಡನೂರಿನವರು ಹಿನ್ನೋಡುವುದಕ್ಕೆ ಅಂಜಿ ದಂತಿತ್ತು. ಅಲ್ಲಿನ ಸಮಾಜದಲ್ಲಿ, ವಿಶೇಷವಾಗಿ ಹೆಂಗಸರಲ್ಲಿ, ಬಹು ಹಿಂದಿ ನಿಂದ ಬೆಳೆದು ದೃಢವಾಗಿ ನೆಲೆಸಿದ ನಿತ್ಯಜೀವನದ ಸಂಸ್ಕೃತಿಯನ್ನು ಪಾಶ್ಚಾ ತ್ಯದ ಸುಳಿಗಾಳಿ ಹೆಚ್ಚೇನೂ ಅಲುಗಾಡಿಸಿರಲಿಲ್ಲ. ಆದರೆ ಇಲ್ಲಿನವರಲ್ಲಿ ಪ್ರಾಚೀನಾಚರಣೆಯಿಂದ ಪುಟಗೊಂಡ ಯಾವ ಹಿನ್ನಲೆಯೂ ಇಲ್ಲದುದರಿಂದ ನವನಾಗರಿಕತನದ ಮೋಜಿಗೆ ಎಲ್ಲರೂ ಮಾರು ಹೋಗಿದ್ದರು. ಮಾಲತಿಗೆ ಇನ್ನೊಂದು ವಿಚಿತ್ರವಾಗಿ ತೋರಿತು. ಇಲ್ಲಿಯ ಪ್ರಜೆಗಳು ತಮ್ಮ ತಮ್ಮ ಮನೆಮಟ್ಟಿಗೆ ಪರಿಷ್ಕಾರವಾಗಿದ್ದಷ್ಟು ನಗರಶೃಂಗಾರಕ್ಕಾಗಲಿ ಪುರೋವೃದ್ಧಿ ಗಾಗಲಿ ಗಮನಕೊಡುತ್ತಿರಲಿಲ್ಲ. ಕ್ಷಣಿಕ ಸುಖಲಾಲಸೆಯಿಂದಲೋ ಸಂಕು ಚಿತ ದೃಷ್ಟಿಯಿಂದಲೋ ಹೊರಗಿನ ಬೆಡಗಿನಷ್ಟು ಒಳಗಿನ ಸೌಂದರ್ಯವಿರ ಲಿಲ್ಲ ಜನರಲ್ಲಿ. ನಡೆನುಡಿ ವೇಷ ಭೂಷಣಗಳಲ್ಲಿದ್ದಷ್ಟು ಪರಿಶ್ರಮ ಸಾಹಿತ್ಯ ಲಲಿತಕಲೆಗಳಲ್ಲಿರಲಿಲ್ಲ ಅವರಿಗೆ.

ಈ ತೊಡಕುಗಳ ಘರ್ಷಣೆಯಿಂದ ಮಾಲತಿಯಲ್ಲಿ ನೂರಾರು ಪ್ರಶ್ನೆಗಳು, ನೂರಾರು ಪ್ರೇರಣೆಗಳು ಮೂಡಿದುವು. ಆದರೆ ಸುಧಾರಣೆಯ ಕೆಲಸವನ್ನು ಎಲ್ಲಿಂದ ಆರಂಭ ಮಾಡೋಣ, ಹೇಗೆ ಮಾಡೋಣವೆಂದು ಆಕೆಗೆ ಗೊತ್ತಾ ಗಲಿಲ್ಲ. ತನ್ನೊಬ್ಬಳಿಂದ ಆಗತಕ್ಕ ಸಾಹಸವಲ್ಲ. ನ್ಯೂನತೆಗಳ ಕಂತೆಯಿಂದ ಒಂದನ್ನೇ ಆರಿಸಿ ಎತ್ತಿದರೂ ಅದರ ನಿವಾರಣೆಗೆ ತನ್ನ ಶಕ್ತಿ ಆಯುಸ್ಸುಗಳು ಸಾಲದೆಂದು ದಿಟವಾಗಿ ತನ್ನ ಕಾಲು ಬುಡದಲ್ಲೇ ಇದ್ದ ಕಸ ಬಳಿಯುವು ದಕ್ಕೆ ತೊಡಗಿದಳು. ಆದರೆ ಆ ಕೆಲಸವೂ ಆಕೆ ಊಹಿಸಿದಷ್ಟು ಸುಲಭವಾಗಿ ರಲಿಲ್ಲ. ಕಾಡಿನಲ್ಲಿ ಹುಲುಸಾಗಿ, ಬೇರು ಬೀಳಲುಗಳನ್ನು ಬಿಟ್ಟುಕೊಂಡು ಬೆಳೆದ ಮರಗಳಂತೆ ರಾಘವೇಂದ್ರರಾಯರ ಮನೆಯ ಸಿಬ್ಬಂದಿ ಸಂಪ್ರದಾಯ ಗಳು ಆಕೆಯನ್ನು ಹೆಜ್ಜೆಹೆಜ್ಜೆಗೂ ಅಡ್ಡಗಟ್ಟುತ್ತಿದ್ದುವು. ಅಡುಗೆ ಕೆಲಸದ ಭೀಮಾಚಾರ್ಯರು, ಹೊರಗೆಲಸದ ತಿಮ್ಮಕ್ಕ ಇವರಿಬ್ಬರು ಶಾರದಮ್ಮನ

ಗೃಹಪ್ರವೇಶದ ಕಾಲದಲ್ಲೇ ಚಾಕರಿ ಮಾಡುತ್ತಿದ್ದವರು. ರಾಘವೇಂದ್ರ ರಾಯರನ್ನು ಎತ್ತಿ ಆಡಿಸಿದವರು. ಮನೆಯ ಏರು-ತಗ್ಗುಗಳಲ್ಲಿ ನಕ್ಕು ನಲಿದು ನೊಂದು ಬೆಂದವರು. ಪ್ರಾಚೀನ ಸಂಸ್ಥೆಗಳಂತೆ ನಿಯಮಿತ ಕಾರ್ಯಭಾರ ವನ್ನು ಲೋಪವಿಲ್ಲದೆ ಯಥಾವತ್ತಾಗಿ ನಿರ್ವಹಿಸುತ್ತಿದ್ದವರು. ಅಂಥವರನ್ನು ತಿದ್ದಿ ಹೊಸ ದಾರಿಗೆ ತರುವಷ್ಟರಲ್ಲಿ ತಾನೇ ಹಣ್ಣಾಗಿ ಅವರಂತೆ ಒಂದು ಸಂಸ್ಥೆಯಾಗಿ ಬಿಡುವೆನೋ ಎಂಬ ಅನುಮಾನವುಂಟಾಯಿತು ಮಾಲತಿಗೆ. ಆದರೂ ಧೈರ್ಯಗೆಡಲಿಲ್ಲ.

ಭೀಮಾಚಾರ್ಯರು ಪಲ್ಯ ಕೋಸಂಬ್ರಿಯಂಥವುಗಳನ್ನು ಕೈಯಲ್ಲೇ ಬಡಿಸುತ್ತಿದ್ದರು. ತನ್ನ ತವರೂರಲ್ಲಿ ಸಾರೊಂದನ್ನು ಬಿಟ್ಟು ಮಿಕ್ಕ ಪದಾರ್ಥ ಗಳನ್ನೆಲ್ಲ ಕೈಯಿಂದಲೇ ಬಡಿಸುವುದನ್ನು ನೋಡಿ ಅಸಹ್ಯಪಟ್ಟು ಮಾಲತಿಗೆ ಇದೊಂದು ವಿಶೇಷವಾಗಿ ಕಾಣಲಿಲ್ಲ. ಆದರೂ ಒಂದೊಂದಕ್ಕೊಂದೊಂದು ಬೇರೆಬೇರೆ ಚಮಚಗಳನ್ನು ತಂದುಕೊಟ್ಟು ಅವರ ನಲವತ್ತು ವರ್ಷಗಳ ಸರ್ವಿಸಿನ ಅಭ್ಯಾಸವನ್ನು ನಿಲ್ಲಿಸಿ ಬದಲಿಸಿದಳು. ತುಪ್ಪದ ಬಟ್ಟಲಿನ ಬುಡ ಯಾವಾಗ ನೋಡಿದರೂ ಬೂದಿಮುಸಿ ಬಳಿದುಕೊಂಡು ಇರುವುದು ವಾಡಿಕೆ. ಅದಕ್ಕೊಂದು ಸೊಗಸಾದ ಗಾಜಿನ ಗಿಣಿಲನ್ನೂ ಬೆಳ್ಳಿಯ ಸೌಟನ್ನೂ ತಂದು ಕೊಟ್ಟಳು. ಅಡುಗೆ ಮಾಡುವಾಗ ಉಟ್ಟ ಕೊಳೆಬಟ್ಟೆಯನ್ನು ಬದಲಿಸಿ ಬಡಿಸುವಾಗ ಬೇರೊಂದು ಮಡಿಯನ್ನುಡಬೇಕೆಂತ ತಾಕೀತು ಮಾಡಿದಳು.

ಮನೆಗೋಡೆಯ ಮೇಲೆ ಯಾವ ರಾಯನ ಕಾಲದಲ್ಲೋ ತೂಗ ಹಾಕಿದ್ದ ರವಿವರ್ಮನ ಚಿತ್ರಗಳನ್ನು ತೆಗೆದು ನಂದಲಾಲ ಬಸು, ರೋರಿಕ್, ಟರ್ನರ್, ಕಾನ್ಸ್ಟೆಬಲ್ ಮೊದಲಾದವರ ಕಲಾಕೃತಿಗಳನ್ನು ತರಿಸಿ ಹಾಕಿದಳು. ಮಾತ್ರ ಇವನ್ನು ನೋಡಿ ಆನಂದಪಡುವುದಕ್ಕೆ ಮನೆಯಲ್ಲಿ ತಾನಲ್ಲದೆ ಬೇರೊಬ್ಬರಿಲ್ಲವೆಂಬ ಕೊರತೆ ಅನಿವಾರ್ಯವಾಗಿತ್ತು.

ಅಡುಗೆ ಒಲೆಯನ್ನು ಎತ್ತರವಾಗಿ ಹಾಕಿಸಿದರೆ ಕೂತು ಎದ್ದು ಸೊಂಟ ಮುರಿದುಕೊಳ್ಳಬೇಕೆಂದಿಲ್ಲವೆಂತ ಸೂಚಿಸಿದಾಗ "ಅಂಥ ವಿಚಿತ್ರಗಳು ಬ್ರಾಹ್ಮಣರ ಮನೇಗೆ ಹೇಳಿಸಿದ್ದಲ್ಲ," ಅಂತ ಶಾರದಮ್ಮ ತಣ್ಣೀರು ಎರಚಿ ದರು. ಆದರೂ ಭೀಮಾಚಾರ್ಯರು ಒಪ್ಪಿದರೆ ಆಗಲಿ ಅಂದದರಿಂದ ಮಾಲತಿ ಭೀಮಾಚಾರ್ಯರನ್ನು ಕೇಳಿದಳು. ಅವರು ಕುಳಿತಲ್ಲಿಂದಲೇ, "ಸಾಧ್ಯವಿಲ್ಲ

ತಾಯಿ, ಹತ್ತೊಂಬತ್ತು ವರ್ಷಗಳಿಂದಲೂ ಕೂತೇ ಅಡಿಗೆ ಮಾಡಿದವನಿಗೆ ನಿಂತರೆ ಉಪ್ಪು ಹುಳಿ ಕಾರದ ಕೈಹಾಳಿತವೇ ತಪ್ಪಿಹೋದೀತು. ಸ್ವಲ್ಪ ಹೆಚ್ಚುಕಡಿಮೆಯಾದರೆ ರಾಯರು ಕೋಪಿಸಿಕೋತಾರೆ, ನಿನಗೆಗೊತ್ತು. ಹೀಗೇ ಇರಲಿ ನಾನಿರೋವರಿಗೂ" ಅಂದುಬಿಟ್ಟಿದ್ದರಿಂದ ಆ ಸಾಹಸ ಅಲ್ಲಿಗೇ ಸಮಾಪ್ತಿಯಾಯಿತು.

ತನ್ನ ಸ್ವಂತ ಮನೆಯ ಸಮಸ್ಯೆಗಳೇ ಇಷ್ಟು ಆಳವಾಗಿದ್ದರೆ ಸಮಗ್ರ ಸಮಾಜದ ಸಮಸ್ಯೆಗಳು ಎಷ್ಟು ಅಗಾಧವಾಗಿರಬೇಕೆಂದು ಮಾಲತಿಗೆ ಎದೆಗುಂದಿತು. ಕಾಲಕ್ರಮೇಣ ಆಕೆಯ ನವೋತ್ಸಾಹದ ಬಿರುಸುತನ ಮೆತ್ತಗಾಗಿ ನಯವಾಗುತ್ತ ಬಂತು. ತನ್ನ ಈ 'ಹೊಸಹುಚ್ಚಿ'ನ ಸಿದ್ಧಿಗಾಗಿ ತನ್ನನ್ನು ಹೆತ್ತ ತಾಯಿಯಂತೆ ಮುದ್ದಿನಿಂದ ನೋಡುತ್ತಿದ್ದ ಅತ್ತೆಯನ್ನೂ ನಿಷ್ಕಳಂಕವಾದ ಪ್ರೀತಿಯಿಂದ ಮೆಚ್ಚಿಸಲು ಶ್ರಮಪಡುತ್ತಿದ್ದ ಗಂಡನನ್ನೂ ಎಷ್ಟುಮಾತ್ರಕ್ಕೂ ಯಾವ ಬಗೆಯಲ್ಲೂ ಮನನೋಯಿಸಬಾರದೆಂತ ದೃಢಪ್ರತಿಜ್ಞೆ ಮಾಡಿಕೊಂಡಳು.

ಈ ಸಮಾಜ ಸುಧಾರಣೆಯ ಸ್ವಪ್ನಗಳಲ್ಲದೆ ಸ್ವಂತಜೀವನದ ಬಗ್ಗೆಯೂ ಸ್ತ್ರೀಸಹಜವಾದ ಉತ್ಕಟಾಕಾಂಕ್ಷೆಗಳಿದ್ದುವು, ಮಾಲತಿಗೆ. ದೇಶೋದ್ಧಾರಕನಾಗತಕ್ಕ ಪುತ್ರನನ್ನೂ ಜಗನ್ಮೋಹಿನಿಯಾದ ಪುತ್ರಿಯನ್ನೂ ಪಡೆದು, ಮಕ್ಕಳನ್ನು ತಾನೇ ಸ್ನಾನಮಾಡಿಸಿ, ಉಣಿಸಿ, ಜೋಗುಳಹಾಡಿ ಮಲಗಿಸಿ, ಸಾಕಿಸಲಹಿ ಸುಖಪಡಬೇಕು; ಆದರ್ಶಪತ್ನಿಯಾಗಿರಬೇಕು; ಎಣೆಯಿಲ್ಲದ ಗೃಹಿಣಿಯಾಗಬೇಕು; ನೆರೆಯವರ ಆರಾಧನೆಗೂ ಊರಿನವರ ಪ್ರಶಂಸೆಗೂ ಪಾತ್ರಳಾಗಬೇಕು; ಎಂಬ ಸವಿಗನಸುಗಳ ಒಂದು ಜೇನುಗೂಡೇ ಆಕೆಯ ಹೃದಯದಲ್ಲಿ ಜಿನುಗುತ್ತಿತ್ತು.

ಬಂದುನಿಂತ ಜಟಕವನ್ನು ಏನಾದರೂ ಮಾಡಬೇಕಲ್ಲ. ಜವಾನನನ್ನು ಕರೆದು ನಾಲ್ಕಾಣೆ ದುಡ್ಡನ್ನು ಕೊಟ್ಟು ಜಟಕದವನ್ನು ಕಳುಹಿಸಿಕೊಡು ಅಂದಳು. ಅನಂತರ ಒಂದೆರಡು ನಿಮಿಷಗಳಲ್ಲೇ ಸುಮಿತ್ರೆ ಬಂದಳು, ಕಿರುಬಿರುಗಾಳಿಯಂತೆ.

"ಏನೇ ಮಾಲತಿ; ಸಿನೇಮಾಕ್ಕೆ ಬರೋದಿಲ್ವೇ?"

"ಏನಿಷ್ಟವಸರ? ಹೊತ್ತಿದೆ ಕೂತುಕೋ."

" ನಿನ್ನೋಡಿದರೆ ಬರೋಹಾಗೆ ಕಾಣಲಿಲ್ಲ. ಎದುರುಗೋಡೇನ ನೋಡ್ತಾ ಇದ್ದಿ."

" ಹೊತ್ತೇ ಹೋಗದು. ಕಣ್ಮುಂದೆ ಕೂತುಬಿಟ್ಟಿತ್ತು. ಅದನ್ನೇ ನೋಡ್ತಾ ಇದ್ದೆ. ಅಲ್ಲದೆ ನೀನು ಡ್ರೆಸ್ಸುಮುಗಿಸಿ ಬರುವಷ್ಟರಲ್ಲಿ ಎಲ್ಲಿ ತಡವಾಗಿಬಿಡು ತ್ತೋಂತ ಯೋಚ್ನೆ ಬೇರೆ ಹತ್ತಿತ್ತು."

ನಿಲುಗನ್ನಡಿಯ ಎದುರು ನಿಂತು ಮುಖ ವಿಕಾರಮಾಡುತ್ತ ಪವುಡರು ಬಳಕೋತಿದ್ದ ಸುಮಿತ್ರೆ ಪಕ್ಕನೆ ಬೊಗರಿಯಂತೆ ತಿರುಗಿ " ನೀನೀವರೆಗೆ ಕುಂಬಳಕಾಯಿಗೆ ಅಥವಾ ಮುಳ್ಳುಬೇಲಿಗೆ ಸೀರೆ ಉಡಿಸಿ ನೋಡಿದ್ದೀಯಾ?" ಎಂದು ಕಣ್ಣರಳಿಸಿ ಕೇಳಿದಳು.

" ಇಲ್ಲ" ಎಂದು ಮಾಲತಿ ನಕ್ಕಳು.

" ಹಾಗನ್ನು ಮತ್ತೆ. ನಿನಗೇನು ಗೊತ್ತು ನನ್ನ ಹಾಗಿನವರ ಕಷ್ಟ? ಡ್ರೆಸ್ಸು ಮಾಡೋದೂಂದ್ರೆ ಅದೊಂದು ದೊಡ್ಡ ಒಪರೇಶನು. ಹೇಗೆ ಸುತ್ತಿ ಕೊಂಡರೂ ಸರಿ ಹೋಗೋದಿಲ್ಲ. ಸುತ್ತುಮುತ್ತಲಿನವರನ್ನೆಲ್ಲ ಶಪಿಸಿಯೇ ಸಾಕಾಗಿಬಿಡುತ್ತೆ. ನಿನ್ನ ಹಾಗಿದ್ದವರಿಗೆ ಹೇಗೆ ಸುತ್ತಿಕೊಂಡರೂ ಸರಿಯೆ, ಮೈಗೆ ಹತ್ತಿಕೊಂಡುಬಿಡುತ್ತೆ. ಯಾವುದುಟ್ಟರೂ ಒಪ್ಪುತ್ತೆ."

" ನಾಳೆಯಿಂದ ನಿನ್ನ ನಾಲಗೆಗಿರುವ ಚುರುಕುತನ ನಿನ್ನ ಕೈಗೆ ಕಲಿಸಿ ಕೊಟ್ಟು ಡ್ರೆಸ್ ಮಾಡಿ ನೋಡು, ಹೇಗಿರುತ್ತೇಂತ. ಈಗೇನು ಹೋಗೋ ಣವೇ?" ಅನ್ನುತ್ತ ಎದ್ದು ತನ್ನ ಕೈಚೀಲವನ್ನು ತಗೊಂಡಳು. ಸುಮಿತ್ರೆ ತಿರುಗಿ ಕನ್ನಡಿಯೆದುರು ಅಣಕಿಸುತ್ತಿದ್ದವಳು,

" ಈ ವರೆಗೆ ಕೋತಿಕೈಲಿ ಕನ್ನಡಿ ಕೊಟ್ಟು ನೋಡಿದ್ದೀಯಾ, ಮಾಲತಿ?" ಎಂದು ಕೇಳಿದಳು.

" ಇಲ್ಲ. ಇವತ್ತೇ ಸುರು."

ಇಬ್ಬರೂ ಕಿಲಕಿಲನೆ ನಗುತ್ತ ಹೊರಗೆ ಬಂದು ಚಿತ್ರಾ ಟಾಕೀಸಿಗೆ ಹೋದರು. ಮನೆಯಿಂದ ಸ್ವಲ್ಪ ದೂರ ಹಾದು ಹೋಗುವಾಗ ಎದುರಿಂದ ಒಂದು ಸಿಟಿ ಬಸ್ಸು ಬಂದು ನಿಂತಿತು. ಇಬ್ಬರು ಯುವಕಯುವತಿಯರನ್ನು ಹೊರಕ್ಕಿಳಿಸಿ ಪುನಃ ಮುಂದರಿಯಿತು. ಯುವಕನು ಇಂಡಿಯದ ವಿಮಾನ ದಳದ ಖಾಕಿ ಪೋಷಾಕನ್ನು ಹಾಕಿ ಟೊಪ್ಪಿಯನ್ನು ವೋಡಿಯಿಂವ ತಲೆಯ

ಒಂದು ಪಕ್ಕಕ್ಕೆ ಕುಕ್ಕಿದ್ದನು. ಆತನ ಸಹಚರಿ ಚೆಂಗುಲಾಬಿಯ ಜರತಾರಿ ಸೀರೆ, ಕುಂಕುಮ ಬಣ್ಣದ ರೆಕ್ಕೆಭುಜದ ಬ್ಲೌಸು, ಅದೇ ಬಣ್ಣದ ಅರ್ಧ ಗೇಣೆತ್ತರ ಹಿಂಬುಡದ ಪಾದುಕೆ, ರಕ್ತವರ್ಣದ ತೊಗಲಿನ ಕೈಚೀಲ, ಇವು ಗಳನ್ನು ಧರಿಸಿ ರಂಗುಲೇಪಿಸಿದ ಗಲ್ಲ ತುಟಿಗಳಿಂದಲೂ ಹಣಿಗೆಗಳಿಂದ ಹಿಂದೊತ್ತಿದ್ದ ಹೆಗಲವರೆಗೆ ಕತ್ತರಿಸಿದ್ದ ಕೇಶರಾಶಿಯಿಂದಲೂ ಶೋಭಿತ ಳಾಗಿದ್ದಳು. ತನ್ನ ಎಡ ಹೆಗಲಿನಿಂದ ಪದೇ ಪದೇ ಜಾರಿ ಬೀಳುತ್ತಲಿದ್ದ ಸೆರಗನ್ನು ಸರಿಪಡಿಸುತ್ತ, ನಡುವನ್ನು ಕುಲುಕಿಸುತ್ತ, ಮುಂದೆ ಬರುತ್ತಿದ್ದ ವಳು ಸುಮಿತ್ರೆಯನ್ನು ಕಂಡು ಮುಗುಳ್ನಕ್ಕಳು. ಸುಮಿತ್ರೆ ಹಲ್ಲು ಕಿರಿದಳು. ಮತ್ತೆರಡು ಹೆಜ್ಜೆ ಮುಂದೆ ಬಂದಮೇಲೆ ಆಕೆಯ ಜತೆಗಾರ ಆಕೆಯ ತೋಳನ್ನು ಹಿಡಿದು ಪಕ್ಕದ ಒಂದು ಗೇಟಿನೊಳಗೆ ನಡೆಸಿಕೊಂಡು ಇಬ್ಬರೂ ಅದೃಶ್ಯರಾದರು.

ಮಾಲತಿ ಆಚ್ಚರಿಗೊಂಡು, "ಯಾರೆ ಅದು, ಸುಮಿತ್ರೆ ?" ಎಂದು ಕೇಳಿ ದಳು.

"ಚಿತ್ರಲೇಖಾ."

"ಒಪ್ಪುವ ಹೆಸರು. ಇಂದ್ರಲೋಕದ ಅಪ್ಸರೆಯಿರಬೇಕು."

"ಇಂದ್ರಲೋಕವಲ್ಲ. ಅಲ್ಲೆ ನೆರೆನಾಡಿನವಳು. ಬ್ರಹ್ಮಸಮಾಜದವಳು. ಆತ I. N. A. officer ಆಕೆಯ ಗಂಡ. ಕಳೆದ ವಾರ ಮದ್ರಾಸಿ ನಲ್ಲಿ ಮದುವೆಯಾದ ನವದಂಪತಿಗಳು. ಇಲ್ಲಿ ಆಕೆಯ ಅಜ್ಜಿ ಇದ್ದಾಳೆ. ನೋಡಿ ಹೋಗೋಣಾಂತ ಬಂದಿರಬೇಕು."

"ಬಲು ಸೊಗಸಾಗಿದ್ದಾರೆ, ಗಂಡ ಹೆಂಡತಿ. ಆತ ಸ್ವರ್ಗಸಂಚಾರಿ, ವಿಜಯ ಸಾರಥಿ. ಈಕೆ ಅರುಣದೇವಿ, ಬ್ರಹ್ಮಪುತ್ರಿ ರಾಗಕ್ಕೆ ತಕ್ಕ ರಂಗು" ಎಂದು ಟೀಕಿಸಿದಳು ಮಾಲತಿ.

"ಈ ನವವಧುವರರನ್ನು ನೋಡಿ ನಿನಗೇನೋ ಸ್ಫೂರ್ತಿ ಬಂದಿದೆ ಮಾಲತಿ. ನಾಲಗೆ ಸಡಲಿದೆ. ನನಗ್ಯಾತಕ್ಕೊ ಕೈಕಾಲು ತಣ್ಣಗಾಗಿದೆ."

"ನಿನ್ನ ನಾಲಗೆಗೆ ಚಳಿಹಿಡಿದಿದ್ದರೆ ಚೆನ್ನಾಗಿತ್ತು."

"ಇಲ್ನೋಡು. ಆಕೆ ಗೇಟಿನೊಳಗೆ ಕಾಲಿಡುವುದೇ ತಡ, ಆಕೆಯ ರಟ್ಟೆ ಮೇಲಿದ್ದ ಆತನ ಕೈ—"

" ಶ್ಶ್! ಕೊಂಚ ಮೆತ್ತಗೆ ಮಾತಾಡೇ, ಮಹಾರಾಯತಿ! ಸೊಂಟ ಸುತ್ತಿಕೊಂಡಿತಲ್ವೇ? ನೋಡಿದೆ. "

" ಅಲ್ಲಾಂದ್ರೆ ! ಏನು ಸೂಕ್ಷ್ಮವೇ ನಿನ್ನ ಕಣ್ಣು !"

ಹೀಗೆ ಇಷ್ಟಬಂದಂತೆ ಹರಟುತ್ತ ಸಾಗಿದರು. ಕೊಡಿಯಾಲು ಬೈಲಿನ ಸಮೀಪ ಸುಮಿತ್ರೆ ಮಾಲತಿಯನ್ನು ಹಿಂದಕ್ಕೆಳೆದು, ಓ, ಹೋ, ಹೋ, ಮಾಲತಿ! ಇದೇನು ಈ ಇರುವೆ ಸಾಲು? " ಎಂದು ಗಾಬರಿಗೊಂಡಳು. ಮುಂದೆ ಅಕ್ಕಿ ಡಿಪೋದಿಂದ ಹಿಡಿದು ಕಾಣುವಷ್ಟು ದೂರಕ್ಕೂ ನೂರಾರು ಮಂದಿ, ಗಂಡಸರು ಹೆಂಗಸರು ಮಕ್ಕಳು, ಬೀದಿ ಮಗ್ಗುಲಲ್ಲಿ ಸಾಲುಕಟ್ಟಿ ಜನರ ಅಂದಿನ ಅಕ್ಕಿಗಾಗಿ ಕಾದಿದ್ದರು. ಹೆಂಗಸರೇ ಬಹುಮಂದಿ. ಸಾಮಾನ್ಯವಾಗಿ ಎಲ್ಲರೂ ಗರೀಬರೇ. ಅಕ್ಕಿ ತುಂಬಲು ಒಬ್ಬಳ ಹತ್ತಿರ ಅರಿವೆಚೀಲ. ಇನ್ನೊಬ್ಬಳ ಕೈಯಲ್ಲಿ ಹರಕುಬುಟ್ಟಿ. ಮತ್ತೊಬ್ಬಳು ಗಂಜಿಯ ಚೆರಿಗೆಯನ್ನೇ ತಂದಿದ್ದಳು. ಹತ್ತುವರ್ಷದ ಹುಡುಗಿಯೊಂದು ನಜ್ಜುಗುಜ್ಜಾದ ಸೀಮೆಯೆಣ್ಣೆಯ ಡಬ್ಬವನ್ನು ಎದೆಗಪ್ಪಿಕೊಂಡು ಉಂಗುಟದಿಂದ ನೆಲವನ್ನು ಕೆರೆಯುತ್ತ ನಿಂತಿದ್ದಳು. ಒಬ್ಬ ಅಣುಗ ಯಾವುದೋ ಚರಂಡಿಯಲ್ಲಿದ್ದ ರಟ್ಟಿನ ಪೆಟ್ಟಿಗೆಯೊಂದನ್ನು ಹಿಡಿದು ಅದರ ಬುಡದ ಮೇಲೆ ಬೆರಳನ್ನಾಡಿಸುತ್ತಿದ್ದ. ಉಟ್ಟಬಟ್ಟೆಯಲ್ಲೇ ಕಟ್ಟಿಕೊಂಡು ಹೋಗುವವರ ಕೈ ಅವರ ಹೊಟ್ಟೆಯಂತೆ ಬರಿದಾಗಿತ್ತು. ಸಮಸ್ತರೂ ಮಾತುಕತೆಯಿಲ್ಲದೆ, ಆಚೆಯೀಚೆ ನೋಡದೆ, ಮುಖದಲ್ಲಿ ಯಾವ ಜೀವ ಕಳೆಯೂ ಇಲ್ಲದೆ, ಮೂಕಪಶುಗಳಂತೆ ಮುಂದಿದ್ದ ಬೆನ್ನು ನೋಡುತ್ತ, ಅದು ಮುನ್ನಡೆದಾಗ ಮುನ್ನಡೆಯುತ್ತ, ಹಿಂದೊತ್ತಿದಾಗ ಹಿಂಜರಿಯುತ್ತ, ಒಂದು ಹಿಡಿ ಅಕ್ಕಿಗಾಗಿ ಕಾದಿದ್ದರು.

ಈ ದಾರುಣ ದೃಶ್ಯ ಸುಮಿತ್ರೆಯ ಕಣ್ಣಿಗೆ ಬೀಳುವ ಮೊದಲೇ ಮಾಲತಿಗೆ ಕಂಡು ಆಕೆಯ ಮುಖ ಮಲಿನವಾಗಿತ್ತು, ಗತಿ ಮಂದವಾಗಿತ್ತು.

" ಏನು ನೋಡೋದು ? ಈ ಗಂಜಿಗಿಲ್ಲದ ಗುಳ " ಅನ್ನುತ್ತ ಸುಮಿತ್ರೆ ಆಕೆಯನ್ನು ಕೈಹಿಡಿದೆಳೆದಳು.

" ನೋಡಿ ಮಾಡೋದೇನೂ ಇಲ್ಲಾನ್ನು. ಆದರೆ ಸುಮಿತ್ರೆ, ಸಿನೆಮದ ರುಚಿಯೇ ಕೆಟ್ಟುಹೋಯಿತು. ಇಲ್ಲಿಂದಲೇ ಮನೆಗೆ ಹಿಂತಿರುಗೋಣಾನ್ನಿಸುತ್ತೆ. "

"ನೀನು ಬೇಕಾದರೆ ಹೋಗು. ನಾನೇನು ಬರೋಹಾಗಿಲ್ಲ. ನಿನ್ನ ಮನಸ್ಸಿನ ಗೋಡೆ ಹಸಿಮಣ್ಣಿಂದು ಮಾಲತಿ. ದಾರಿಯ ಧೂಳೆಲ್ಲ ಹತ್ತಿಕೊತ್ತೆ. ಅದಕ್ಕೊಂದಿಷ್ಟು ಸಾರಣೆ ಮಾಡಿಸಿ ಬಣ್ಣ ಕೊಡಿಸು. ಇಲ್ಲವೆ ಕಲ್ಲಿಂದ ಕಟ್ಟಿಸು" ಅನ್ನುತ್ತ ಆಕೆಯ ಕೈಬಿಡದೆ ಸುಮಿತ್ರೆ ನಡೆಸಿಕೊಂಡು ಹೋದಳು. ಅನಂತರ ಸಿನೆಮ ಮಂದಿರದ ತನಕ ಇಬ್ಬರೂ ಮಾತೆತ್ತಲಿಲ್ಲ.

೮

ಸಿನೆಮದ ಮುಖಮಂಟಪದೊಳಗೆ ಟಿಕೇಟು ಗೂಡಿನ ಬಳಿನಿಂತು ಮಗುವನ್ನೆತ್ತಿಕೊಂಡಿದ್ದ ಗೋಪಿನಾಥ ಸಿನೆಮದ ಮೆನೇಜರರೊಡನೆ ಮಾತನಾಡುತ್ತಿದ್ದ. ಚಿತ್ರ ಪ್ರಾರಂಭವಾಗುವುದಕ್ಕೆ ಇನ್ನೂ ಒಂದು ಹತ್ತು ನಿಮಿಷಗಳಿತ್ತು. ಜನರ ಸಿಗ್ಗು ನೋಡುತ್ತಿರುವಾಗ ಮಾಲತಿ ಸುಮಿತ್ರೆಯರಿಬ್ಬರು ಬೀದಿ ಮೆಟ್ಟಿಲು ಹತ್ತಿಕೊಂಡು ಮೇಲೆ ಬಂದುದು ಗೋಪಿನಾಥನ ಕಣ್ಣಿಗೆ ಬಿದ್ದು ಆತಗೆ ಅಪೂರ್ವ ಸಂತೋಷವಾಯಿತು. ಸುಮಿತ್ರೆ ಒಬ್ಬಳೇ ಇದ್ದಿದ್ದರೆ ಒಡನೆ ಹೋಗಿ ಮಾತನಾಡಿಸುತ್ತಿದ್ದ. ಆದರೆ ಮಾಲತಿಯನ್ನು ನೋಡಿ ಸುಮ್ಮಗಿದ್ದ. ಟಿಕೆಟಿನ ಕಿಟಕಿಯ ಬಳಿ ಜನಸಂದಣಿ ವಿಪರೀತವಾದ್ದರಿಂದ ಅವರಿಗೆ ಟಿಕೆಟು ಪಡಕೊಳ್ಳಲು ಸಾಧ್ಯವಾಗದೆ ಪಿಸುಮಾತನಾಡುತ್ತ ಅಸಹಾಯಕರಾಗಿ ಒಂದೆಡೆ ದೂರ ನಿಂತುದನ್ನು ನೋಡಿ ಗೋಪಿನಾಥ ಅವರಿದ್ದೆಡೆ ಹೋಗಿ,

"ನೀವು ಬಂದಿದ್ದು ತುಂಬ ಸಂತೋಷ" ಎಂದ.

"ನೀವು ಒಳ್ಳೇ ಸಮಯಕ್ಕೆ ನೆರವಾದಿರಿ, ನಮಗೆ" ಎಂದಳು ಸುಮಿತ್ರೆ.

"ಟಿಕೆಟಾಗಬೇಕೆ ?"

"ಹೌದಲ್ಲ."

ಮೆನೆಜರರು ಇದ್ದರೆ ಅತಿಸುಲಭವಾಗಿ ಟಿಕೆಟು ತರಿಸಿಕೊಡೋಣವೆಂತ ತಿರುಗಿನೋಡಲು ಅವರು ಹೊರಟುಹೋಗಿದ್ದರು.

"ಇವಳನ್ನ ಸ್ವಲ್ಪ ನೋಡಿಕೊಂಡರೆ ತಂದುಬಿಡುತ್ತೇನೆ. ಪಂಬಿ, ಹೋಗಮ್ಮ. ನಾನೀಕ್ಷಣ ಬಂದುಬಿಡ್ತೇನೆ. ಹೋಗಲ್ಲ? ಇನ್ನೇನು ಗತಿ ?"

ಸುಮಿತ್ರೆ ಕಿತ್ತೆಳೆದರೂ ಪಂಬಿ ಬರಲಿಲ್ಲ. ತಂದೆಯ ಕತ್ತನ್ನು ಬಿಗಿದು ಹಿಡಿದಳು. ಆಗ ಆತನಕ ಸುಮ್ಮಗಿದ್ದ ಮಾಲತಿ ಕೈನೀಡಿ, "ನನ್ನ ಹತ್ರ ಬರ್ತೀಯಾ ಮಗು?" ಎಂದು ಕರೆದಳು. ತಂದೆ ಮಗಳು ಮುಖ ಮುಖ

ನೋಡಿಕೊಂಡರು. ಗೋಪಿನಾಥನಿಗೆ ಗೊತ್ತು ಮಗಳ ಮರ್ಜಿ. ಮುಗುಳ್ನಗುತ್ತ ಸುಮ್ಮಗಿದ್ದ. ತಟ್ಟನೆ ಆತನ ತಕ್ಕೆಯಿಂದ ಜಾರಿ ಮಾಲತಿಯ ಕೈಗೆ ಹೋದಳು. ಗೋಪಿನಾಥಗೆ ಏಕಕಾಲದಲ್ಲಿ ಅತ್ಯಾನಂದವೂ ಆಶ್ಚರ್ಯವೂ ಅಂತರ್ಯವನ್ನು ಬೆಳಗಿಸಿತು. ಪಂಬಿ ಹಾಗೆಲ್ಲ ಇನ್ನೊಬ್ಬರ ಕೈಗೆ ಹೋಗುವಂಥವಳಲ್ಲ. ಆಕೆಮಟ್ಟಿಗೆ ಸುಮಿತ್ರೆಗಿಂತ ಮಾಲತಿಯೇ ಅಪರಿಚಿತಳು. ಆದರೂ ಸುಮಿತ್ರೆ ಕರೆದಾಗ ಹೋಗದೆ ಮಾಲತಿಗೆ ಮೆಚ್ಚಿದ್ದು ಒಂದು ಸೋಜಿಗವೇ. ಆಕೆಯ ಈ ನಡತೆ ಅರ್ಥವಾಗದಿದ್ದರೂ ಸುಖದಾಯಕವಾಗಿತ್ತು, ಯಾತಕ್ಕೋ.

ಎರಡು ಸೋಫಾಟಿಕೆಟುಗಳನ್ನು ಕೊಂಡುಬಂದು ಉಪ್ಪರಿಗೆ ಮೇಲೆ ಹೋಗೋಣವೆಂತ ಹೇಳಿ ಅವರನ್ನು ಕರೆದೊಯ್ದು ಕುಳ್ಳಿರಿಸಿದ. ಮಾಲತಿ ಕುಳಿತುಕೊಳ್ಳುವಾಗ ಅನೈಚ್ಛಿಕವಾಗಿ ಪಕ್ಕದಲ್ಲಿ ಜಾಗ ಬಿಟ್ಟೇ ಕುಳಿತಳು. ಆದರೆ ಕೆಳಗಿನ ತರಗತಿಯ ಟಿಕೆಟನ್ನು ಪಡೆದಿದ್ದ ಗೋಪಿನಾಥ ಅವರನ್ನಲ್ಲೆ ಬಿಟ್ಟು ಹೋಗುವುದರಲ್ಲಿದ್ದ. ಅಷ್ಟರಲ್ಲಿ ಪಂಬಿ 'ಪಪ್ಪ' ಎಂದಳು.

"ನೀನಿಲ್ಲೇ ಇರು ಪಂಬಿ" ಎಂದು ಕಿವಿಮಾತಾಗಿ ಹೇಳಿದಳು ಮಾಲತಿ.

"ಪಂಬಿ ಅಯ್ಯ, ಪಬಾ" ಅಂದಳು ಗಂಭೀರವಾಗಿ.

"ಓಹೋ, ಪ್ರಭಾಂತಲೇ? ಆಗಲಿ. ನೀನಿಲ್ಲೇ ಇದ್ದು ಬಿಡು ಪ್ರಭಾ. ಪಪ್ಪ ಹೋಗಲಿ. ಸಿನೆಮ ನೋಡಿ ಅವರ ಜತೇಲಿ ಮನೆಗೆ ಹೋದರಾಯಿತು" ಅಂದಳು.

"ನಾನಿಯ್ಯಿ ಕೂಕಡಿಯ್ಯ. ಪಪ್ಪ ಬೇಕು." ಎಂದರೂ ಮಾಲತಿಯ ತೊಡೆಯನ್ನು ಬಿಟ್ಟೇಳಲಿಲ್ಲ.

"ನೀವೇತಕ್ಕೆ ಇಲ್ಲೇ ಕೂತಕೋ ಬಾರದು?" ಎಂದು ಸೂಚಿಸಿದಳು ಸುಮಿತ್ರೆ. ಗೋಪಿನಾಥಗೆ ಒಂದು ಗಳಿಗೆ ಮಾಡುವುದೇನಂತ ಗೊತ್ತಾಗಲಿಲ್ಲ. ಮುಗುಳ್ನಗುತ್ತ ಅನ್ಯಮನಸ್ಕನಾಗಿ ನಿಂತುಬಿಟ್ಟನು. ಆ ಮೇಲೆ ಬಾಗಿಲು ಕಾಯುವವನಿಗೆ ಕೈಸನ್ನೆಮಾಡಿ ಕರೆದು ತನ್ನ ಟಿಕೆಟನ್ನು ಬದಲಿಸಿ ತರುವಂತೆ ಹೇಳಿ ದುಡ್ಡುಕೊಟ್ಟು ಕಳುಹಿಸಿದ. ಮಾಲತಿಯ ಸಮೀಪ ಬೇರೊಂದು ಸೋಫದಲ್ಲಿ ಕುಳಿತ. ಒಡನೆ ಪಂಬಿ ಎದ್ದು ತಂದೆಯ ಕಡೆಗೆ ಓಟಿದಳು.

"ಇಷ್ಟು ಹೊತ್ತು ಮುಳ್ಳಿನ ಮೇಲೆ ಕೂತಹಾಗಿತ್ತೇನೋ ಪಾಪ!" ಅಂದಳು ಸುಮಿತ್ರೆ.

"ಹಾಗಲ್ಲ. ಅವಳಿಗೆ ಹೂವಿನ ಹಾಸಿಗೆಯ ಅಭ್ಯಾಸವಿಲ್ಲ" ಅನ್ನುತ್ತ ಕೈಚಾಚಿ ಮಗುವನ್ನೆತ್ತಿಕೊಂಡ. ಸುಮಿತ್ರೆ ಮಾಲತಿಯನ್ನೊಮ್ಮೆ ಕದ್ದು ನೋಡಿದಳು. ಆದರೆ ಆಕೆಯ ಮುಖಭಾವದಲ್ಲಿ ಯಾವ ವ್ಯತ್ಯಾಸವೂ ಕಾಣ ಲಿಲ್ಲ. ಮಗು ತನ್ನ ಎಡ ತೋಳನ್ನು ಮಾಲತಿಯ ಕೈಚೀಲದ ತೊಗಲಿ ನೊಳಗೆ ಹಾಕಿಕೊಂಡದ್ದರಿಂದ ಮಗನನ್ನೆತ್ತಿಕೊಂಡಾಗ ಮಾಲತಿಯ ಕೈಯೂ ಚೀಲದೊಂದಿಗೆ ಗೋಪಿನಾಥನ ವಶವಾಗಿಬಿಟ್ಟಿತು. "ಇದೇನು ಪಂಬಿ, ಕಿತಾಪತಿ?" ಅನ್ನುತ್ತ ಹೂವಿನ ಎಸಳನ್ನು ಬಿಡಿಸುವಂತೆ ತನ್ನೆದೆಗೂ ಮಗುವಿನ ಮೈಗೂ ನಡುವೆ ಸಿಕ್ಕಿದ್ದ ಆಕೆಯ ಹಸ್ತವನ್ನು ಬಿಡಿಸಿಕೊಟ್ಟನು. ಕೆತ್ತಿದ ಜಂತದಂತಿದ್ದ ಆತನ ಬೆರಳುಗಳ ಕೋಮಲ ಸ್ಪರ್ಶದಿಂದ ಮಾಲ ತಿಯ ಮೈ ತುಸ ನಡುಗಿತು. ಟ್ರೀನ್ ಟ್ರೀನ್ ಗಂಟೆಯಾಗಿ ದೀಪಗಳೆಲ್ಲ ನಂದಿಹೋಗಿ ಶೋ ಸುರುವಾಯಿತು.

ಆರಂಭದ ಯುದ್ಧಪ್ರಚಾರದ ಚಿತ್ರಗಳಾಗುತ್ತಿರುವಾಗ, "ಈ ಗೋಳು ನೋಡೋದಕ್ಕೆ ನಮಗೇ ಕಾಸು ಕೊಡಬೇಕು, ಮೆನೇಜುಮೆಂಟು" ಅಂದಳು ಸುಮಿತ್ರೆ. ಆಗ ಮಾಲತಿಗೆ ನೆನಪಾಗಿ ತನ್ನ ಬ್ಯಾಗಿನಿಂದ ಮೂರು ರೂಪಾಯಿ ನೋಟುಗಳನ್ನು ತೆಗೆದು, "ನಮ್ಮ ಟಿಕೇಟಿಂದು ಕೊಡಲೇ ಇಲ್ಲ ವಲ್ಲ" ಎಂದು ಸುಮಿತ್ರೆಯೊಡನೆ ಹೇಳಿದಳು. "ಈಗ ಕೊಟ್ಟುಬಿಡು" ಅಂದಳು ಆಕೆ. ಆದರೆ ಗೋಪಿನಾಥನೊಡನೆ ಹಣಕಾಸಿನ ವ್ಯವಹಾರ ನಡೆ ಸಲು ಮನಸ್ಸು ಕೇಳದೆ ಮಾಲತಿ ಸುಮ್ಮಗಿದ್ದಳು, ತನ್ನ ಮನೋವೃತ್ತಿಗೆ ತಾನೇ ಬೇಸರಪಡುತ್ತ.

"ಅವರಿಗೆ ಬೇಡವಾದರೆ ನನಗೆ ಕೊಡು" ಎಂದು ಸುಮಿತ್ರೆ ಹೇಳು ವುದನ್ನು ಕೇಳಿ ಗೋಪಿನಾಥ "ಏನದು ? ಏನಾದರೂ ಬೇಕೇನು ?" ಎಂದು ಕೇಳಿದನು.

"ಟಿಕೆಟಿನ ಹಣ" ಎಂದಳು ಸುಮಿತ್ರೆ. ಮಾಲತಿ ಬಾಯಿಬಾರದ ಮಗುವಿನಂತೆ ನೋಟುಗಳನ್ನು ಆತನ ಮುಂದೆ ಚಾಚಿದಳು.

"ಪರವಾಯಿಲ್ಲ. ನಾನೇ ನಿಮಗೆ ಋಣಿಯಾಗಿದ್ದೇನೆ" ಎಂದು ಗೋಪಿ ನಾಥ ಬೇಸರದಿಂದ ಹೇಳಿದ.

" ನೀವೇತಕ್ಕೆ ನಮಗಾಗಿ ಖರ್ಚು ಮಾಡಬೇಕು, ತಗೊಳ್ಳಿ " ಎಂದು ಮಾಲತಿ ಒತ್ತಾಯ ಮಾಡಿದಳು.

" ಏತಕ್ಕೆ ಮಾಡಬಾರದು ? "

ಅದಕ್ಕೆ ಉತ್ತರವನ್ನು ಹೇಳಲಾರದೆ ಆಕೆ ಸುಮಿತ್ರೆಯನ್ನು ನೋಡಿ, " ಇನ್ನೇನು ಮಾಡೋದು ? " ಎಂದು ಸಲಹೆ ಕೇಳಿದ್ದಕ್ಕೆ ಆಕೆ,

" ಮಾಡೋದೇನು ? ಜೇಲಕ್ಕೆ ಸೇರಿಸಿಕೋ. ಈ ಮೊದಲು ನಾವಿಲ್ಲಿಗೆ ಬಂದಾಗಲೆಲ್ಲ ಅವರಿಲ್ಲದೆ ನಮಗಾದ ನಷ್ಟದ ಲೆಕ್ಕಹಾಕಿ ನೋಡು. ಗೋಪಿನಾಥರಾಯರೇ, ಇನ್ಮುಂದೆ ನೀವು ಸಿನೇಮಾಕ್ಕೆ ಬರೋದನ್ನ ಮುಂಚಿತವಾಗಿಯೆ ನಮಗೆ ತಿಳಿಸಿಬಿಡಿ " ಅಂದಳು.

" ಆಗಲಿ, ಅದಕ್ಕೇನು. "

ಈ ರೀತಿ ಸರಸವಾಡುವುದಕ್ಕೆ ಸನ್ನಿವೇಶವು ಅನುಕೂಲವಾಗಿತ್ತು. ಚಿತ್ರಪಟದ ಮೇಲಲ್ಲದೆ ಬೇರೆಲ್ಲೂ ನೇರವಾದ ಬೆಳಕಿರಲಿಲ್ಲ. ಇವರಿದ್ದೆಡೆ ಸೋಫಗಳಲ್ಲಿ ಬೇರೆ ಯಾರೂ ಇರಲಿಲ್ಲ. ನಸುಗತ್ತಲೆಯು ಇವರನ್ನು ತಬ್ಬಿಕೊಂಡು ಒಂದು ಸುಖಮಯವಾದ ಅಚ್ಚುಕಟ್ಟಿನ ಸಂಸಾರದ ಭಾವನೆಯನ್ನುಂಟು ಮಾಡುತ್ತಿತ್ತು. ಮಾಲತಿಗೆ ತುಂಬ ಮಾತನಾಡಬೇಕೆಂಬ ಆತುರ. ಆದರೆ ಯಾವ ಕಾರಣದಿಂದಲೋ ಗೋಪಿನಾಥನ ಸಮೀಪದಲ್ಲಿರುವವಳಿಗೆ ಮಾತೇ ಬಾರದು. ಬಂದರೂ ಬಂದ ಮಾತಿಗೆ ಅರ್ಥವಿರಲಿಲ್ಲ. ಒಳಗಿದ್ದ ಮಾತುಗಳಿಗೆ ತಕ್ಕ ಅಕ್ಷರಗಳಿರಲಿಲ್ಲ. ಮನದುಂಬಿದ ಭಾವನಾತರಂಗಗಳಿಗೆ ಗುರುತಿಸತಕ್ಕ ರೂಪಲಕ್ಷಣಗಳಿರಲಿಲ್ಲ.

ಶೋ ಆಗುತ್ತಿರುವಾಗ ಗೋಪಿನಾಥ ಮಗಳಿಗೆ ಕಥಾಭಾಗವನ್ನು ವಿವರಿಸುತ್ತ ಆಕೆಯ ಪ್ರಶ್ನಗಳಿಗೆಲ್ಲ ಉತ್ತರ ಹೇಳುವುದನ್ನು ಗಮನಿಸುತ್ತಿದ್ದಳು, ಮಾಲತಿ. ಕೀಲಿ ಕುದುರೆಯನ್ನು ನೋಡಿ ಪಂಬಿಗೆ ತನಗೂ ಅಂಥದೊಂದು ಬೇಕೆನಿಸಿತು.

" ಆ ಕುದಿಯೆ ಬೇಕು ಪಪ್ಪ ನಂಗೆ "

" ಹಾಗೆಲ್ಲ ಕಂಡದ್ದನ್ನೆಲ್ಲ ಕೇಳಬಾರದು, ಪಂಬಿ. "

" ನಂಗಯ್ಯ. ನನ್ನ ಕೂಚಿಗೆ. "

"ನಿನ್ನ ಕೂಸಿಗೇ ನಾನಂದದ್ದು. ನೀನು ಹೇಳಬೇಕು, ಹಾಗೆಲ್ಲ ಕೇಳ ಬಾರದೂಂತ."

"ಅದಕ್ಕೆ ಬುದ್ಧಿಯ್ಯಯ್ಯ? ಅದು ಅಯತ್ತೆ."

"ಪಾಪ! ತಾಯೀದೇ ಬುದ್ಧಿ ಅದಕ್ಕೆ. ಮಾಡೋದೇನು? ಕಲಿಸ ಬೇಕು."

ಹೀಗೆ ಮಾತನಾಡುತ್ತಿರುವಾಗ ವಿರಾಮಕಾಲ ಬಂದು ಜಗ್ಗನೆ ಬೆಳಕಾಯಿತು. ಪಂಬಿ ಎದ್ದು ನಿಂತು,

"ಹಾಂ. ಇನ್ನು ಲಿಂಬೆತ್" ಎಂದಳು ಗಟ್ಟಿಯಾಗಿ.

ಮಾಲತಿಗೆ ಮಾತಿಗೊಂದು ಹಿಡಿತ ಸಿಕ್ಕಿತು. "ಅವಳಿಗೇನಂತೆ?" ಎಂದು ಕೇಳಿದಳು.

"ಲಿಂಬೆತ್!" ಎಂದಷ್ಟೇ ಹೇಳಿ ನಕ್ಕನು.

"ಲಿಂಬೆತ್ ಅಂದ್ರೆ?" ಮಾಲತಿಗೂ ನಗು ಬಂತು. ಮಕ್ಕಳ ಭಾಷೆ ಆಕೆಗೆ ತೀರ ಹೊಸತು. ಆಕೆ ನಕ್ಕಾಗ ಅರಳಿ ಕಂಗೊಳಿಸಿದ ಮುಖದ ಕಾಂತಿಗೆ ಗೋಪಿನಾಥ ಬೆರಗಾದನು. ಬೆರಗು ಬಡಿದು ಆತನ ಬರಿದಾದ ಹೃದಯಕಲಶವು ಹಾಳುಬಿದ್ದ ಗುಡಿಯ ಮುಗುಳಿ ಸಿಡಿಲಿಗೆ ಕಳಚಿ ಬಿದ್ದಂತೆ ಉರುಳಿತು. ಆದರೂ ಕಂಗೆಡದೆ,

"Lemonade. ಅವಳ ಮಾಮೂಲು. ಕೊಟ್ಟೇತೀರಬೇಕು" ಎಂದನು.

"ನಾನು ಕೊಡ್ತೇನೆ, ಬಾಮ್ಮಾ" ಎಂದು ಮಾಲತಿ ಕರೆದಳು ಮಗು ತಟ್ಟನೆ ಬಂದುಬಿಟ್ಟಿತು. ಅದನ್ನು ಮುದ್ದಾಡುತ್ತ, ಗುಟ್ಟುಮಾತನಾಡಿಸುತ್ತ, ಅದರ ಮೈಯೆಲ್ಲ ಮುಖವೆಲ್ಲ ಮೂಸುತ್ತ, ತಬ್ಬಿಕೊಂಡು ಹೊರಗೆ ಹೋದಳು. ಹಿಂತಿರುಗಿ ಬರುವಾಗ ಪಂಬಿಯ ಕೈತುಂಬ ಬಿಸ್ಕತು. ಮುಖ ತುಂಬ ನಗೆಯಿತ್ತು. ಮಗುವನ್ನು ತೊಡೆಯ ಮೇಲೆಯೆ ಕೂರಿಸಿಕೊಂಡು ಮಾಲತಿ ಕುಳಿತಳು.

"ಇನ್ನುಳಿದಷ್ಟು ಹೊತ್ತು ನನ್ನ ಹತ್ರವೇ ಇರ್ತಾಳಂತೆ" ಅಂತಂದಳು ಗೋಪಿನಾಥನ ಸಲುವಾಗಿ.

"ಇರಲಿ. ನಿಮ್ಮನ್ನೇನೋ ತುಂಬ ಹಚ್ಚಿಕೊಂಡಿದ್ದಾಳೆ. ಹಾಗೆಲ್ಲ ಎಲ್ಲರಿಗೂ ಪ್ರಸನ್ನಳಾಗುವವಳಲ್ಲ ಅವಳು, ಮಹಾಕಾಳಿ" ಅಂದ ಗೋಪಿನಾಥ ಮಗಳ ಮೇಲಿನ ಹೊಟ್ಟೆಕಿಚ್ಚಿನಿಂದ.

" ನಾನಂದ್ರೆ ಆಗೋದಿಲ್ಲ. ಅಲ್ವೇನಮ್ಮಾ ಮಹಾಕಾಳಿ ? " ಎಂದು ಸುಮಿತ್ರೆ ಕೆಣಕಿದ್ದಕ್ಕೆ,

" ಮಾಕಾಯಿ ನೀನೇ " ಅಂದಳು ಪಂಬಿ.

" ಜಾತಿಮತ್ಸರ " ಅನ್ನುತ್ತ ಮಿಕ್ಕವರಿಬ್ಬರೊಂದಿಗೆ ಮಾಲತಿ ನಕ್ಕಳು.

ಶೋ ಮುಗಿದಮೇಲೆ ಜನ ಸಿಗ್ಗಿನ ಗೊಂದಲ ಕಡಿಮೆಯಾಗುವತನಕ ಇವರೆಲ್ಲ ಒಂದೆಡೆ ನಿಂತುಕೊಂಡು ಆಮೇಲೆ ಬೀದಿಗಿಳಿದರು. ಪಂಬಿ ಮಾಲತಿಯ ಹತ್ತಿರವೇ ಉಳಿದಳು.

" ನೀವಿಬ್ರೇ ಹೋಗ್ತೀರೇನು ? " ಎಂದು ಗೋಪಿನಾಥ ಕೇಳಿದನು.

" ನಾವಿಬ್ರೇ ಬಂದಿದ್ದು " ಅಂದಳು ಸುಮಿತ್ರೆ.

" ಬರುವಾಗ ಸಂಜೆ, ಈಗ ರಾತ್ರೆ; ಆದ್ದರಿಂದ ಕೇಳಿದೆ. "

" ಹಾಗಿದ್ರೆ ಬನ್ನಿ ಜತೆಗೆ. "

" ಕಂಕನಾಡಿಯೆಲ್ಲಿ, ಕದರಿಯೆಲ್ಲಿ ? ಬಲು ದೂರವಾಗುತ್ತ-ಲ್ಲ ? ಜಟಕವೂ ಸಿಗೋದಿಲ್ಲ. "

"ಹಾಗಾದರೆ ಬರಬೇಡಿ. ನಮಗಾಗಿ ಬರಬೇಕಾಗಿಲ್ಲ. ಅಲ್ವೇನೆ ಮಾಲತಿ?" ಎಂದು ಸುಮಿತ್ರೆ ಅನಾವಶ್ಯಕವಾಗಿ ಪ್ರಶ್ನೆಹಾಕಿ ಚುಚ್ಚಿದಳು. ಆದರೆ ಮಾಲತಿ ತನ್ನ ಆಧೀನದಲ್ಲಿ ತಾನಿದ್ದ ಹಾಗೆ ತೋರಲಿಲ್ಲ. ಅವರಿಬ್ಬರು ನಿಶ್ಚಯಿಸಿದ ಯಾವ ದಾರಿ ಹಿಡಿದು ಹೋಗಲೂ ಸಿದ್ಧಳಾಗಿದ್ದಳು. ಆಕೆಯ ಬುದ್ಧಿಯ ಕಾವಲು ತಪ್ಪಿಸಿ ಮನಸ್ಸು ಆಕೆಯನ್ನು ಹೆಸರರಿಯದ ಯಾವುದೋ ಒಂದು ರಾಜ್ಯಕ್ಕೆ ಒಯ್ದಿತ್ತು. ಆಕೆ ನಿರುತ್ತರಳಾಗಿ ಪಂಬಿಯನ್ನು ಇನ್ನಷ್ಟು ಬಿಗಿದಪ್ಪಿದಳು.

" ಬನ್ನಿ, ಹೋಗೋಣ. ಸೇವಾಶ್ರಮದ ಹತ್ತಿರ ನಾನು ತಿರುಗಿಹೋದ ರಾಯಿತು " ಎಂದು ಗೋಪಿನಾಥ ನಿರ್ಧರಿಸಿದ ಪ್ರಕಾರ ಮೂವರೂ ಒಟ್ಟಿಗೆ ಮುನ್ನಡೆದರು. ಸುಮಿತ್ರೆಯ ಬಲಗಡೆ ಮಾಲತಿ. ಮಾಲತಿಯ ಬಲಗಡೆ ಗೋಪಿನಾಥ. ಅವರ ನಿಲುವಿನ ಅಂತರ ಸರಿ ಸರಿಯಿತ್ತು. ಗೋಪಿನಾಥನ ಹೆಗಲಿಗೆ ಮಾಲತಿ, ಮಾಲತಿಯ ಹೆಗಲಿಗೆ ಸುಮಿತ್ರೆ. ಹುಣ್ಣಿಮೆಯ ಬೆಳದಿಂಗಳಲ್ಲಿ, ತಂಗಾಳಿಯ ಸೊಂಪಿನಲ್ಲಿ ವಿದ್ಯುದ್ದೀಪಗಳ ವರ್ತುಲವಲಯದಿಂದ ವಲಯಕ್ಕೆ ನಡೆದರು. ಗೋಪಿನಾಥ ಮಾಲತಿಯರು ಸುಮುಜತೆಯಿಂದ ಕಾಲಿಡುತ್ತ, ಅವರ ಪಾದರಕ್ಷೆಗಳು

ಡಾಮರು ರಸ್ತೆಯ ಮೇಲೆ ಏಕತಾಳ ಹಾಕುತ್ತ, ಮೋಟರುಗಳು ಹಾದು ಹೋಗುವಾಗ ಒಬ್ಬರ ಮಗ್ಗಲಿಗೆ ಇನ್ನೊಬ್ಬರು ಸೇರುತ್ತ ಸಾಗಿದರು. ಮಾಲತಿಗೆ ತಾನೆಲ್ಲಿದ್ದೇನೆ, ಎಲ್ಲಿಂದ ಎಲ್ಲಿಗೆ ಹೋಗುತ್ತಿದ್ದೇನೆಂಬ ಅರಿವೇ ಇರಲಿಲ್ಲ. ತಕ್ಕೆಯಲ್ಲಿ ಪಂಬಿ, ಪಕ್ಕದಲ್ಲಿ ಗೋಪಿನಾಥ ಇಷ್ಟು ಮಾತ್ರ ಗೊತ್ತಿತ್ತು. ನಿದ್ರೆಯಲ್ಲಿ ನಡೆದಂತೆ ಮುಂದರಿದಳು ತನ್ನ ಕನಸಿನೊಳಗೆ ತಾನು; ತುಂಬಿಯು ತನ್ನ ಗುಂಗಿನೊಳಗೆ ತಾನಿದ್ದಂತೆ.

ಸುಮಿತ್ರೆ ಅವರಷ್ಟು ತ್ವರೆಯಿಂದ ಕಾಲಿಡಲಾರದೆ ಕೋಪಗೊಂಡು ನುಡಿದ ಬಿಸಿಮಾತು ಆಕೆಯನ್ನು ಹೊಡೆದೆಬ್ಬಿಸಿತು.

"Halt" ಅಂದಳು ಆಕೆ. ತಕ್ಷಣ ಇಬ್ಬರೂ ಬೆಚ್ಚಿಬಿದ್ದು ನಿಂತರು.

"ಏನು ನಿಮ್ಮಿಬ್ರ ಆಲೋಚನೆ? ಈ ನಿಮ್ಮ ಮೂರುಕಾಲಿನೋಟದ ಅರ್ಥವೇನು? ನಿಮ್ಮೊಳಗೇನಾದರೂ ಪಂಥವುಂಟೇ? ಅಥವಾ ನನ್ನ ಪರೀಕ್ಷೆ ಮಾಡೋದೆ? ಏನು? ಪಂಬಿ, ನೀನು ನನ್ನ ಹತ್ರ ಬಾ ಮಗೂ, ನಾವು ನಿಧಾನವಾಗಿ ಹಿಂದಿನಿಂದ ಹೋಗೋಣ. ಅವರಿಬ್ಬರು ಹೋಗಲಿ ಮುಂದೆ" ಎಂದು ಸುಮಿತ್ರೆ ಬಿರುಸಾಗಿ ಹೇಳಿದಳು.

"ಕ್ಷಮಿಸಿ. ನನ್ನ ತಪ್ಪು. ನಿಮ್ಮ ನುಡಿ ಹೇಗೋಹಾಗೆ ನನ್ನ ನಡೆ, ಅತಿ ಚುರುಕು. ನಿಧಾನವಾಗಿಯೇ ಹೋಗೋಣ; ಏನವಸರ.?" ಎಂದು ಗೋಪಿನಾಥ ಅನುಕಂಪವನ್ನು ಸೂಚಿಸಿದನು. ಮಾಲತಿಗೆ ಸ್ವಲ್ಪ ವ್ಯಥೆಯಾಗಿ "ನಾವಿಷ್ಟು ಜೋರಾಗಿ ನಡೆಯುತ್ತಿದ್ದೆವೇ? ಆದರೆ ನೀನೇನು ಹಿಂದುಳಿದ ಹಾಗೆ ಇಲ್ಲವಲ್ಲ?" ಎಂದು ಕೇಳಿದಳು.

"ಹಿಂದುಳಿಯುವುದಕ್ಕಾಗುತ್ತೆಯೇ? ಬಂದೆ ಹೇಗಾದರೂ ಮಾಡಿ, ಓಡುತ್ತ, ಕುಪ್ಪಳಿಸುತ್ತ. ಸಾಕು ಸಾಕಾಯಿತು." ಒಂದು ನಿಟ್ಟುಸಿರು ಬಿಟ್ಟು "ಮೊದಲೇ Heart trouble ಇದೆ. ಹುಶಾರಾಗಿರಬೇಕು. ಹಾರಬಾರದು, ಓಡಬಾರದೂಂತ ತಾಕೀತು ಮಾಡಿದ್ದಾರೆ, ಡಾಕ್ಟ್ರು" ಅಂದಳು.

"ಹೆಂಗಸರ Heart trouble ಗೆ ಮೂರು ವಿಧದ ಚಿಕಿತ್ಸೆಯಿದೆ. ಇಸ್ಪೀಟು ಭಾಷೇಲಿ ಹೇಳೋದಾದ್ರೆ, ಒಂದನೇದು Spades, ಹಾರೆಗುದ್ದಲಿ, ಅದು ಆಗದೆ ಹೋದರೆ Dimonds, ರತ್ನಾದಿ ಒಡವೆಗಳು, ಕೊನೇದು Clubs." ಎಂದನು ಗೋಪಿನಾಥ ಮುನ್ನಡೆಯುತ್ತ.

“ ನೀವು ಗಂಡಸರು ಇಸ್ಪೀಟು ಆಡುವಾಗಲೂ ಹೆಂಗಸರನ್ನು ಮರೆಯೋದಿಲ್ವೇ ? ” ಎಂದು ಸುಮಿತ್ರೆ ಕೇಳಿದಳು.

“ ಮರೆಯೋದಕ್ಕೆ ಹೇಗಾಗುತ್ತೆ ? ಎಷ್ಟೋ ಮಂದಿಗೆ ಇಸ್ಪಿಟಾಟದಲ್ಲಿ ಮಾತ್ರ Queen of Hearts ಕೈಗೆ ಸಿಗೋದು. ”

ಅಷ್ಟರಲ್ಲಿ ಕೊಡಿಯಾಲಬೈಲಿನ ಅಕ್ಕಿ ಡಿಪೋವಿನ ಸಮೀಪ ಬಂದರು. ಮಾಲತಿಗೆ ಅಂದಿನ ಅನುಭವ ನೆನಪಾಗಿ ಗೋಪಿನಾಥನಿಗೆ ಹೇಳಿ ತಿಳಿಸಿದಳು. ಆತ ಯಾವುದೋ ಒಂದು ಸಹಕಾರ ಚಳುವಳಿಯಲ್ಲಿ ಮೇಧಾವಿಯೆಂದಷ್ಟು ಮಾತ್ರ ಆಕೆಗೆ ಗೊತ್ತು. ಆದರೂ ಪ್ರಯೋಜನವಾದರೆ ಆಗಲಿ ಎಂಬ ಆಶೆಯಿಂದ ಹೇಳಿದಳು.

“ ಇವೊತ್ತೂ ಹಾಗಾಯಿತೇ ? ಏನನ್ಯಾಯ ! ಹೋದ ಶನಿವಾರದಂತೆ ಬಹುಶ ಇವೊತ್ತು ಕೂಡ ಆ ಏಜಂಟು ಮೆಟನಿ ಶೋಗೆ ಹೋಗಿಬಂದು ಆ ಮೇಲೆ ತಾನೆ ಡಿಪೋ ತೆರೆದಿರಬೇಕು. ನೀವು ಹೇಳಿದ್ದು ಒಳ್ಳೇದಾಯಿತು. ನಾನು ವಿಚಾರಿಸಿ ಇನ್ನು ಹಾಗಾಗದಂತೆ ನೋಡಿಕೋತೇನೆ. ಇಂಥವರ ದುರ್ವರ್ತನೆಯಿಂದ ಸಹಕಾರ ಚಳವಳಕ್ಕೇ ಕೆಟ್ಟ ಹೆಸರು ಬಂದಿದೆ” ಎಂದು ಭರವಸೆಯಿತ್ತನು.

ಇಷ್ಟೆಲ್ಲ ಮಾತುಕತೆಯಾಗುವಾಗ ಪಂಬಿ ಸುಮ್ಮನಿದ್ದುದು ಗೋಪಿನಾಥನ ಗಮನಕ್ಕೆ ಬಂದು ಅನುಮಾನವಾಗಿ ಹೆಸರೆತ್ತಿ ಕರೆದ. ಉತ್ತರವಿಲ್ಲ. ಮಾಲತಿ ತನ್ನ ಹೆಗಲಮೇಲಿದ್ದ ಮಗುವಿನ ಮುಖವೆತ್ತಿ ನೋಡಲು ನಿದ್ದೆ ಬಂದಿತ್ತು. ಸೇವಾಶ್ರಮ ಸಮೀಪಿಸಿದ ಹಾಗೆಲ್ಲ ಮಾಲತಿಗೆ ಮಗುವನ್ನು ವಾಪ್ಸು ತಂದೆಗೆ ಒಪ್ಪಿಸಿಕೊಡಬೇಕೆಂಬ ಕೊರಗು ತಲೆದೋರಿತು. ತಾನೊಬ್ಬಳೇ ಆಗಿದ್ದರೆ ಮಗುವನ್ನು ಅದರ ಮನೆತನಕ ಮುಟ್ಟಿಸಿ ಬರಬಹುದಿತ್ತು. ಆದರೆ ಸುಮಿತ್ರೆ ಏನನ್ನುತ್ತಾಳೋ ಏನೋ ಎಂದು ಕಳವಳಿಸಿದಳು. ಈ ಯೋಚನೆಗೆ ಸರಿಯಾಗಿ ಗೋಪಿನಾಥ “ ನಿಮ್ಮಿಬ್ಬರನ್ನ ಮನೆಗೆ ಬಿಟ್ಟು ಆ ಮೇಲೆ ಅಲ್ಲಿಂದ ಹೋಗ್ತೇನೆ ನನ್ನ ದಾರಿ ಹಿಡಿದು ” ಅಂದ.

“ ಛೆ! ವಿಪರೀತ ಸುತ್ತಾಗುತ್ತೆ. ಮಗುವಿಗೆ ಆಗಲೇ ನಿದ್ದೆ ಜೋರೆ ಬಂದಿದೆ. ನಮಗಿನ್ನು ಇದಿರೋದು ಅತಿ ಸ್ವಲ್ಪ ” ಎಂದು ಸುಮಿತ್ರೆ ಖಂಡಿತ ಹೇಳಿದ್ದರಿಂದ ಯತ್ನವಿಲ್ಲದೆ ಸೇವಾಶ್ರಮದ ಬಳಿ ಮಗುವನ್ನು ಗೋಪಿನಾಥನ ಕೈಗೆ

ಕೊಟ್ಟುಬಿಟ್ಟು ಆತ ಬಲಗಡೆ ತಿರುಗಿ ಹೋದುದನ್ನು ಒಂದು ಕ್ಷಣ ನಿಂತು ನೋಡಿ ಅನಂತರ ಸುಮಿತ್ರೆಯೊಂದಿಗೆ ಮಾಲತಿ ಮನೆಗೆ ಮುನ್ನಡೆದಳು.

೯

ಆ ರಾತ್ರಿ ದೀಪ ತೆಗೆದು ಮಲಗಿ ಬಹಳ ಹೊತ್ತಿನವರೆಗೆ ಮಾಲತಿಗೆ ನಿದ್ರೆ ಹತ್ತಲಿಲ್ಲ. ಯಾವಾಗಲೂ ಕಾಲು ಚಾಚಿದೊಡನೆ ಕಣ್ಣು ಮುಚ್ಚುವವಳಿಗೆ ಹೀಗೆಂದಿಗೂ ಆಗಿರಲಿಲ್ಲ. ಹಾಗೆಂತ ಅತೃಪ್ತಿಯಾಗಲಿ, ಅಸಂತೋಷವಾಗಲಿ, ಅಸಮಾಧಾನವಾಗಲಿ ಯಾವುದೂ ಆಕೆಯನ್ನು ಪೀಡಿಸುತ್ತಿರಲಿಲ್ಲ. ಒಂದುಬಗೆ ವಿಸ್ಮಯದ, ಉಲ್ಲಾಸದ ಅಲೆಗಳು ಮಾತ್ರ ಲಂಗರು ಹಾಕಿದ ಕ್ರೀಡಾನೌಕೆಯನ್ನು ಅಲುಗಾಡಿಸಿದಂತೆ ಆಕೆಯನ್ನು ಹಾಯಾಗಿ ಮಲಗಲು ಬಿಡುತ್ತಿರಲಿಲ್ಲ. ಗೋಪಿನಾಥನ ಗೆಲವು ಮಿಶ್ರಿತವಾದ ಗಾಂಭೀರ್ಯ, ವಿನಯ ಮಿಶ್ರಿತವಾದ ವೀರಭಾವ, ಗುಲಾಬಿಯ ಮೊಗ್ಗಿನಂತಿದ್ದ ಪಂಬಿಯ ರೂಪಾತಿಶಯ, ಇವನ್ನು ಯಾವಮಗ್ಗುಲಿಗೆ ಹೊರಳಿದರೂ ದೂರಮಾಡಲು ಸಾಧ್ಯವಾಗಲಿಲ್ಲ ಬೇರೆ ಯಾವ ವಿಷಯವನ್ನು ತಂದುಕೊಂಡು ಆಲೋಚಿಸಿದರೂ ಮರೆಯಾಗಲಿಲ್ಲ. ತಿಳಿಕೊಳದ ತಳದಲ್ಲಿ ಬೆಣಚುಗಲ್ಲು ಕೈಗೆ ಎಟಕದ ಚಂದ್ರನನ್ನು ನೋಡುತ್ತ ಮಲಗಿರುವಾಗ ಮೀನುಗಳು ಮುತ್ತಿ ಅದನ್ನು ಕುಲುಕಿಸಿದಂತೆ ತೊಲಗಿಸಲಾರದ ಈ ನೆನಪುಗಳು ಮಲಗಿದ್ದ ಮಾಲತಿಯೊಡನೆ ಆಡುತ್ತಿದ್ದುವು.

'ಗೋಪಿನಾಥರಾಯರನ್ನು ನೆನೆನೆನೆದು ನನಗೇನಾಗಬೇಕು? ಅವರ ಗುಣ, ನಡತೆ, ಮರ್ಜಿ ಹೇಗೆದೆಯೋ ಗೊತ್ತಿಲ್ಲ. ಮೊದಲು ಇಲ್ಲಿಗೆ ಆಗಾಗ ಬರುತ್ತಿದ್ದರು. ಬಂದಾಗಲೆಲ್ಲ ನನ್ನ ನೋಡಿದರೆ ಸಂತೋಷ ಪಡುತ್ತಿದ್ದರು. ಆದರೆ ರಜನಿ ಸತ್ತಮೇಲೆ ಬರಲೇ ಇಲ್ಲ. ನಮ್ಮೆಲ್ಲರನ್ನೂ ದೂರ ಮಾಡಿದರೆ? ಏತಕ್ಕೆ? ಆಕೆಯ ವಿಯೋಗದಿಂದ ಅವರ ಬುದ್ಧಿ ಬದಲಾಗಿರಬಹುದೆ? ಹಾಗೇನೂ ಕಾಣಲಿಲ್ಲ. ಇವತ್ತು ಎಂದಿನಂತೆ ಇದ್ದರು. ಆದರೂ—? ಛೆ! ಈ ರೀತಿ ಹುಚ್ಚು ಹುಚ್ಚಾಗಿ ಯೋಚಿಸಬಾರದು' ಎಂತಂದುಕೊಂಡು ನೀರಿನಿಂದ ನೆಗೆದುಬಂದ ನಾಯಿಯಂತೆ ಎದ್ದು ತಲೆ ಕೊಡವಿದಳು. ಪಕ್ಕದಲ್ಲಿ ರಾಘವೇಂದ್ರರಾಯರು ಸಿದ್ರಾಲತಾಂಗಿಯ ತಕ್ಕೆಯಲ್ಲಿ ಗೊರೆಯುತ್ತಿದ್ದರು. ಮಂಚಬಿಟ್ಟು ಬಂದು ಶಯ್ಯಾಗೃಹದ ಪರದೆಯನ್ನು ಸರಿದು ತನ್ನಕೋಣೆಯ

ದೀಪವನ್ನು ಹಾಕಿದಳು. ಅರ್ಧ ಓದಿಟ್ಟಿದ್ದ 'Moment in Peking' ತಗೊಂಡು ಮುಂದೋದಿದಳು. ಒಂದು ಪುಟ ಓದುವಷ್ಟರಲ್ಲಿ ಅದು ಬೇಡ ವೆನಿಸಿ, 'ಪ್ರೋಲಿಕಿಟ್ಟ'ಯನ್ನು ತೆಗೆದು ನೋಡಿದಳು. ಅದೂ ರುಚಿಸಲಿಲ್ಲ. ಕೊನೆಗೆ ಪುಟ್ಟಪ್ಪನ 'ಚಿತ್ರಾಂಗದ'ವನ್ನೆತ್ತಿಕೊಂಡು ಸೋಫದಮೇಲೆ ಕಾಲು ಚಾಚಿ ತಲೆ ಬುಡಕ್ಕೊಂದು ದಿಂಬನ್ನಿಟ್ಟುಕೊಂಡು ಮಲಗಿ ಆ ಕವ ನದ ಶಬ್ದಲಾಲಿತ್ಯದಲ್ಲಿ ಓಲಾಡುತ್ತ ಮೈಮರೆದಳು.

ಮರುದಿನ ರಾಘವೇಂದ್ರರಾಯರು ಎಂದಿನಂತೆ ಸೂರ್ಯೋದಯಕ್ಕೆ ಮುಂಚಿತವಾಗಿ ಎದ್ದು ಮಗ್ಗುಲಲ್ಲಿ ಮಾಲತಿಯಿಲ್ಲದ್ದನ್ನು ನೋಡಿ ಗಾಬರಿ ಯಾದರು. ಹತ್ತಿರ ಕುರ್ಚಿಯ ಮೇಲೆ ಆಕೆ ಮಡಚಿಟ್ಟಿದ್ದ ಟವಲನ್ನು ಹೆಗಲಮೇಲೆ ಹಾಕಿಕೊಂಡು ಹೊರಗೆ ಬಂದರು. ಪಕ್ಕದ ಕೋಣೆಯಲ್ಲಿ ಸೋಫದ ಮೇಲೆ ಬಲಮಗ್ಗುಲಾಗಿ, ಬಲಗೈಯನ್ನು ಕೆನ್ನೆಯ ಕೆಳಗೆ ಆಧಾರ ವಾಗಿಟ್ಟುಕೊಂಡು, ಎಡಗೈಯಿಂದ 'ಚಿತ್ರಾಂಗದೆ'ಯನ್ನು ಎದೆಗಪ್ಪಿ ಕೊಂಡು, ಕಾಲುಗಳನ್ನು ಒತ್ತರೆಯಾಗಿ ಮಡಚಿ ನಿದ್ರಾಪರವಶಳಾಗಿದ್ದ ಮಾಲತಿಯನ್ನು ನೋಡಿ ತಟಸ್ಥರಾದರು. ಆದರೆ ಅವರ ಕಣ್ಣಿಗೆ ಬಿದ್ದುದು ಈ ನಯನಮನೋಹರವಾದ ನಿಶ್ಚಲ ದೃಶ್ಯವಲ್ಲ. ಸೋಫದ ಹಿಂದೆ ದೀಪವು ಉರಿಯುತ್ತಲೇ ಇದ್ದುದು. ತಕ್ಷಣ ಅದನ್ನು ನಂದಿಸಿಬಿಟ್ಟು ಧಡಧಡ ಬಚ್ಚ ಲಿಗೆ ಹೋದರು.

ರಾಯರು ಎದ್ದು ಬಚ್ಚಲಿಗೆ ಹೋದಮೇಲೆಯೇ ಕೆಲಸಗಿತ್ತಿ ತಿಮ್ಮಕ್ಕ ಒಳಗೆ ಕಸ ಬಳಿಯಲಿಕ್ಕೆ ಬರುವ ಪದ್ಧತಿ. 'ಸಣ್ಣಮ್ಮ' ಗಂಡ ಎದ್ದು ಅರ್ಧ ಗಂಟೆ ಕಾಲ ಹಾಸಿಗೆ ಬಿಟ್ಟೇಳುತ್ತಿರಲಿಲ್ಲ. ರಾಘವೇಂದ್ರರಾಯರು ಬಚ್ಚ ಲಲ್ಲಿ ಹಲ್ಲುಜ್ಜಿಕೊಳ್ಳುವ ರಂಪ, ಬಾಯಿ ಮುಕ್ಕಳಿಸಿ ಉಗುಳಿ, ನಾಲಗೆ ಕೆರೆದು ಗಂಟಲೊಳಗೆ ಬೆರಳುಗಳನ್ನು ತೂರಿ ವಾಕರಿಸುವ ಕೋಲಾಹಲ ವನ್ನು ನೋಡಲಾರದೆ, ಅದೆಲ್ಲ ಅವಾಂತರ ಮುಗಿಯುವ ತನಕ ಎಚ್ಚತ್ತರೂ ಮಲಗಿಕೊಂಡೇ ಇರುತ್ತಿದ್ದಳು. ರಾಘವೇಂದ್ರರಾಯರು ಆಕೆಯ ಕೋಣೆ ಯಿಂದ ಹೋಗುವಾಗ ಅವರ ಮೈ ಬಾಗಿಲಿಗೆ ತಡವಿ ಧಡಕ್ಕನೆ ಸದ್ದಾಗಿ ಎಚ್ಚತ್ತ ಮಾಲತಿ ಕಣ್ಣುಬಿಡದೆ ಮಲಗಿದಲ್ಲೇ ಮುದುರಿಕೊಂಡಳು. ಪುಸ್ತಕವನ್ನು ಇನ್ನಷ್ಟು ಬಿಗಿಯಾಗಿ ಅಪ್ಪಚಿಕೊಂಡಳು. ಈ ಸೊಬಗು

ಕಸಬರಿಗೆಯನ್ನು ಹಿಡಿದುಕೊಂಡು ಬಂದ ತಿಮ್ಮಕ್ಕನ ಕಣ್ಣಿಗೆ ಬಿತ್ತು. ಆಕೆ ತನ್ನ ನಿತ್ಯಕರ್ಮವನ್ನು ಮರೆತು ಕೋಣೆಯ ಹೊಸಲ ಬಳಿ ನಿಂತು, ಕಸಬರಿಗೆ ಹಿಡಿದ ಬಲಗೈಯನ್ನು ಸೊಂಟದ ಮೇಲಿಟ್ಟು, ಕತ್ತನ್ನು ಓರೆಮಾಡಿ, ಮುದಿ ಹದ್ದು ಪಂಜರದ ಗಿಳಿಯನ್ನು ನೋಡುವಂತೆ ಬೆರಗಿಂದ ನೋಡಿದಳು. ನಂತರ ಕಸಬರಿಗೆಯನ್ನು ಕೆಳಗಿಟ್ಟು, ಸದ್ದುಮಾಡದೆ, ಹೆಜ್ಜೆಯಮೇಲೆ ಹೆಜ್ಜೆಯಿಟ್ಟು, ಶಯ್ಯಾಗೃಹಕ್ಕೆ ನುಗ್ಗಿ ಅಲ್ಲಿದ್ದೊಂದು ರಗ್ಗನ್ನು ತಂದು ಬಿಡಿಸಿ ಅತಿಭಕ್ತಿಯಿಂದ ಸಣ್ಣಮ್ಮಗೆ ಹೊದಿಸಿದಳು. ತಾನು ನೋಡಿ ಸಂತೋಷ ಪಟ್ಟುದು ಸಾಲದೆ 'ದೊಡ್ಡಮ್ಮ'ನನ್ನು ಕರೆತಂದಳು. ಆಕೆ ಹೊದಿಸುವಾಗ ಮಾಲತಿಗೆ ಪೂರಾ ಎಚ್ಚರಿಕೆಯಾಗಿತ್ತು. ಆದರೆ ಕಣ್ಣುಬಿಟ್ಟು ಏಳುವುದ ರೊಳಗೆ ಕಾಲುಸಪ್ಪಳ ಕೇಳಿಸಿ ಮತ್ತೆ ಕಣ್ಮುಚ್ಚಿ ನಿದ್ದೆಬಂದವಳಂತೆ ಮಲಗಿ ದಳು.

ಶಾರದಮ್ಮ ಎಲ್ಲಿ ಸೊಸೆಯನ್ನು ಎಬ್ಬಿಸಿಬಿಡುವರೋ ಎಂಬ ಭಯದಿಂದ ತಿಮ್ಮಕ್ಕ ಬಾಯಿಗೆ ಬೆರಳಿಟ್ಟು ಮಾಲತಿಯು ಪುಸ್ತಕವನ್ನಪ್ಪಿಕೊಂಡಂತೆ ತನ್ನ ಪರಕೆಯನ್ನಪ್ಪಿಕೊಂಡು,

"ಸಣ್ಣಮ್ಮಗೆ ಬೇಗ ಒಂದು ಮಗು ಆಗಬೇಕು" ಎಂದು ತುಳು ಭಾಷೆ ಯಲ್ಲಿ ಕಿವಿಮಾತಾಗಿ ಪಿಸುಗುಟ್ಟಿದಳು. ತಿಮ್ಮಕ್ಕನ ಪಿಸುಮಾತು ಮನೆಯಲ್ಲಿ ಹೆಸರಾದದ್ದು. ಹಿಂದಿನ ಅಂಗಳದಲ್ಲಿ ಮುಸುರೆ ತಿಕ್ಕುತ್ತ ಆಕೆ ಆಡಿದ ಮಾತು ಆಫೀಸಿನವರೆಗೂ ಕರ್ಕಶವಾಗಿ ಕೇಳಿಸುತ್ತೇಂತ ರಾಘವೇಂದ್ರರಾಯರು ಸಿಟ್ಟುಗೊಂಡದ್ದರಿಂದ ಈ ಪಿಸುಮಾತಿಗೆ ಪ್ರಾರಂಭ. ಕಣ್ಣು ಕುಣಿಸುತ್ತ, ಕೈಯಾಡಿಸುತ್ತ, ಒಣಗಿ ನಿರಿಗಟ್ಟಿದ ಕತ್ತನ್ನು ಚಾಚಿ ಆಕೆ ಕುಸುಕುಸು ಅಂದರೆ ಹತ್ತಿರ ನಿಲ್ಲುವುದೇ ಪ್ರಯಾಸವಾಗಿತ್ತು. ಅಷ್ಟು ಬಿಸಿಯಾಗಿತ್ತು ಆಕೆಯ ಪಿಸುಮಾತು.

"ಈಗಾಗದೇ ಇದ್ರೆ ಇನ್ಯಾವಾಗ?" ಎಂದು ಕೇಳಿದಳು; ಅಷ್ಟರ ತನಕ ಮಕ್ಕಳಾಗದೆ ಇದ್ದುದಕ್ಕೆ ಶಾರದಮ್ಮನೇ ಕಾರಣ ಎಂಬಂತೆ.

"ಹೌದು, ಆಗಬೇಕು. ಆದರೆ ದೇವರು ಕೊಡಬೇಕಲ್ಲ" ಅಂದರು ಶಾರದಮ್ಮ.

" ಅಯ್ಯೋ! ದೇವರು ದೇವರು! ಈಗಿನವರಿಗೆ ದೇವರು ಕೊಟ್ಟರೂ ಬೇಡ. ಏನೇನೋ ಮಂತ್ರ ತಂತ್ರ ಮಾಡ್ತಾರೆ. ಬಿಡ್ತಾನೆಯೇ ದೇವರು? ಬೇಕು ಅನ್ನೋವ್ರಿಗೂ ಕೊಡೋದಿಲ್ಲ. ಅಷ್ಟೇ."

" ಮಾಲತಿ ಅಂಥವಳೇ ತಿಮ್ಮಕ್ಕ?"

" ಅಯ್ಯೋಯ್ಯೋ! ಸಣ್ಣಮ್ಮಗೆ ಹಾಗೆ ಹೇಳೀನೆ? ನನ್ನ ನಾಲಿಗೆಗೆ ಹುಳ ಬಿದ್ದೀತು! ನಾನೊಂದು ಹೇಳ್ತೀನೆ, ಮಾಡಿ. ಸುಬ್ರಮಣ್ಯಕ್ಕೊಂದು ಹರಿಕೆ ಹೇಳಿಕೊಳ್ಳಿ. ಸರ್ಪಶಾಪವೇನಾದ್ರೂ ಇದ್ರೆ ಪರಿಹಾರವಾಗಲಿ. ಇಲ್ಲಿ ಮುಂಚಿನ ಮುನ್ಸಿಫರು, ನೋಡಿ, ಅಯ್ಯರ್ರು, ಮಕ್ಕಳಿಲ್ಲಾಂತ ಹಂಬಲಿಸು ತ್ತಿದ್ರು. ಸುಬ್ರಮಣ್ಯ ಯಾತ್ರೆ ಮಾಡಿದ್ರು. ಮರುವರ್ಷವೇ ಒಂದು ಗಂಡು ಮಗು."

" ಅದೆಲ್ಲ ಭಕ್ತಿ ಇದ್ರೆ ತಾನೇ? ದೇವರಿಗಿಂತ ಡಾಕ್ಟರೇ ಹೆಚ್ಚಾದ್ರೆ?"

" ಹೌದು. ಡಾಟರು ಗೀಟರು" ಅನ್ನುತ್ತ ತಿಮ್ಮಕ್ಕ ತಿರಸ್ಕಾರದಿಂದ ಕೈಗಳೆರಡನ್ನೂ ಕೊಡವಿಬಿಟ್ಟಳು. " ಅವರಿಗೇನು ಗೊತ್ತಾಗುತ್ತೆ? ಅಲ್ಲದೆ ಸಣ್ಣಮ್ಮಗೇನಾಗಿದೆ, ಡಾಕ್ಟರ ಹತ್ರ ಹೋಗೋದಕ್ಕೆ? ತಿಂಗಳು ತಿಂಗಳಿಗೆ ಹೊರಗೆ ಕೂತುಗೋತಾರೆ, ದೇವರ ದಯದಿಂದ. ಅವರ ಮೈಯಂತೂ ಹೂವಿನ ಚಂಡಿನ ಹಾಗಿದೆ. ನಾನು ಹೇಳಿದೆನಲ್ಲ: ಸಾಡದು ಕ್ರಿಸ್‌ಮಸ್ ರಜೆಗೆ ನೀವೆಲ್ಲ ಹೋಗಿ, ಸುಬ್ರಮಣ್ಯಕ್ಕೆ. ಕೈಮುಗಿದು ಬೇಡಿಕೊಳ್ಳಿ, ಸುಬ್ಬಪ್ಪನ್ನ. ನೋಡಿ ಮತ್ತೆ. ಬರುವ ವರ್ಷ ಈ ಸಮಯಕ್ಕೊಂದು ಪುಳ್ಳಿ ಇರದಿದ್ರೆ, ಮನೇಲಿ" ಎಂದು ಆಗ್ರಹತೊಟ್ಟಳು ತಿಮ್ಮಕ್ಕ.

ಮಾಲತಿಗೆ ಈ ಪ್ರಹಸನ ಕೇಳಿ ನಗಬೇಕೋ ಅಳಬೇಕೋ ಗೊತ್ತಾಗ ಲಿಲ್ಲ. ಕಣ್ಣೆಡೆಯಿಂದ ಕದ್ದು ನೋಡಿದರೆ ತಿಮ್ಮಕ್ಕನ ಮುಖವಿಕಾರಕ್ಕೆ ನಗು ಬರುತ್ತಿತ್ತು. ಕಣ್ಮುಚ್ಚಿ ಕಿವಿ ತೆರೆದು ಕೇಳಿದರೆ ನೆಟ್ಟ ಮುಳ್ಳನ್ನು ಕಿತ್ತಿಸಿ ಕೊಂಡ ನೋವಾಗುತ್ತಿತ್ತು. ಆದರೆ ಪುಣ್ಯಕ್ಕೆ ಶಾರದಮ್ಮಗೆ ತಾನು ಬಿಟ್ಟು ಬಂದ ಕೆಲಸದ ನೆನಪಾಗಿ ಅವರು ಹೋಗಿಬಿಟ್ಟರು. ರಾಘವೇಂದ್ರರಾಯರು ಗಂಟಲು ಕೆರಕೊಂಡು ಬರುವುದನ್ನು ಕೇಳಿ ತಿಮ್ಮಕ್ಕ ಹುಶಾರಾಗಿ ಕಸ ಬಳಿಯಲಾರಂಭಿಸಿದಳು.

೧೦

ಇತ್ತ ಮಾಲತಿಯನ್ನಗಲಿದ ತರುವಾಯ ಮೌನಧ್ಯಾನದಲ್ಲಿ ನಡೆಯುತ್ತ ಮನೆ ಸೇರೋಣವೆಂದಿದ್ದ ಗೋಪಿನಾಥನನ್ನು ಪಂಬಿ ಬಿಡಲಿಲ್ಲ. ಆಕೆಗೆ ಕೈ ಬದಲಿಸುವಾಗ ತೀರ ಎಚ್ಚರಿಕೆಯಾಗಿಬಿಟ್ಟು ಕೀಟಲೆಗೆ ಸುರುವಾಯಿತು. ತನ್ನನ್ನೆತ್ತಿ ಮುದ್ದಾಡಿ, ಕೊಚ್ಚ ಭಾಷೆಯಿಂದ ನಕಲಿ ಮಾಡದೆ ಹಿರಿಯರ ಶುದ್ಧ ಭಾಷೆಯಿಂದಲೇ ಮರ್ಯಾದೆ ಮಾಡಿ, ಬೇಕಾದುದನ್ನೆಲ್ಲ ತೆಗಿಸಿ ಕೊಟ್ಟ ಮಾಲತಿ ಆಕೆಗೆ ಒಮ್ಮೆಗೇ ಅತಿ ಹತ್ತಿರದವಳಾಗಿಬಿಟ್ಟಿದ್ದಳು. ತಂದೆಯ ಗಲ್ಲವನ್ನು ಹಿಡಿದು,

"ಅವಯು ಎಯ್ಯಿಗೆ ಹೋದಿಯು ಪಪ್ಪ ?"

"ಯಾರು ಮಗು ?"

"ಅವಯು. ನಂಗೆ ಲಿಂಬೆತ್, ಬಿಕ್ಕತ್, ಎಯ್ಯ ಕೊಟ್ಟವಯು ?"

"ಅಂಗಡಿಯುವರೆ ?" ಎಂದು ಪೀಡಿಸಿದನು.

"ಅಯ್ಯಾಂದೆ !" ತಂದೆಯ ಬೆಪ್ಪುತನ ತಡೆಯಲಾರದೆ ಚೀರಿದಳು. "ನಾನು ಮಕ್ಕಿದ್ದು, ಮೈಮೇಯೆ ? ಪಂಬ ಪಂಬ ಮೈಮೇಯೆ ?"

"ಯಾರಪ್ಪ ! ನೀನು ಮಲಗಿದ್ದ ಮೈ, ಪರಿಮಳದ ಮೈ ಯಾರದಿರ ಬಹುದು ?"

"ನೀನು ಚಿನೆಮ ಆಗಾಗ ಅವಯನ್ನ ನೋಡ್ತಾ ಇದ್ದೀ ?"

ಗೋಪಿನಾಥನಿಗೆ ನಗು ಉಕ್ಕಿ ಬಂತು. ನಡುಮಾರ್ಗದಲ್ಲಿ ನಿಂತು ಗಟ್ಟಿ ಯಾಗಿ ನಗುತ್ತ ಮಗುವಿನ ಗಲ್ಲವನ್ನು ಚುಂಬಿಸಿ,

"ಅಸ್ಸಲ್ ಕಳ್ಳಿ ಕಣೇ ನೀನು. ಅವರ ಹೆಸರು ಮಾಲತಿ. ಅವರ ಮನೆಗೆ ಹೋದರು" ಎಂದನು.

"ಆಕೆ ?"

"ಯಾಕೇಂದ್ರೆ ? ನೀನೇತಕ್ಕೀಗ ಮನೆಗೆ ಹೋಗೋದು ?"

"ಕೂಚಿಗೆ ಮಮ್ಮ ಕೊಯಕ್ಕೆ."

ಇದಕ್ಕೇನುತ್ತರ ? ಈ ಪೋರಿ ಕೈಯಲ್ಲಿ ಸೋತೆನಲ್ಲಾಂತ ಗೋಪಿನಾಥ ಚಿಂತಿಸುತ್ತಿರುವಾಗ ಮಗುವಿನ ಕೈಯಲ್ಲಿದ್ದ ಕಟ್ಟಿನಿಂದ ಬಿಸ್ಕತೊಂದು ಜಾರಿ ಕೆಳಗೆ ಬಿತ್ತು. ಪಂಬಿ ಬಗ್ಗಿ ನೋಡಿದಳು.

" ಬೇಡಪ್ಪ, ಅದು ಧೂಳು. "

" ಹೂಂ. ಯಾಯಾದು ತಿನ್ನಿಯಿ, ಪಾಪ. "

ರಾತ್ರೆ ಇಂದಿರಮ್ಮ ಮಗುವಿಗೆ ಉಣಿಸಿ ಕೈತೊಳೆಸಿ ಬಿಟ್ಟಮೇಲೆ ಸ್ವಲ್ಪ ಸಮಯ ರೇಡಿಯೋ ಸಂಗೀತವೇನಾದರೂ ಇದ್ದರೆ ಕೇಳಿ, ಅನಂತರ ತನ್ನ ಮಗ್ಗುಲಲ್ಲಿ ಮಂಚದ ಮೇಲೆ ಮಲಗಿಸಿಕೊಂಡು ಬೆನ್ನು ನೇವರಿಸುತ್ತ ನಿದ್ದೆ ಮಾಡಿಸುವ ವಾಡಿಕೆ ಗೋಪಿನಾಥನದು. ಆದರೆ ಅಂದು ಆ ಕೆಲಸವನ್ನು ತಾಯಿಗೆ ವಹಿಸಿಕೊಟ್ಟು ತಾನು ಮನೆಯ ಎದುರಂಗಳದಲ್ಲಿ ಶತಪಥ ಹಾಕ ಲಾರಂಭಿಸಿದನು. ಮಗನ ಇಂಥ ವರ್ತನೆ ಇಂದಿರಮ್ಮಗೆ ಹೊಸತಲ್ಲ. ಹಲವು ಸಲ ಇದ್ದಕ್ಕಿದ್ದ ಹಾಗೆ ಆತ ತನ್ನ ಚಿಪ್ಪಿನೊಳಗೆ ಅವಿತುಕೊಳ್ಳುವ ಆಮೆ ಯಂತಾಗಿಬಿಡುತ್ತಿದ್ದ. ಆದರೆ ಅಂಥ ಮುಸುಕು ಮಾಯವಾದಮೇಲೆ ಮುಖ ಕಾಂತಿಯು ಇಮ್ಮಡಿಯಾಗಿ ಏಸಿದ್ದರೂ ತನ್ನಲ್ಲಿ ಹೇಳಿ ಬಿಡುವನೆಂಬ ನಂಬಿಕೆಯಿತ್ತು.

' ಅಲ್ಲ, ಎಲ್ಲ ಬಿಟ್ಟು ಮಾಲತಿ ಸಿಗಬೇಕೆ, ಅನಾಯಾಸವಾಗಿ ? ಪಂಬಿ ಗಾಗಿ ಸಿನೆಮಾಕ್ಕೇಂತ ಹೋದರೆ ಅದೇ ಚಿತ್ರಕ್ಕೆ, ಅದೇ ಸಮಯಕ್ಕೆ ಮಾಲ ತಿಯೂ ಹಾಜರಾಗಬೇಕೆ? ಆಶ್ಚರ್ಯ ! ಮಾಲತಿ, ಈ ನಾಲ್ಕೈದು ವರ್ಷ ಗಳಿಂದ ನನ್ನೆದೆಯೊಳಗಿದ್ದ ನಿನ್ನ ಅಚ್ಚಳಿಯದ ಮುಖಮುದ್ರೆಯನ್ನು ಹಿಂದೊತ್ತಿ ಹಿಂದೊತ್ತಿ ಈಚೀಚೆಗೆ ನಿನ್ನನ್ನು ತೀರ ಮರೆತೆನೆಂದೇ ಭಾವಿ ಸಿದ್ದೆ. ಇಂದು ನಿನ್ನನ್ನು ಪ್ರಥಮತಃ ಕಂಡಾಗ ನನ್ನ ಮನಸ್ಸು ಕದಲಲಿಲ್ಲ; ಕಲ್ಲಿನಂತಿತ್ತು. ನಿನ್ನನ್ನು ಅಲಕ್ಷಿಸಿ ನನ್ನಷ್ಟಕ್ಕೆ ಇದ್ದುಬಿಡಬೇಕೆಂದಿದ್ದೆ. ಆದರೆ ನೀವಿಬ್ಬರು ಅಬಲೆಯರು ಟಿಕೆಟಿಗಾಗಿ ಪೇಚಿನಲ್ಲಿದ್ದುದನ್ನು ನೋಡಿ ಹಾಳಾದ ಗಂಡುತನದ ಹೆಮ್ಮೆಯಿಂದ ಹಿಂದುಮುಂದು ನೋಡದೆ ಧುಮುಕಿದೆ. ನಾನೊಂದೆಣಿಸಿದರೆ—!

'ಪಂಬಿಗೂ ನಿನ್ನ ಮೇಲೆಷ್ಟು ಪ್ರೀತಿ! ನಿಮ್ಮೊಳಗೇನೋ ಗುಪ್ತ ಸಂಕೇತ ವಿದ್ದ ಹಾಗಿದೆಯಲ್ಲ ? ಯಾವ ಋಣಾನುಬಂಧವೋ ! ಪ್ರಿಯೆ, ನೀನೀ ಮಗುವಿನ ತಾಯಿಯಾಗಬೇಕಿತ್ತು. ಆಗಬಹುದಿತ್ತು. ಹಾಗಾಗಿದ್ದರೆ ನನಗೀ ಸಂಯಮ ಸ್ವಾತಂತ್ರ್ಯಗಳ ಹುಸಿ ಆಡಂಬರವೇಕೆ? ತ್ಯಾಗ ವೈರಾಗ್ಯದ ಒಣ ಉಪಶಮನವೇಕೆ? ಉರಿಯುವ ಹಣೆಯ ಮೇಲೆ ಮುಳ್ಳಿನ ಮುಕುಟವನ್ನು

ಧರಿಸಿದ ವೀರವಿಧುರನಾಗುವುದರ ಬದಲು ಅನುದಿನವೂ ಹೊಸಹೊಸತಾದ ಕುಸುಮಾಕ್ಷರಗಳಿಂದ ಜೀವನಕಥೆಯನ್ನು ಕೆತ್ತುವ ಚಿತ್ರಶಿಲ್ಪಿಯಾಗಿರಬಹು ದಿತ್ತು. ಈಗಲೂ ಆ ನಿನ್ನ ಕೈ—ನನ್ನ ಸ್ಪರ್ಶನ ಮಾತ್ರದಿಂದ ಕಪೋತದಂತೆ ನಡುಗಿದ ಆ ನಿನ್ನ ಕೈ—ಯನ್ನು ಗೆಲ್ಲುವಂತಿದ್ದರೆ! ಇಲ್ಲ. ಜೀವನದ ಜುಗಾರಿ ಯಾಟದಲ್ಲಿ ಹಂಚುವ ಕೈ ವಿಧಾತನದಿರುವಾಗ ಬೇಕಾದ ಎಲೆಗಳು ಹೇಗೆ ಬರಬೇಕು? ಆತ ಹುಟ್ಟಿಸುವ ಆಶೆಗೂ ಒದಗಿಸುವ ಉಪಕರಣಕ್ಕೂ ಒಂದ ಕ್ಕೊಂದು ಸಂಬಂಧವೇ ಕಾಣದು. ಯಾಕೆ ಮುನಿದಿರುವನೋ ಮಹಾದೇವ. ತಿಳಿಯದಾಗಿದೆ. ಹೆಜ್ಜೆ ಹೆಜ್ಜೆಗೂ ಆತನನ್ನು ಪ್ರತಿಭಟಿಸುವುದೇ ನನ್ನ ಜನ್ಮಕ್ಕೆ ಬಂದ ಭಾಗ್ಯ!'

ಈ ರೀತಿ ತನ್ನ ಹೃದಯದ ರಾಣಿ, ಆತ್ಮದ ಅರ್ಧಾಂಗಿಯಾದವಳು ಪರಾಂಗನೆಯಾದುದಕ್ಕೆ ಗೋಪಿನಾಥ ಪರಿತಪಿಸುತ್ತಿದ್ದನು. ಆ ಸಿನೆಮ ಮಂದಿರದಲ್ಲಿ, ಆ ಜನರ ಸಿಗ್ಗಿನಲ್ಲಿ, ಆತನಿಗೂ ಮಾಲತಿಗೂ ಏನೋ ಒಂದು ಪ್ರಮಾದ ನಡೆದುಹೋದಂತಿತ್ತು. ಮನಸ್ಸು ತನ್ನ ಗುಪ್ತಗೃಹದ ಕಿಟಕಿ ಬಾಗಿಲುಗಳನ್ನೆಲ್ಲ ತೆರೆದು ಸರಿದುಬಂದ ಅರುಣೋದಯದ ಬೆಚ್ಚನೆ ಕಿರಣ ಗಳಲ್ಲಿ ನಲಿಯುತ್ತಿತ್ತು. ಈ ತೆರನ ಉಲ್ಲಾಸೋದ್ವೇಗ ಆತ ಕಾಲೇಜು ವಿದ್ಯಾರ್ಥಿಯಾಗಿದ್ದಾಗಲೂ ಆಗಾಗ ಆವಿರ್ಭವಿಸಿ ಆತನ ಜೀವಿತಕ್ಕೊಂದು ಮೆರುಗನ್ನು ಕೊಡುತ್ತಿತ್ತು. ಆದರೆ ಆಗ ಅದಕ್ಕೊಂದು ಅರ್ಥ, ಗೊತ್ತುಗುರಿ, ರೂಪರಚನೆ ಇರಲಿಲ್ಲ. ಅಸ್ಪಷ್ಟವಾಗಿ ಅಚೇತನವಾಗಿತ್ತು. ಅದೊಂದು ಬರೇ ನವಯೌವನದ ಅಮಲು, ಸ್ವಚ್ಛಂದ ಜೀವನದ ನಿತ್ಯ ಉತ್ಸಾಹದ ಉದ್ರೇಕ ವಾಗಿತ್ತು, ಅಷ್ಟೆ. ಆದರೆ ಇದು ಹಾಗಲ್ಲ. ಅಂತರ್ಯದ ಈ ಹವಣಿಕೆ, ಈ ಅಭೂತಪೂರ್ವ ಆನಂದ, ಹೃದಯದ ಗುಹೆಯಲ್ಲಿ ಶಾಪಗ್ರಸ್ತಳಾಗಿ ಅವಿ ತಿದ್ದ ಸಾಧ್ವೀಮಣಿಯು ವಿಮುಕ್ತಳಾಗಿ ಚೇತನಾರಂಗಕ್ಕೆ ಬಂದವಳನ್ನು ಯಥೋಚಿತವಾಗಿ ಸತ್ಕರಿಸುವ ಸಿದ್ಧತೆಯಂತಿತ್ತು.

ಅಲ್ಲಿಂದಿತ್ತ ಇಲ್ಲಿಂದತ್ತ ಹೆಜ್ಜೆ ಹಾಕುತ್ತಿರುವಾಗ. ಹಠಾತ್ತಾಗಿ ಆತನ ಕಣ್ಮುಂದೆ ಮಾಲತಿಯು ಬಂದು ನಿಂತಂತಾಗಿ ಗೋಪಿನಾಥ ತಬ್ಬಿಬ್ಬಾದನು. ಆತನ ಹೃದಸ್ಥಳಾಗಿದ್ದವಳು ಆಗವನ ಮನೋನಯನದ ಮುಂದೆ ಬಂದಳು. ಆದ್ದರಿಂದ ಆತಗೆ ಕಾಲುಕಟ್ಟಿದಂತಾಗಿ ಅಂಗಳದಿಂದ ಹಜಾರಕ್ಕೆ ಹತ್ತಿ

ಅಲ್ಲಿಯ ದೀಪವನ್ನಾರಿಸಿ, ಆರಾಮಕುರ್ಚಿಯೊಂದರಲ್ಲಿ ಮಲಗಿ ಅಂತರ್ಮುಖಿಯಾಗಿ ಕಣ್ಮುಚ್ಚಿದನು. ಕಲೋಪಾಸಕನಂತೆ ಅಲಿಪ್ತ ಶಾಂತಚಿತ್ತನಾಗಿ ಮಾಲತಿಯ ಸೌಂದರ್ಯವನ್ನು ವಿಮರ್ಶಿಸತೊಡಗಿದನು.

ಆಕೆ ರೂಪವತಿಯೆ ? ಸಾಮಾನ್ಯರ ಕಣ್ಣಿಗೆ, ಮೇಲಿಂದ ಮೇಲೆ ನೋಡುವವರಿಗೆ ಆಕೆ ರೂಪವತಿಯಾಗಿರಲಾರಳು. ಪ್ರಥಮದೃಷ್ಟಿಗೇ ಮನಸ್ಸನ್ನು ಸೆಳೆದು ಸೆರೆಹಿಡಿಯುವಂಥ ರೂಪಾತಿಶಯವೇನೂ ಆಕೆಯ ಮುಖದಲ್ಲಿ ಕಂಡುಬರಲಿಲ್ಲ. ಹಣೆ, ಕಣ್ಣು, ಮೂಗು, ಗಲ್ಲ, ತುಟಿ, ಇವೆಲ್ಲ ಲಕ್ಷಣವಾಗಿದ್ದುವೇನೋ ನಿಜ. ಆದರೆ ಅಂಥ ಸುಲಕ್ಷಣ ಸಂಪನ್ನೆಯರು ಎಷ್ಟಿಲ್ಲ ? ಆದರೆ ಆಕೆಯನ್ನು ನೋಡಿದ ಮಾತ್ರದಿಂದಲೇ ಒಂದು ಶುಭವಾರ್ತೆಯನ್ನು ಕೇಳಿದಷ್ಟು ಸುಖವಾಗಲು ಕಾರಣವೇನು ? ಒಂದು ಅಲಭ್ಯಲಾಭವಾದಷ್ಟು ಸಂತೋಷವಾಗುವುದರ ರಹಸ್ಯವೇನು ? ಆಕೆಯ ಮುಖದಲ್ಲಿ ವಿರಾಜಿಸುವ ಸಂದೇಶವೇನು ? ಸ್ವಭಾವಕ್ಕೆ ತಕ್ಕ ಸೌಂದರ್ಯ, ಸೌಂದರ್ಯಕ್ಕೆ ತಕ್ಕ ಸ್ವಭಾವ; ಇದೇ ಆಕೆಯ ಚೆಲುವಿನ ಮರ್ಮವಾಗಿರಬೇಕು. ಆಕೆಯ ಗುಣಕ್ಕೂ ಲಕ್ಷಣಕ್ಕೂ ಸಮತೆಯಿದೆ, ಹೊಂದಿಕೆಯಿದೆ; ಅಂತಃಕರಣಗಳಿಗೆ ಬಾಹ್ಯಕರಣಗಳು ಪರಿಪೂರಕವಾಗಿರುವಂತೆ ಆಕೆಯ ಅಂತರಂಗ ಎಷ್ಟು ಸ್ವಚ್ಛವೋ ಬಹಿರಂಗವು ಅಷ್ಟೇ ನಿರ್ಮಲ. ಆಕೆ ಒಳಗೆಷ್ಟು ಆನಂದಮಯಿಯೋ ಹೊರಗಷ್ಟೇ ಲಾವಣ್ಯಮಯಿ. ಆಕೆಯಲ್ಲಿ ಒಳಗೊಂದು ಹೊರಗೊಂದಿಲ್ಲ. ಸ್ವಭಾವಕ್ಕೆ ಸಲ್ಲದ ಸೊಗಸಿಲ್ಲ. ಮಾಲತಿಯ ಮನೋಧರ್ಮದಲ್ಲಿ ಕಪಟವಿರಲಾರದು. ಆದ್ದರಿಂದಲೇ ಆಕೆಯ ಹಾವಭಾವಗಳು ಕೃತಕವಲ್ಲ. ಬುದ್ಧಿ ಮನಸ್ಸುಗಳು ಪಡೆದ ಸಂಸ್ಕಾರ ಆಕೆಯ ರೂಪರೇಖೆಗಳಲ್ಲಿ ಪುಟಗೊಂಡಿರಬೇಕು. ನೋಡಿದಾಗಲೆಲ್ಲ ಸುಖವಾಗುವುದಕ್ಕೆ ಆಕೆಯಲ್ಲಿ ಕಿಂಚಿತ್ತಾದರೂ ಅಸತ್ಯವಿಲ್ಲದಿರುವುದೇ ಕಾರಣ. ಸತ್ಯವೇ ಆಕೆಯ ಸೌಂದರ್ಯದ ಪ್ರತಿಭೆ.

ಅಥವಾ ಆತನಿಗೆ ಮಾತ್ರ ಆ ರೀತಿ ತೋರುತ್ತಿರಬಹುದೇ ? ಆತನ ಹಸಿದ ಚೇತನಕ್ಕೆ ಹಾಲನ್ನದಂತೆ ? ಇಲ್ಲ. ಆ ಕಾಮನೆ ಆತಗಿನ್ನೂ ಉಂಟಾಗಿರಲಿಲ್ಲ. ಮುಂದೇನೋ! ಒಂದುವೇಳೆ ಉಂಟಾಗಿದ್ದರೂ ಮಾಲತಿಯಿಂದ ಪ್ರೋತ್ಸಾಹ ಸಿಗುವಂತಿದ್ದಿಲ್ಲ. ಬಯಸಿ ಕರೆದರೆ ಬರುವಂಥವಳಲ್ಲ ಆಕೆ. ಸಂತೆಯ ಮೋಹಿನಿಯಲ್ಲ ಮಾಲತಿ. ಆಕೆಯನ್ನು ಸೆಳೆದು ವಶಪಡಿಸಿಕೊಳ್ಳಲು

ಕಾಮಸೂತ್ರ ಸಾಲದು. ಬಹುಮುಖ ವ್ಯಕ್ತಿತ್ವವನ್ನು ಬಹುವಿಧವಾಗಿ ಆರಾಧಿಸಿ ಒಲಿಸಬೇಕು. ಆಕೆಯ ಸುಮಧುರ ಸ್ನೇಹವನ್ನು ನಿರ್ಮಲ ಸಹವಾಸದಿಂದ ಸಂಪಾದಿಸಬೇಕು. ಪ್ರೇಮವನ್ನು ವೀರವಿನಯದಿಂದ ಗೆದ್ದು ಪಾವನ ಪ್ರಸನ್ನತೆಗೆ ಪಾತ್ರನಾಗಬೇಕು.

ಮಾಲತಿಯಲ್ಲಿ ಮತಿಗೆಡಿಸುವ ರೂಪಾತಿಶಯವಿಲ್ಲದಿದ್ದರೂ ಅಪೂರ್ವವಾದ ಅಂಗಾಂಗಗಳ ಸಮುಚ್ಚಯ ಸೌಂದರ್ಯವಿತ್ತು. ಮೈಕಟ್ಟಿನ ಪರಿಷ್ಕಾರದಿಂದ, ಊನವಿಲ್ಲದ ಆರೋಗ್ಯದಿಂದ ಆಕೆಯ ಪ್ರತಿಯೊಂದು ಅಂಗಚಲನಕ್ಕೂ ಅವಳದೇ ಆದ ಒಂದು ಶೈಲಿಯಿತ್ತು. ಸಹಜ ಸುಲಭ ಸಿಂಗರದ ಶೈಲಿ. ಅರ್ಥವತ್ತಾದ ಉದ್ದೇಶಪೂರಿತವಾದ ಒಂದು ವಿನ್ಯಾಸ. ಚದುರೆಯರ ಅಭ್ಯಾಸಿತ ಬಿಂಕವೂಅಲ್ಲ, ಮುಗುದೆಯರ ಸಾಧು ಸರಳತೆಯೂ ಅಲ್ಲ. ಆರೋಗ್ಯ ಸಿರಿಯ, ಶರೀರಸಂಪತ್ತಿನ ಅನೈಚ್ಛಿಕ ಸೊಗಸು. ಸುಮ್ಮಗಿದ್ದಾಗ ಆಕೆಯ ನಿಶ್ಚಲ ನೀಳ್ಗಣ್ಣುಗಳಲ್ಲೂ ಅದುರದ ತುಂಬಿದ ತುಟಿಗಳಲ್ಲೂ ದೃಢವಾದ ಗದ್ದದಲ್ಲೂ ಧೈರ್ಯ,ಸ್ಥೈರ್ಯ, ಸ್ವಾವಲಂಬನ, ವಿಚಕ್ಷಣತೆ ಇವೇ ತೋರಿಬರುತ್ತಿದ್ದುವು: ಆಕೆ ನಗುವ ತನಕ. ಆಕೆ ನಕ್ಕರೆ ಕಣ್ಣು ತುಟಿ ಕಪೋಲಗಳೆಲ್ಲವೂ ಏಕಕಾಲದಲ್ಲಿ ಅರಳಿ ನಲಿಯುತ್ತಿದ್ದುವು.

ಅಂಥ ಮಾಲತಿಯನ್ನು ಪ್ರೀತಿಸುವದೇ ಒಂದು ವಿದ್ಯಾಭ್ಯಾಸ, ಒಂದು ಸಂಸ್ಕಾರ, ಒಂದು ಜಿಜ್ಞಾಸೆ. ಆಕೆಯನ್ನು ಪಡೆಯುವುದೇ ಒಂದು ಪುಣ್ಯ. ಆದರೆ ಏನು ಹುಚ್ಚುಮಾತು? ವಿವಾಹಿತೆ, ಪರಸ್ತ್ರೀ, ತಾಯಿಗೆ ಸಮಾನಳು. ಆಕೆಯನ್ನು ಪಡೆಯುವದೆಂದರೇನು ? ಏನೋ ಅನಾಯಾಸವಾಗಿ ಭೇಟಿಯಾದಳು, ಹಲವು ವರ್ಷಗಳ ಆನಂತರ. ಪಂಬಿಯನ್ನು ನೋಡಿ ನಕ್ಕಳು, ಮಾತಾಡಿಸಿದಳು, ಅಷ್ಟೆ. ಆಕೆಯ ತಿಳಿನೋಟ, ಕಿರುನಗೆ, ಮೃದುಮಾತುಗಳಿಗೆ ಮಾರುಹೋಗಿ ಕನಸಿನ ಅಂತಸ್ತನ್ನು ಕಟ್ಟಿದರೆ ಹೇಗೆ ?

ಆಗ ನೀರವ ನಿರ್ಜನವಾದ ರಸ್ತೆಯನ್ನು ನಡುಗಿಸಿ ಗುಡುಗುತ್ತ ಲಾರಿಯೊಂದು ಸಾಗಿತು. ಗೋಪಿನಾಥ ಕಣ್ತೆರೆದು ಅಲುಗಾಡದೆ ಒರಗಿದ್ದರಿಂದ ನೋಯುತ್ತಿದ್ದ ಹೆಗಲನ್ನು ಕೈಯಿಂದ ನೇವರಿಸಿದನು. ಒಳಗಿಂದ ಜೋಗುಳ ಹಾಡುತ್ತಿದ್ದ ಇಂದಿರಮ್ಮನ ಸಣ್ಣ ಸ್ವರ ರೇಶ್ಮೆಯ ನೂಲು ನೇದಂತೆ ಕೇಳಿಸುತ್ತಿತ್ತು. ಬೆಳದಿಂಗಳು ಅಂಗಳದ ಹೂ ಗಿಡಗಳೊಂದಿಗೆ ಆಡಿ ಆಡಿ

ವೈಮರೆತಿರುವುದನ್ನು ನೋಡಿ ಚಂದ್ರನು ನಗುತ್ತಿದ್ದ. ಮಾಲತಿ ಆಕೆಯ ಮನೆಯಲ್ಲಿ ಏನುಮಾಡುತ್ತಿದ್ದಳೋ! ಸಿನೆಮದಿಂದ ಜತೆಯಲ್ಲಿ ನಡೆದು ಬರುವಾಗ ಒಂದೆರಡು ಸಲ ಕಾರು ಬಂತೆಂದು ಆಕೆಯ ರಟ್ಟೆ ಹಿಡಿದೆಳೆದಿದ್ದನು, ಗೋಪಿನಾಥ. ಸುಮಿತ್ರೆ ರಸ್ತೆಯ ಆಚೆ ಮಗ್ಗುಲಿಗೆ ಸರಿದಿದ್ದಳು. ಪ್ರಾಯಶಃ ಬೇಕೆಂತಲೇ! ಜಾಣೆ! ಸುಮಿತ್ರೆಗೆ ತನ್ನ ಕುರಿತು ಯಾವ ಅಭಿಪ್ರಾಯ ವಿರಬಹುದೋ ಎಂದು ಯೋಚಿಸಿದನು. ಮಾಲತಿಯ ಆಪ್ತಳು ಆಕೆ. ನಂಬಿಕೆಗೆ ಯೋಗ್ಯಳು. ಸಾಮಾಜಿಕ ವ್ಯವಹಾರದಲ್ಲಿ ನಿಪುಣಳು. ತನ್ನ ಈ ಹೊಸ ಹುಚ್ಚನ್ನು ತಿಳಿದರೆ ಆಕೆಯಾಗಲಿ ಡಾಕ್ಟರಾಗಲಿ ಏನನ್ನುವರೋ, ಎಂದುಕೊಂಡನು.

ಗೋಪಿನಾಥನಿಗೆ ಸ್ತ್ರೀಸಮಾಜ ದೂರವಾಗಿರಲಿಲ್ಲ. ಹಲವು ಹೆಂಗಸರ ಪರಿಚಯವಿತ್ತು. ಒಬ್ಬಾಕೆಯ ವಾಕ್ಚಾತುರ್ಯ, ಇನ್ನೊಬ್ಬಾಕೆಯ ಕೈಕೌಶಲ ಮತ್ತೊಬ್ಬಾಕೆಯ ಮುಂದಾಳುತನ, ಹೀಗೆ ಅನೇಕರ ಸಹವಾಸ ಆತಗೆ ಹಿತಕರವೇ ಆಗಿತ್ತು. ಆದರೆ ಅವರೊಂದಿಗೆ ಒಡನಾಟ ಎಷ್ಟು ಬೇಕೋ ಅಷ್ಟೇ. ಅವರಾರಲ್ಲಿಯೂ ಗೆಳೆತನವನ್ನು ಆತ ಇದುವರೆಗೆ ಬಯಸಿರಲಿಲ್ಲ. ಆತಗೆ ಬೇಕಾಗಿರಲಿಲ್ಲ. ಅವರ ಯಾವ ನೆನಪೂ ಆತನಲ್ಲಿ ನೆಲೆಸಿರಲಿಲ್ಲ. ಅವರ ಸಹವಾಸದಿಂದ ಯಾವ ಪರಿಣಾಮವೂ ಆಗಿರಲಿಲ್ಲ. ಒಂದೆರಡು ಸಲ ಬಿನ್ನಾಣಗಿತ್ತಿಯರು ಬೀಸಿದ್ದ ಬಲೆಯಿಂದ ಜಾರಿಕೊಳ್ಳಲು ಸ್ವಲ್ಪ ಪ್ರಯಾಸವಾಗಿತ್ತೇನೋ ನಿಜ. ಆದರೆ ಅದೊಂದು ಕಷ್ಟ ಸಾಹಸವಾಗಿ ತೋರಲಿಲ್ಲ. ಸಂಸಾರದ ಭೂಕಂಪದಿಂದ ಆತನ ವಿಷಯಲಾಲಸೆಗಳು ಹೆದರಿ ಸುಪ್ತಚೇತನದ ಗುಹೆಗಳಲ್ಲಿ ಅಡಗಿಕೊಂಡಿದ್ದವು. ಅವುಗಳನ್ನೆಬ್ಬಿಸಿ ಮುಂತರುವ ಪ್ರಲೋಭನವಾವುದೂ ಆತಗೆ ಪ್ರಾಪ್ತವಾಗಿರಲಿಲ್ಲ. ಹೀಗಾಗಿ ಬ್ರಹ್ಮಚರ್ಯವನ್ನು ಪಾಲಿಸುವದು ಆತಗೆ ಕಷ್ಟತಮವಾಗಿರಲಿಲ್ಲ. ಅಂದರೆ ಬ್ರಹ್ಮಚರ್ಯವು ಯಾವ ಸಂದರ್ಭದಲ್ಲೂ ಪಾಲಿಸಬೇಕಾದ ಒಂದು ಮಹಾವ್ರತ; ಅದೊಂದು ಪರಮಪುರುಷಾರ್ಥ; ಅದರ ಸಿದ್ಧಿಗಾಗಿ ರಾತ್ರಿ ಹಗಲೂ ನಿಸರ್ಗದೊಂದಿಗೆ ಹೆಣಗಾಡುವುದೇ ಜನ್ಮದ ಸಾರ್ಥಕ್ಯವೆಂದು ಆತನ ಅಭಿಮತವಾಗಿರಲಿಲ್ಲ. ಇಂದ್ರಿಯ ಸುಖವು ಕ್ಷಣಿಕ, ವಿಷಯವ್ಯಾಸಂಗವು ಅಪವಿತ್ರವೆಂಬ ವೈರಾಗ್ಯ ಪರಂಪರೆಗಳಿಗೆ ಆತನಿನ್ನೂ ದಾಸನಾಗಿರಲಿಲ್ಲ. ಜಗವೆಲ್ಲ ಮಾಯೆ, ಜಗತ್ತಿನ ಜೀವಿತವೆಲ್ಲ ಮಿಥ್ಯ ಎಂದನ್ನುವವರ ಮನೋಧರ್ಮವೇ ಆತನಿಗರ್ಥವಾಗುತ್ತಿ

ರಲಿಲ್ಲ. ಪ್ರಿಯಕರ ಸುಖಕರ ವಸ್ತುಗಳು ಅನುಭವಗಳು ಎಷ್ಟುಕಾಲ ಬಾಳಬೇಕೆಂದು ಅವರಾಶೆ? ಒಂದು ದಿನವೋ, ಒಂದು ವರ್ಷವೋ, ಹತ್ತುವರ್ಷವೋ ಎಷ್ಟು ? ಒಂದು ಕ್ಷಣಾರ್ಧದ ಪರಿಮಿತಿಯಲ್ಲಿ ಸವಿಯ ಬ್ರಹ್ಮಾಂಡವನ್ನು, ಸೌಂದರ್ಯದ ಬೃಹದ್ರೂಪವನ್ನು ಗ್ರಹಿಸತಕ್ಕ ಸೂಕ್ಷ್ಮಶಕ್ತಿ ಇಲ್ಲದವರಿಗೆ ಹತ್ತುನಿಮಿಷವೇನು, ಹತ್ತು ವರ್ಷವೇನು? ಅಂಥ ಜಡಜೀವಿಗಳನ್ನು ಅಮೃತ ಕಲಶದಲ್ಲಿ ಚಿರಕಾಲ ಅದ್ದಿಟ್ಟರೂ ಅವರ ಹಸಿವಡಗದು. ಅಲ್ಲದೆ, ಚಲನೆ, ಪ್ರತಿವರ್ತನೆ, ಪ್ರಗತಿ ಇವೇ ವಸ್ತುಪ್ರಪಂಚದ ಮೂಲತತ್ವವಾಗಿರುವಾಗ ಒಂದೇ ರೂಪ, ಒಂದೇ ಅವಸ್ಥೆಯಲ್ಲಿ ಯಾವ ಜೀವವೂ ಇರಲಾರದು. ಕೊಂಚಕಾಲ ಒಂದು ಸ್ಥಿತಿಯಲ್ಲಿದ್ದು, ಬೆಳಗಿ, ನಶಿಸಿ ರೂಪಾಂತರಹೊಂದುವದೇ ಚೇತನದ ಅಮರತ್ವ. ಸುಖಸಂತೋಷಗಳು ಚಿರಸ್ಥಾಯಿಯಾಗಿದ್ದರೆ ಅವುಗಳಿಲ್ಲದಿರುವಿಕೆಯ ಜ್ಞಾನಭೇದವಿರದಿದ್ದರೆ ಅವುಗಳಿಗೂ ದುಃಖಸಂಕಷ್ಟಗಳಿಗೂ ವ್ಯತ್ಯಾಸವೆಲ್ಲಿ ಬಂತು ?

ಹಿಂದೊಂದು ದಿನ ಪಂಬಿ ಮಾಡಿದ್ದ ಸ್ವಾರಸ್ಯ ನೆನಪಿಗೆ ಬಂತು. ಕೋಡುಬಳೆ ಮಾಡಿತ್ತು. ತನ್ನ ಮುಷ್ಟಿತುಂಬ ಬಾಚಿಕೊಂಡಳು. ಕಿಸೆ ತುಂಬ ತುರುಕಿಕೊಂಡಳು. ಆದರೆ ಸಾಕೆನಿಸಲಿಲ್ಲ. ಚಿಬ್ಬಲಿನಲ್ಲಿ ಕರಿದು ಹಾಕಿದ ರಾಶಿಯನ್ನೇ ಜೇಬಿನಲ್ಲಿ ಹಿಡಿಸಬೇಕೆಂತ ನೋಡಿದಳು. ಆಗಲಿಲ್ಲ. ಅತ್ತಳು, ರಂಪ ಮಾಡಿದಳು. ಒಂದೇ ಒಂದು ಕೋಡುಬಳೆಯನ್ನೂ ತಿನ್ನಲಿಲ್ಲ. ತಾವೇ ಅಲ್ಪ ಕಾಲವಿದ್ದು ಹೋಗತಕ್ಕವರು ತಮಗೆ ಸಿಕ್ಕಿದ್ದು ಶಾಶ್ವತವಾಗಿರಬೇಕೆಂದು ಅಂಗಲಾಚಿದರೆ ಪಂಬಿಯದರ್ಜೆಯಿಂದಿನ್ನೂಉತ್ತೀರ್ಣರಾಗಿಲ್ಲವೆಂದೇ ಅರ್ಥ.

ಗೋಪಿನಾಥನಿಗೆ ಇಂದ್ರಿಯನಿಗ್ರಹವು ಸುಲಭವೆಂತನಿಸುದಕ್ಕೆಇನ್ನೊಂದು ಕಾರಣವಿತ್ತು. ದಂಡೆತ್ತಿ ಬರುವ ಆಸೆಗಳನ್ನು ಹಿಮ್ಮೆಟ್ಟಿದರೆ ತಾನೆ ಘರ್ಷಣ, ಹೋರಾಟ, ಧರ್ಮಸಂಕಟ? ಆಸೆಗಳ ಉತ್ಪನ್ನವೇ ಇಲ್ಲದಿದ್ದರೆ ? ಆಸೆಗಳು ಎದ್ದು ಕೈಚಾಚಬೇಕಾದರೆ ಫಲವು ಗೋಚರವಾಗಬೇಕು. ಎಟಕದಷ್ಟು ಎತ್ತರವಿದ್ದರೂ ಸರಿಯೇ, ಕನಸಿನ ಗಂಟಾದರೂ ಸರಿಯೆ, ಗುರಿ ಗೊತ್ತಿರಬೇಕು, ಗೋಚರಿಸುತ್ತಿರಬೇಕು. ಸಾಧನೆಗೆ ಸಿಗದ ಫಲಕ್ಕೆ ಯಾರೂ ಸಾಹಸ ಪಡುವುದಿಲ್ಲ. ಗೋಪಿನಾಥನ ಧ್ಯೇಯ ಆತನ ಯತ್ನಕ್ಕೆ ಎಟಕದಷ್ಟು ಎತ್ತರವಿತ್ತು. ಕಾಲು ನೆಲದ ಮೇಲಿದ್ದರೂ ಕಣ್ಣು ನಭೋಮಂಡಲದಲ್ಲಿತ್ತು. ಆತನ ರಸಿಕತನ, ಆತ್ಮಾಭಿಮಾನ ಆತಗೊಂದು ವಜ್ರಕವಚದಂತಿತ್ತು. ತಾನೊಬ್ಬ

ಸಾತ್ವಿಕ ಶಿರೋಮಣಿ, ತನ್ನ ಬಿಡಾರವೇ ಬೇರೆ ಎಂಬ ಅಹಂಕಾರವಲ್ಲ. ಎಲ್ಲಾದರೂ ಒಂದು ಪರಿಷ್ಕಾರ ಬೇಕು, ಯಾವುದೂ ಹರುಕುಮುರುಕಾಗಿರಬಾರದು. ಯಾವುದರಲ್ಲೂ ಊನವಿರಬಾರದು, ನಿವಾರಿಸತಕ್ಕ ನ್ಯೂನತೆಯಿರಬಾರದು, ಎಂದಷ್ಟೇ ಆತನ ಉನ್ನತಾಶಯು. ಹೆಂಗಸರು ಸರ್ವಾಂಗಸುಂದರಿಯರಾಗಿ ಸಕಲಗುಣಸಂಪನ್ನೆಯರಾಗಿದ್ದರೇನೇ ಸಹವಾಸಕ್ಕೆ ಯೋಗ್ಯರೆಂದಲ್ಲ. ಅಂಥ ಅಪ್ಸರೆಯರಿಗೆ ಅನುರೂಪರಾದ ಗಂಡಸರು ಬೇಕಲ್ಲ! ಒಂದು ವಸ್ತು ಒಂದು ವ್ಯಕ್ತಿ ಅಂಗೀಕೃತವಾಗಬೇಕಾದರೆ ಅದು ಪರಮಪದವನ್ನೈದಿರಬೇಕೆಂತಲ್ಲ, ಆತನ ಅಭಿಮತ. ಅದರಲ್ಲಿ ರಸಿಕತನದ ಗಂಧ ಗಾಳಿಯಾದರೂ ಇರಬೇಕು, ಪರಿಪೂರ್ಣತೆಯ ಮನವರಿಕೆ, ನಿರೀಕ್ಷಣೆಯಾದರೂ ಇರಬೇಕು, ಎಂದಷ್ಟೇ.

ಆತನ ಸುತ್ತಮುತ್ತಲಿನ ಗಂಡಸರು, ಸಹೋದ್ಯೋಗಿಗಳು, ದೊಡ್ಡವರೆಂದನಿಸಿಕೊಂಡವರು ಸಾಮಾನ್ಯವಾಗಿ ಹೆಂಗಸರ ಕುರಿತು ಎಷ್ಟು ವಿಚಾರಹೀನರು, ಎಷ್ಟು ಒರಟರು, ನಿರ್ದಾಕ್ಷಿಣ್ಯರು, ಅಲ್ಪಸಂತೋಷಿಗಳೆಂದು ಆಶ್ಚರ್ಯಪಡುತ್ತಿದ್ದನು. ಹೆಂಗಸರಿಲ್ಲದೆಡೆ ಅವರ ಮಾತುಕತೆ, ಹಾಸ್ಯ ಎಲ್ಲವೂ ಕ್ಷುಲ್ಲಕವಾಗಿತ್ತು. ಎಂಥವಳೇ ಆಗಲಿ ಮೈಮೇಲೆ ಹೆಣ್ತನದ ಮುದ್ರಿಕೆಯೊಂದಿದ್ದರೆ ಸಾಕು, ಹತ್ತರಲ್ಲಿ ಒಂಭತ್ತು ಮಂದಿ ಗಂಡಸರನ್ನು ಆಕೆ ಮೆಚ್ಚಿಸಬಲ್ಲಳೆಂದು ಆತನಿಗೆ ಮನದಟ್ಟಾಗಿತ್ತು; ನಿತ್ಯವೂ ಪ್ರತ್ಯಕ್ಷ ಅನುಭವವಾಗುತ್ತಿತ್ತು. ಈ ಮನೋವೃತ್ತಿ ಆತನಿಗಸಾಧ್ಯವಾಗಿತ್ತು. ಉಪವಾಸವಿದ್ದರೂ ಪರವಾಯಿಲ್ಲ, ಸಿಕ್ಕಿದ್ದನ್ನು ತಿಂದು ಹೊಟ್ಟೆ ತುಂಬಿಸಿಕೊಳ್ಳುವುದು ಮಾತ್ರ ಆತನ ಕೈಲಾಗದ ವಿಷಯ.

ಇಂದಿರಮ್ಮ ಬಾಗಿಲ ಬಳಿ ಬಂದು, "ಗೋಪಿ, ಗೋಪಿ" ಎಂದು ಎರಡು ಬಾರಿ ಮೆತ್ತಗೆ ಕರೆದ ಮೇಲೆ ಗೋಪಿನಾಥ ಚಕಿತನಾಗಿ "ಯಾರದು? ಅಮ್ಮನೇ?" ಎಂದೆದ್ದನು.

"ಏನು ಮಾಡ್ತೀ ಒಬ್ಬನೇ?"

"ಏನಿಲ್ಲ. ಸುಮ್ಮನೆ ಕೂತಿದ್ದೆ. ಪಂಬಿಗೆ ನಿದ್ದೆ ಬಂತೇ? ನಾನೂ ಬಂದೆ, ಹೋಗೋಣ."

ಇಬ್ಬರೂ ಒಳಗೆ ಹೋಗಿ ಬಾಗಿಲು ಹಾಕಿಕೊಂಡರು.

೧೧

ಮಂಗಳೂರಿನ ಮೆಟ್ರೊ ಕ್ಲಬ್ಬಿಗೆ ಮೇಲುಪ್ಪರಿಗೆ ಒಂದೇ ಆದರೂ ಅಂತಸ್ತುಗಳು ನಾಲ್ಕಿದ್ದವು. ಗೋಲ್ಫ್, ಬಿಲಿಯಡ್ರ್ಸ್, ಟೆನಿಸ್, ಮತ್ತು ಬೆಡ್ಮಿಂಟನ್, ಇಸ್ಪೀಟು, ಕೆರಮ್ಸ್ ಇತ್ಯಾದಿ ಆಟದವರದು, ಹೀಗೆ ಕೆಳಗಿಳಿದು ಬಂದಹಾಗೆ. ಗೋಲ್ಫ್ ಆಟದವರು ದೊರೆಗಳನ್ನು ಅನುಸರಿಸಿ, ಅವರ ಪರಿಚಯ, ಅವರ ಸಹವಾಸವನ್ನು ಹಾರೈಸಿ, ಅವರಂತೆ ಮೊಣಕಾಲುದ್ದದ ಗಾಳಿ ತುಂಬಿದಂತಿದ್ದ ಷರಾಯಿ ಹಾಕಿಕೊಂಡು ಹಸುರು ಹುಲ್ಲು ಗಾವಲಿದ್ದಲ್ಲೆಲ್ಲ ಹೊಂಡಗಳನ್ನಗೆದು ಅದರಲ್ಲಿಡಲು ಚಂಡನ್ನು ಹುಡುಕುತ್ತ ಉದ್ಪುದ್ದ ಕೋಲುಗಳನ್ನು ಹೊತ್ತು ಬೇಲಿ-ಬೆಟ್ಟ-ತೋಡು-ತಪ್ಪಲುಗಳಲ್ಲಿ ಸುತ್ತಾಡಿ ಬೆವರು ಸುರಿಸಿ, ತಮ್ಮ ಕಾರುಗಳಲ್ಲಿ ಕ್ಲಬ್ಬಿನ ಹೊಟೇಲಿನ ಬಾಗಿಲಿಗೆ ಬಂದು, ಕಾಫಿ ತಿಂಡಿಗಳನ್ನು ಕಾರಿಗೇ ತರಿಸಿಕೊಂಡು ಠೀವಿಯಿಂದ ತಿಂದು ದುಡ್ಡು ಕೊಡದೆ ಹೋಗತಕ್ಕ ಭೂಪತಿಗಳು. ಅವರಿಗೆ ಇಷ್ಟು ವ್ಯಾಸಂಗ ಮಾಡಿದರೂ ಇಷ್ಟು ಭಕ್ತಿಯಿಂದ ಅನುಕರಣೆ ಮಾಡಿದರೂ ಯುರೋಪಿಯನ್ ಕ್ಲಬ್ಬಿಗೆ ಪ್ರವೇಶವೇ ದೊರೆಯಲಿಲ್ಲವೆಂಬುದೊಂದೇ ಚಿಂತೆ ವಿನಾ ಇತರ ಯಾವ ಸರ್ವಸಾಮಾನ್ಯನನ್ನು ಪೀಡಿಸುವ ತಾಪತ್ರಯಗಳಿದ್ದಂತೆ ತೋರಲಿಲ್ಲ. ಕ್ಲಬ್ಬಿನ ಮಿಕ್ಕ ಸದಸ್ಯರ ಕುರಿತು ಅವರಿಗೆ ತುಂಬ ತಾತ್ಸಾರ. ಆದರೆ ಬಿಲಿಯಡ್ರ್ಸ್ ಭಕ್ತರ ಮೇಲೆ ಸ್ವಲ್ಪ ಸುಮಾರು. ಪ್ರಾಯಶಃ ಅವರು ಬರುವ ಜನ್ಮದಲ್ಲಾದರೂ ಗೋಲ್ಫ್ ಪದವಿಯನ್ನು ಪಡೆಯತಕ್ಕವರೆಂತಲೋ ಏನೋ.

ಬಿಲಿಯಡ್ರ್ಸ್‌ನವರು ಪರಿಶ್ರಮದಲ್ಲಿ ಗೋಲ್ಫಿನವರಿಗೆ ಬಿಟ್ಟುಕೊಡುವವರಲ್ಲ. ಸೆಕೆಯಾಗಲಿ, ಮಳೆಯಾಗಲಿ, ಚಳಿಯಾಗಲಿ ಹವಾಭೇದವನ್ನು ಗಣ್ಯಮಾಡದೆ ಒಂದೇ ರೀತಿ ಶರಟು ಷರಾಯಿ ಬೂಟುಗಳನ್ನು ತೊಟ್ಟು, ಬಾಯೊಳಗೆ ಸಿಗಾರನ್ನೋ ಪ್ಯಾಪನ್ನೋ ಇಟ್ಟುಕೊಂಡು, ಸಹಸ್ರಾರು ರೂಪಾಯಿ ಬೆಲೆಯ ಅಮೇರಿಕದಿಂದ ನೇರ ತರಿಸಿದ್ದ ಹಸುರು ಕಂಬಳಿ ಹಾಸಿದ ಮೇಜಿನಮೇಲೆ ಮರದ ಚಂಡುಗಳನ್ನು ಉದ್ದುದ್ದ ದೊಣ್ಣೆಗಳಿಂದ ಕುಕ್ಕುತ್ತ ಕೆಣಕುತ್ತ ಅವರಿಗಾಗಿ ಮೀಸಲಾಗಿದ್ದ ಕೋಣೆಯೊಳಗೇ ಕಾಲಕಳೆಯುತ್ತಿದ್ದರು. ಇವರಿಗೆ ಗೋಲ್ಫಿನವರಷ್ಟು ದರ್ಪವಿರದಿದ್ದರೂ ಬಿಲಿಯಡ್ರ್ಸ್

ಆಟ ಬಾರದಿದ್ದವರನ್ನು ಕಂಡರೆ ಅನಾದರ: ಟೆನಿಸ್ ಆಟದವರ ಮೇಲೆ ಮಾತ್ರ ಸ್ವಲ್ಪ ಸಹಾನುಭೂತಿ, ಆಡುತ್ತಿರುವಾಗ ತಮ್ಮಂತೆ ಉಡುಪನ್ನು ಧರಿಸುತ್ತಿದ್ದರೆಂತಲೋ ಏನೋ.

ಟೆನಿಸ್ ಆಟದವರಲ್ಲಿ ಒಂದು ದೊಡ್ಡ ಗುಣವಿತ್ತು. ಅವರು ನಿಗರ್ವಿಗಳು. ತಮ್ಮ ಆಟದ ಚಂಡುಗಳ ಮೇಲಲ್ಲದೆ ಬೇರೆ ಯಾವುದರ ಮೇಲೂ ಅವರಿಗೆ ಹಟಸಾಧನೆಯಿರಲಿಲ್ಲ. ದಿನನಿತ್ಯ ಲೆಕ್ಕವಿಲ್ಲದಷ್ಟು ತಣಿಸಿದ ಪಾನಕಗಳನ್ನು ಬಸುಕೊಳ್ಳುವುದರಿಂದಿರಬಹುದು, ಅಂತೂ ಅವರ ಸ್ವಭಾವ ಶಿಥಿಲವಾಗಿತ್ತು. ಅವರು ಕ್ಲಬ್ಬಿನ ಪ್ರೋತ್ಸಾಹಕರಾದ ಗೋಲ್ಫ್, ಬಿಲಿಯರ್ಡ್ಸ್‌ನವರಿಗೂ ಕ್ಲಬ್ಬಿನ ನೆಲಗಟ್ಟಿನವರಾದ ಇಸ್ಪೀಟಿನವರಿಗೂ ನಡುವೆ ಇತ್ತಂಡದವರಿಗೂ ಬೇಕಾದವರಾಗಿದ್ದು, ಅವರೊಂದಿಗೆ ಸಲಿಗೆಯಿಂದ ಸಮಾನರಂತೆ ಒಡನಾಡುತ್ತಿದ್ದರು.

ಕ್ಲಬ್ಬಿನ ಅಂತರಗಳು ಮಾತ್ರ ತಲೆಕೆಳಗಾಗಿದ್ದವು. ಕೀಳು ಜಾತಿಯವರಾದ ಇಸ್ಪೀಟುಗುಲಾಮರ ಬಿಡಾರ ಉಪ್ಪರಿಗೆ ಮೇಲೆ. ರೇಡಿಯೋ ಮತ್ತು ಪುಸ್ತಕಾಲಯದ ನೆರೆಯಲ್ಲಿ. ಮೇಲಂತಸ್ತಿನ ಬಿಲಿಯರ್ಡ್ಸ್‌ನವರು ಕೆಳಗಡೆ ಒಂದು ಕೋಣೆಯಲ್ಲಿ. ಅತ್ಯುನ್ನತ ಅಂತಸ್ತಿನವರಾದ ಗೋಲ್ಫಿನವರು ಕ್ಲಬ್ಬಿನ ಹೊರಗೆ. ಒಳಗೆ ಕಾಲಿಡುವುದೇ ಅಪೂರ್ವ. ಟೆನಿಸ್ ಆಟದವರು ಅಂಗಳದಲ್ಲಿ. ಇವರೆಲ್ಲರಿಗೂ ಬುಡದಿಂದ ಮೇಲೆವರೆಗೂ ಅತ್ಯಂತ ಹತ್ತಿರದವನೊಬ್ಬನಿದ್ದ, ಕಾಫಿ ಹೋಟೆಲಿನ ಜನ್ನ. ಆತನಲ್ಲಿ ಎಲ್ಲರಿಗೂ ವಿಶ್ವಾಸ, ಸಲಿಗೆ, ಸ್ನೇಹ. ಎಲ್ಲರೂ ಆತನ ಗಿರಾಕಿಗಳು; ಎಲ್ಲರೂ ಆತನ ಸಾಲಗಾರರು.

ಇಸ್ಪೀಟು ಉಪಾಸಕರಲ್ಲೂ ಎರಡು ಪಕ್ಷಗಳು. ದುಡ್ಡಿಟ್ಟು ಆಡತಕ್ಕವರು. ಅಂತೆಯೆ ಆಡತಕ್ಕವರು. ದುಡ್ಡಿಗಾಗಿ ಮೂರೆಲೆಯೋ, ಐದೆಲೆಯೋ, ಹತ್ತೆಲೆಯೋ, ಹದಿಮೂರೆಲೆಯೋ ಹಿಡಿದು ಆಡುತ್ತಿದ್ದವರು ಮಿಕ್ಕವರ ಗೊಡವೆಗೆ ಹೋಗುತ್ತಿರಲಿಲ್ಲ. ಅವರ ಪ್ರಪಂಚದಲ್ಲಿ ಮತ್ತಾವುದಕ್ಕೂ ಜಾಗವಿರಲಿಲ್ಲ. ದಿನಂಪ್ರತಿ ಸಂಜೆಯಿಂದ ನಡುರಾತ್ರಿ ದೀಪ ನಂದಿಸುವತನಕ, ರಜಾದಿನಗಳಲ್ಲಿ ಬೆಳಗಿನತನಕ, ಗುಪ್ತಚರರಂತೆ ಬಾಗಿಲು ಹಾಕಿಕೊಂಡು, ಮೇಜಿನ ಸುತ್ತಲು ಕುರ್ಚಿಯಲ್ಲಿ ಕೆತ್ತಿದ ಪ್ರತಿಮೆಗಳಂತೆ ಕುಳಿತು, ಸ್ನಾನ

ಶೌಚ ನಿದ್ರಾಹಾರಾದಿಗಳನ್ನು ತೊರೆದು ಹಣವನ್ನು ಚೆಲ್ಲುತ್ತ ಬಳಿಯುತ್ತ ತಮ್ಮ ಚಟವನ್ನು ಸಾಧಿಸುತ್ತಿದ್ದರು. ಕ್ಲಬ್ಬಿನ ಪುರ ಪ್ರಮುಖರಿಂದಲೂ ಸನ್ಮಾನಿತವಾದ ಈ ಇಲಾಖೆಯನ್ನು ಕಿತ್ತೊಗೆಯಲು ಹೂಡಿದ ಪ್ರಯತ್ನ ಗಳೆಲ್ಲ ನಿಷ್ಫಲವಾದವು. ಈ ವಿಷಮ ವ್ಯಾಸಂಗ ಇಲ್ಲದೆಡೆಯೇ ಇರಲಿಲ್ಲ. ಯುರೋಪಿಯನ್ ಕ್ಲಬ್ಬಿನಲ್ಲಿಯೂ ಇತ್ತು. ರೋಮನ್ ಕೆಥೋಲಿಕ್ ಇನ್ಸ್ಟಿಟ್ಯೂಟನ್ನೂ ಅದು ಬಿಟ್ಟಿರಲಿಲ್ಲ. ಮುಸ್ಲಿಮ್ ಮಜ್ಲೀಸಿನಲ್ಲೂ ಇತ್ತು. ಮಲಬಾರ ಅಸೋಸಿಯೇಶನ್ನಲ್ಲೂ ನಿಷ್ಠೆಯಿಂದ ನಡೆಯುತ್ತಿತ್ತು. ಮೆಟ್ರೋ ಕ್ಲಬ್ಬಿನಲ್ಲೇತಕ್ಕಿರಬಾರದು ?

ಹಣದ ಹಂಗಿಲ್ಲದೆ ಇಸ್ಪೀಟಾಟದ ಮೇಲಿನ ಶ್ರದ್ಧೆಯಿಂದಲೇ ನಿಷ್ಕಾಮ ಕರ್ಮನಿರತರಾದವರು ಹೆಚ್ಚಾಗಿ ನಿವೃತ್ತ ಅಧಿಕಾರಿಗಳು, ದುಡ್ಡಿನ ಪೆಟ್ಟಿಗೆಯ ಕೀಲಿಕೈಯನ್ನು ಮನೆಯಾಕೆಗೆ ಕೊಟ್ಟುಬಿಟ್ಟು ಪಾಡುಪಡುತ್ತಿದ್ದವರು, ಹುಟ್ಟು ಜಿಪುಣರು, ಕಾಸುಕಳ್ಳರು ಇಂಥವರೇ. ಆಡುತ್ತಿರುವಾಗ ಅವರ ಗಾಂಭೀರ್ಯ, ದೌಲತ್ತು, ಅವರೆಬ್ಬಿಸುವ ರಾದ್ಧಾಂತ ಇವನ್ನು ನೋಡಿದರೆ ಆಟದಲ್ಲಿ ಅರ್ಧಾಂಶ ರಾಜ್ಯವನ್ನೇ ಕಳಕೊಂಡರೋ ಎಂಬ ಭಾವನೆಯಾಗ ಬೇಕು. ವಾಗ್ವಾದದಿಂದ ಗಂಟಲು ಒಣಗಿದಾಗ ಒಂದೊಂದು ಸಲ ಕಾಫಿ ಹೋಟೇಲಿನವನನ್ನು ಖುದ್ದು ಕರೆಯಿಸಿ ಒಂದೊಂದು ಲೋಟ ಬಿಸಿನೀರಿಗೆ ಆರ್ಡರು ಕೊಡುವುದೂ ಇತ್ತು. ಈ ಗುಂಪಿನವರ ಸ್ಥಾನ ಕ್ಲಬ್ಬಿನ ಮೂರು ಸುತ್ತಲೂ ಇದ್ದ ಹಜಾರದಲ್ಲಿ. ಬ್ರಿಜ್ಜೇ ಅವರ ಅತಿಪ್ರಿಯವಾದ ಆಟ. ಆಡ ತಕ್ಕವರು ನಾಲ್ಕು ಮಂದಿಯಿದ್ದರೆ ಪರಮಾದರದಿಂದ ಸುತ್ತ ಕುಳಿತು ನೋಡ ತಕ್ಕವರು ಎಂಟು ಮಂದಿ. ಪ್ರತಿಯೊಂದು ಆಟವಾದ ತಕ್ಷಣ ಅದರ ಆಗು ಹೋಗುಗಳನ್ನು ವಿಮರ್ಶಿಸಿ, ತರ್ಕಿಸಿ ಬೈದು ಬೊಬ್ಬಿಡತಕ್ಕವರು ಒಟ್ಟಿನಲ್ಲಿ ಹನ್ನೆರಡು ಮಂದಿ.

ಇಂಥ ಯಾವ ಕೆಟ್ಟ ಚಾಳಿಗಳಿಗೂ ತುತ್ತಾಗದೆ ಮೆಟ್ರೋ ಸಂಸ್ಥೆಯಿಂದ ಬಹುಮುಖದ ಉಪಕಾರವನ್ನು ಪಡೆಯತಕ್ಕವರು ಅನೇಕರಿದ್ದರು. ಹೆಚ್ಚಾಗಿ ಮೇಲುಪ್ಪರಿಗೆಯ ವಿರಾಮ ಮಂದಿರದಲ್ಲಿ ಒಟ್ಟುಗೂಡುತ್ತಿದ್ದರು. ಹಗಲೆಲ್ಲ ಕೋರ್ಟು ಕಚೇರಿಗಳಲ್ಲಿ ದಣಿದವರು, ಮಂಡಿಭಂಡ ಸಾಲೆಗಳಲ್ಲಿ ಬೆವರಿ

ಸೋತವರು, ಜೀವನದ ಹೊರೆಹೊತ್ತು ಬೇಸತ್ತವರು ಸ್ವಲ್ಪ ಸಮಯವಾದರೂ ಗೆಳೆಯರೊಂದಿಗೆ ಸುಖಾಸನಗಳಲ್ಲಿ ಬಿದ್ದುಕೊಂಡು ಸೇದುತ್ತ ತಿನ್ನುತ್ತ ಕುಡಿಯುತ್ತ ಹೆಣ್ಣುಮಕ್ಕಳೆದುರಿಗೆ ಮನೆಯಲ್ಲಿ ಆಡಬಾರದ್ದನ್ನು ಆಡುತ್ತ ನಗುತ್ತ ಸಂಸಾರದ ತೊಡಕು ತಾಪತ್ರಯಗಳನ್ನೂ ಅತಿರೇಕಗಳನ್ನೂ ಮರೆತುಬಿಡಲು ಜತೆ ಸೇರುತ್ತಿದ್ದರು. ಅಂಥವರಲ್ಲೂ ಆಜನ್ಮ ಜೋಲು ಮುಖದವರು ಕೆಲವರಿದ್ದರು. ಹೋದಲ್ಲೆಲ್ಲ ತಮ್ಮ ಮನೆಯ ಹುಳುಕು ಹರಕಲು ಚಿಂದಿಗಳನ್ನು ಹೊತ್ತುತಂದು ಹತ್ತುಮಂದಿಯೆದುರು ಹರವಿ, ಸಿಟ್ಟುಸಿರು ಬಿಡುವವರು. ಆದರೆ ಆ ತೆರನ ಚಿಕಿತ್ಸಾತೀತರಾದ ಮನೋರೋಗಿಗಳು ವಿರಳ.

ವಾಚನಾಲಯದ ಒಂದು ಭಾಗ, ಹಲಗೆಯ ಮರೆಯಿಂದ ಪ್ರತ್ಯೇಕಿಸಲ್ಪಟ್ಟ ಒಂದು ಗುಪ್ತಗುಹೆ 'ಪೋಲಿ' ಸಂಗಡದವರಿಗೆ ಮೀಸಲಾಗಿತ್ತು. ಈ ಸಂಗಡದವರು ತಮ್ಮದೇ ಒಂದು ಉಪಸಂಸ್ಥೆಯನ್ನೇರ್ಪಡಿಸಿದ್ದರು. ಕ್ಲಬ್ಬಿನ ಹೊಸಲನ್ನು ದಾಟಿ ಒಳಗೆ ಕಾಲಿಟ್ಟಮೇಲೆ ಮನಬಂದಂತೆ ವರ್ತಿಸಲವಕಾಶವಿರಬೇಕು. ಯಾವ ಅಡ್ಡಿಯೂ ಯಾರ ಅಂಕೆಯೂ ಇರಬಾರದು. ಪ್ರಾಯ, ಪ್ರಖ್ಯಾತಿ, ಪದವಿಗಳ ಹೊರೆಯನ್ನು ಮನೆಯಲ್ಲಿ, ಆಫೀಸಿನಲ್ಲಿ ಬಿಟ್ಟುಬರಬೇಕು. ಬಾಲ್ಯದ ಕೌತುಕ, ಉತ್ಸಾಹ, ಉನ್ಮಾದಗಳನ್ನು ದಿನಕ್ಕೆ ಒಂದೆರಡು ತಾಸುಗಳ ಕಾಲವಾದರೂ ಪುನರುಜ್ಜೀವನಗೊಳಿಸಿ ಆ ಪ್ರಕಾರ ವರ್ತಿಸಬೇಕು. ಇದೇ ಅವರ ಮತ. ಇದರ ಮತಸ್ಥಾಪಕರು ಡಾಕ್ಟರು ವಾಸುದೇವ ಪೈಗಳು. ಇದರ ಪ್ರಚಾರಾಚಾರ್ಯರು ವಕೀಲ ಕೃಷ್ಣಯ್ಯನವರು. ಅನುಯಾಯಿಗಳು ವಕೀಲರು ನರಸಿಂಹ ಕಮ್ತಿಯರು, ಸಂಜೀವರಾಯರು ಇನ್ನಿತರರಿಬ್ಬರು. ಈ ಭ್ರಾಂತಿಭವನಕ್ಕೆ ಭೂಷಣಪ್ರಾಯನಾಗಿದ್ದವನು ಗೋಪಿನಾಥ. ಈ ಲಗುಮತಿಗಳ ನಡವಳಿಕೆಯಲ್ಲಿ ಸಭ್ಯತೆ, ಘನತೆ, ಹೊಣೆಗಾರಿಕೆಯನ್ನು ಹುಡುಕಿದರೆ ಸಿಗದು. ಕುಚೇಷ್ಟೆ, ವಕ್ರೋಕ್ತಿ, ವ್ಯಾಜಸ್ತುತಿನಿಂದೆಗಳ ಏಟುಗಳನ್ನು ತಡೆಯಲಾರದ ಮರ್ಯಾದಸ್ಥರು ಇಂಥವರ ನಡುವೆ ಬಹುಕಾಲ ಬಾಳುತ್ತಿರಲಿಲ್ಲ.

ಹಾಗಾಯಿತು ಗವರ್ನ್‌ಮೆಂಟ್ ಕಾಲೇಜಿನ ಕುಸ್ತಿಮೇಸ್ಟರೊಬ್ಬರಿಗೆ. ಅವರು ಎದೆಯುಬ್ಬಿಸಿಕೊಂಡು ಭುಜಗಳನ್ನು ಬಿಗಿಹಿಡಿದುಕೊಂಡು, ಕತ್ತನ್ನು

ಕೊಂಚ ಓರೆ ಮಾಡಿಕೊಂಡು ದಿಡಿದಿಡೀಂತ ಆಗಾಗ ‘ ಪೋಲಿ ’ ಸಂಗಡಕ್ಕೆ ಬಂದುಹೋಗುತ್ತಿದ್ದರು. ಸಾಮಾನ್ಯ ಮಾನವಕೀಟಗಳು ಎರಡು ಕೈಗಳಿಂದಲೂ ಎತ್ತಲಾರದಷ್ಟು ಹೊರೆಯನ್ನು ಇವರು ಹಲ್ಲುಗಳಿಂದ ಅತಿ ಸುಲಭವಾಗಿ ಎತ್ತಿಸೆಯುತ್ತಿದ್ದರು. ಈ ಪರಾಕ್ರಮಕ್ಕೆ ಕೀರ್ತಿಗೊಂಡಮೇಲೆ ಮಾತುಮಾತಿಗೆ ಹಲ್ಲುಕಿರಿತವೇ ಅವರ ಹೆಗ್ಗುರುತಾಗಿಬಿಟ್ಟಿತು. ತಲೆಯ ತೂಕ ಜಾಸ್ತಿಯಾಗಬೇಕಾದರೆ ಯಾವ ವ್ಯಾಯಾಮ ಮಾಡಬೇಕೆಂತ ಕೃಷ್ಣಯ್ಯ ಕೇಳಿದ್ದಕ್ಕೆ ಹಲ್ಲುಕಿರಿದುಬಿಟ್ಟರು. ಹೆಂಗಸರ ದೇಹದಲ್ಲಿ ಪ್ರಧಾನ ಮಸ್ಸಲ್ಸು ಯಾವುದೆಂತ ಸಂಜೀವರಾಯರು ಕೇಳಿದ್ದಕ್ಕೂ ಅದೇ ಉತ್ತರ: ‘ ಮೆಕ್ಲೀನ್ ’ ದಂತಪ್ರದರ್ಶನ. ಒಂದು ದಿನ ಅವರೀರೀತಿ ಹಲ್ಲು ಬಿಟ್ಟುಕೊಂಡು ಠೀವಿಯಲ್ಲಿ ಕುಳಿತಿದ್ದಾಗ ಸಂಜೀವರಾಯರು ಅತಿ ಹತ್ತಿರ ಬಂದು ಬಗ್ಗಿ ಅವರ ಹಲ್ಲುಸಾಲುಗಳನ್ನು ದುರುಗುಟ್ಟಿ ನೋಡಿ ಚೂಚೂ ಅನ್ನದೆ ಹೋದರು. ಹೀಗೆ ಎರಡುಮೂರು ದಿನ ಅವರ ಬಾಯೊಳಗೆ ಇಣಿಕಿ ನೋಡಲು ಅವರಿಗೆ ಕೋಪ ಬಂದು ಬಾಯಿ ಮುಚ್ಚಿಕೊಂಡುಬಿಟ್ಟರು. ಆಬರ ಮರುದಿನ ಸಂಜೀವರಾಯರ ಜತೆಯಲ್ಲಿ ಡಾಕ್ಟರೂ ಹೋದರು. ಡಾಕ್ಟರನ್ನು ನೋಡಿ ಸಂಜೀವರಾಯರ ಮೇಲಿನ ಕೋಪವನ್ನು ಮರೆತು ಮೇಸ್ಟ್ರು ಹಲ್ಲುಕಿರಿದರು. ತಕ್ಷಣ ಬಂದವರಿಬ್ಬರೂ ಬಗ್ಗಿ ಇಣಿಕಿ ನೋಡಿದರು. ಡಾಕ್ಟರು ತನ್ನ ಕೈಯಲ್ಲಿದ್ದ ಪೆನ್ಸಿಲಿನಿಂದ ಪೈಲುವಾನರ ಮೇಲು ಸಾಲಿನ ಎದುರಿನ ಮೂರು ಹಲ್ಲುಗಳಮೇಲೆ ಬಡಿದು ಸಂಜೀವರಾಯರಿಗೆ ಸೂಚಿಸಿದರು. ಸಂಜೀವರಾಯರು ತಮ್ಮ ಮೇಲ್ದುಟಿಯನ್ನೆತ್ತಿ ಬಿದ್ದುಹೋಗಿದ್ದ ಮೂರು ಹಲ್ಲುಗಳ ಜಾಗವನ್ನು ತೋರಿಸಿದರು. ಒಂದೇ ಹಾಳಿತ; ನಾಳೆಯೇ ವರ್ಗಾಯಿಸಿಬಿಡೋಣವೆಂದರು ಡಾಕ್ಟರು. ಮೇಸ್ಟ್ರು ಟಪ್ಪನೆ ಬಾಯಿ ಮುಚ್ಚಿದರು. “ ಮತ್ತೇನೂ ಇಲ್ಲ, ಮಿಸ್ಟರ್ ಉಸ್ತಾದ್. ನಿಮಗೆ ಮೂರು ಹಲ್ಲು ಜಾಸ್ತಿ, ಸಂಜೀವರಾಯರಿಗೆ ಮೂರು ಹಲ್ಲು ನಾಸ್ತಿ. ನಿಮ್ಮದನ್ನ ಕೀಳಿಬಿಟ್ಟು ಅವರಿಗಿಟ್ಟುಬಿಡೋಣಾಂತ ಆಲೋಚನೆ. ಆಕ್ಷೇಪವಿಲ್ಲವಷ್ಟೆ ? ” ಅಂದರು ಡಾಕ್ಟರು. ಧಡಕ್ಕನೆ ಅಲ್ಲಿಂದೆದ್ದು ತೊಲಗಿದ ಕುಸ್ತಿ ಮೇಸ್ಟ್ರು ಮರಳಿ ಬರಲೇ ಇಲ್ಲ.

ವೀರಕಂಬಕ್ಕೆ ಹೋಗಿಬಂದ ಆರು ದಿನಗಳ ನಂತರ ಕೃಷ್ಣಯ್ಯನೊಡನೆ ಮಾತನಾಡುವುದಕ್ಕಾಗಿ ರಾಘವೇಂದ್ರರಾಯರು ಮೆಟ್ರೊ ಕ್ಲಬ್ಬಿಗೆ ಬಂದಾಗ

ಅಲ್ಲಿ ಸಕಲರೂ ಅವರವರ ವ್ಯಾಸಂಗದಲ್ಲಿ ಮಗ್ನರಾಗಿದ್ದರು. ಏನೂ ಕೆಲಸ ವಿಲ್ಲದ್ದರಿಂದ ಯಾರಿಗೂ ಪುರಸತ್ತಿರಲಿಲ್ಲ. ರಾಘವೇಂದ್ರರಾಯರು ಬ್ರಿಜ್ಜಿನ ಸಾಲುಗಳನ್ನು ದಾಟಿ, ಬಿಲಿಯರ್ಡ್ಸ್ ಕೋಣೆಯೊಳಗಿಂದ ಹಾದು ಹೋಗು ವಾಗ ಗುರುತದವರ 'ಹೆಲೋ' ಗಳಿಗೆ 'ಹೆಲೋ' ಹೇಳುತ್ತ, ಉಪ್ಪರಿಗೆ ಮೆಟ್ಟಿಲನ್ನು ಹತ್ತಿ ವಾಚನಾಲಯಕ್ಕೆ ಹೋದರು. ಅಲ್ಲಿ ರೇಡಿಯೋದಿಂದ ಯಾವುದೋ ನೃತ್ಯಗೀತವೊಂದು ಕೇಳಿಬರುತ್ತಿತ್ತು. ಮರೆಯಾಚೆಗಿದ್ದ 'ಫ್ಲೋಲಿ'ಗಳ ಕೋಲಾಹಲವೂ ಕೇಳಿಸಿತು. ಈ ಹುಡುಗಾಟ ಒಗ್ಗದೆ ಹುಬ್ಬುಗಂಟು ಹಾಕಿಕೊಂಡು ಅರೆಮನಸ್ಸಿನಿಂದ ಮುಂದುವರಿದರು. 'ಫ್ಲೋಲಿ' ಪಂಗಡದ ನಿತ್ಯಭಕ್ತರೆಲ್ಲರೂ ಹಾಜರಿದ್ದರು.

"ದಯಮಾಡಿಸಿ, ರಾಘವೇಂದ್ರರಾಯರಿ. ಒಳ್ಳೇ ಸಮಯ ನೋಡಿ ಬಂದ್ರಿ" ಅಂದರು ಕೃಷ್ಣಯ್ಯ.

"ಅದೇನು ಸಮಾಚಾರ ?"

"ಅಲ್ನೋಡಿ, ನಿಮ್ಮ ಬಲಗಡೆ" ಎಂದು ಕಣ್ಸನ್ನೆಯಿಂದ ಸೂಚಿಸಿದರು.

ಅಲ್ಲೊಂದು ಕುರ್ಚಿಯಲ್ಲಿ ಪದ್ಮಾಸನ ಹಾಕಿ ಕುಳಿತು, ಅರೆಮುಚ್ಚಿದ ಕಣ್ಣುಗಳಿಂದ ಕಟಾಕ್ಷವನ್ನು ರಾಘವೇಂದ್ರರಾಯರ ಮೇಲೆ ಬೀರುತ್ತ ಕತ್ತನ್ನು ಆಚೆಗೊಮ್ಮೆ ಈಚೆಗೊಮ್ಮೆ ಕುಣಿಸುತ್ತಿದ್ದರು, ಸಂಜೀವರಾಯರು. ತಲೆ ಮುಕ್ಕಾಲು ಪಾಲು ಬೋಳು; ಹಲ್ಲುಗಳಲ್ಲಿ ಸೇಕಡ ಹತ್ತರಷ್ಟು ಕಡ, ಮುಖದಲ್ಲಿ ಹೆಪ್ಪುಗಟ್ಟಿದ ವಿಲಕ್ಷಣ ಮಂದಹಾಸ. ರಾಘವೇಂದ್ರರಾಯರ ದೃಷ್ಟಿ ಸಂಜೀವರಾಯರ ಮೇಲೆ ಬೀಳುತ್ತಲೇ ಅವರ ಕಣ್ಣುಗಳು ಎಡಕ್ಕೂ ಬಲಕ್ಕೂ ಮಿಂಚಲಾರಂಭಿಸಿದವು. ಹುಬ್ಬುಗಳು ತಾಳಕ್ಕೆ ಸರಿಯಾಗಿ ಹಾರ ಲಾರಂಭಿಸಿದವು. ಹೆಗಲಿನ ಇಬ್ಬದಿಗಳಲ್ಲೂ ಬಿಡಿಸಿ ಹಿಡಿದಿದ್ದ ಹಸ್ತಗಳು ತಾನಬದ್ಧವಾಗಿ ರೆಕ್ಕೆಗಳಂತೆ ಬಡಿದಾಡಲಾರಂಭಿಸಿದವು. ಎರಡು ನಿಮಿಷ ಗಳ ವರೆಗೆ ಈ ಪ್ರದರ್ಶನವಾದ ಬಳಿಕ ಸಂಜೀವರಾಯರು ತಮ್ಮ ಕೈಕಾಲು ಗಳನ್ನು ಪೂರ್ವಸ್ಥಾನಕ್ಕಿಳಿಸಿ ತೆಗೆದಿಟ್ಟದ್ದ ಶಾಲನ್ನು ಪುನಃ ಹೆಗಲಮೇಲೆ ಹಾಕಿಕೊಂಡರು.

"ಹೇಗಿದೆ ಸ್ಯಾಂಪಲು ? ನಿಮಗೆ ಪ್ರ್ಯೆವೇಟ್ ಟ್ಯೂಶನ್ ಕೊಡಲೇ?" ಎಂದು ಕೇಳಿದರು. ರಾಘವೇಂದ್ರರಾಯರು ನಕ್ಕು ಸದ್ಯ ಅಗತ್ಯವಿಲ್ಲವೆಂದರು.

“ ಹೋಗಲಿ ಬಿಡಿ. ನಿಮಗೆ ಅದೃಷ್ಟವಿಲ್ಲಾನ್ನಿ. ನರ್ತನ ಹಾಗಿರಲಿ. ನಿಮಗೆ ಪ್ರಯಾಸವಾಗಬಹುದು. ಸಂಗೀತ ? ”

“ ಅಂದ್ರೆ, ನೀವು ಸಂಗೀತ ಬೇರೆ ಬಲ್ಲವರೇನು ?”

“ ಅಲ್ಪ ಸ್ವಲ್ಪ. ” ಅಂಗರು ಅತಿ ವಿನಯದಿಂದ ನಾಚುತ್ತ. “ ಯಥಾನು ಶಕ್ತಿ ಅಭ್ಯಾಸ ಮಾಡ್ತಿದ್ದೇನೆ. ತಲೆ ತೂಗೋದಕ್ಕೂ ತೊಡೆ ತಟ್ಟೋದಕ್ಕೂ ಆಗಲೇ ಕಲಿತು ಬಿಟ್ಟಿದ್ದೇನೆ. ಇನ್ನುಳಿದದ್ದೇನು ಮಹಾ; ತಾನಾಗಿ ಬರುತ್ತೆ.”

ಈ ಅಪಹಾಸ್ಯಕ್ಕೆ ಸಿಕ್ಕಿಬಿದ್ದು ರಾಘವೇಂದ್ರರಾಯರು ತೊಳಲುತ್ತಿರುವ ದನ್ನು ನೋಡಿ ಗೋಪಿನಾಥ “ ಎವಾರ್ಡಿನ ವಿಷಯಕವಾಗಿ ಬಂದೀಂತ ತೋರುತ್ತೆ ” ಎಂದನು.

“ ಹೌದು, ಬೇಗ ಆಗಬೇಕಲ್ಲ. ಹದಿನೈದು ದಿನಗಳೊಳಗಾಗಿ ಕೋರ್ಟಿಗೆ ದಾಖಲಾಗಬೇಕಲ್ಲ ” ಎಂದು ಆತುರದಿಂದ ಸೇರಿಕೊಂಡರು, ರಾಘವೇಂದ್ರ ರಾಯರು.

“ ಅದಕ್ಕೇನಾಗಬೇಕು.? ಇದೇ ಬರುವ ಭಾನುವಾರ ಸಂಜೆ ನಮ್ಮನೇಲಿ ಒಟ್ಟುಗೂಡಿದರಾಯಿತು. ಆಗದೇನ್ರಿ, ಕಮ್ತೇರು ?”

“ ಅಂದ್ರೆ ನಿಮ್ಮ ಕಾಫಿ ಹೊತ್ತು ಆದಮೇಲೋ?” ಎಂದು ಕಮ್ತಿಯರು ಮುಖ ಸಪ್ಪಗೆ ಮಾಡಿಕೊಂಡು ಕೇಳಿದರು.

“ನಮ್ಮ ಕಾಫಿಹೊತ್ತು ಹೇಗೂ ಇರಲಿ; ನಿಮ್ಮಪಾಲು ಎಲ್ಲೂ ಹೋಗದು.” ಗೋಪಿನಾಥ ಭರವಸೆ ಹೇಳಿದಮೇಲೆ ಕೃಷ್ಣಯ್ಯನನ್ನು ತಪ್ಪದೆ ಹಾಜರಿರು ವಂತೆ ಹೇಳಿಬಿಟ್ಟು ರಾಘವೇಂದ್ರರಾಯರು ಎದ್ದು ಹೊರಟುಹೋದರು. “ ನಮ್ಮನ್ನ ಮರತೇ ಬಿಟ್ರೇನು ?” ಎಂದು ಸಂಜೀವರಾಯರು ಅಂಗಲಾಚಿ ಬೇಡಿಕೊಂಡದ್ದೂ “ ನಾನೇನು ಮಾಡಿದ್ದೇನೆ ಮತ್ತೆ ?” ಎಂದು ಡಾಕ್ಟರು ಎಗರಿದ್ದೂ ಅವರ ಕಿವಿಗೆ ಬಿತ್ತೋ ಇಲ್ಲವೋ ಅವರಂತು ಅವಸರದಿಂದ ಈ ಪೋಲಿಗಳ ಪಂಗಡದಿಂದ ಪಾರಾದರು.

“ ನನ್ನ ಡಾನ್ಸು ನೋಡಿ ಮೆಚ್ಚಿದ ಹಾಗೆ ಕಾಣಲಿಲ್ಲ, ರಾಯರು ” ಎಂದು ಸಂಜೀವರಾಯರು ವಿಷಾದಿಸಿದರು.

“ ಏನು ನಾಚಿಕೆಗೆಟ್ಟವನೋ ನೀನು ! ಅವರ ಹತ್ತಿರವೇ, ನಿನ್ನ ಕಪಿ ಚೇಷ್ಟೆ ?” ಎಂದರು ಕೃಷ್ಣಯ್ಯ.

" ಅವರನ್ನೋಡಿದರೇತಕ್ಕೋ ನನ್ನ ಬುದ್ಧಿಯೇ ವಕ್ರವಾಗುತ್ತೆ. ಮಾಡಬಾರದ್ದನ್ನ ಮಾಡೋಣಾಂತನಿಸುತ್ತೆ. ಜಂಭ ವಿಪರೀತ, ರಾಯರಿಗೆ. "

" ಹಾಗೇನೂ ಇಲ್ಲ. ಸ್ವಭಾವ ಕೊಂಚ ಬಿಗು. ಎಲ್ಲರಲ್ಲೂ ಬೆಲ್ಲದಂತಿರೋದಕ್ಕೆ ಅವರಿಂದಾಗದು. ಅಷ್ಟೇ ಅಲ್ಲದೆ ದುರಹಂಕಾರವೇನೂ ಇರಲಾರದು" ಎಂದನು ಗೋಪಿನಾಥ. ಆದರೆ ಸಂಜೀವರಾಯರಿಗೆ ಸಮಾಧಾನವಾಗಲಿಲ್ಲ.

"ಅಷ್ಟೇ ಅಲ್ಲ ಸ್ವಾಮಿ. ಅದೃಷ್ಟದ ಫಸ್ಟ್ ಪ್ರಾಯಸುಗಳೆಲ್ಲ ಅವರಿಗೇನೇ ಮೀಸಲು. ನೋಡಿ, ಅವರ ಯೋಗ್ಯತೆ. ಎಂಥ ಮನೆ, ಎಂಥ ಹೆಂಡತಿ, ಎಂಥ ಪ್ರಾಕ್ಟೀಸು! ಆದ್ದರಿಂದಲೇ ಅವರಿಗೆ ಆ ಗತ್ತು, ಆ ಜೀಕು, ಆ ಠೀವಿ. ಆದರೆ ಮೊನ್ನೆ ಆ ಜಡ್ಜ ನಾಯಿಡು ಬಾಯಿಗೆ ಬಂದ ಹಾಗೆ ಬೊಗಳಿದನಲ್ಲಾ ಇವರೆದುರಿಗೆ ? ಆಗ ಎಲ್ಹೋಗಿತ್ತು ಇವರ ದರ್ಪ, ಇವರ ದೌಲತ್ತು ?"

ಕೆಲವು ದಿನಗಳ ಹಿಂದೆ ಸಬ್ ಕೋರ್ಟಿನಲ್ಲಿ ಒಂದು ಸಾಕ್ಷಿ ವಿಚಾರಣೆಯಾಗುತ್ತಿರುವಾಗ ನಾಯಿಡು ಜಾತಿಯ ಜಡ್ಜರು " ಬ್ರಾಹ್ಮಣರಿಗೆ ಸುಳ್ಳು ಹೇಳಲು ಕಲಿಸಬೇಕೆಂದಿಲ್ಲವಷ್ಟೆ?" ಎಂದು ಮೂದಲಿಸಿ ನುಡಿದರು. ಈ ಆರೋಪ ರಾಘವೇಂದ್ರರಾಯರ ಕಕ್ಷಿಗಾರನನ್ನು ಕುರಿತದ್ದಾದರೂ ಅವರು ಆಕ್ಷೇಪಿಸದೆ ಸುಮ್ಮಗಿದ್ದರು ಗೋಪಿನಾಥಗೆ ಈ ಜಾತಿದ್ವೇಷ ಸಹಿಸಲಾಗದೆ ಎದುರು ಕಕ್ಷಿಯವನಾದರೂ ತಟ್ಟನೆ ಎದ್ದು ನಿಂತು " ಕಲಿಸಬೇಕಾಗಿ ಬಂದರೂ ತಕ್ಕ ಬುದ್ಧಿ ಶಕ್ತಿ ಬ್ರಾಹ್ಮಣೇತರರಿಗೆ ಹೇಗೂ ಇಲ್ಲವಷ್ಟೆ" ಎಂದು ನಗುನಗುತ್ತ ಹೇಳಿ ಜಡ್ಜರ ಬಾಯಿ ಮುಚ್ಚಿಸಿದ್ದನು.

" ಫಸ್ಟ್ ಪ್ರಾಯಿಸ್ ಅನ್ನುವಾಗ ನೆನಪಾಗುತ್ತೆ" ಅಂದರು ಡಾಕ್ಟರು, " ಸಂಜೀವರಾಯರ ತಂದೆತಾಯಿಗೆ ಹೆತ್ತವರ ಸ್ಪರ್ಧೇಲಿ ಮೊದಲನೇ ಬಹುಮಾನ ಸಲತಕ್ಕದ್ದು."

" ಈ ಹೆಗ್ಗಣವನ್ನು ಹೆತ್ತದ್ದಕ್ಕೇನು ?" ಎಂದು ಕೃಷ್ಣಯ್ಯ ಕೇಳಿದರು.

" ಹೆತ್ತದ್ದಕ್ಕಲ್ಲ. ಹೆತ್ತಮೇಲೆ ಕುತ್ತಿಗೆ ಹಿಸುಕಿ ಕೊಲ್ಲದೆ ಈತನಕ ಸಾಕಿದ್ದಕ್ಕೆ. ಅವರ ಸಹಿಷ್ಣುತೆ ಅಸಾಧಾರಣವಾದದ್ದು. ಇದ್ದಾರೇನಯ್ಯಾ, ಅವರ ಪೈಕಿ ಯಾರಾದರೂ ? "

" ಇಬ್ಬರೂ ಹೋಗಿಬಿಟ್ಟರು " ಅಂದರು ಸಂಜೀವರಾಯರು, ಈ ಡಾಕ್ಟರಿಗೆ ಪ್ರತಿ ಹಿಂಸೆ ಹೇಗೆ ಮಾಡಲಿ ಅಂತ ಚಿಂತಿಸುತ್ತ.

" ಬೇಗ ಬಾ, ಅಂದಿದ್ದಾರೋ ಇಲ್ಲವೋ ? "

" ಹೂಂ ಹೋಗುವಾಗ ಸ್ವಸ್ಥವಿರಲಿಲ್ಲ. ಹೋಗಿ ಹೇಳಿಕಳುಹಿಸುತ್ತೇನೆ. ಬರುವಾಗ ಒಬ್ರು ಡಾಕ್ಟ್ರನ್ನ ಕರಕೊಂಬಾ ಅಂದಿದ್ದಾರೆ."

" ಪಾಪ, ಅವರಿಗೇನು ಗೊತ್ತು, ಸ್ವರ್ಗದೊಳಗೆ ಲಾಯರಿಗೂ ಡಾಕ್ಟರಿಗೂ ಪ್ರವೇಶವಿಲ್ಲಾಂತ ? "

" ಈಗ ಸದ್ಯ ಅವರ ಸದ್ಗತೀಗೆ ಒಂದಿಷ್ಟು ಕಾಫಿ ತರಿಸಲೆ ? " ಎಂದು ಕೇಳಿದರು ಸಂಜೀವರಾಯರು.

" ಭಲೆ, ಭೂಪ ! " ಅಂದರು ಕಮ್ತಿಯರು.

" ರಾಜೂ, ರಾಜೂ. "

" ಸಾರ್. " ಕ್ಲಬ್ಬಿನ ಜವಾನ ಹಾಜರಾದ.

" ತಿಂಡಿಯೇನಿದೆ ಹೋಟೇಲಿನಲ್ಲಿ ? "

" ಇಡ್ಲಿ, ದೋಸೆ, ವಡೆ, ಪೂರಿ, ಬೋಂಡ, ಹಲ್ವ, ಮಾಲ್ಪುರಿ—" ತಿಂಡಿಗಳ ಸಹಸ್ರನಾಮೋಚ್ಚಾರಣೆಯಾದ ಬಳಿಕ ಸಂಜೀವರಾಯರು ಸ್ವರ ತಗ್ಗಿಸಿ, " ಈಗ ಸದ್ಯಕ್ಕೇನಿದೆ ಅಲ್ಲಿ ಗೊತ್ತೇ ? " ಎಂದು ಪ್ರಶ್ನಿಸಿದರು.

" ನೋಡಿಕೊಂಬರ್ತೇನೆ. "

" ಥು ! ಮುಟ್ಠಾಳ ! ಇಷ್ಟು ಮಂದಿ ಇಲ್ಲಿ ಕಾದಿರುವಾಗ ? ಹೋಗು ನಡಿ. ಒಂದು ಪೂರಿ, ಒಂದು ಸಿಂಗಲ್ ಕಾಫಿಗೆ ಹೇಳು. "

ಬಾಯಿಯಲ್ಲಿ ನೀರು ಸುರಿಸಿಕೊಂಡು ಕೂತಿದ್ದ ಕಮ್ತಿಯರಿಗೆ ಕೋಪ ಬಂತು. ಅದನ್ನು ನೋಡಿ ಸಂಜೀವರಾಯರಿಗೆ ತುಂಬ ಬೇಸರವಾಯಿತು. ಒಂದು ಲೋಟ ಕಾಫಿಗಾಗಿ, ಒಂದು ತಟ್ಟೆ ತಿಂಡಿಗಾಗಿ, ಆಪ್ತ ಸ್ನೇಹಿತನ ಕೂಡ ಈ ರೀತಿ ಕೋಟಲೆ ಎಬ್ಬಿಸಿದರೆ ಕನ್ನಡಮ್ಮಗೆ ಸುಖ, ಶಾಂತಿ, ಶ್ರೇಯಸ್ಸೆಲ್ಲಿಂದ ? ಪ್ರಗತಿ ಹೇಗೆ ತಾನೇ ಸಾಧ್ಯ ? ಕರ್ಣಾಟಕದ ಏಕೀಕರಣ—

ಅಷ್ಟರಲ್ಲಿ ಕಾಫಿ ಬಂತು. ಕಾಫಿ ಜತೆಗೆ ಹೋಟೇಲಿನ ಮಾಲಕ ಜನ್ನನೂ ಬಂದ. " ಸಿಹಿ ತಿಂಡಿ ಮಾಡೋದಕ್ಕೆ ಸಾಕಷ್ಟು ಸಕ್ಕರೆ ಸಿಗೋದಿಲ್ಲ. ಸಿಕ್ಕಿದ್ದನ್ನ ತಿಂಡಿಗೆ ಹಾಕಿದರೆ ಕಾಫಿಗೆ ಬರೋದಿಲ್ಲ. ಕಂಟ್ರೋಲಿಗೆ ಮೊದಲು ಸಕ್ಕರೆ ಕಾಫಿಯ ರುಚಿಯೇ ಗೊತ್ತಿಲ್ಲದವರು ಸಹ ಈಗ ಬೆಲ್ಲದ ಕಾಫಿ

ಮುಟ್ಟಿ ನೋಡೋದಿಲ್ಲ. ಇತ್ತೀಚೆಗೆ ತೆರೆದ 'ವಸಂತ ಕಫೆ'ಗೂ ತಿಂಗಳೊಂದರ ಹತ್ತು ಗೋಣಿ ಸಕ್ಕರೆ ಸಿಗುತ್ತಿರುವಾಗ ಹನ್ನೆರಡು ವರ್ಷಗಳಿಂದಲೂ ಕ್ಲಬ್ಬಿನ ಮಹಾಶಯರ ಆಶ್ರಯದಲ್ಲಿ ಸೇವೆ ಸಲ್ಲಿಸುತ್ತಿದ್ದವನಿಗೆ ಮೂರು ಗೋಣಿಗೂ ಗೋಳೈಸುತ್ತಾರೆ" ಅನ್ನುತ್ತ ತನ್ನ ಹೊಟ್ಟೆಯುರಿಯನ್ನು ಹೇಳಿಕೊಂಡ. ಗೋಪಿನಾಥ ಆತಗೆ ಸಮಾಧಾನ ಹೇಳಿ ಎಲ್ಲರಿಗೂ ಕಾಫಿ ತಿಂಡಿ ತರುವಂತೆ ಹೇಳಿಕಳುಹಿಸಿದನು.

ಆತ ಹೋದಮೇಲೆ ಒಂದು ವಿಶೇಷ ವರ್ತಮಾನವಿದೆಯೆಂತ ಕೃಷ್ಣಯ್ಯ ಪ್ರಾರಂಭಿಸಿದರು. "ಕಂಟ್ರೋಲನ್ನುವಾಗ ಜ್ಞಾಪಕ ಬಂತು. ಅಕ್ಕಿಯ ಸಂಗ್ರಹಣ, ಹಂಚೋಣದ ವಿಧಾನ ವ್ಯವಸ್ಥೆಯೆಲ್ಲವೂ ತೀರ ಕೆಟ್ಟುಹೋಗಿದೆಯಲ್ಲ. ಆದರ ಪಾರುಪತ್ಯ ಪೂರಾ ತಮಗೇನೇ ಒಪ್ಪಿಸಿಕೊಟ್ಟರೆ ಎಲ್ಲಾ ಸರಿಹೋಗುತ್ತೇಂತ ವರ್ತಕರ ಪಂಥವಲ್ಲವೆ? ಈಗವರು ತಮ್ಮ ಕಡೆಯಿಂದ ರಾಯಭಾರಿಯಾಗಿ ಮದ್ರಾಸಿಗೆ ಹೋಗಿ ಕೆಲಸ ಪೂರೈಸಿಕೊಂಡು ಬರೋದಕ್ಕೆ ರಾಘವೇಂದ್ರರಾಯರನ್ನು ಆರಿಸಿದ್ದಾರೆ. ರಾಘವೇಂದ್ರ ರಾಯರು ಒಪ್ಪಿಕೊಂಡಿದ್ದಾರಂತೆ."

"ಆಗಲೇ ಹೇಳಿದ್ರೆ ಅವರ ಲೆಕ್ಕಕ್ಕೆ ನಿಮಗೆಲ್ಲ ಭಾರೀ ಔತಣ ಮಾಡಿಸುತ್ತಿದ್ದೆವಲ್ಲ?"ಎಂದು ಸಂಜೀವರಾಯರು ವ್ಯಥೆಪಟ್ಟರು.

"ಅವರು ಹೋಗೋದು ಯಾವಾಗಾಂತ ಗೊತ್ತೆ?" ಎಂದು ಗೋಪಿನಾಥ ಕೇಳಿದನು.

"ಸದ್ಯಕ್ಕೇ ಇರಬೇಕು. ಇದರಿಂದಾಗಿ ನಮ್ಮ ನಮ್ಮೊಳಗೆ ಪಕ್ಷವಿಪಕ್ಷಗಳಾಗಿ ಒಡಕು ಬರುವ ಸಂಭವವಿದೆಯೋ ಏನೆಂತ ತಿಳಿಯೋದಕ್ಕೆ ಈ ಪ್ರಸ್ತಾಪವೆತ್ತಿದೆ."

"ಅಲ್ವೇ? ನನ್ನ ಮಟ್ಟಿಗೆ ಹೀಗಿದೆ. ಕಮ್ತೇರಿದ್ದಲ್ಲಿ ನಾನಿಲ್ಲ. ಅವರ್‍ಯಾವ ಪಕ್ಷವೇ ಇರಲಿ" ಅಂದರು ಸಂಜೀವರಾಯರು.

"ಗೋಪಿನಾಥರಾಯರೇ, ನೀವು ಕಮ್ಯುನಿಸ್ಟ್ ಪಾರ್ಟಿಯವರೂಂತ ಕೇಳಿದೆ. ನಿಜವೆ?" ಎಂದು ಕಮ್ತಿಯರು ಕಿರುಕಳ ಎಬ್ಬಿಸಿದರು.

"ನೀವು ವರ್ತಕ ಜಾತಿಯವರು ಎಷ್ಟರಮಟ್ಟಿಗೆ ಕಾಂಗ್ರೆಸ್ಸೋ, ನಾನಷ್ಟರ ಮಟ್ಟಿಗೆ ಕಮ್ಯುನಿಸ್ಟು. ಸರಕಾರವನ್ನೆದುರಿಸುವಾಗ ಸಮತಾವಾದ

ನೆರವಾಗುತ್ತೆ. ಸರಕಾರ ಇನ್ನುಮುಂದೆ ಯಾವ ಪಂಥವನ್ನು ಖಂಡಿಸುವುದೋ ನೋಡಬೇಕು. ಆತನಕ ನಾನು ಯಾವ ಮೆಂಬರಿಕೆಗೂ ಸಹಿ ಹಾಕುವಂತಿಲ್ಲ" ಎಂದು ಕಟುತರವಾಗಿ ಉತ್ತರಕೊಟ್ಟನು.

" ಸರಕಾರದ ಕೈ ಸಾಹುಕಾರರ ಕಿಸೆಯೊಳಗೆ. ಸಾಹುಕಾರರ ಕೈ ನಮ್ಮ ಹೊಟ್ಟೆಯೊಳಗೆ. ಆದರೆ, ಕೃಷ್ಣಯ್ಯ, ನೀವೀ ಉತ್ಪಾತಕ ಸಂಗ್ತೀನ ನಡುವೆ ತಂದು ಹಾಕಿ ನನಗೂ ಕಮ್ತೇರಿಗೂ ಇರೋ ಅಚ್ಚುಮೆಚ್ಚನ್ನು ಒಡೆದು ಬಿಡೋ ತಂತ್ರ ಹೂಡಬಾರದು ನೋಡಿ. ನಿಮ್ಮ ಕೆಲಸವೇ ಇಷ್ಟು. ನಮ್ಮ ಗುಟ್ಟು ಅವರಿಗೆ, ಅವರ ಗುಟ್ಟು ನಮಗೆ ಹೇಳೋದು. ತಲೆ ತಲೆ ಗಂಟು ಹಾಕೋದು. ಏನು ಕಮ್ತೇರೆ, ಕಾಫಿ ದಾರಿ ನೋಡ್ತಿದ್ದೀರಾ ? ಬಂದೇ ಬಿಟ್ಟಿತಲ್ಲ, ಸರಬರಾಯಿ ! ಸಿಗರೇಟು ? ಇಲ್ವೇನಯ್ಯಾ? ಏನನ್ಯಾಯಾಂದ್ರೆ! ರಾಜೂ!"

" ಸಾರ್. "

" ಗೋಪಿನಾಥರಾಯರಿಗೆ ಒಂದು ಪೆಟ್ಟಿಗೆ Gold Flake " ಅನ್ನುತ್ತ ಸಂಜೀವರಾಯರು ಆರ್ಡರು ಕೊಟ್ಟರು.

೧೨

ಮಾಲತಿಗೆ ನೆಮ್ಮದಿಯಿರಲಿಲ್ಲ. ಪದೇ ಪದೇ ಪಂಬಿಯದೇ ನೆನಪು. ಆ ಮಗುವನ್ನು ಎತ್ತಿ ಬಿಗಿದಪ್ಪಿಕೊಂಡು ದೇವರನ್ನು ಹೊತ್ತವರಂತೆ ಮೈಮರೆತು ಗೋಪಿನಾಥನೊಂದಿಗೆ ನಡೆದುಬಂದ ಅಪೂರ್ವಾನುಭವದ ಸವಿಯು ಆಕೆಯ ದಿನಚರ್ಯೆಯ ರುಚಿಯನ್ನೇ ಕೆಡಿಸಿತ್ತು. ಆತನಕ ಹೃದಯದ ಅಂತರಾಳದಲ್ಲಿ ತೊಟ್ಟಿಲು ಕೂಸಿನಂತಿದ್ದ ಆಕೆಯಾಸೆ ಒಂದೆರಡು ದಿನಗಳಲ್ಲೇ ಬೆಳೆದು ಆಕೆ ಹೋದಲ್ಲೆಲ್ಲಾ ಬೆಂಬಿಡದೆ ಹಿಂಬಾಲಿಸಲಾರಂಭಿಸಿತು. ಈ ಕಾಟ ತಡೆಯಲಾರದೆ ಕೆಲವು ವೇಳೆ ಆಕೆ ಒಂದೆಡೆ ಕೂತು ಯೋಚಿಸುವಳು. ಮಕ್ಕಳಿಗಾಗಿ ಹಂಬಲಿಸುವುದೇತಕ್ಕೆ ? ಮಕ್ಕಳಿಲ್ಲದಿದ್ದರಾಗುವುದಿಲ್ಲವೆ ? ಎಷ್ಟೋ ಮಂದಿ ಮಕ್ಕಳಿಲ್ಲದಿರುವವರು ಸುಖದಿಂದಿಲ್ಲವೆ ? ಪಾಶ್ಚಾತ್ಯ ಸ್ತ್ರೀಯರಂತೂ ಮಕ್ಕಳಾಗದಂತೆ ಶತಪ್ರಯತ್ನ ಮಾಡುತ್ತಾರೆ. ಸ್ವೈರಿಣಿಯರೆ? ಅಹುದು. ಆದ್ದರಿಂದಲೇ ಅವರ ಜೀವನದಲ್ಲಿ ಅಷ್ಟೊಂದು ಸ್ವತಂತ್ರ, ಸ್ವಾರಸ್ಯ. ಸ್ವಾರ್ಥವಿಲಾಸಕ್ಕೆ ಹೇಗೋ ಸಮಾಜ ಸೇವೆಗೂ ಅನುಕೂಲ

ಮಕ್ಕಳಕಾಟವಿಲ್ಲದಿದ್ದರೆ ತಾಯ್ತನವೇ ಹೆಂಗಸರ ಹೆಗ್ಗುರಿಯೆಂದು ನಂಬಿ ಹೊತ್ತು ಹೆತ್ತು ಹೇಸಿಗೆಯನ್ನು ಬಳಿದು ಎದೆಯೊಣಗಿಸಿ, ತಲೆಗೆದರಿ, ಏತಕ್ಕಾಗಿ ಹೆಣಗಾಡಬೇಕು? ಹಣ್ಣು ಕಾಯಿ ಹರಕೆಗಳ ಪ್ರಭಾವದಿಂದಾಗಲಿ, ಔಷಧ ಒಪರೇಶನುಗಳ ಪ್ರಯೋಗದಿಂದಾಗಲಿ ಒಂದು-ಹೆಣ್ಣೊ ಗಂಡೋ—ಹುಟ್ಟಿಕೊಂಡಿತು ಅನ್ನುವ. ಅದು ಹೇಗಿರುತ್ತೇಂತ ಏನು ಗೊತ್ತು? ಪ್ರಭೆಯಂತೆ ಗಟ್ಟಿಮುಟ್ಟಾಗಿ ಮುದ್ದುಮುದ್ದಾಗಿದ್ದರೆ ಸರಿಯೆ. ಮಂಗನ ಮರಿಯ ಹಾಗಿದ್ದರೆ? ಸಾಯುವ ತನಕವೂ ನಿತ್ಯನರಕ !

ಆದರೂ ಸುಬ್ರಮಣ್ಯಕ್ಕೆ ಹರಕೆ ಹೇಳಿಕೊಳ್ಳುವಷ್ಟು ಸುಲಭವಾಗಿದ್ದರೆ? ಹೇಳದೆ ಕೇಳದೆ ಅಪ್ಪಿತಪ್ಪಿ ಹುಟ್ಟುವ ಮಕ್ಕಳಿಗಿಂತ ವರಪ್ರಸಾದವಾದ ಸಂತತಿ ಚೆನ್ನಾಗಿರಲಾರದೆ? ಒಂದು ಕೈ ನೋಡಬಹುದಿತ್ತು, ನೋಡ್ತಿಯಲ್ಲಿ, ಎಂದನಿಸುತ್ತಿತ್ತು ಈಮಧ್ಯ. ಆದರೆ ಹರಕೆ ಹೇಳಿಕೊಳ್ಳುವಷ್ಟು ಶ್ರದ್ಧೆ ಮಾಲತಿಗಿರಲಿಲ್ಲ. ಮಂತ್ರಯಂತ್ರಗಳ ಮಹಿಮೆಯಿಂದ ಹಣೆಬರಹವನ್ನು ಅಳಿಸಲಿಕ್ಕಾಗಲಿ ಬದಲಿಸಲಿಕ್ಕಾಗಲಿ ಸಾಧ್ಯವಿದೆಯೆಂದು ಆಕೆ ನಂಬಿರಲಿಲ್ಲ. ಜಗನ್ನಿಯಾಮಕ ತನ್ನ ವಿಧಿಯನ್ನು ತಾನೇ ಮೀರಬಲ್ಲನೆ? ಹಾಗಿದ್ದರೆ ಪ್ರಪಂಚದಲ್ಲಿ ನಿಶ್ಚಿತವಾದುದು ಶಾಶ್ವತವಾದುದು ಯಾವುದೂ ಇರಲಾರದಲ್ಲ? ಪರಮಾತ್ಮ ಭಕ್ತವತ್ಸಲ, ಭಕ್ತಪರಾಧೀನ ಅನ್ನುತ್ತಾರೆ, ನಿಜ. ಅಂದರೆ ಭಕ್ತಗೆ ಮೀರಿದ ಶಕ್ತಿಯೇ ಇಲ್ಲವೆಂದರ್ಥವೇ ? ಈರೀತಿ ಭಕ್ತಾದಿಗಳಿಗೆ ಒಲಿದು ಅವರು ಬೇಡಿದ್ದನ್ನು ಕರುಣಿಸುತ್ತಾ ಹೋದರೆ? ಇದೇ ಪ್ರಭುತ್ವದ ಪರಿಪೂರ್ಣ ಸ್ವರೂಪವೋ ಏನೋ ಯಾರಿಗೆ ಗೊತ್ತು ?

ಹರಿಯು ಒಲಿಯಬೇಕಾದರೆ ಹರಕೆಯಲ್ಲಿ ಶ್ರದ್ಧೆಯಿರಬೇಕು. ಅನುಮಾನಗಳಿಂದ ಮಲಿನವಾದ ಮನಸ್ಸಿನಿಂದ ಮೆಚ್ಚಿಸಲು ಹೇಗೆ ತಾನೆ ಸಾಧ್ಯ? ಮಡಿಯಾದ ಭಕ್ತಿಯನ್ನು ತರುವುದೆಲ್ಲಿಂದ? ಭಕ್ತಿಯಿಂದ ಬೇಡುವುದೂ ಒಂದುಬಗೆಯ ಅವಿಶ್ವಾಸ. ದೇವರು ಅನುಗ್ರಹಿಸಿದ್ದು ಸಾಲದೆ ಇನ್ನೂ ಬೇಕು ಬೇಕೆನ್ನುವುದು ಜಗದ್ರಚನೆಯಲ್ಲಿ ವಿಧಿವಿನ್ಯಾಸದಲ್ಲಿ ಅತೃಪ್ತಿಯಿದ್ದರೆ ಮಾತ್ರ. ಸಂತೃಪ್ತಿಗೆ ಪ್ರಾರ್ಥನೆ ಪ್ರದಕ್ಷಿಣೆಗಳ ಅವಶ್ಯಕತೆಯೇನು ? ಬೇಡುವುದಲ್ಲದೆ ಪ್ರಾರ್ಥನೆಯಿಂದೇನುಪಯೋಗ ? ನಮ್ಮ ಅರಿವಿಗೆ ಮೀರಿದ ಹರಿಯ ಸ್ತುತಿ ಸ್ತೋತ್ರವೆ? ಏನು ಹುಚ್ಚು! ಏನು ಅಹಂಕಾರ ಅಥವಾ ಸಮಸ್ತರೂ

ಹಗಲೂ ರಾತ್ರಿಯೂ ಆತನ ಧ್ಯಾನನಿರತರಾಗಿ ತಮ್ಮತಮ್ಮ ಕೆಲಸಗಳನ್ನು ತೊರೆದರೆ ಆತಗೆ ಹೇಗಾಗಬೇಕು ? ಆದ್ದರಿಂದಲೋ ಏನೋ ಶ್ರೀಕೃಷ್ಣ ಗೋಪಿಕಾಸ್ತ್ರೀಯರ ಹಾವಳಿಯನ್ನು ಸಹಿಸಲಾರದೆ ಆಗಾಗ ಅದೃಶ್ಯನಾಗಿ ತಪ್ಪಿಸಿಕೊಳ್ಳುತ್ತಿದ್ದುದು. ಜಗವೆಲ್ಲ ಭಗವಂತನ ನಾಮಾವಳಿಯನ್ನುಚ್ಚರಿಸುತ್ತ ಆತನನ್ನು ಹೋದಲ್ಲಿ ಬಿಡದೆ ಹಿಂಬಾಲಿಸುತ್ತ ಆತನ ಕಾಲು ಕಟ್ಟಿಕೊಂಡು ಕೈಮುಗಿದುಕೊಂಡು ಮುತ್ತಿಗೆ ಹಾಕುವ ವಿಶ್ವದೃಶ್ಯವನ್ನು ನೆನೆನೆನೆದು ಮಾಲತಿ ನಕ್ಕಳು.

ದೇವರಲ್ಲಿ ಭಕ್ತಿ, ಭಯ, ನಂಬಿಕೆ ಎಂಬುದರ ಅರ್ಥವೇ ಆಗಲಿಲ್ಲ ಮಾಲತಿಗೆ. ತಾನೇ ಬದುಕು. ದೈವಾಂಶ ತನ್ನಲ್ಲಿದ್ದ ಮಟ್ಟಿಗೆ ತಾನೇ ದೇವರು. ಬದುಕಿದ್ದರೆ ದೇವರು ದಿಂಡರು. ಇಲ್ಲದಿದ್ದರೆ ಸಾವು, ಶೂನ್ಯತೆ. ಸುಖಜೀವನಕ್ಕೆ ಕುತೂಹಲಿಗಳು ಮಕ್ಕಳು. ಸುಖಸಾವಿಗೆ ಕುತೂಹಲಿಗಳು ಮುದುಕರು. ಆದರೆ ಮಕ್ಕಳು ಆಜನ್ಮ ನಾಸ್ತಿಕರು. ಅವರ ಪ್ರವೃತ್ತಿಯಲ್ಲಿ ದೇವರಿಗೆ ಜಾಗವಿಲ್ಲ. ದೇವರ ಧ್ಯಾನಕ್ಕೆ ಅವಕಾಶವಿಲ್ಲ. ಪರಸೇವಾಸಕ್ತರಿಗೂ ಹಾಗೇ. ದೇವರ ಸೇವೆಗೆ ಬಿಡುವಿಲ್ಲ. ಲೋಕರಹಸ್ಯಗಳನ್ನು ಕಲಿಯುವವರಿಗೆ, ಹೊಸತನ್ನು ಕಲ್ಪಿಸುವವರಿಗೆ ದೇವರ ಕಾಟವೇ ಇರಲಾರದು. ಮಕ್ಕಳಿಗೆ ತಿಳುವಳಿಕೆಯಿಲ್ಲವೆ ? ಇದೆ ; ಬೇಕಾದಷ್ಟಿದೆ· ಕಲ್ಪನಾಶಕ್ತಿಯಿದೆ. ಭಯ, ಸಂಶಯ, ಆಸೆಗಳಿಂದ ತುಂಬಿದ ಸಮಸ್ಯೆಗಳಿವೆ. ಅವರ ತಲೆತುಂಬ ಒಗಟುಗಳೇ. ಸುತ್ತಮುತ್ತಲಿನ ನಿಸರ್ಗದ ವಿಚಾರ, ಹಿರಿಯರ ವಿಚಾರ, ಲೈಂಗಿಕ ವಿಚಾರ, ಆಟಪಾಟ ತಿಂಡಿತೀರ್ಥಗಳ ವಿಚಾರ, ಇವೆಲ್ಲ ವಿಚಾರಪರಂಪರೆಗಳೂ ಮಕ್ಕಳ ಗೂಢಾಲೋಚನೆಗಳಿಗೆ ಆಸ್ಪದವಾದವುಗಳು. ಆದರೆ ದೇವರು, ಪೂಜೆ, ಪ್ರಾರ್ಥನೆ ಇವೆಲ್ಲ ಹಿರಿಯರ ಅನುಕರಣದಿಂದ ಬರಬೇಕಲ್ಲದೆ ರಕ್ತಗತವಾದ್ದಲ್ಲ. ವಯಸ್ಸು ಹೋದಂತೆ, ಸಾವಿನ ನೆರಳು ಕವಿದಂತೆ ಕ್ರಮೇಣ ಕರಗತವಾಗುವ ಊರುಗೋಲುಗಳು ಇವು. ಯೌವನ ಸುಖ ಸಂಪತ್ತುಗಳಿಲ್ಲದವರು, ಅಥವಾ ಇದ್ದು ಕಳಕೊಂಡವರು, ಇಹದಲ್ಲಿ ಕಣ್ಮರೆಯಾದ ಸುಖ ಪರದಲ್ಲಾದರೂ ಲಭಿಸೀತೆಂಬ ಚಪಲದಿಂದ ಕಲ್ಪಿಸಿ ಪ್ರತಿಷ್ಠೆಮಾಡಿದ ಸಂಸ್ಥೆಯೇ ದೇವರು ; ಜನಜಂಗುಳಿಯ ದೇವರು. ನಿಜವಾಗಿ ನೋಡಿದರೆ ದೇಹದ ಪ್ರತಿಯೊಂದು ಕಣದಲ್ಲೂ, ಕಾಲದ ಪ್ರತಿಯೊಂದು ಕ್ಷಣದಲ್ಲಿಯೂ

ಜೀವ ತುಂಬಿ ತುಳುಕುತ್ತಿದ್ದರೆ ಅದೇ ದೇವತ್ವ. ಅದೇ ಧ್ಯಾನ, ಅದೇ ಭಜನೆ, ಅದೇ ಸಂಕೀರ್ತನೆ. ಬೇರೊಂದು ದೇವರಿಲ್ಲ. ತಾನೇ ತನ್ನ ಮಟ್ಟಿನ ದೇವರಂದ ಮೇಲೆ ಯಾರು ಯಾರಿಗೆ ಪ್ರದಕ್ಷಿಣೆ ಬರುವುದು? ತನ್ನ ಪಾಲಿಗೆ ಬಂದುದರಲ್ಲಿ ತೃಪ್ತಿಯಿದ್ದರೆ ಬಯಸುವುದ್ಯಾವುದನ್ನು ?

ಈ ರೀತಿ ವಿವೇಚನಾವ್ಯೂಹದಲ್ಲಿ ಸಿಲುಕಿ ಬೀಳುವಳು. ಮಧ್ಯಮಧ್ಯ ಕುಚೇಷ್ಟೆ ಮಾಡುತ್ತ ತಾನೇ ನಗುವಳು. ಸುಬ್ರಮಣ್ಯನಿಗೇನೇ ಹರಕೆ ಹೊರ ಬೇಕೆಂತೇನು ನಿಯಮ ? ಆತ ಹೆರಿಗೆ ಇಲಾಖೆಗೆ ಅಧಿಪತಿಯೇ ? ಆದರೆ ಹಾಸ್ಯಪ್ರಿಯೆಯಾದರೂ ಮಾಲತಿ ನಕಲಿಗಾಗಿ ಪವಿತ್ರವೆನಿಸಿದ ವಿಷಯ ಗಳನ್ನು ಅಪಹಾಸ್ಯ ಮಾಡುತ್ತಿರಲಿಲ್ಲ. ಕಟ್ಟು ಕಟ್ಟಳೆಯ ಬ್ರಾಹ್ಮಣಾಚರಣೆ ಆಕೆಯನ್ನು ತೀರ ಬಿಟ್ಟಿರಲಿಲ್ಲ. ಅತ್ತೆ ನೆನಪು ಮಾಡಿದಾಗ, ಹಬ್ಬ ಹುಣ್ಣಿಮೆ ಬಂದಾಗ ದೇವರಿಗೆ ದೀಪ ಹಚ್ಚುವುದು, ತುಳಸಿಕಟ್ಟೆಗೆ ಪ್ರದಕ್ಷಿಣೆ ಬರುವುದು, ಗೌರಿಪೂಜೆ ಮೊದಲಾದ ವ್ರತಗಳನ್ನು ಕೈಲಾದಷ್ಟು ಮಾಡುವುದು ಇದೆಲ್ಲ ಸಂಭ್ರಮವೂ ಇತ್ತು. ಆದರೆ ಮುಕ್ಕಾಲು ಪಾಲು ಶಾರದಮ್ಮನಿಗಾಗಿ ಸಲ್ಲಿಸುವ ಸೇವೆಯಾಗಿತ್ತು. ಒಂದು ರೀತಿಯ ಅಂಧಶ್ರದ್ಧೆಯೂ ಇತ್ತು, ಆಕೆಯಲ್ಲಿ. ಗಭೀರವಾದ ಅಮಾನುಷ ಶಕ್ತಿಯ ಎದುರು ಸಹಜವಾಗಿ ಉದ್ಭವ ವಾಗುವ ಭಯಭಕ್ತಿ ವಿನಯಗಳು ಮಾಲತಿಯಲ್ಲೂ ಆವಿರ್ಭವಿಸುತ್ತಿದ್ದುವು. ಆದರೆ ದೀರ್ಘಕಾಲ ಉಳಿಯುತ್ತಿರಲಿಲ್ಲ. ಆಧುನಿಕ ಒಡಕುಗಳ ಸೆರೆಗಳಿಂದ ಸೋರಿಹೋಗುತ್ತಿತ್ತು.

ಭಾನುವಾರ ರಾಘವೇಂದ್ರರಾಯರು ಗೋಪಿನಾಥರಾಯರಲ್ಲಿಗೆ ಹೋಗು ವವರಿದ್ದಾರೆ. ತಾನೂ ಜತೆಗೆ ಹೋಗಬೇಕೆಂಬಾಸೆ ಮಾಲತಿಗೆ. ಬೆಳಗ್ಗಿಂದ ಈ ಪ್ರಸ್ತಾಪವನ್ನೆತ್ತಬೇಕೆಂಬ ಹವಣಿಕೆಯಿಂದ ಹೊಂಚುಹಾಕುತ್ತಿದ್ದರೂ ಆಕೆಗೆ ಸರಿಯಾದ ಎಡೆಯೇ ದೊರೆಯಲಿಲ್ಲ. ಅವರು ಕಾಫಿ ಕುಡಿದು ಆಫೀ ಸಿಗೆ ಹೋಗಿ ಕುಳಿತವರು ಒಂಭತ್ತು ಗಂಟೆತನಕ ಒಳಗೆ ಬರಲಿಲ್ಲ. ಆ ಮೇಲೆ ಅವಸರದಿಂದ ಬಂದು ಕಲೆಕ್ಟರರ ಆಹಾರ ಸಮಿತಿ ಅಧಿವೇಶನವಿದೆ, ಹೋಗ ಬೇಕು, ಹಿಂತಿರುಗಿ ಬರುವಾಗ ಗಂಟೆ ಹನ್ನೆರಡಾಗಬಹುದು ಎಂದು ತಿಳಿಸಿ ಬಿಟ್ಟು ಹೊರಟೇ ಹೋದರು. ಈ ನಡುವೆ ಮಾತನಾಡಿ ಕೇಳುವಷ್ಟು ಧೈರ್ಯ ಆಕೆಗಿರಲಿಲ್ಲ. ಕಳ್ಳರ ಮನಸ್ಸು ಹುಳ್ಳಹುಳ್ಳಗೆ. ನೀನ್ಯಾಕೆ, ಸುಮ್ಮಗೆ ಅಂದು

ಬಿಟ್ಟರೆ ? ಪ್ರಭೆಯನ್ನು ನೋಡೋದಕ್ಕೆ ಅನ್ನಬಹುದು, ನಿಜ. ಆದರೆ ಅದು ಪೂರಾ ಸತ್ಯವೆ? ಅವರು ಆವಾಂತರದಲ್ಲಿ ಹಿಂದುಮುಂದು ನೋಡದೆ ಏನಾದರೂ ಹೇಳುವುದುಂಟು. ಹಾಗೆ ಬೇಡ ಅಂದುಬಿಟ್ಟರೆ ? ಚರ್ಚಿಸಬೇಕು, ವಾದಿಸಬೇಕು. ಅದಕ್ಕೆಲ್ಲ ಸಾಕಷ್ಟು ಸಮಯಬೇಕು. ಕಚೇರಿಗಳಲ್ಲಿ ಪ್ರಮಾಣ ಮಾಡುತ್ತಾರಲ್ಲ ಸುಳ್ಳು ಸಾಕ್ಷಿಯವರು: ಸತ್ಯವನ್ನೇ ನುಡಿಯುತ್ತೇನೆ, ಇದ್ದ ಸತ್ಯವನ್ನೆಲ್ಲಾ ನುಡಿಯುತ್ತೇನೆ, ಸತ್ಯ ಹೊರತು ಬೇರೊಂದು ನುಡಿಯುವುದಿಲ್ಲಾಂತ. ಹಾಗೆ ಮಾಡಲು ಮಾಲತಿಗೆ ಬಾಯಿಬರಲಿಲ್ಲ.

ಗಂಡ ಹೋದ ಮೇಲೆ ಅಡುಗೆಮನೆಗೆ ಹೋದಳು. ಅಲ್ಲಿ ಶಾರದಮ್ಮ ತರಕಾರಿ ಹೆಚ್ಚುತ್ತ ಕುಳಿತಿದ್ದರು. ಮಡಿಸ್ನಾನ ಮಾಡಿಬಂದ ಭೀಮಾಚಾರ್ಯರು ಎರಡು ಗೇಣಗಲದ ಒದ್ದೆ ಅಂಗವಸ್ತ್ರವನ್ನುಟ್ಟು ಒಲೆಯುರಿ ಮಾಡುತ್ತಿದ್ದರು ಅವರ ಹಿಂದೆ ಕಿಡಿಕಿಯಿಂದ ತೂರಿಬಂದ ಎಳೆಬಿಸಿಲು ಸರಳುಸರಳಾಗಿ ಅವರ ನಿರಿಗಟ್ಟಿದ ಬೆನ್ನಮೇಲೆ ಬರೆ ಎಳೆದಿತ್ತು. ಒಲೆಯಿಂದ ಸಣ್ಣ ಹೊಗೆಯೆದ್ದು ಬಿಸಿಲಿನೊಂದಿಗೆ ಬೆರೆಯಲು ಯತ್ನಿಸಿ ಸೋತು, ಮೇಲೆ ಸೂರಿಗೇರಲು ಮನಸ್ಸಿಲ್ಲದೆ ಅಲ್ಲೇ ನೇಲುತ್ತಿತ್ತು.

" ಅಮ್ಮಾ, ಸುಮಿತ್ರೆ ಮನೆಗೆ ಹೋಗಿ ಬರಲೆ ?"

" ಒಂದಿಷ್ಟು ಹಾಲು ಕುಡಿದುಬಿಟ್ಟು ಹೋಗು. ಹೋದರೆ ಬೇಗ ಬರುವುದಿಲ್ಲ. "

" ಹಾಲು ಬೇಡಮ್ಮ. ಸುಮಿತ್ರೆ ಕಾಫಿ ಕುತ್ತಿಗೆಗೆ ಕಟ್ಟದೆ ಬಿಡಳು. ಬೇಗ ಬಂದು ಬಿಡುತ್ತೇನೆ. "

" ಕಾಫಿ ಪರವಾಯಿಲ್ಲ. ಆದರೆ ಹಾಳು ಎಣ್ಣೇಲಿ ಕರಿದ ತಿಂಡಿನೂ ತಿನ್ನಿಸುತ್ತಾಳಲ್ಲ. ಯಾಕಾದೀತು, ಬೆಳಗ್ಗಿನ ಹೊತ್ತಿಗೆ ?"

" ಇಲ್ಲಮ್ಮ, ಕೊಟ್ಟರೂ ತಿನ್ನೋದಿಲ್ಲ. ಅದೇನಮ್ಮ ಅವರಿಗೆಲ್ಲ ಕೊಬ್ರಿ ಎಣ್ಣೇಂದ್ರೆ ಅಷ್ಟು ಪ್ರೀತಿ? ಕಳದ ಸಲ ಚಕ್ಕುಲಿಕೊಟ್ಟಳು. ಕರಿದು ಮೂರು ದಿನವಾಗಿತ್ತಂತೆ. "

"ಅಯ್ಯೋ, ಮೂರು ದಿನಾಂತೀ ! ಒಂದುವಾರ ಸೀಮೆಯೆಣ್ಣೆ ಡಬ್ಬಗಳಲ್ಲಿ ದಾಸ್ತಾನಿಟ್ಟು ಆ ಮೇಲೆ ಮೆತ್ತಗಾದ್ದನ್ನೆಲ್ಲ ತಿರುಗಿ—ಅಪರೇ ಹೇಳ್ತಾರಲ್ಲ—'ಎಣ್ಣೇಲಿ ಹಾಕಿ,' ತಿನ್ನೋದೂ ಇದೆ. ಒಟ್ನಲ್ಲಿ ಈ ಕಡೆ ಊಟ ತಿಂಡಿ ಪರಿಷ್ಕಾರವಿಲ್ಲ. ಹೊಟ್ಟೆ ತುಂಬಿದರೆ ಸರಿ. "

“ ಒಂದು ಗುಣವಿದೆ. ತಾವೂ ತಿನ್ನಬೇಕು. ಬಂದವರಿಗೂ ತಿನ್ನಿಸಬೇಕು”

“ಅವರಿಗೆ ಸುಲಭ. ಮಡಿವ್ಯೆಲಿಗೆ ಎಂಜಲುಮುಸುರೆ ಕಡಿಮೆ. ಇನ್ನೊಂದು ಸಂಗ್ತಿ, ಮಾಲತಿ. ಸಾರಸ್ವತರು ಕೊಂಕಣಸ್ಥರಲ್ಲೆಲ್ಲ ಮಾಂಸಾಹಾರ ಇತ್ತೀಚೆಗೆ ‘ ಫ್ಯಾಶನ್ ’ ಆಗಿದೆಯಂತೆ. ನೀನು ಹುಶಾರಾಗಿರಬೇಕು. ”

“ ಹಾಗೇನೂ ಇರಲಾರದು. ನನಗೆ ಗೊತ್ತು. ಕ್ರೈಸ್ತರ ಸಹವಾಸದಿಂದ ಶೋಕಿನವರು ಕೆಲವರು ಸುರು ಮಾಡಿರಬಹುದು. ನಮ್ಮವರು ಕಲಿತಿಲ್ಲವೇ ಬೆಂಗಳೂರಲ್ಲಿ, ತಿನ್ನೋದಕ್ಕೂ ಕುಡಿಯೋದಕ್ಕೂ ? ಅದೇ ರೀತಿ. ಆದರೆ ಡಾಕ್ಟರಿಗೆ ಅದ್ಯಾವ ದುರಭ್ಯಾಸವೂ ಇಲ್ಲ. ಸುಮಿತ್ರೆಯಂತೂ ತೀರ ನಮ್ಮವರ ಹಾಗೇ ಇದ್ದಾಳೆ. ”

“ ಏನಪ್ಪ, ನನಗಂತೂ ಗೊತ್ತಾಗೋದಿಲ್ಲ. ಈಗಿನವರೆಲ್ಲ ಒಂದೇ ರೀತಿ ಕಾಣ್ತಾರೆ. ನಡೆನುಡಿ ಉಡುಪು ಅಭ್ಯಾಸ ಪ್ರತಿಯೊಂದರಲ್ಲೂ. ಒಂದೇ ಯಂತ್ರದಿಂದ ತಯಾರಾಗಿ ಹೊರಬಿದ್ದವರಂತೆ. ಸೊಗಸ್ಯಾವದು, ಹೊಲಸ್ಯಾವದು ಗೊತ್ತೇ ಆಗೋದಿಲ್ಲ. ”

“ ಅದು ಈಗಿನ ವೇಷ. ನಾಗರಿಕತನದ ಗುರುತು. ಹುಟ್ಟುಗುಣ ಗೊತ್ತಾಗಬಾರದೆಂತಲೇ ಹಾಗಿರೋದು, ಒಬ್ಬರಂತೆ ಇನ್ನೊಬ್ಬರು. ಆದರೆ ಎಷ್ಟು ಮುಚ್ಚಿಕೊಂಡರೂ ನಿಜಸ್ವರೂಪ ಹೊರಬಿದ್ದೇ ಬೀಳುತ್ತೆ. ಸ್ವಲ್ಪ ಕೆರೀಬೇಕು. ”

“ ಮೊನ್ನೆ ನೀನು ಕ್ಲಬ್ಬಿನಲ್ಲಿ ಮಾಡಿದಿಯಲ್ಲ ಹಾಗೇನು ? ” ಎಂದು ತನ್ನೆದುರು ಕುಳಿತು ಸಹಾಯ ಮಾಡುತ್ತಿದ್ದ ಸೊಸೆಯನ್ನು ನೋಡುತ್ತ ಕೇಳಿದರು.

“ ಹೌದೌದು ” ಅನ್ನುತ್ತ ಮಾಲತಿ ನಕ್ಕಳು. “ ಇನ್ನು ನನ್ನ Nice girl ಅಂತನ್ನುವವರು ಯಾರೂ ಇಲ್ಲ. ಅದೊಂದು ಸುಖ. ಸುಮಿತ್ರೆಯಂತೆ ನಾನು ಸಹ Wild cat ನ ವಂಶಸ್ಥಳಾಗಿದ್ದೇನೆ. ಹೋಗಿ ಬರ್ತೇನಮ್ಮ ” ಎಂದು ಎದ್ದು ಹೊರಟುಹೋದಳು.

ಸುಮಿತ್ರೆ ತನ್ನ ಕೋಣೆಯ ಕಿಟಕಿ ಪರದೆಯನ್ನು ಸ್ವಲ್ಪ ಸರಿದು ರಸ್ತೆ ಕಡೆ ಇಣಿಕಿ ನೋಡುತ್ತಿದ್ದಳು. ಮಾಲತಿ ಬರುವುದನ್ನು ನೋಡಿ ಫಕ್ಕನೆ

ಪರದೆಯನ್ನು ಹಾಕಿಬಿಟ್ಟಳು. ಹಜಾರಕ್ಕೆ ಬಂದು ಬಾಯಿ ಮುಚ್ಚಿಕೋ, ಬಿಡಬೇಡವೆಂತ ಕೈಬಾಯಿ ಸನ್ನೆ ಮಾಡಿದಳು ಮಾಲತಿಗೆ. ಆಕೆ ಸದ್ದಿಲ್ಲದೆ ಸುಮಿತ್ರೆಯ ಬಳಿ ಬಂದು ನಿಂತಳು.

"ಸುಮಿತ್ರಾ, ಸುಮಿತ್ರಾ" ಒಳಗಿಂದ ಡಾಕ್ಟರ ಕೂಗು ಕೇಳಿಸಿತು.

"ಯಾರೋ, ಬಂದಿದ್ದಾರೆ, ವೈಟಿಂಗ್ ರೂಮಿನಲ್ಲಿದ್ದಾರೆ."

"ನಾನಿಲ್ಲಾಂದು ಬಿಡೇ, idiot"

"ಅಯ್ಯೋ, ಅರ್ಜಂಟಂತೆ. ಹೆರಿಗೆ ಕೇಸಂತೆ. forcepsಓ ಏನೋ!"

"ಇಲ್ಲಾನ್ನೇ, ಇಲ್ಲಾನ್ನೇ."

"ಅವರೇ ಬಂದುಬಿಟ್ಟರು ನಿಮ್ಮ ಆರ್ಭಟ ಕೇಳಿ.

"ಯಾರದು ನೋಡ್ತೇನೆ, ನನ್ನ ಪ್ರಾಣ ತಿನ್ನೋದು" ಎಂದು ಗರ್ಜಿಸುತ್ತ ಡಾಕ್ಟರು ಧಡಕ್ಕನೆ ಬಾಗಿಲು ತೆರೆದರು. ಸುಮಿತ್ರೆ ಕೇಕೆ ಹಾಕಿ ನಕ್ಕಳು. ಡಾಕ್ಟರು ಬೆಚ್ಚಿ ಬಿದ್ದುದನ್ನು ನೋಡಿ ಮಾಲತಿಗೂ ನಗುಬಂತು. "ನಮಸ್ಕಾರ" ಅಂದಳು.

"ಎಲ್ಲೇ ನಿನ್ನ forceps ಕೇಸು?"

ಅಷ್ಟರಲ್ಲಿ ಸುಮಿತ್ರೆ ಮಾಲತಿಯ ಹಿಂದೆ ಹೋಗಿ ಅಡಗಿದಳು.

"ನಿನ್ನ forceps ಕೇಸು ಯಾರೇ?"

"ಸದ್ಯಕ್ಕೆ ಮಾಲತೀನೇ" ಅನ್ನುತ್ತ ಮಾಲತಿಯನ್ನು ಮುಂದಕ್ಕೆ ದಬ್ಬಿದಳು.

"ನೀನೇನಾದರೂ—" ಎಂದು ಆತುರಪಟ್ಟು ಡಾಕ್ಟರು ವಿಚಾರಿಸುವಷ್ಟರಲ್ಲಿ ಸುಮಿತ್ರೆ ತಿದ್ದಿದಳು. "ನೀವು. ನೀವೇನಾದರೂ—"

"ನೀವೇನಾದರೂ ಔಷಧಕ್ಕಾಗಿ ಬರಲಿಲ್ಲವಷ್ಟೆ?"

"ಬಂದಿದ್ದ ಪಕ್ಷಕ್ಕೆ?"

"ಏನೂ ಇಲ್ಲ. ಪೇಷಂಟ್ಸಿಲ್ಲ ನಿನ್ನ ಹಾಗೆ—"

"ನಿಮ್ಮ ಹಾಗೆ."

"ಥೂ! ಸುಮ್ಮಗಿರೆ ನೀನು. ನಿಮ್ಮ ಹಾಗಿದ್ರೆ ಚೆನ್ನಾಗಿತ್ತು."

"ಅಯ್ಯೋ, ಗ್ರಹಚಾರ!" ಮಾಲತಿಗೆ ಆಶ್ಚರ್ಯವಾಯಿತು.

"ಹಾಗಲ್ಲ. ನಿನ್ನ--ನಿಮ್ಮ ಹಾಗಿದ್ದವರೆಲ್ಲ ಪೇಷಂಟ್ಸಾದ್ರೆ--ಹಾಗೂ ಅಲ್ಲ. ಛೆ! ಪರವಾಯಿಲ್ಲ. ಒಳಗೆ ಬನ್ನಿ. ಕೂತುಕೊಳ್ಳಿ. ಇವೊತ್ತು ನನ್ನ

ತಲೆ ಶೀರ ಹಾಳಾಗಿಬಿಟ್ಟಿದೆ. ನರಗಳೆಲ್ಲ ನುಚ್ಚು ನೂರಾಗಿವೆ."

"ಬೆಳಗ್ಗಿಂದ ಕಾದಿದ್ರೂ ಪೇಷಂಟ್ಸು ಯಾರೂ ಬರಲಿಲ್ವೇನೋ!" ಎಂದು ಮಾಲತಿ ಪಶ್ಚಾತ್ತಾಪ ನಟಿಸಿದಳು. ಸುಮಿತ್ರೆ ಅಧಿಕವಾಗಿ ನಕ್ಕಳು, ಗಂಡನ ಪೆಚ್ಚು ಮೋರೆಯನ್ನು ನೋಡಿ.

"ಚೆನ್ನಾಯಿತು. ನಾಲ್ಕಾಸಾಮಿಗಳಾಯಿತು ಆಗಲೇ. ಇವಳು forceps ಕೇಸೊಂದು ಬಂತು ಅಂದಾಕ್ಷಣ ಮೈಯೆಲ್ಲ ಬೆಂಕಿಯೆದ್ದುಬಿಟ್ಟಿತು. ಹಿಂದಿನ ಬಾಗಿಲಿಂದ ತಲೆ ತಪ್ಪಿಸಿಕೋಬೇಕೂಂತಿದ್ದೆ. ಈಗ ಹೋಗದಿದ್ದುದೇ ಲೇಸಾಯಿತು" ಅನ್ನುತ್ತ ಮುಖತುಂಬ ಮಕ್ಕಳಂತೆ ಮುಗುಳುನಕ್ಕರು.

"ನಿಮ್ಮ ಅರ್ಧಾಂಗೀನ ದ್ವಾರಪಾಲಕಳಾಗಿಟ್ಟಿದ್ರಲ್ಲಾ?"

"ಇವಳೇ? ಇವಳನ್ಯಾರೂ ಗಣ್ಯಮಾಡೋದಿಲ್ಲ. ಡಾಕ್ಟರ ಮಗಳಿರಬೇಕು. ಆಡ್ತಾ ಇದೆ, ಅಂತಂದುಕೊಂಡು ಒಂದೇ ಕೈಯಿಂದ ಎತ್ತಿ ಆಚೆಗಿಟ್ಟು ಬಿಟ್ಟು ಒಳಗೆ ನುಗ್ಗುತ್ತಾರೆ. ಏನು ಮಾಡೋದು? ಪ್ರಾರಬ್ಧ."

"ಒಂದು ದೊಡ್ಡ ನಾಯಿ ಸಾಕಬೇಕು, ಕಾವಲಿಗಾಗಿ."

"ಅದೇನು ಬಾಕಿಯಿಲ್ಲ. ಅದೂ ನೋಡಿದ್ದಾಯಿತು" ಎಂದಳು. ಸುಮಿತ್ರೆ. "ಒಂದು alsation ನಾಯಿ ಸಾಕಿದ್ವಿ, ಇಲ್ಲಿಗೆ ಬಿಡಾರ ಬರೋ ಮುಂಚೆ. ಆ ನಾಯಿ ಎಷ್ಟು ಜೋರಾಗಿ ಬಿಟ್ಟಿತೂಂದ್ರೆ, ಇದ್ದವರನ್ನೆಲ್ಲಾ ಕಚ್ಚೋದಕ್ಕೆ ಸುರು. ಇನ್ನು ಬಂದ ಪೇಷಂಟ್ಸನ್ನೆಲ್ಲಾ ಇದೇ ಹರಿದು ಹಾಕಿಬಿಟ್ರೆ ತನ್ನ ಕಸಬಿಗೆ ಮೋಸ ಬಂದೀತೆಂಬ ಹೆದರಿಕೆಯಿಂದ ಅದರ ಕಾವಲಿಗೆ ಇವರೇ ಕೂತಕೋಬೇಕಾಗಿ ಬಂತು."

ಡಾಕ್ಟರು ಹ್ಹೊ ಹ್ಹೊ ಹ್ಹೊ ನಕ್ಕರು. "ಕೊಟ್ಟು ಬಿಟ್ಟೆ ಅದನ್ನ. ಇವೊತ್ತಿದ್ದಿದ್ರೆ ಚೆನ್ನಾಗಿತ್ತು" ಅಂದರು.

"ಯಾತಕ್ಕೇ?" ಮಾಲತಿಗೆ ಅನುಮಾನವಾಯಿತು.

"ನೀನು—"

"ನೀವು. ಎಷ್ಟು ಹೇಳಿಕೊಟ್ರೂ ಬರೋದಿಲ್ವಲ್ಲ!" ಎಂದು ಸುಮಿತ್ರೆ ಅಸಹ್ಯಪಟ್ಟಳು. ಡಾಕ್ಟರು ಕೊಂಕಣಸ್ಥರು. ಕೊಂಕಣಿ ಭಾಷೆಯಲ್ಲಿ ಬಹುವಚನದ ರೂಢಿ ಕಡಿಮೆ ಆದರೆ ಸುಮಿತ್ರೆಯ ತಂದೆ ಭದ್ರಾವತಿಯಲ್ಲಿ ಇಂಜನಿಯರಾಗಿದ್ದರಿಂದ, ಅಲ್ಲದೆ ಮನೆಯಲ್ಲೂ ಕನ್ನಡವನ್ನೇ ಮಾತನಾಡು

ತ್ತಿದ್ದದರಿಂದ ಸುಮಿತ್ರೆಗೆ ಕನ್ನಡ ಪರಭಾಷೆಯಾಗಿಲಿಲ್ಲ. ಆಕೆ ಗಂಡನ ಭಾಷೆಯನ್ನು ತಿದ್ದುವ ಪರಿಪಾಟವನ್ನು ಬೇರೆ ಇಟ್ಟುಕೊಂಡಿದ್ದಳು.

"ನೀವು ಬರೋಮುಂಚೆ ಒಬ್ಬ ಪ್ಲಾಂಟರು ಬಂದಿದ್ದ" ಅನ್ನುತ್ತ ಡಾಕ್ಟರು ಮುಂದರಿಸಿದರು. "ಹೆಂಡತೀನ ಪರೀಕ್ಷೆ ಮಾಡಿಸೋದಕ್ಕೆ. ನನಗೆ ಗೊತ್ತಿತ್ತು: ಆ ಕಸಾಯಿ ಇರೋತನಕ ಆಕೆಗೆ ಚಿಕಿತ್ಸೆ ಮಾಡಿ ಪ್ರಯೋಜನವಿಲ್ಲಾಂತ. ಆಕೇನ ಕಾರಿಂದ ಇಳಿಸಿ ಒಳಗೆ ನಡಿಸಿಕೊಂಡು ಬಂದಿದ್ದು ಶೋಫರು. ಆತ ಬಂದೊಡನೆ ಸುರುಮಾಡಿದ್ದು ಆತನ ಕಾರಿನ ಸುದ್ದಿ. ಆ ಹೆಂಗಸನ್ನ ಕರಕೊಂಡು ಹೋಗಿ ನೋಡಿದೆ, ಪಾಪ; ಹೇಳಿದ್ದನ್ನೆಲ್ಲ ಕೇಳಿದೆ. ಒಂದೌಷಧ ಬರೆದುಕೊಟ್ಟೆ. ಆಕೆಗೇನಾಗಿದೆ ಅಂತ ಕೇಳಿದ ಭೂಪತಿ. ಏನೂ ಇಲ್ಲ, ಮೊದಲಿದ್ದದ್ದೇ, ಅಂದೆ. ಏನಯ್ಯ ಹಾಗಂದ್ರೆ ? ಅಂತ ಗದರಿಸಿದ ಗೊರಿಲ್ಲಾ. ನನಗೂ ರೇಗಿತು. 'ಹಾಗಂದ್ರೆ ಇಷ್ಟೇ, ನೀನು ನಿನ್ನ ಕಾರನ್ನಿಟ್ಟುಕೊಂಡಿರೋ ಅರ್ಧದಷ್ಟು ಚೆನ್ನಾಗಿ ನಿನ್ನ ಹೆಂಡ್ತೀನ ಇಟ್ಟುಕೊಂಡಿದ್ರೆ ಆಕೆ ಈ ಸ್ಥಿತಿಗೆ ಬರುತ್ತಿರಲಿಲ್ಲ, ಅಂದೆ.

"Oh, rot! cut it out man. Tell me, what's your fee" ಅನ್ನುತ್ತ ಎದ್ದುನಿಂತ ಗುಮಟ್ರಾಯ. ಐವತ್ತು ಅಂದುಬಿಟ್ಟೆ ತೆಗೆದ ಬಾಯಿಗೆ. ಜೇಬಿನಿಂದ ಒಂದು ಕಟ್ಟು ನೋಟು ತೆಗೆದು ಪರಪರಾಂತ ಐದು ಎಣಿಸಿ ಮೇಜಿನ ಮೇಲೆ ಎಸೆದು ಹೋಗಿ ಕಾರ್ನಲ್ಲಿ ಕೂತುಬಿಟ್ಟ. ಆತನ ಹೆಂಡ್ತೀನ ಸುಮಿತ್ರೆ ಕೈಹಿಡಿದು ಕಾರಿಗೆ ಹತ್ತಿಸಿ ಬಂದಳು."

"ಅಂಥ ಗಂಡಸರೂ ಇದ್ದಾರಲ್ಲ." ಅಂತ ಮಾಲತಿ ವಿಸ್ಮಿತಳಾದಳು.

"ಓಹೋ, ಬೇಕಾದಷ್ಟಿದ್ದಾರೆ. ನನಗೆ ಆಶ್ಚರ್ಯವಾದ್ದು ಅದಲ್ಲ. ನಾನು ಹಾಗಂದ್ರೂ ಪ್ರಾಣಿಗೆ ಒಂದಿಷ್ಟು ಕೋಪ ಬರಬೇಡವೆ? ಉಹುಂ, ತನ್ನಷ್ಟಕ್ಕೆ ನಗ್ತಾ ಇದ್ದ, ನೀಚ."

"ನನಗೆ ಕಂಡದ್ದು ಬೇರೆ. ಒಳಗಿಂದ ಒಂದಿಷ್ಟು Arsenic ಓ, Cyanide ಓ ಮತ್ತೊಂದನ್ನೋ ಆಕೆಗೆ ಕೊಟ್ಟು, ರಾತ್ರೆ ಹಾಲಿಗೆ ಬೆರೆಸಿ ಒಂದಾ ನಿನ್ನ ಗಂಡಗೆ ಕೊಡು, ಅಥವಾ ನೀನೇ ತೆಗೆದುಕೋ ಅಂತ ಹೇಳಿಬಿಟ್ಟು ಕಳುಹಿಸೋಣ ಅನ್ನಿಸಿತು"

"ಅವಳೇನು ಮಾಡ್ಯಾಳು ಪಾಪ!" ಅಂದಳು ಮಾಲತಿ.

" ಪಾಪಕ್ಕೇನು ಧಾಡಿ. ಎಲ್ಲಿಗಾದ್ರೂ ಹೋಗಬಾರದೆ, ದೇಶಾಂತರ ? ಬೇಕಾದ್ದುಂಟು. ಕೇಳು ಡಾಕ್ಟರ ಹತ್ರ. "

ಮಾಲತಿ ಡಾಕ್ಟರನ್ನು ತಿರುಗಿ ನೋಡಲು ಅವರು, "ಹೌದು, ಚೆಲ್ಲುವಷ್ಟು ಹಣವಿದೆ. " ಅಂದರು.

" ಮಕ್ಕಳಿದ್ದಾರೇನು ?" ಮಾಲತಿ ಕೇಳಿದಳು.

" ಇದ್ದಾವಪ್ಪ , ಮೂರು; ಅಂತರಂತರ. ಒಂದಕ್ಕಿಂತೊಂದು ಚೆಂದ, ತಾಯಿಯ ಹಾಗೆ " ಅಂದರು ಡಾಕ್ಟರು, "ಈಗ ತಿರುಗಿ ಮೂರು ತಿಂಗಳು. ಈ ಬಾಣಂತನ ಮಾತ್ರ ಆಕೆ ದಾಟುವ ಹಾಗೆ ಕಾಣೋದಿಲ್ಲ. "

ಮಾಲತಿಗೆ ಚಿಂತೆ ಹತ್ತಿತು. ಇದೇನು ಲೋಕರೀತಿ ? ಆಗಬಾರದವರಿಗೆ ಆಗೋದು, ಬೇಡವೆನ್ನುವವರಿಗೆ ಬರೋದು; ಅಂಗಲಾಚಿ ಬೇಡುವವರಿಗೆ ಕೈ ಬರಿದಾಗಿರೋದು. ಈ ಕ್ರೂರ ವಿಡಂಬನದ ಅರ್ಥವೇನು ? ಇನ್ನೊಂದು ಒಗಟು. ಹೆಂಗಸರು ತಮ್ಮ ಆಧೀನದಲ್ಲೇ ತಾವಿರುವ ಅನುಕೂಲತೆ ಇದ್ದರು ಸಹ ಪುರುಷಪರಾಧೀನರಾಗಿರಲು ಕಾರಣವೇನು ? ಸ್ತ್ರೀಯರಿಗೆ ಸ್ವಾತಂತ್ರ್ಯ ಸಿಕ್ಕಿದರೂ ಬೇಡವೆ ? ಸ್ತ್ರೀಸ್ವಾತಂತ್ರ್ಯವೆಂಬುದು ಗಂಡಸು ಕಂಡ ಕನಸೆಂಬ ಮಾತು ನಿಜವಾಗಿರಬಹುದೆ ? ಎಂದು ಮನಸಿನಲ್ಲೇ ಮೆಲುಕು ಹಾಕುತ್ತ ಮನೆಗೆ ಹಿಂತಿರುಗಿದಳು.

## ೧೩

ಮಾಲತಿ ಮನೆಗೆ ಬಂದ ಅರ್ಧತಾಸಿನೊಳಗೆ ರಾಘವೇಂದ್ರರಾಯರು ಮರಳಿ ಬಂದರು. ಬರುವಾಗಲೇ ಅವರ ಮುಖ ಯಾವುದೋ ಅಸಮಾಧಾನ ದಿಂದ ಕಳೆಗುಂದಿತ್ತು. ಊಟವಾಗುವ ತನಕ ಮಾಲತಿ ಮಾತನಾಡಿಸಲಿಲ್ಲ. ಊಟ ಮುಗಿದು ಎಲೆ ಅಡಿಕೆ ತಯಾರಿಸಿ ಕೊಟ್ಟಮೇಲೆ ಕೇಳಿದಳು.

" ನಿಮ್ಮ ಮೀಟಿಂಗಿನಲ್ಲಿ ಏನು ನಡೆಯಿತು ? "

" ನಡದ್ದೇನು ? ಸರಕಾರದ ಕೈಯೇ ಮೇಲಾಯಿತು. ನಮ್ಮ ಸಾಹಸ ವೆಲ್ಲ ವ್ಯರ್ಥವಾಯಿತು, ವ್ಯರ್ಥ. "

" ಅಂದ್ರೆ, ಆಹಾರ ಸಾಮುಗ್ರಿಗಳ ವಿಷಯದಲ್ಲಿ ಸರಕಾರಕ್ಕೆ ಜನತೆಯ ಸಹಕಾರ ಬೆಂಬಲ ಬೇಡವೇನು ? "

" ಪ್ರಜೆಗಳಲ್ಲಿ ಒಗ್ಗಟ್ಟಿದ್ರೆ ತಾನೇ, ಬೆಂಬಲ, ಸಹಕಾರ ? "

" ಅದೇನು, ಹಾಗಾದರೆ ಕೊಂಗ್ರೆಸ್ಸಿನವರೊಳಗೇ ಒಡಕುಂಟೇನು ? "

" ಕೊಂಗ್ರೆಸ್ಸಿನವರೊಳಗೆ ಮಾತ್ರ ಅಂಥದೇನಾದರೂ ಇದ್ದಿದ್ದರೆ ಮೊದಲೇ ಗೊತ್ತಾಗುತ್ತಿತ್ತು. ಬೇಕಾದ ಪರಿಹಾರ ಮಾಡಬಹುದಿತ್ತು. ಆದರೆ ನಮ್ಮ ಹಿತಶತ್ರುಗಳಿದ್ದಾರಲ್ಲ, ಕಮ್ಯೂನಿಸ್ಟರು, ಅವರನ್ನೇನು ಮಾಡೋದು? ನಮ್ಮವರಾಗಿ ನಮಗೆ ಎದುರು ನಿಲ್ಲತಕ್ಕಂಥವರನ್ನ ? "

" ಅಷ್ಟು ಗ್ರಹಿಕೆಯಿಲ್ಲವೇ ಅವರಿಗೆ ? ತಮ್ಮ ಬಾಯಿಗೆ ತಾವೇ ಮಣ್ಣು ಹಾಕೋದಕ್ಕೆ ? "

" ಏನೋ ? ಅವನ ಹತ್ರ ಕೇಳಬೇಕು, ಗೋಪಿನಾಥನ ಹತ್ರ. "

" ಯಾರಂದ್ರಿ ? "

" ಅವನೇ ಗೋಪಿ; ಇಂದಿರಮ್ಮನ ಮಗ. ಅವನಲ್ಲದೆ ಹೋಗಿದ್ರೆ ಇಂದು ಆಹಾರದ ಯೋಜನೆ ಇಷ್ಟರೊಳಗೆ ನಮ್ಮ ಕೈವಶವಾಗಿ ಬಿಡುತ್ತಿತ್ತು. ಆತ ಅಡ್ಡಕಾಲಿಟ್ಟಾನಂತ ನಾವ್ಯಾರೂ ಗ್ರಹಿಸಲಿಲ್ಲ. ನನ್ನ ಕೈಸೇರಿದ್ದನ್ನು ಕೆಡವಿಬಿಟ್ಟ, ಘಟಿಂಗ. "

" ಅವರು ಸಹ ಕೊಂಗ್ರೆಸ್ಸಿನವರೇ ಆಗಿದ್ರಲ್ಲಾ ? "

" ಈಗಲೂ ಕೊಂಗ್ರೆಸ್ಸೇ. ಆದರೆ ಪಾರ್ಟಿ ಕೊಂಗ್ರೆಸ್ಸು, ಪಕ್ಷ ಕಮ್ಯೂನಿಸ್ಟು. "

ರಾಘವೇಂದ್ರರಾಯರು ತೊಳಲುತ್ತಿರುವುದನ್ನು ನೋಡಿ ಮಾಲತಿಗೆ ಬೇಸರವಾಯಿತು. ಗೋಪಿನಾಥರಾಯರು ಅಂಥ ಅನ್ಯಾಯ ಮಾಡಬಾರದಿತ್ತು. ನಮ್ಮನಮ್ಮವರಾಗಿ ರಾಘವೇಂದ್ರರಾಯರ ಎದುರಾಳಿಯಾಗಿ ಕಾದಾಡಬಾರದಿತ್ತು, ಎಂದನಿಸಿತು.

" ಇದು ಶುದ್ಧ Fifth Column ಕ್ರಮ. ಪಂಚತಂತ್ರ " ಎಂದಳು.

" ಅಲ್ವೇ ಮತ್ತೆ ? ಈ ಆಹಾರಸಮಸ್ಯೆ ರಾಜ್ಯಯಕ್ಷ್ಮ ನಿವಾರಣೆಯಾಗ ಬೇಕಾದರೆ ಅದರ ಸರ್ವಾಧಿಕಾರ ಕೊಂಗ್ರೆಸ್ಸಿಗೇನೇ ಒಪ್ಪಿಸಬೇಕು" ಅನ್ನುತ್ತ ರಾಘವೇಂದ್ರರಾಯರ ಮಾತು ಬಿಸಿಯಾಯಿತು. " ಯಾವ ಸಂಸ್ಥೆಯ ಆಡಳಿತದಲ್ಲಿ ಬಹುಸಂಖ್ಯಾತರಿಗೆ ವಿಶ್ವಾಸವಿದೆಯೋ, ಯಾವ ಸಂಸ್ಥೆಯ ಸಹಾನುಭೂತಿಯಿಲ್ಲದೆ ಕೆಲಸವು ಯಶಸ್ವಿಯಾಗಲಾರದೋ, ಆ ಸಂಸ್ಥೆಗೇನೇ ಊರಿನ ಅನ್ನದ ಪಾರುಪತ್ಯ ವಹಿಸಿಕೊಡಬೇಕು, ಅಂತಂದೆ ಮೀಟಿಂಗಿನಲ್ಲಿ.

ಕಲೆಕ್ಟರರಿಗೆ ಹೌದನಿಸಿತು. ಸಮ್ಮತಿಸಿದರು. ಮದ್ರಾಸಿಗೆ ಬರಕೊಂಡು ಅನುಮತಿ ತರಿಸುತ್ತೇನೆಂತ ಕೂಡ ಹೇಳಿದರು. ಅಷ್ಟರಲ್ಲಿ ಎದ್ದು ನಿಲ್ಲಬೇಕೇ ಈ ದೇಶದ್ರೋಹಿ? 'ನಾನು ಕಾಂಗ್ರೆಸ್ಸಿಗೆ ವಿರೋಧವಾಗಿಲ್ಲ. ನಾನೂ ಕಾಂಗ್ರೆಸ್ಸಿನವನೇ. ರಾಘವೇಂದ್ರರಾಯರು ಪ್ರಜಾವರ್ಗದವರ ಹಿತೈಷಿಗಳೆಂಬದೂ ನಿರ್ವಿವಾದವೇ. ಆದರೆ ಅವರನ್ನೆದುರೊಡ್ಡಿ ತಾವು ಹಿಂದೆ ನಿಂತು ಅವರನ್ನು ಸೂತ್ರಗಳಿಂದ ಕುಣಿಸುತ್ತಿರುವ ವರ್ತಕ ಸಂಘದವರ ಸ್ವಾರ್ಥ, ಕುತಂತ್ರ ಇದಕ್ಕೆ ಮಾತ್ರ ನಾನು ಆಜನ್ಮ ಶತ್ರು. ಕಾಂಗ್ರೆಸ್ಸಿನ ಹೆಸರಿಂದ ಖಾದಿವೇಷದಿಂದ ಜನರ ಕಣ್ಣಿಗೆ ಮಂಕುಬೂದಿಯನ್ನೆರಚಿ ಕೈತಪ್ಪಿ ಹೋದ ಅಕ್ಕಿ ವ್ಯಾಪಾರವನ್ನು ತಿರುಗಿ ವಶಪಡಿಸಿಕೊಳ್ಳುವ ಚತುರೋಪಾಯಗಳನ್ನು ಮಾಡುತ್ತಿರುವುದು ನನಗೆ ಚೆನ್ನಾಗಿ ಗೊತ್ತಿದೆ. ರಾಘವೇಂದ್ರರಾಯರಿಗಾಗಲಿ ಸರಕಾರಕ್ಕಾಗಲಿ ಗೊತ್ತಿರದು. ಅಂಥ ಲೋಕಕಂಟಕರು ಮೇಲುಗೈಯಾದರೆ ಬಂಗಾಲಕ್ಕೆ ಮೊನ್ನೆ ಬಂದ ಗಂಡಾಂತರ ನಮಗೂ ತಪ್ಪಿದ್ದಲ್ಲ. ಇದು ನಿಶ್ಚಯ. ಅಷ್ಟೊಂದು ಎಚ್ಚರಿಕೆಯಿರಲಿ, ಸರಕಾರಕ್ಕೆ' ಅಂತ ಉದ್ಗಾರ ತೆಗೆದ. ಅದನ್ನು ಕೇಳಿದ್ದೇ ಕೇಳಿದ್ದು, ಕಲೆಕ್ಟರ ಮತವೇ ಬದಲಾಯಿತು. ಮದ್ರಾಸಿಂದ Food Commissioner ಬರುವತನಕ ಈಗಿದ್ದ ವ್ಯವಸ್ಥೆಯೇ ಇರಲಿ. ಆಮೇಲೆ ನೋಡೋಣಾಂದುಬಿಟ್ರು."

"ವರ್ತಕರ ವಿಚಾರ ಗೋಪಿನಾಥರಾಯರು ಹೇಳಿದ್ದು ಸುಳ್ಳೆ?"

"ಸುಳ್ಳೇ. ಮತ್ತೇನು? ನನ್ನ ಕುಣಿಸೋದಂತೆ ಕುಣಿಸೋದು. ನಾನೇನು ಬೊಂಬೆಲಾಟದ ಗೊಂಬೆ ಕಾಣುತ್ತೆ" ಅನ್ನುತ್ತ ಕಣ್ಣು ಕೆರಳಿಸಿ ಮಾಲತಿಯನ್ನು ನೋಡಿದರು. ಅವರ ಬಟ್ಟಗಣ್ಣುಗಳನ್ನು ನೋಡಿ ಮಾಲತಿಗೆ ನಗು ಬಂತು. ಆಕೆಯ ನಗುಮುಖದ ತಿಳಿಬೆಳಕನ್ನು ನೋಡಿ ರಾಘವೇಂದ್ರರಾಯರ ಸಿಟ್ಟು ಮಾಯವಾಯಿತು. ಹುಬ್ಬುಗಳ ಗಂಟು ಸಡಿಲಿತು, ವಾತಾವರಣವೇ ಹಗುರಾಯಿತು.

"ಏನೋಪ್ಪ, ಈ ನಿಮ್ಮ ಜಗಳದಲ್ಲಿ ಬಡವರು ಉಪವಾಸ ಬೀಳದಿದ್ರೆ ಸಾಕು" ಅಂದಳು ಮಾಲತಿ.

ಅಷ್ಟರಲ್ಲಿ ಶಾರದಮ್ಮ ಒಳಗಿಂದ ಬಂದು ಮಾತಿಗೆ ಸೇರಿದರು. "ಸಂಜೆಗೆ ತಿಂಡಿಯೇನ್ಮಾಡೋದೂಂತ ಕೇಳ್ತಾರೆ ಆಚಾರ್ರು."

"ತಿಂಡಿಯೇನೂ ಬೇಕಿಲ್ಲ. ನಾಲ್ಕುವರೆ ಗಂಟೆಗೆ ಗೋಪಿನಾಥನಲ್ಲಿ ಟೀಪಾರ್ಟಿದೆ."

" ಅದೇನಪ್ಪ ವಿಶೇಷ?" ಎಂದು ಶಾರದಮ್ಮ ಆಶ್ಚರ್ಯಪಟ್ಟು ಕೇಳಿದಳು.

" ಒಂದು ಕೇಸಿನ ಪಂಚಾಯ್ತಿಕೆ. ಹೋಗದೆ ತೀರದು. ಕಾಫಿ ಮಾತ್ರ ಸಾಕನ್ನು. "

" ನೀರಕಂಭದ ಕೇಸೂಂತ ತೋರುತ್ತೆ " ಅಂತ ಮಾಲತಿ ಊಹಿಸಿದಳು.

" ನೀರಕಂಭ ಅಲ್ಲ, ವೀರಕಂಭ." ಹೆಂಗಸರಿಗೆ ಒಂದು ಹೆಸರನ್ನು ಕೂಡ ಸರಿಯಾಗಿ ಜ್ಞಾಪಕದಲ್ಲಿಟ್ಟುಕೊಳ್ಳೋದಕ್ಕೆ ಬರೋದಿಲ್ಲವೆಂತ ತನ್ನೊಳಗೆ ತಾನೇ ಹಿಗ್ಗಿದರು.

" ಹಾಗಾದ್ರೆ ನೀನೂ ಹೋಗಬಹುದು ಮಾಲತಿ. ಕೂಸಿನ್ನ ನೋಡ ಬೇಕೂಂತ ಹಂಬಲಿಸುತ್ತೀ " ಎಂಬ ಶಾರದಮ್ಮನ ಸೂಚನೆಗೆ ಮಾಲತಿ ಉತ್ತರ ಹೇಳುವ ಬದಲು ಗಂಡನ ಮುಖ ನೋಡಿದಳು.

" ಆಗದೇನೋ ರಾಘು ? ಕರಕೊಂಡು ಹೋಗು " ಅಂತ ಶಾರದಮ್ಮ ಒತ್ತಾಯಿಸಿದರು.

" ಕರಕೊಂಡು ಹೋಗೋದೇನು ಅವಳನ್ನ ? ಬೇಕಾದರೆ ಬರಲಿ; ಯಾರಡ್ಡಿ ? ಬರಬೇಕಲ್ಲ ನನ್ನ ಜತೇಲಿ. "

" ನಾನು ಜತೆಗೆ ಬರೋದಿಲ್ಲಾನ್ನೋದು ನಡೆದು ಹೋದರೆ ಮಾತ್ರ. ಗಾಡೀಲಿ ಹೋಗೋದಿದ್ರೆ ಬರ್ತೀನೆ" ಅಂದಳು ಮಾಲತಿ ನಸುನಗುತ್ತ.

" ಜಟ್ಕಾ ಮಾಡಿಕೊಂಡು ಹೋಗಿ. ಯಾಕೆ ನಡೀಬೇಕು ಅಷ್ಟು ದೂರ? ಇಂದಿರಾಬಾಯೀನ ಕೇಳಿದ್ದೇನನ್ನು ಮಾಲತಿ. ಪುರಸೊತ್ತು ಮಾಡಿಕೊಂಡು ಒಂದುದಿನ ಬಂದುಹೋಗಲಿ. ರಾಘು, ನೀನು ಗೋಪಿಗೂ ಹೇಳು. ಆಗಿಂದಾಗ ಬಂದು ಹೋಗ್ತಾ ಇರ್ಲಿ. ಕೂಸಿನ್ನೂ ಕರಕೊಂಡು ಬರಲಿ. ನೋಡದೆ ಬಹು ಕಾಲವಾಯಿತು. "

" ನೀವೂ ಬನ್ನೀಮ್ಮಾ. " ಅಂದಳು ಮಾಲತಿ.

" ಯಾಕಪ್ಪ , ನಿಮ್ಮಿಬ್ರ ನಡುವೆ? ಬೇಡ. ನೀವೇ ಇಬ್ರು ಹೋಗಿ ಬನ್ನಿ. ಕಾಫಿ ಮಾತ್ರ ಸಾಕು ಅಂತ ಹೇಳಿಬಿಡ್ತೀನೆ ಒಳಗೆ. " ಅನ್ನುತ್ತ ಶಾರದಮ್ಮ ಎದ್ದು ಹೋದರು. ರಾಘವೇಂದ್ರರಾಯರು ಆಕಳಿಸುತ್ತ ಶಯ್ಯಾಗೃಹದ ಕಡೆಗೆ ತೆರಳಿದರು.

ಮಾಲತಿಗೆ ಮಧ್ಯಾಹ್ನ ಊಟವಾದಮೇಲೆ ನಿದ್ರಿಸುವ ಅಭ್ಯಾಸವಿರಲಿಲ್ಲ. ಎಷ್ಟೇ ಸೆಕೆಯಿರಲಿ, ಮಳೆಯಿರಲಿ, ಛಳಿಯಿರಲಿ, ಓದುತ್ತ ಹೊಲಿಯುತ್ತ ಅಡುಗೆಮನೆಯಲ್ಲಿ ಕಾಫಿ ತಿಂಡಿ ಕೆಲಸಕ್ಕೊಂದು ಕೈಕೊಡುತ್ತ ಹೊತ್ತು ಕಳೆಯುತ್ತಿದ್ದಳೇ ವಿನಾ ಹಾಸಿಗೆಯಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದಿಲ್ಲ. ಮೊದಲೊಂದು ದಿನ ಬೇಸಿಗೆಯಲ್ಲಿ ಶಾರದಮ್ಮ ' ಮಾಲತೀ, ರಣಬಿಸಿಲು. ಸ್ವಲ್ಪ ಹಾಯಾಗಿ ಮಲಕೋಬಾರದೇ ? ಹೊಲಿಗೆಗೂ ಪುಸ್ತಕಕ್ಕೂ ಒಂದು ಗಳಿಗೆ ರಜಾಕೊಡಬಾರದೇ ?' ಅಂತ ಬುದ್ಧಿ ಹೇಳಿದ್ದರು. ' ಆಗಲಮ್ಮ ಅದಕ್ಕೇನು ' ಎಂದು ಹೇಳಿ ಹೋಗಿ ಸುಮಾರು ಎರಡುಗಂಟೆ ಹೊತ್ತಿಗೆ ಹಾಸಿಗೆಹಿಡಿದವಳು ಆರು ಗಂಟೆಯಾದರೂ ಏಳಲೇ ಇಲ್ಲ. ಶಾರದಮ್ಮನೇ ಬಂದು ಎಬ್ಬಿಸಿದರು. ಆ ಮೇಲೆ ಮಾಲತಿ ಹಗಲು ನಿದ್ರೆ ಮಾಡಲಿಲ್ಲ.

ಆದರೆ ಆ ದಿನ ಮಲಗಿದ್ದರೂ ನಿದ್ರೆ ಬರುತ್ತಿದ್ದಿಲ್ಲ. ನಾಲ್ಕುವರೆ ಗಂಟೆಯ ನಿರೀಕ್ಷೆಯಲ್ಲಿ ಮನಸ್ಸೆಲ್ಲ ಕವಡಿತ್ತು. ಅಲ್ಲಿಗೆ ಹೋಗದೆ ಒಂದೂವರೆ ವರ್ಷಕ್ಕೆ ಮಿಕ್ಕಿರಬಹುದು. ಏನೇನು ಬದಲಾವಣೆಯಾಗಿರಬಹುದೋ ಮನೆಯಲ್ಲಿ ? ಇಂದಿರಮ್ಮ ಹೇಗಿದ್ದಾರೋ ? ಮೊದಲಿಂದಲೂ ಮಾತಿನಲ್ಲಿ ಗಟ್ಟಿಗರು ಅವರು. ತುಂಬ ಸ್ವಾರಸ್ಯ ಅವರ ಸಹವಾಸ. ಅವರ ಮನೆಗೆ ಹೋದರೆ ವಿಸ್ತಾರವಾದ ನಿರ್ಬಂಧವಿಲ್ಲದ ಬಯಲಿಗೆ ಹೋದಷ್ಟು ಉಲ್ಲಾಸ. ಹಾಗೂ ಒಂದು ಗುಬ್ಬಚ್ಚಿ ಗೂಡಿಗೆ ಹೊಕ್ಕಂತೆ ನೆಮ್ಮದಿಯಾದ ನೆನಪು ಮಾಲತಿಗೆ. ಇಷ್ಟವಿದ್ದಂತೆ ಓಡಾಡಬಹುದು, ಮಾತಾಡಬಹುದು. ನಗುಬಹುದೆಂಬ ಧೈರ್ಯ, ಅದರೊಂದಿಗೆ ಅಲ್ಲೇ ಒಂದೆಡೆ ಸುಮ್ಮಗೆ ಕುಳಿತು ಮನೆಮಂದಿ, ತಾಯಿ, ಮಗ, ಮೊಮ್ಮಗಳು ಒಬ್ಬರನ್ನೊಬ್ಬರು ಹೊಂದಿಕೊಂಡು ಸುಖದಿಂದಿರೋದನ್ನ ನೋಡಿ ಸಂತೋಷಪಡೋಣವೆಂಬ ಜಡತೆ. ಈ ನೆನಸುಗಳ ನಡುವೆ ಪಂಬಿಯನ್ನು ಅಪ್ಪಿ ಮುದ್ದಾಡುವ ಮಧುರ ನಿರೀಕ್ಷೆ. ಗೋಪಿನಾಥರಾಯರು ತಮ್ಮ ಮನೆಯಲ್ಲಿರುವಾಗ ಹೇಗೆ ವರ್ತಿಸುವರೋ, ಮಾತಾಡಲು ಅವರಿಗೆ ಅವಕಾಶ ಸಿಗುವುದೋ ಇಲ್ಲವೋ ಎಂಬ ಚಿಂತೆಗಳು ಮಿಂಚಿಹೋಗುತ್ತಿದ್ದವು. ಹೇಗೂ ಇರಲಿ, ಅವರನ್ನು ಕಣ್ತುಂಬ ನೋಡಬಹುದಷ್ಟೆ, ಎಂದು ಸಮಾಧಾನ ತಂದುಕೊಂಡಳು.

ನಾಲ್ಕು ಕಾಲು ಗಂಟೆಯ ಸಮಯ ಡ್ರೆಸ್ಸು ಮಾಡಿಕೊಳ್ಳುತ್ತಿದ್ದ ಮಾಲತಿಗೆ ಹೊರಗಿಂದ ಝುಣಝುಣ ಕಿಣಿಕಿಣಿ ಗೆಜ್ಜೆಗಳ ನಿನಾದ ಕೇಳಿಸಿತು.

ಆಶ್ಚರ್ಯದಿಂದ ಕಿಟಿಕಿ ಬಳಿಗೆ ಹೋಗಿ ನೋಡಲು ಮಾಮೂಲು ಜಟಕದವನಾದ ಚಂದು ತನ್ನ ಗಾಡಿಯನ್ನು ಪೋರ್ಟಿಕೊದೊಳಗೆ ತಂದು ನಿಲ್ಲಿಸಿ, ಕೆಳಗೆ ಹಾರಿ, ಕುದುರೆಯ ಹಿಂಭಾಗವನ್ನು ತಟ್ಟಿದ್ದು ಕಂಡಿತು. ಸಿದ್ಧಳಾದ ಮೇಲೆ ಹೊರಗೆಹೋದಳು. ಆಕೆಯನ್ನು ನೋಡಿ ಚಂದು ಕೈಜೋಡಿಸಿ ನಮಸ್ಕರಿಸಿ, ಕುದುರೆಯ ಕತ್ತನ್ನು ನೇವರಿಸುತ್ತ ನಿಂತ.

"ಹೊಸ ಕುದುರೆಯೇನೋ ಚಂದು? ವೈಕುಂಬ ಗೆಜ್ಜೆಗಂಟೆಗಳ ಜಾಲರಿ ಹಾಕಿ ಬಿಟ್ಟಿದ್ದೀಯಲ್ಲಾ" ಎಂದಳು ನಗುತ್ತ. ಚಂದು ಈ ಪ್ರಶಂಸೆಗೆ ಹೆಮ್ಮೆಯಿಂದ ಉಬ್ಬಿದರೂ ತೋರಿಸದೆ ನಾಚಿಕೆಯನ್ನು ನಟಿಸುತ್ತ ಕುದುರೆಗೆ ಅದೇ ಪ್ರಥಮ ಸವಾರಿಯೆಂತ ತಿಳಿಸಿದ. ಮಾಲತಿ ಕುದುರೆಗೆ ಪ್ರದಕ್ಷಿಣೆ ಬರುತ್ತ ಪರೀಕ್ಷೆ ಮಾಡುತ್ತ, "ಚಲೋದಾಗಿದೆ ನಿನ್ನ ಕುದುರೆ. ಬಿಳಿಮೈಗೆ ಕಂದುಬಣ್ಣದ ಮಂಗಳ, ಹಣೆಮೇಲೆ ಬಿಳಿನಾಮ ಜೇರೆ. ಮಣಿಗಂಟೆಗೂ ಅದೇ ಬಣ್ಣದ ಕಂಕಣ. ಚೆನ್ನಾಗಿದೆ. ಕಾಲಿಗೇತಕ್ಕೋ ಗೆಜ್ಜೆ ಕಟ್ಟಲಿಲ್ಲ? ಸಾಕಷ್ಟು ಸಿಗಲಿಲ್ಲವೇನೋ?" ಎಂದು ತಮಾಷೆ ಮಾಡಿದಳು. "ಕಾಲಿಗೂ ಕಟ್ಟಬೇಕೂಂತಿದ್ದೆ; ಆದರೆ ಮೊದಲೇ ಹರಾಮಿ, ಇನ್ನು ಗೆಜ್ಜೆ ಕಟ್ಟಿಬಿಟ್ಟು ನಡು ರಸ್ತೇಲಿ ಕುಣಿಯೋಕ್ಕೆ ಸುರುಮಾಡಿದರೆ ಏನು ಗತೀಂತ ಜಾಕಿ ಮಾಡಿದ್ದೇನೆ" ಅಂದ.

"ಹರಾಮಿ ಗಿರಾಮಿಂತ ರಾಯರ ಎದುರಿಗೆ ಎಲ್ಲಾದರೂ ಹೇಳಿಬಿಟ್ಟೀಯಾ, ಜೋಕೆ" ಎಂದು ಎಚ್ಚರಿಸಿದಳು. ಕುದುರೆ ಅತಿ ಸಡಗರದಿಂದ ಗೊರಸಿನ ಕೊನೆಯಿಂದ ನೆಲವನ್ನು ಗೀರುತ್ತ, ಕತ್ತನ್ನು ಬಿಲ್ಲಿನಂತೆ ಬಾಗಿಕೊಡುತ್ತ, ಕಡಿವಾಣವನ್ನು ಕಡಿಯುತ್ತ ಬಾಲ ಬೀಸುತ್ತ, ಓರೆಗಣ್ಣಿನಿಂದ ಮಾಲತಿಯನ್ನೇ ನೋಡುತ್ತಿತ್ತು.

ಭಯಪಡಲು ಕಾರಣವಿಲ್ಲ. ತನ್ನ ನಾಲ್ಕು ವರ್ಷದ ಮಗುವನ್ನು ಕೂರಿಸಿಕೊಂಡೇ ಅಂದು ಬೆಳಿಗ್ಗೆ ಸುರು ಸವಾರಿ ಮಾಡಿದ್ದು. ಕುದುರೆಗೆ ಗೆಜ್ಜೆ ತೊಡಿಸಿ, ಗಾಡಿಗೆ ಗಂಟೆ ಕಟ್ಟಿಸಿದ್ದೂ ಮಗುವಿಗಾಗಿ. ಗಾಡಿ ಓಡುವಾಗ ಗೆಜ್ಜೆ ಗಂಟೆಗಳೊಂದಿಗೆ ಮಗು ಕಿಚಿಕಿಚಿ ನಗುತ್ತ ಕೈಚಪ್ಪಾಳೆ ಹೊಡೆಯುತ್ತಿತ್ತು ಎಂದು ಚಂದು ಹೇಳುತ್ತ ಹಿಗ್ಗಿದ. ಅದನ್ನೆಲ್ಲ ಕೇಳಿ ಖಿನ್ನಮನಸ್ಕಳಾದ ಮಾಲತಿ ಕುದುರೆಯ ಬಿರುಗಣ್ಣುಗಳನ್ನೇ ನೋಡುತ್ತಿದ್ದಳು.

“ ಹತ್ತಿರ ಬನ್ನಿ. ತಾಯಿ; ಬೆನ್ನು ಸವರಿ ಹೀಗೆ. ಹೆದರಬೇಕಾಗಿಲ್ಲ; ನಾನಿದ್ದೇನೆ.” ಅಂದ.

ಮಾಲತಿ ಕೈನೀಡಿ ಕುದುರೆಯ ಕತ್ತನ್ನು ಸವರಿದಳು. ತಕ್ಷಣ ಕಣ ಕ್ಕೆಂತ ಕುದುರೆ ಎರಡು ಹೆಜ್ಜೆ ಹಿಮ್ಮೆಟ್ಟಿತು. ಮಾಲತಿ ಬೆಚ್ಚಿಬಿದ್ದು ದೂರ ಸರಿದಳು. ಚಂದು ‘ ಹಾಂ, ಹಾಂ. ಪ್ಪ, ಪ್ಪ, ಪ್ಪ ’ ಎಂದು ಚಪ್ಪರಿಸಿದ ಮೇಲೆ ಕುದುರೆ ಸುಮ್ಮನಾಗಿ ಮುಖ ತಿರುಗಿಸಿ ಮಾಲತಿಯನ್ನು ಮತ್ತೆ ದೃಷ್ಟಿಸಿ ನೋಡಿ, ತಕ್ಕಮಟ್ಟಿಗೆ ಸಮಾಧಾನಗೊಂಡು, ಪುನಃ ಕಡಿವಾಣ ವನ್ನು ಮೆಲ್ಲುತ್ತ ನಿಂತಿತು.

ಆಗ ಒಳಗಿಂದ ರಾಘವೇಂದ್ರರಾಯರು ಸಿದ್ಧರಾಗಿ ಬಂದು, “ ಏನು ಮಾಡ್ತಿದ್ದಿಯೇ ಇಲ್ಲಿ ? ಒಳಗೆಲ್ಲ ಹುಡುಕಿ ಸೋತೆ ” ಅಂದರು.

“ ನನ್ನಿಂದ ತಡವಾಗಬಾರದೂಂತ ಆಗಲೇ ಡ್ರೆಸ್ ಮಾಡಿಕೊಂಡು ಬಂದುಬಿಟ್ಟೆ. ಈ ಕುದುರೇನ ನೋಡಿ. ಮದುವಣಗಿತ್ತಿ ಹಾಗೆ ಅಲಂಕಾರ ಮಾಡಿದ್ದಾನೆ, ಚಂದು. ” ಅಂದಳು.

“ ಏನು ನೋಡೋದು ಹೊಲಸು ಪ್ರಾಣೀನ. ಯಾವಾಗಲೂ ಇದ್ದಿದ್ದೇ. ಹೋಗೋಣ ತೆರೆಯೋ ಬಾಗಲು ” ಅನ್ನುತ್ತ ಜಟಕದ ಹಿಂಬದಿಹೋದರು. ಚಂದು ಕುದುರೆಯ ಕಡಿವಾಣವನ್ನು ಹಿಡಿದು ನಿಂತವನು ಬಿಟ್ಟು ಬಂದು ಬಾಗಿಲನ್ನು ತೆರೆದು ಹಿಂದಿನ ಸೀಟನ್ನೆತ್ತಿ ಬದಿಗೆ ಸರಿದು ನಿಂತ. ರಾಯರು ಹಿತ್ತಾಳೆಯ ಮೆಟ್ಟಿಲಮೇಲೆ ದಢಕ್ಕನೆ ಬಂದು ಕಾಲೂರಿದ್ದೇ ತಡ, ಕುದುರೆ ನೆಗೆದು ಹಿಂಗಾಲುಗಳ ಮೇಲೇರಿತು. ರಾಯರು ಕಕ್ಕಾಬಿಕ್ಕಿಯಾಗಿ ಗಾಡಿ ಯೊಳಗೆ ನುಗ್ಗಿ ಆಚೆಯೀಚೆ ಆಧರಿಸಿಕೊಂಡು, “ ಚಂದು, ಚಂದು ” ಎಂದು ಬೊಬ್ಬಿಟ್ಟರು. ಗಂಡ ಗಾಡಿಯನ್ನೇರುವ ಡೌಲನ್ನು ಮೊದಲೇ ಗೊತ್ತಿದ್ದ ಮಾಲತಿ ಕುದುರೆಯನ್ನೇ ಕಣ್ಣಿಟ್ಟು ಕಾಯುತ್ತಿದ್ದಳು. ಅದು ಸರ್ಕಸ್ ಮಾಡಿದ ತಕ್ಷಣ ಮುಂದು ಹೋಗಿ ಕಡಿವಾಣಕ್ಕೆ ಕೈಚಾಚಿ ಹಿಡಿದು ಜಗ್ಗಿಸಿ “ ಬಾ, ಬಾ, ಬಾ, ” ಎಂದು ಮೆದುಮಾತಿನಿಂದ ಸಂತವಿಸಿದಳು. ಆಕೆಯ ಅಪಾಯವನ್ನು ಕಂಡು ಚಂದು ಬಾಗಿಲು ಬಿಟ್ಟು ಓಡಿಬಂದು ಕಡಿವಾಣ ಕಸುಕೊಂಡು ಕುದುರೆಯನ್ನು ಹದಕ್ಕಿಳಿಸಿದ. ಮಾಲತಿಯ ಎದೆ ಬಡಿಯು ತ್ತಿದ್ದರೂ ತೋರ್ಪಡಿಸದೆ ಮಂದಹಾಸದಿಂದ ಗಾಡಿಹತ್ತಿ, ಗಂಡನನ್ನು

ಗಾಡಿಯುವನ ಮಗ್ಗುಲಿನ ಸೀಟಿನಲ್ಲಿ ಕುಳಿತುಕೊಳ್ಳುವಂತೆ ಹೇಳಿ, ತಾನು ಹಿಂದಿನ ಸೀಟಿನಲ್ಲಿ ಕುಳಿತು ಬಾಗಿಲು ಬಿಗಿದುಕೊಂಡಳು. ಜಟಕ ಝಣ ಝಣ ಮುಂದೋಡಿತು. ರಾಘವೇಂದ್ರರಾಯರಿಗೆ ಕೋಪಕ್ಕಿಂತ ಕಂಗಾಲೇ ಜಾಸ್ತಿಯಾದ್ದರಿಂದ ಹೆಚ್ಚೇನೂ ಹೇಳದೆ ಇಬ್ಬದಿಗಳ ತೊಗಲಿನ ಬಾರು ಗಳನ್ನು ಬಿಮ್ಮಗೆ ಹಿಡಿದುಕೊಂಡು ಕುಳಿತರು.

ಗೋಪಿನಾಥನ ಮನೆಯ ಹೊರಚಾವಡಿಯಲ್ಲಿ ಸುಬ್ಬಾಭಟ್ಟರೂ ಜೋಯಿ ಸರೂ ಇಬ್ಬರೇ ಇದ್ದರು ವಿನಾ ಗೋಪಿನಾಥನಾಗಲಿ ಪಂಬಿಯಾಗಲಿ ಎಲ್ಲೂ ಕಾಣಿಸಲಿಲ್ಲ. ರಾಘವೇಂದ್ರರಾಯರು ಮಾಲತಿ ಗಾಡಿಯಿಂದಿಳಿದು ಚಾವಡಿಗೆ ಹತ್ತುವಾಗ ಪಕ್ಕದ ಕೋಣೆಯಿಂದ ಇಂದಿರಮ್ಮ ಬಂದರು. ಆದರ ದಿಂದ ಸತ್ಕರಿಸಿ ಒಳಗೆ ಕರಕೊಂಡು ಹೋದರು. ಗೋಪಿ ಈ ಕ್ಷಣ ಬಂದು ಬಿಟ್ಟ, ಅನ್ನುತ್ತ ಹಾಲಿನಲ್ಲಿ ಕೂತುಕೊಳ್ಳುವಂತೆ ಹೇಳಿದರು.

“ಕ್ಷೇಮವೇ ? ಬಹಳ ಕಾಲವಾಯಿತು, ನಿಮ್ಮನ್ನ ನೋಡದೆ” ಅಂದಳು ಮಾಲತಿ.

“ನನ್ನನ್ನೇನು ನೋಡೋದು ? ನೀವೀ ಕಡೆ ಬರೋದನ್ನೆ ಬಿಟ್ಟು ಬಿಟ್ಟಿರಿ. ಏನು ರಾಘು, ನೀನೂ ಬರಲಿಲ್ಲ; ಹೆಂಡ್ತೀನೂ ಕಳುಹಿಸಿಕೊಡಲಿಲ್ಲ.”

“ಪುರಸೊತ್ತು ಬೇಕಲ್ಲ. ನೀವೂ ನಮ್ಮನೇ ಕಡೆ ಕಾಲಿಡದೆ ಹಲವು ವರ್ಷಗಳಾದವು ಅಂತ ಅಮ್ಮನ ಕಂಪ್ಲೈಂಟು.” ಅಂದರು ರಾಘವೇಂದ್ರ ರಾಯರು.

“ನೀನು ವಕೀಲನೇನೋ ಹೌದಪ್ಪ. ನನ್ನ ದೂರಿಗೆ ಪ್ರತಿಯಾಗಿ ನಿನ್ನ ದೊಂದು ಫಿರ್ಯಾದು ಹೂಡಿದೆಯಲ್ಲ–ಏನು ಮಾಲತಿ, ಇದು ನ್ಯಾಯವೇ ನಮ್ಮಾ ? ”

“ಶುದ್ಧ ಅನ್ಯಾಯಾಂದ್ರೆ. ನಾವಿಬ್ರೂ ನಿಮ್ಮನೇಗೆ ಬಂದಾಯಿತು. ಅಂದಮೇಲೆ ನಿಮ್ಮ ಕಂಪ್ಲೈಂಟಿನಲ್ಲಿ ಸಾರವಿಲ್ಲ. ಆದ್ದರಿಂದ ನಮ್ಮ ಕಂಪ್ಲೈಂ ಟಿಗೂ ಸಂದರ್ಭವಿಲ್ಲ.” ಎಂದು ಮಾಲತಿ ತೀರ್ಪುಕೊಟ್ಟಳು.

“ಜಾಣೆ ! ಒಂದೇ ತೀರ್ಮಾನದಲ್ಲಿ ಎರಡು ಫಿರ್ಯಾದೀನೂ ಡಿಸ್ ಮಿಸ್ ಮಾಡಿಬಿಟ್ಟೆ” ಎಂದು ಇಂದಿರಮ್ಮ ನಕ್ಕರು.

“ನಿಮ್ಮ ಮೊಮ್ಮಗಳೆಲ್ಲಿ? ” ಎಂದು ಮಾಲತಿ ಆತುರದಿಂದ ಕೇಳಿದಳು.

" ಅವಳೇ ? ಅಡುಗೆಮನೆಗೆ ಹೊಕ್ಕೊಂಡು, ಕಾಫಿಪುಡಿಗೆ ಸಕ್ರೆ ಬೆರಸಿ, ಅದಕ್ಕೊಂದಿಷ್ಟು ನೀರು ಸುರಿದು, ಹಾಕ್ಕೊಂಡ ಅಂಗೀಲಿ ಸೋಸ್ತಾ ಇದ್ದಳು. ಗೋಪಿ ಸ್ನಾನ ಮಾಡಿಸುತ್ತಿದ್ದಾನೇಂತ ಕಾಣುತ್ತೆ. ನೋಡಿ ಬರ್ತೀನೆ " ಎಂದೆದ್ದರು.

ಅಷ್ಟರಲ್ಲಿ ಒಳಗಿಂದ ಗೋಪಿನಾಥ, " ಅಮ್ಮಾ, ಪಂಬಿ ಬಚ್ಚಲುಮನೆ ಯಿಂದ ಬರೊಲ್ಲವಂತೆ. ನೀನೇ ಬರಬೇಕಂತೆ " ಎಂದು ಕೂಗುತ್ತ ಬಂದ. ಅತಿಥಿ ದಂಪತಿಗಳನ್ನು ನೋಡಿ, ಮಡಚಿ ಮೇಲೆ ಕಟ್ಟಿಕೊಂಡಿದ್ದ ಮುಂಡನ್ನು ಕೆಳಗೆ ಬಿಟ್ಟು ಸಂತೋಷದಿಂದ,

" ಹೊತ್ತಾಯಿತೇನು ಬಂದು ? " ಎಂದು ಕೇಳಿದನು.

" ಈಗ ತಾನೇ ಬಂದ್ರು. ನೀನಿಲ್ಲೇ ಇರು " ಅನ್ನುತ್ತ ಇಂದಿರಮ್ಮ ಹೊರಟುಹೋದರು

" ಕೃಷ್ಣಯ್ಯ, ಕವಿತ್ರಿಯರು ಇನ್ನೂ ಬರಲಿಲ್ಲ. ನಾಲ್ಕುವರೆ ದಾಟಿತು. " ಎಂದು ರಾಘವೇಂದ್ರರಾಯರು ತವಕಪಟ್ಟರು.

" ಬರಲಿ ಸಾವಕಾಶವಾಗಿ, ಹೊತ್ತಿದೆ ಬೇಕಾದಷ್ಟು. " ಎಂದು ಗೋಪಿ ನಾಥ ಹೇಳಿದ್ದು ಹಿತವಾಗಲಿಲ್ಲವೇನೋ. ಅವರೆದ್ದು ಸುತ್ತ ಗೋಡೆಗಳ ಮೇಲಿದ್ದ ಲೋಕವಿಖ್ಯಾತ ಕಲಾಕೃತಿಗಳ ಮೇಲೆ ದೃಷ್ಟಿಯನ್ನುರುಳಿಸಿದರು.

" ತನಿಖೆ ಮಾಡುವ ಮುಂಚೆ ನೀನೊಂದು ಸಲ ಸ್ಥಳ ನೋಡಿಕೊಂಡು ಬಂದ್ರೆ ಚೆನ್ನಾಗಿತ್ತು " ಅಂದರು.

" ಒಂದಾವರ್ತಿ ನೋಡಿದ್ದೇನಲ್ಲ, ಸಾಕು. ನೆನಪಿದೆ."

ಗೋಪಿನಾಥ ಬಲು ಪೇಚಿನಲ್ಲಿದ್ದ. ರಾಘವೇಂದ್ರರಾಯರು ನಿಂತಾಗ ತನಗೆ ಕೂತುಕೊಳ್ಳಲು ಸರಿಬೀಳಲಿಲ್ಲ. ಮಾಲತಿಯೊಬ್ಬಳನ್ನೇ ಹಾಲಿನಲ್ಲಿ ಬಿಟ್ಟು ರಾಘವೇಂದ್ರರಾಯರೊಂದಿಗೆ ಆಫೀಸಿಗೆ ಹೋಗಲೂ ಮನಸ್ಸಿರಲಿಲ್ಲ. ಒಳಗೆ ಹೋಗಿದ್ದ ಇಂದಿರಮ್ಮ ಇನ್ನೂ ಬರಲಿಲ್ಲ. ಕಚೇರಿಯ ಕಂತೆಯನ್ನು ಬಿಟ್ಟರೆ ಬೇರೆ ಸಂಭಾಷಣೆ ರಾಘವೇಂದ್ರರಾಯರಲ್ಲಿ ಸಾಧ್ಯವಿಲ್ಲ. ಮಾಲತಿ ಯೊಂದಿಗೆ ಸರಸವಾಡೋಣವೆಂದರೆ ಆಕೆಯ ಗಂಡಗೆ ಅಸಮಾಧಾನವಾಗ ಬಹುದೆಂಬ ಸಂಕೋಚ. ಆಗ ಪುಣ್ಯಕ್ಕೆ ಸಿಟ್ಟಿನಿಂದ ಸಿಡಿಯುತ್ತಿದ್ದ ಮೊಮ್ಮ ಗಳನ್ನೆತ್ತಿಕೊಂಡು, " ಅಪರೂಪದ ಅತ್ತೆ ಬಂದಿದ್ದಾರೆ. ಪ್ರೋತ್ರಿತನ

ಮಾಡಬಾರದು. ಬತ್ತಲೆ ಇರಬಾರದು" ಅನ್ನುತ್ತ ಮೆತ್ತಗೆ ಬುದ್ಧಿ ಹೇಳುತ್ತ ಬಂದರು. ಅವರನ್ನು ನೋಡಿ ಮಾಲತಿ ಎದ್ದುಹೋಗಿ, "ನನ್ನೋಡಿದ್ದು ನೆನ ಪುಂಟೆ? ಬರ್ತೀಯಾ ನನ್ನ ಹತ್ರ?" ಎಂದು ಕೈನೀಡಿದಳು ಆ ಗಳಿಗೆಯ ವಿಪ್ಲವದಲ್ಲಿ ಪಂಬಿಗೆ ಯಾರ ನೆನಪೂ ಬೇಕಾಗಿರಲಿಲ್ಲ. ಆದರೆ ಇಂದಿರಮ್ಮ "ಅಂಗೀ ಹಾಕ್ಕೊಂಡು ಬರ್ತೀನೆನ್ನು" ಎಂದು ಕೀಟಲೆ ಎಬ್ಬಿಸಿದ್ದರಿಂದ ಆ ಹಗರಣ ತಪ್ಪಿಸಿಕೊಳ್ಳೋದಕ್ಕೆ ತಟ್ಟನೆ ಮಿಂಟ ಮಾಲತಿಯ ಕೈಗೆ ಹೋದಳು. ಆದರೆ ದೊಡ್ಡಮ್ಮನ ಕಾಟ ಅಷ್ಟಕ್ಕೇ ಮುಗಿಯಲಿಲ್ಲ.

"ಏನಮ್ಮ ಮಾಲತಿ, ಚಿಕ್ಕಮಕ್ಕಳು ಬರೇ ಮೈಲಿರೋದು ಚೆಂದವೆ?" ಎಂದು ಕೇಳಿದರು. ಮಗುವಿನ ಹಾಲುಗುಲಾಬಿಯ ಮೈಬಣ್ಣಕ್ಕೆ ಮರುಳಾದ ಮಾಲತಿಗೆ ಏನು ಹೇಳಬೇಕೆಂದು ಗೊತ್ತಾಗದೆ ಮಗುವನ್ನು ಮುದ್ದಿಸಿ ನಕ್ಕಳು.

ಹೊರಗೆ ಕೃಷ್ಣಯ್ಯನೂ ಕವಿತ್ರಿಯರೂ ಮಾತನಾಡುವುದು ಕೇಳಿಸಿ ರಾಘವೇಂದ್ರರಾಯರು ಗೋಪಿನಾಥನನ್ನು ಕರೆದುಕೊಂಡು ಆಫೀಸಿಗೆ ಹೋದರು. ಇಂದಿರಮ್ಮ ಪಕ್ಕದ ಕೋಣೆಗೆ ಹೋಗಿ ಒಳಚಡ್ಡಿಯನ್ನೂ ಫ್ರಾಕನ್ನೂ ತಂದು ಮಾಲತಿಯ ಕೈಯಲ್ಲಿಟ್ಟು,

"ಈಕ್ಷಣ ಬಂದೆ. ಹಾಲು ಕರೆಯುವ ಹೊತ್ತು. ತಂಬಿಗೆ ಹೊರಗಿಟ್ಟು ಬಿಟ್ಟು ಬರ್ತೀನೆ" ಎಂದು ಹೋದರು.

"ಪ್ರಭಾ?" ಎಂದಳು ಮಾಲತಿ ಸೋಫದಲ್ಲಿ ಕುಳಿತು ಅಂಗಿ ಹಾಕುತ್ತ.

"ಪಭಾ ಅಯ್ಯ, ಪಂಬಿ."

"ನೀನು ನಮ್ಮನೇಲಿ ನನ್ನೊಟ್ಟಿಗೆ ಇದ್ದುಬಿಡ್ತೀಯಾ?"

"ಆಕೆ?"

"ನನ್ನ ಜತೆಗೆ ಆಡೋದಕ್ಕೆ ಯಾರೂ ಇಲ್ಲ."

"ನಂಗೆ ಪಪ್ಪ ಇದ್ದಾಯೆ."

"ಹೌದು ನಿನಗಿದ್ದಾರೆ. ನನಗಿಲ್ಲವಲ್ಲ?"

"ಚತ್ತು ಹೋಗಿದಾಯೆ?"

"ಯಾರಪ್ಪ ಸತ್ತುಹೋಗಿದ್ದಾರೆ?"

“ ನನ್ನಮ್ಮ. ಓ  ಅಯಿ ನೋಡು. ” ಅನ್ನುತ್ತ ಪುಟ್ಟ  ತೋರುಬೆರಳಿಂದ ಎದುರುಗೋಡೆಗೆ ತೂಗಹಾಕಿದ್ದ  ಒಂದು  ತೈಲಚಿತ್ರವನ್ನು  ಸೂಚಿಸಿದಳು. “ ಕಣ್ಣು ಮುಚ್ಚಿದಾಯೆ  ನೋದು. ಇನ್ನು ಅವಯು ಬಯುದಿಯಂತೆ. ”

“ ಈಗ ನಾನಿದ್ದೇನಲ್ಲ, ನಿನ್ನ ಹತ್ರ. ”

“ ಆಕೆ ?”

“ ನೀನಿದ್ದೀಯಂತ ಬಂದೆ. ”

ಆದರೆ ಪಂಬಿಗೆ ಮಾಲತಿಯ  ಆಗಮನದ ಆವಶ್ಯಕತೆ ಸ್ಪಷ್ಟವಾದ ಹಾಗೆ ತೋರಲಿಲ್ಲ. ತಂದೆ ಒಳಗೆ ಬಂದುದನ್ನು ನೋಡಿ  ಕೆಳಗೆ  ಜಾರಿ ದುಡುದುಡು ಓಡಿದಳು.  ಮಾಲತಿ ಎದ್ದು ನಿಂತಳು.  ಅದನ್ನು ನೋಡಿ  ಗೋಪಿನಾಥ ತಟಸ್ಥನಾಗಿ,

“ ನಾನು ಬಂದೊಡನೆ ಎದ್ದು ನಿಲ್ಲುವ ಕ್ರಮ  ಯಾವುದಿದು ?” ಎಂದು ಪ್ರಶ್ನಿಸುತ್ತ ಮುಂದೆ ಬಂದು ಮಗುವನ್ನೆತ್ತಿಕೊಂಡು  ಕುಳಿತನು.  ಮಾಲತಿಯೂ ಕುಳಿತಳು.

“ ಅಮ್ಮ ಎಲ್ಲಿ ?”

“ ಹಾಲಿಗೆ  ತಂಬಿಗೆ  ಹೊರಗಿಟ್ಟುಬಿಟ್ಟು  ಬರ್ತೀನೆಂತ  ಹೋದರಷ್ಟೆ. ”

“ ಇವಳಿದ್ದರೆ ಸಾಕಲ, ಅಜ್ಜಿ. ”

ಪಂಬಿಗೆ ಕೋಪಬಂದು ದುಂಡಗಾದ ಮೊಣಕೈಯಿಂದ ತಿವಿದಳು.

“ ನನ್ನ ಜತೆಗೆ ಬಂದು ಬಿಡೂಂದೆ, ಅವಳನ್ನ. ”

“ ಅವಳು ಹೋದರೆ ನನ್ನ ಗತಿ ?”

“ ಆದರೆ ಅವಳು ಒಪ್ಪಬೇಕಲ್ಲ. ನಾನೇ  ಇಲ್ಲಿದ್ದುಬಿಡ್ತೇನೆ.  ದಾದಿಯಾಗಿ ಟ್ಟುಕೋ ಅಂದೆ.” ಈ ಮಾತನ್ನು ಮಗುವಿಗೆ ಹೇಳಬೇಕೆಂದಿದ್ದಳು ಮಾಲತಿ. ಆದರೆ ಹಾಗನ್ನುವುದು ಶರವಲ್ಲವೆಂತ ಹೇಳಲಿಲ್ಲ. ಈಗ ತಾನಾಗಿ ಆ ಮಾತು ಹೊರಬಿತ್ತು. ಹೇಳಿಬಿಟ್ಟು ನಾಚಿದಳು.

“ಇನ್ನಷ್ಟು ಕಷ್ಟಕ್ಕೆ ಬಂತಲ್ಲ, ರೇಶನ್ ಕಾಲದಲ್ಲಿ ?” ಈ ರೀತಿ ದಾರಿತಪ್ಪಿ ಹೋದ  ಮಾತನ್ನು  ತಿರುಗಿಸಿ ಸರಿಪಡಿಸಿದ್ದಕ್ಕೆ  ಮಾಲತಿ  ಆತಗೆ  ಕೃತಜ್ಞಳಾದಳು.

ಇಂದಿರಮ್ಮ ಒಳಗಿಂದ ಬಂದರು.“ ಏನು  ಗೋಪೀ,  ಇಷ್ಟರಲ್ಲೇ  ಆಗಿ

ಹೋಯಿತೇನು ನಿನ್ನ ಕಚೇರಿ ?"

"ಇಲ್ಲ ಇನ್ನೂ ಸುರುವಾಗಿಲ್ಲ. ನೀವೇ ತೀರಿಸಿಕೊಳ್ಳಿ ರಾಜಿಯಿಂದ ಅಂತ ಅವರ ತಲೆ ತಲೆ ಗಂಟುಹಾಕಿ ಬಂದಿದ್ದೇನೆ. ರಾಜಿ ಪ್ರಸ್ತಾಪ ಎಷ್ಟು ದೂರ ಸಾಗಿದೇಂತ ನೋಡಿಕೊಂಡು ಬರ್ತೀನೆ" ಎಂದು ಎದ್ದು ಹೊರಟನು ಪಂಬಿಯನ್ನು ಕೆಳಗಿಳಿಸುತ್ತ.

"ನಾನು ಬರ್ತೀನೆ" ಅನ್ನುತ್ತ ಪಂಬಿಯೂ ಹೊರಟಳು.

"ನೀನ್ಯಾಕೆ ಅಧಿಕಪ್ರಸಂಗಿ ?"

"ನೋಯಕ್ಕೆ."

"ಏನು ನೋಡೋದಕ್ಕೆ?"

"ಯಾಜಿ, ನಾನು ಯಾಜಿ ನೋಯೇಯ."

ಗೋಪಿನಾಥ ನಗುತ್ತ ಮಗಳ ಕೈಬಿಡಿಸಿಕೊಂಡು, "ರಾಜಿ ನೋಡೋದಕ್ಕೆ ಅದೇನು ಸಿನೆಮ ಸರ್ಕಸಲ್ಲ. ನೀನಿಲ್ಲೇ ಇರು. ಅತ್ತೆಗೆ ನಿನ್ನ ಆಟಗೆ ಸಾಮಾನೆಲ್ಲಾ ತೋರಿಸು" ಎಂದು ಪುಸಲಾಯಿಸಿ ಹೋದನು.

ಮಾಲತಿ ಮಗುವನ್ನೆತ್ತಿಕೊಂಡು, "ಎಲ್ಲಿದೆ ಇವಳ ಸಂಸಾರ ?" ಎಂದು ಕೇಳಲು ಇಂದಿರಮ್ಮ "ಆಫೀಸಿನ ಪಕ್ಕದ ಕೋಣೆತುಂಬ ಅವಳದೇ ವಸ್ತು ಒಡವೆಗಳು. ಮುಂಚೆ ಗೋಪೀದು ಬೆಡ್ರೂಮಾಗಿತ್ತು." ಅಂದರು. ಮಾಲತಿಯನ್ನು ಬರಹೇಳಿ ಪಂಬಿಯ ಕೋಣೆಕಡೆಗೆ ಹೋದರು. ಅದರ ಬಾಗಿಲಿಗೊಂದು ಬಣ್ಣಬಣ್ಣದ ಪರದೆ ಹಾಕಿತ್ತು. ಅದನ್ನು ಸರಿದು ತೋರಿಸಿದರು. ಹೊಸಲನ್ನು ದಾಟಿ ಮಾಲತಿ ಒಳಗೆ ಹೋದಳು. ಅಲ್ಲಿ ಚೆಲ್ಲಾಪಿಲ್ಲಿಯಾಗಿ ಲೆಕ್ಕವಿಲ್ಲದಷ್ಟು ಆಟದ ಸಾಮಾನುಗಳು ಹರವಿದ್ದವು. ಗೋಪಿನಾಥನಿಗೆ ತನ್ನ ಪ್ರಾಣಪುಷ್ಪವಾಗಿದ್ದ ಮಗುವಿನ ಮೇಲಿನ ಮಮತೆಯು ದೇಶವಿದೇಶಗಳ ಕಲ್ಪವೃಕ್ಷಗಳನ್ನು ಸೂರೆ ಮಾಡಿ ತಂದ ಆ ಬಾಲವಿನೋದ ವಸ್ತುಗಳ ವಿವಿಧ ವಿಪುಲತೆಯಲ್ಲಿ ರೂಪುಗೊಂಡಿತ್ತು. ಚಂದ್ರಮಾವನು ಮಕ್ಕಳ ಕನಸುಗಳನ್ನು ಕಟ್ಟಲು ಈ ಶಿಶುವಿಹಾರದಿಂದಲೇ ಉಪಕರಣಗಳನ್ನು ಒದಗಿಸಿಕೊಳ್ಳುತ್ತಿರಬೇಕೆಂದು ತೋರಿತು ಮಾಲತಿಗೆ. ಕಣ್ಣೊರಸಿಕೊಂಡು ಮತ್ತೆ ನೋಡಿದಳು. ಇಂದಿರಮ್ಮ ಹೊರಟು ಹೋದದ್ದು ಆಕೆಗೆ ಗೊತ್ತೇ ಆಗಲಿಲ್ಲ.

ಎಷ್ಟು ಹೊತ್ತು ಅಲ್ಲಿ ಜಾರಿತೋ ತಿಳಿಯಲಿಲ್ಲ. ಪಂಬಿಯ ಅತಿಥಿಯಾಗಿ ಒಂದು ಚಿಕ್ಕ ಚಾಪೆಯಚೌಕದ ಮುಂದೆ ಊಟಕ್ಕೆ ಕುಳಿತಳು. ಪಕ್ಕದ 'ಎಲೆ' ಮುಂದೆ ಸಿಂಡಿ ಮೂಗಿನ ಕೆಂಡ ಮುಸುಡಿನ ದೊಡ್ಡ ಸೆಲೂಲೈಡ್ ಗೊಂಬೆಯೊಂದು ಕೂತಿತ್ತು. ಮನೆಯಾಕೆ ಬಯಸಿದ್ದನೆಲ್ಲಾ ಬಡಿಸಿ ಉಪ ಚರಿಸಿದಳು. ಎರಡು ಪುಟ್ಟ ಅಂಗೈಗಳೇ ಆಕೆಯ ಅಕ್ಷಯಪಾತ್ರೆ, ಅಡುಗೆ ಏನೆಂತ ಮೊದಲೇ ಹೇಳಿಬಿಟ್ಟಿದ್ದಳು. 'ಬೆಂಡೆಕಾಯಿ ಹುಯಿ, ತಾವು, ಗೊಜ್ಜು, ಉಪ್ಪುಕಾಯಿ, ಅಟ್ಟೀ, ಮತ್ತೇನಿಯ್ಯಾ, !' ಅದೇನು ಅಷ್ಟೇ. ಪಲ್ಯ ಇಲ್ಲವೆ? ಎಂದು ಕೇಳಿದ್ದಕ್ಕೆ 'ಪಯ್ಯಕ್ಕೇನು ಚಿಕ್ಕದಿಯ್ಯ' ಅಂದಿದ್ದಳು. ಆದರೆ ಭಕ್ಷ್ಯ ಗಳಿಗೇನೂ ಕೊರತೆಯಿರಲಿಲ್ಲ. ಕೇಳೋದೇ ತಡ, ಕೈ ಜಾಡಿಸಿ 'ತಿನ್ನು' ಅನ್ನುತ್ತಿದ್ದಳು. ಈ ತನ್ನ ಪ್ರಹಸನಕ್ಕೆ ತಾನೇ ನಗಬಾರದಲ್ಲ, ಎಂಬದರಿಂದ ಚೆಂದುಟಿಗಳನ್ನು ಒತ್ತಿ ಹಿಡಿದಿದ್ದಳು. ಆದರಾತಿಶಯದಿಂದ ಕಣ್ಣುಗಳು ಅರೆ ಮುಚ್ಚಿದ್ದವು. ಮಾಲತಿ ಮೂಗು ಚಾಪೆಗೆ ತಗಲುವಷ್ಟು ತಲೆತಗ್ಗಿಸಿ ರಭಸ ದಿಂದ ಪಂಚಭಕ್ಷ್ಯಪರಮಾನ್ನವನ್ನು ಬಜಾಯಿಸುತ್ತಿದ್ದಳು. ಒಂದಿಂಚು ಎತ್ತ ರದ ಬಣ್ಣದ ಲೋಟವನ್ನೆತ್ತಿ ಗುಟುಗುಟು ನೀರು ಕುಡಿಯುತ್ತಿದ್ದಳು. ಇನ್ನೂ ಬೇಕು, ಇನ್ನೂ ಬೇಕನ್ನುತ್ತಿದ್ದಳು. ಬಾಯಿ ಚಪ್ಪರಿಸಿ ತೇಗುತ್ತಿ ದ್ದಳು. ತಿಂದದ್ದು ವಿಪರೀತವಾಗಿ ಎದೆ ನೇವರಿಸಿಕೊಳ್ಳುತ್ತಿದ್ದಳು. ಈ ಮಧ್ಯೆ ಗೋಪಿನಾಥ ಆಕೆಯ ಹಿಂದುಗಡೆ ಬಾಗಿಲ ಬಳಿ ಬಂದು ಎವೆಯಿಕ್ಕದೆ ನೋಡುತ್ತಿದ್ದುದು ಗಮನಕ್ಕೇ ಬರಲಿಲ್ಲ.

ಆತ "ಭಲೇ ಔತಣ, ಅಲ್ವೇ?" ಎಂದಣಕಿಸಿದಾಗ ಫಕ್ಕನೆ ನಾಚಿಕೆ ಯಿಂದ ತಲೆತಗ್ಗಿಸಿ ನಕ್ಕಳು.

"ಮೂರು ವರ್ಷಗಳಿಂದ ನಾನು ಹಂಬಲಿಸುತ್ತಿರುವ ತಿಂಡಿಗಳನ್ನೆಲ್ಲ ನೀವು ಒಂದೇ ಸಿಟ್ಟಿಂಗ್ನಲ್ಲಿ ನನ್ನ ಕಣ್ಣೆದುರಿಗೇ ಸಫಾಯಿ ಮಾಡಿಬಿಟ್ರಲ್ಲಾ? ಏನಾಶ್ಚರ್ಯ, ಏನನ್ಯಾಯ!" ಎಂದನು.

"ನೀವು ಒಳಗೆ ಬರೋಬದಲು ಅಲ್ಲೇ ಬಾಯಿನೀರು ಸುರಿಸುತ್ತಾ ನಿಂತಿದ್ದೇ ಅನ್ಯಾಯ, ಆಶ್ಚರ್ಯ. ನನಗಿನ್ನು ನಿಮ್ಮ ಕಣ್ಣು ತಗಲಿ ಅಜೀರ್ಣ ವಾಗದಿದ್ದರೆ ಸಾಕು." ಎಂದಳು ಮಾಲತಿ, ಪಂಬಿಯ ಸಹವಾಸದಿಂದ ಹಾಸ್ಯಾತುರಳಾಗಿ.

ಅಷ್ಟರಲ್ಲಿ " ಪಪ್ಪ ಬಯ್ಯಿ, ನೀನೇಯು" ಅನ್ನುತ್ತ ಪಂಬಿ ಮಾಲತಿಯನ್ನು ಹಿಡಿದೆತ್ತಲು ಸಾಹಸಮಾಡಿದಳು.

" ಛಿ! ಆವರನ್ನೆಬ್ಬಿಸಬಾರದು ಪಂಬಿ. ಇನ್ನೂ ಆಗಿಲ್ಲ ಅವರೂಟ. ನಾನೂ ಬಂದೆ, ಇಲ್ಲಿ ಜಾಗವಿದೆ. " ಅನ್ನುತ್ತ ಮಾಲತಿಯ ಪಕ್ಕದಲ್ಲಿದ್ದ ಸೆಲೂಲೈಡ್ ಅತಿಥಿಯನ್ನು ಆಚೆಗಿಟ್ಟು ಕುಳಿತನು.

ಆಗ ಇಂದಿರಮ್ಮ ಬಂದು ಆಚ್ಚರಿಗೊಂಡು, " ಇದೇನು ಗೋಪೀ, ಹುಡು ಗಾಟ ? ಮಾಲತೀನ ಪಂಬಿಯ ಉಪಚಾರದಲ್ಲೇ ಮುಗಿಸಿ ಕಳುಹಿಸೋಣಾಂ ತಿದ್ದೀಯಾ ? " ಎಂದು ಕೇಳಿದರು.

" ಇಲ್ಲಮ್ಮ. ನಿನ್ನ ಪಾಲಿನದು ತಯಾರಾಯಿತೇ ? ಸರಿ, ಹಾಗಾದರೆ ಹೋಗೋಣ. " ಅನ್ನುತ್ತ ಎದ್ದ.

" ಬಾ ಮಾಲತಿ, ಒಳಗೆ ಬಂದುಬಿಡು, ಒಂದು ನಿಮಿಷ. " ಅಂದರು ಇಂದಿರಮ್ಮ. ಮತ್ತೆ " ಪಂಬೀ, ನೀನಿಲ್ಲೇ ಇರ್ತೀಯಾ, ಬರ್ತೀಯಾ?" ಎಂದು ಕೇಳಿದರು.

" ನಾ ಬಯದಿಯ. ಚಾಮುಂದಿ ಇಚ್ಚಿ ಮಾದದೆ " ಅಂದಳು ಪಂಬಿ.

ಮಾಲತಿಗೆ ಅರ್ಥವಾಗದೆ ಇಂದಿರಮ್ಮನ ಹತ್ತಿರ ವಿಚಾರಿಸಿದಳು. ಅವರಿಗೂ ಗೋಪಿನಾಥನಿಗೂ ಇಬ್ಬರಿಗೂ ನಗುಬಂತು. " ಚಾಮುಂಡಿ ಅಂದರೆ ಅವಳ ಕೂಸು. ನಿನ್ನ ಜತೆಗೆ ಊಟಕ್ಕೆ ಕೂತಿತ್ತಲ್ಲ, ಟೊಮೇ ಮುಸುಡಿಂದು, ಅದೇ. ಅದು ಹೇಸಿಗೆ ಮಾಡಿದೆಯಂತೆ. ತಿಂದದ್ದು ಜಾಸ್ತಿಯಾಗಿರಬೇಕು. ಅದನ್ನ ಬಳೀತಿರಲಿ ಅವಳು. ನಾವು ಹೋಗೋಣ ಬನ್ನಿ. " ಅಂದರು, ಇಂದಿರಮ್ಮ ತಾನು ಮುನ್ನಡೆಯುತ್ತ, ಮಾಲತಿಯನ್ನು ಮುಂದೆ ಹೋಗುವಂತೆ ಹೇಳಿ ಗೋಪಿನಾಥ ಹಿಂದಿನಿಂದ ನಿಧಾನವಾಗಿ ಆಕೆಯನ್ನು ಆಪಾದಮಸ್ತಕ ಅವ ಲೋಕಿಸುತ್ತ ಸಂತೋಷಬಡುತ್ತ ಹಿಂಬಾಲಿಸಿ ಹೋದನು.

ಅಡುಗೆಮನೆಯಲ್ಲಿ ಬೇರೆಬೇರೆ ತಟ್ಟೆಗಳಲ್ಲಿ ಜಹಾಂಗೀರು, ಕೇಸರಿಬಾತು, ಪೂರಿಪಲ್ಯ, ತೆಂಗಿನಕಾಯಿ ಬರ್ಫಿ, ಕಿತ್ತಳೆಹಣ್ಣು, ಬೆಳ್ಳಿಯ ಲೋಟಗಳಲ್ಲಿ ಕಾಫಿ, ಕುಳಿತುಕೊಳ್ಳುವುದಕ್ಕೆ ಮಣೆಗಳು, ಕೈ ತೊಳೆಯುವುದಕ್ಕೆ ಬಿಸಿನೀರು, ಕರವಸ್ತ್ರಗಳು ಎಲ್ಲವೂ ಸುಸಜ್ಜಿತವಾಗಿದ್ದವು.

" ಕೂತಕೋಮ್ಮಾ ಮಾಲತಿ. ಗೋಪಿ, ನೀನೇನು ಮತ್ತೆ? ಈಗಲಾದರೂ ತಿನ್ನಬಾರದೆ ? ಹೇಳಿ ಹೇಳಿ ಮಾಡಿಸಿದ್ದೀಯಲ್ಲ, " ಅಂದರು ಇಂದಿರಮ್ಮ.

" ಮಾಡ್ಸಿದ್ದಣ್ಣೋ ಮಹಾರಾಯ ಅಂತಲೇ? ಆಗಲಿ" ಅನ್ನುತ್ತ ಮಾಲತಿಯ ಪಕ್ಕದ ಮಣೆಯನ್ನು ಕೊಂಚ ದೂರ ಎಳೆದುಕೊಂಡು ಕುಳಿತನು.

" ಅವರೆಲ್ಲಿ ?" ಎಂದು ಮಾಲತಿ ಪ್ರಶ್ನಿಸಿದಳು.

" ಅವರು ರುದ್ರೀಗ್ಸರ ಬಂಗಲೆಗೆ ಹೋಗಿದ್ದಾರೆ. ಏನೋ ಅರ್ಜಂಟಂತೆ. ರುದ್ರೀಗ್ಸರ ಕಾರು ಬಂದಿತ್ತು. ಹತ್ತು ನಿಮಿಷದಲ್ಲೇ ಬರುತ್ತೇನೆ, ಒಳಗೆ ತಿಳಿಸಿಬಿಡು ಅಂದ್ರು."

" ನಿಮ್ಮ ರಾಜಿ ?"

" ನಮ್ಮ ರಾಜಿ ಮುಗಿದು ಮೂರು ದಿನ. ನಮ್ಮ ಕಾಫಿ ತಿಂಡಿನೂ ಮುಗಿಯಿತು."

" ಹಾಗಾದರೆ ಗಂಟೆ ಎಷ್ಟಾಗಿರಬಹುದು ?"

" ಎಷ್ಟೋ ಯಾರು ನೋಡಿದ್ದಾರೆ ? ತಿಂಡಿ ತಿನ್ನುವಾಗ ಗಂಟೆ ಸುದ್ದಿ ಎತ್ತಬಾರದು."

" ಯಾವ ಸುದ್ದಿ ಎತ್ತಿದರೂ ಇಂದಿರಮ್ಮ ಮಾಡಿದ ತಿಂಡಿಯ ರುಚಿ ಕೆಡದು. ಈ ಕೇಸರಬಾತಿಗೆ ಸಜ್ಜಿಗೆ ಎಲ್ಲಿಂದ ? ಸ್ಟೋರಿನ ಸಜ್ಜಿಗೆ ದುರ್ವಾಸನೆ ಅಂತಿದ್ರು ಅಮ್ಮ."

" ಸ್ಟೋರಿನದಲ್ಲ. ಮನೇಲೇ ಗೋಧಿ ಬೀಸಿಸಿದ್ದು" ಅಂದರು ಇಂದಿರಮ್ಮ.

"ಸ್ಟೋರಿನ ಸಜ್ಜಿಗೆಗೆ ಒಂದು ತೊಟ್ಟು ಸೆಂಟು ಹಾಕ್ಬಿಟ್ರೆ ಸರಿಹೋಗುತ್ತೆ. ಇದೆಲ್ಲಾ ಫಜೀತಿಯಾತಕ್ಕೇಂತ ಅಮ್ಮಗೆ ಸಾರಿ ಹೇಳ್ತಿದ್ದೇನೆ. ಆದರೆ ಯಾರು ಕೇಳ್ತಾರೆ ನನ್ನ ಮಾತು ?" ಅಂದನು ಗೋಪಿನಾಥ.

" ನಿಮ್ಮ ಡಿಪ್ಲೊಮಾಕ್ಕೆ ಸೆಂಟು ಹಾಕಿ ಕೊಟ್ಟಿರಬೇಕು, ಪಾಕಸ್ಥಾನದವರು" ಅಂದಳು ಮಾಲತಿ.

" ತಮಾಷೆಯಲ್ಲ. ಕಳೆದ ತಿಂಗಳು ಒಬ್ರು ಸ್ಟೋರಿನ ಸಜ್ಜಿಗೇನೂ ಮೈದಾಹಿಟ್ಟನ್ನೂ ಕಲೆಕ್ಟ್ರು ಮೂಗಿಗೆ ಹಿಡಿದು, 'ಇದನ್ನ ಹೇಗೆ ಸ್ವಾಮಿ ತಿನ್ನೋದು? ಅಂತ ಕೇಳಿದ್ದಕ್ಕ ಅವರು ಹೇಳಿಕೊಟ್ಟ ಉಪಾಯವಿದು."

ಮಾಲತಿಯ ಮುಖದಲ್ಲಿ ಅಪನಂಬಿಕೆಯ ಮುಗುಳ್ನಗೆ ಮೂಡಿದ್ದನ್ನು ನೋಡಿ ಇಂದಿರಮ್ಮ ನಕ್ಕು " ಒಂದೊಂದು ಸಲ ಒಂದೊಂದು ರೂಪದಲ್ಲಿ ಹೇಳ್ತಾನೆ ಈ ಕಥೇನ. ಎಷ್ಟು ಸುಳ್ಳೊ—" ಅಂದರು.

“ ಸುಳ್ಳು ? ನೀವೇನಂತೀರಿ ?” ಎಂದು ಗೋಪಿನಾಥ ಮಾಲತಿಯ ಅಭಿಪ್ರಾಯವನ್ನು ಯಾಚಿಸಿದನು.

“ ಸತ್ಯವಾಗಿರಬಹುದು. ಆದರೆ ಸುಳ್ಳಿನಷ್ಟು ಸ್ವಾರಸ್ಯವಿದೆ ಅದರಲ್ಲಿ. ”

“ ಸುಳ್ಳಲ್ಲ. ಅಮ್ಮಗಂತೂ ಸ್ವರಾಜ್ಯ ಸಿಗೋವರೆಗೆ ಮನಸ್ಸಿನ ಮಂಡಗಿಯೇ ಗತಿ. ”

“ ಅಥವಾ ಸೆಂಟಿನ ಸಜ್ಜಿಗೆ ” ಎಂದು ಮಾಲತಿ ಕೂಡಿಸಿಕೊಂಡಳು.

ಈ ರೀತಿ ಮಾಲತಿಯೂ ಗೋಪಿನಾಥನೂ ಹತ್ತಿರಹತ್ತಿರ ಕುಳಿತು ಒಂದೇ ಮನೆಯಲ್ಲಿ ಹುಟ್ಟಿ ಬೆಳೆದವರಂತೆ ಆತ್ಮೀಯತೆಯಿಂದ ತಿಳಿಮನಸ್ಸಿನಿಂದ ಸಲಿಗೆಯಿಂದಿರುವುದನ್ನು ನೋಡಿ ಇಂದಿರಮ್ಮಗೆ ಅಪೂರ್ವ ಆನಂದವಾಯಿತು. ಗೋಪಿನಾಥ ಯಾವಾಗಲೂ ಹಾಸ್ಯಪ್ರಿಯ, ಹರ್ಷಚಿತ್ತನೇನೋ ನಿಜ. ಆದರೆ ಇಂದಿನಷ್ಟು ಉಲ್ಲಸಿತನಾಗಿರದೆ ಎಷ್ಟೋ ಕಾಲವಾಗಿತ್ತು.

ಹೊರಗೆ ಕಾರು ಬಂದ ಸದ್ದು ಕೇಳಿಸಿ ಗೋಪಿನಾಥ ಎದ್ದು ಹೋಗಿ ರಾಘವೇಂದ್ರರಾಯರನ್ನು ಕರೆತಂದನು. ಮಾಲತಿ ಎದ್ದು ನಿಂತು. “ ನೀವ್ಯಾವಾಗ ನಮ್ಮನೇಗೆ ಬರುವುದು ?” ಎಂದು ಇಂದಿರಮ್ಮನನ್ನು ಕೇಳಿದಳು.

“ ಒಂದೆರಡು ದಿನ ಬಿಟ್ಟು ಬರ್ತೇನಪ್ಪ. ಇದೊಂದು ಕಾಲು ಕೊಂಚ ನೋವಿದೆ. ನೀವು ಬರ್ತಾ ಇರಬೇಕು, ಹೀಗೇ, ಏನು ರಾಘು, ನಿನಗೆ ಪುರಸತ್ತಿಲ್ಲದಿದ್ರೂ ಮಾಲತೀನ ಕಳುಹಿಸಿಕೊಡು. ನಮ್ಮವರದಾಗಿರೋದು ಈ ಪ್ರದೇಶದಲ್ಲಿ ನಮ್ಮದೇ ಎರಡು ಮನೆ. ಗೋಪಿ, ಪಂಬೀನ ಕೂಗು. ಮನೆಗೆ ಬಂದ ಮುತ್ತೈದೇನ ಹಾಗೇ ಕಳುಹಿಸುತ್ತೀಯಾ? ಅಡಿಕೆಲೆ ಕುಂಕುಮ ಕೊಡಿಸು” ಅಂದರು.

“ಕುಂಕುಮ ಕೊಡುವ ಅಧಿಕಾರ ನ್ಯಾಯವಾಗಿ ಗಂಡಸರಿಗೆ ಸಲತಕ್ಕದ್ದು. ಏನು ಸಂಪ್ರದಾಯವೋ ಕಾಣೆ. ಪಂಬೀ. ಪಂಬೀ ಬಂದಳಲ್ಲ. ” ಎಂದನು ಗೋಪಿನಾಥ. ಇಂದಿರಮ್ಮ ತಯಾರಿಸಿಟ್ಟಿದ್ದ ಬೆಳ್ಳಿಯ ಹರಿವಾಣದಿಂದ ಕುಂಕುಮದ ಕರಡಿಗೆಯನ್ನು ಮಗುವಿನ ಕೈಯಲ್ಲಿಟ್ಟು ಮುಚ್ಚಳ ತೆಗೆದು, “ಅತ್ತೀಗೆ ಕುಂಕುಮ ಕೊಡು, ತಾಯೀ. ಹಾಗಲ್ಲ, ನೀನು ಹಿಡಿಕೊಂಡಿರು. ಅವರೇ ತಕೋತಾರೆ ” ಎಂದು ಕೊಡಿಸಿದನು. ಹರಿವಾಣದಿಂದ ಆಡಿಕೆಲೆಯ ಪಟ್ಟಿಯನ್ನು ತಾನಾಗಿ ತಗೊಂಡು ಪಂಬಿಯ ಹತ್ತಿರವೂ ಇಂದಿರಮ್ಮನ ಹತ್ತಿರವೂ

ಹೋಗಿ ಬರುತ್ತೇನೆಂತ ಹೇಳಿ, ಗೋಪಿನಾಥನನ್ನು ನೋಡಲು ಮಾತು ಇಂಗಿಹೋಯಿತು. ಕಣ್ಣಿನಿಂದಲೇ ವಂದಿಸಿ ಹೋಗಿಬಿಟ್ಟಳು.

೧೪

ಆರು ದಿನಗಳಾದರೂ ಗೋಪಿನಾಥನ ಮನೆಯಿಂದ ವರ್ತಮಾನವೇ ಇಲ್ಲ. ಮಾಲತಿಗೆ ಅನುದಿನವೂ ಪ್ರಭೆಯ ಧ್ಯಾನ. ಊಟಕ್ಕೆ ಕುಳಿತಾಗ ಪ್ರಭೆ ತನ್ನ ಪುಟ್ಟ ಕೈಗಳನ್ನು ಜಾಡಿಸಿ ಬಡಿಸಿದಂತೆ ಕಾಣುವುದು. ಮಲಗಿದಾಗ ಮಗ್ಗುಲಲ್ಲೇ ಹುದುಗಿಕೊಂಡಂತೆ ಭಾಸವಾಗುವದು. ಅಂಥ ಮಗುವಿಂದಿಲ್ಲದ ಮನೆ ಮರುಭೂಮಿ ಎಂದನಿಸಿತು. ನಿತ್ಯ ನಿದ್ರಾಹಾರ ವಿಶ್ರಾಂತಿಗಳಲ್ಲಿ ಆಕೆಗೆ ಉಲ್ಲಾಸಾಸಕ್ತಿ ದಿನೇ ದಿನೇ ಕಡಿಮೆಯಾಗುತ್ತ ಬಂತು. "ಎರಡು ದಿನ ಬಿಟ್ಟು ಬರ್ತೇನೆಂತ ಹೇಳಿದ ಇಂದಿರಮ್ಮ ಆರು ದಿನವಾದರೂ ಬರಲಿಲ್ಲ. ಪಂಬಿನೂ ಕಳುಹಿಸಿಕೊಡಲಿಲ್ಲ. ಯಾರ ಹತ್ರ ಕಳುಹಿಸಬೇಕು ? ಗೋಪಿನಾಥರಾಯರ ಹತ್ರ. ಅವರೇತಕ್ಕೆ ಇಲ್ಲಿಗೆ ಬರುತ್ತಾರೆ ? ಬಂದು ಹೋಗಿಯಂತ ಅವರೊಡನೆ ಹೇಳುವುದಕ್ಕೂ ನನಗೆ ಆಗಲಿಲ್ಲ. ನಾಲಿಗೆ ನುಂಗಿಕೊಂಡೆ. ಮಾತಾಡುವುದು ಹಾಗಿರಲಿ; ಅವರನ್ನ ಸರಿಯಾಗಿ ಕಣ್ತುಂಬ ನೋಡಲೂ ಇಲ್ಲ. ಇನ್ಯಾವಾಗಲೋ ಏನೋ ! " ಎಂದು ಮಾಲತಿ ಕೊರಗಿದಳು. ಚಿತ್ರಾಟಾಕೀಸಿನಿಂದ ಮರಳಿ ಮನೆಗೆ ಬರುವಾಗ ಆಕೆಯ ಮನಸ್ಸಿನ ಅರ್ಧಾಂಶ ಪ್ರಭೆಯು ಸೂರೆಗೊಂಡು ಹೋಗಿದ್ದಳು. ಗೋಪಿನಾಥನ ಮನೆಯಿಂದ ಹಿಂತಿರುಗಿ ಬರುವಾಗ ಮಿಕ್ಕ ಅರ್ಧಾಂಶ ಗೋಪಿನಾಥನಲ್ಲೇ ಉಳಿದು ಹೋಯಿತು. ಮೊದಲು ಪ್ರಭೆಗಾಗಿ ಕಾತರಪಡುತ್ತಿದ್ದವಳು ಈಗ ಪ್ರಭೆಯ ತಂದೆಗಾಗಿ ಸಹ ಕಾತರಪಟ್ಟಳು. ಆತನನ್ನು ಒಂದು ಬಾರಿಯಾದರೂ ಸಲಿಗೆಯಿಂದ ಮಾತನಾಡಿಸಲಿಲ್ಲ. ಒಂದು ಸಲವಾದರೂ ಆತನೊಡನೆ ಒಬ್ಬಳೇ ಜೇರಿ ಇರಲು ಅವಕಾಶವಾಗಲಿಲ್ಲ. ಸಿನೆಮದಲ್ಲಿ ಸುಮಿತ್ರೆಯಿದ್ದಳು ಮಧ್ಯ. ಮನೆಯಲ್ಲಿ ಇಂದಿರಮ್ಮ ಇದ್ದರು ಸುತ್ತಮುತ್ತ. ಎಂಬ ಮರುಕ ದಿನೇ ದಿನೇ ಪ್ರಬಲವಾಗುತ್ತ ಬಂತು. ಆದರೆ ಈ ಪ್ರತ್ಯಾಸೆಯನ್ನು ಮಾಲತಿ ತೀರ ಒಪ್ಪಿಕೊಳ್ಳಲಿಲ್ಲ. ಮನಸ್ಸು ಒಂದೆಡೆಗೆ ಬುದ್ಧಿ ಇನ್ನೊಂದೆಡೆಗೆ ಸೆಳೆಯುತ್ತಿತ್ತು. ಮನಸ್ಸಿಗೆ ಬೇಕೆನಿಸಿದ್ದು ಬುದ್ಧಿಗೆ ಬೇಡವಾಗಿತ್ತು. ಆದರೂ ಸಮಯ ಸಂದಂತೆಲ್ಲ ಹೃದಯದ ಚಾಪಲ್ಯವೇ ಪ್ರಧಾನವಾಗುತ್ತ ಬಂತು.

ಗೋಪಿನಾಥನ ಆಕೃತಿ, ನಿಲವು, ಗೆಲವು ಆಕೆಯ ಕಣ್ಣಮುಂದೆ ಹಾಯ್ದು ಹೋಗುತ್ತಿದ್ದವು. ಆಕೆಯ ಏಕಾಂತದ ಪರಿವಾರದಂತಿದ್ದವು; ಪರಸ್ಥಳದಲ್ಲಿ ಬಿಡಾರ ಹುಡುಕುವ ಪ್ರಯಾಣಿಕರು ಹೊಂಚುಹಾಕುವಂತೆ ಆಕೆಯ ಹೃದಯದ ಹೆದ್ದಾರಿಗಳಲ್ಲಿ ಅಡ್ಡಾಡುತ್ತಿದ್ದವು.

ಆತನ ರೂಪರೇಖೆಗಳಲ್ಲಿ ಯಾವುದೂ ಆಕೆಯ ಚಿತ್ತಭಿತ್ತಿಯಲ್ಲಿ ಕೆತ್ತಲ್ಪಡದಿದ್ದರೂ ಆಕೆ ಕಣ್ಣಿಟ್ಟು ನೋಡುವ ವೈಶಿಷ್ಟ್ಯವನ್ನು ಮಾತ್ರ ಆಕೆ ಮರೆತಿರಲಿಲ್ಲ. ಬೇರೆ ಯಾರಲ್ಲೂ ಕಂಡಿರದ ಒಂದಪೂರ್ವ ಕಾಂತಿ ಆತನ ಕಣ್ಣುಗಳಲ್ಲಿತ್ತು. ಕರುಣೆಯೋ, ಕುತೂಹಲವೋ, ಕೌತುಕವೋ, ಯಾವುದೋ ಒಂದು ಬಗೆಯ ಅಜೇಯ ತೇಜಸ್ಸು. ಆ ನೋಟದ ಕಿರಣ ಎದೆಯನ್ನು ಭೇದಿಸುವ ಪ್ರಶ್ನೆಯಂತಿತ್ತು. ಆ ರೀತಿ ನೋಡುವಾಗ ಮೊದಲೇ ಉದ್ದುದ್ದವಾದ ಆತನ ಕಣ್ಣುಗಳು ಅರೆಮುಚ್ಚಿಕೊಂಡು ಇನ್ನಷ್ಟು ನೀಳವಾಗಿ ಕಾಣುತ್ತಿದ್ದವು. ಅವುಗಳಲ್ಲಿ ಅವುಗಳ ಹಿಂದುಗಡೆ ನೋಡಿದವರನ್ನು ಅಣಕಿಸುವ ಕೆಣಕಿಸುವ ಆಲಂಗಿಸುವ ಒಂದು ತುಂಟತನವಿತ್ತು. ಮಾಲತಿಗೆ ತನ್ನ ತಂದೆಯ ನೆನಪಾಯಿತು. ಅವರಲ್ಲೂ ಇದೇ ತೆರನ ಆಕರ್ಷಣವಿತ್ತು. "ನನಗೆ ಗೊತ್ತಿಲ್ಲವೆ, ನಿನ್ನ ಗುಟ್ಟು? ನಿನ್ನ ಯೋಗ್ಯತೆ ನಿನ್ನ ಸೌಂದರ್ಯ ಎಷ್ಟೆಂತ ನಿನಗೇ ಗೊತ್ತಿಲ್ಲ. ನನಗೆ ಗೊತ್ತು. ಬಾ, ನನ್ನ ಬಳಿಗೆ" ಎಂಬಂತೆ.

"ನನ್ನ ತಂದೆಯಂತೆ ಗೋಪಿನಾಥರಾಯರೂ ನನ್ನೊಂದಿಗೆ ಸಲಿಗೆಯಿಂದಿದ್ದರೆ, ಎಷ್ಟು ಸುಖ! ಅವರು ನನ್ನಲ್ಲಿ ನಾನು ಅವರಲ್ಲಿ ಮನಬಿಚ್ಚಿ ಮಾತನಾಡುವಂತಿದ್ದರೆ, ಎಷ್ಟು ಸಂತೋಷ! ಅವರು ಹೇಳುತ್ತಿದ್ದರೆ, ಬಹುಶಃ ಗಂಟೆಗಟ್ಟಲೆ ಕೇಳುತ್ತ ಕುಳಿತಿರಬಹುದು, ಅವರ ನುಡಿ ಅವರ ನೋಟಗಳಿಂದ ಕಚಗುಲಿಯಿಡಿಸಿಕೊಳ್ಳುತ್ತ. ಆದರೆ ಇದಕ್ಕೆಲ್ಲ ಅವಕಾಶ ದೊರೆಯಬೇಕಲ್ಲ! ಯಾವಾಗಲೋ ಏನೋ! ಮಾತ್ರವಲ್ಲ. ಅವರಿಗೇನು ಬೇಕಾಗಿಯದೆ ನನ್ನ ಒಡನಾಟ? ಅವರಾಯಿತು; ಅವರ ಮುದ್ದಿನ ಮಗುವಾಯಿತು. ಮಗುವಿನ ಮೇಲೂ ಅವರಿಗೆ ಮಮತೆ ಎಷ್ಟಿದೆಯೋ. ಒಂದೊಂದು ಸಮಯ ಅವರನ್ನು ನೋಡುವಾಗ ಸರ್ವಪರಿತ್ಯಾಗ ಮಾಡಿದ ಯೋಗಿಯಂತೆ ಕಾಣುತ್ತಾರೆ. ಆದರೆ ವಯಸ್ಸಿನಲ್ಲಿ ನನಗಿಂತ ಹತ್ತು ವರ್ಷಕ್ಕೋ ಏನೋ ದೊಡ್ಡವರು; ಅಷ್ಟೆ. ಈಗಲೇ ಸನ್ಯಾಸವೇ?

" ನಾನಿದ್ದಾಗ ನಡತೆಯಲ್ಲಿ ಬಿಗುಮಾನವಿರುವುದು ಅವರಿಗೆ ಸಹಜ. ಸಂಬಂಧಿಕರಾದರೇನು? ನನ್ನ ಪಾಲಿಗೆ ಪರಗಂಡಸು. ಅವರೇನು, ಇತರರೇನು? ಎಲ್ಲರೂ ಒಂದೇ. ಹೆಂಗಸರಿಗೆ ಬಂಧುಗಳೇ ಇಲ್ಲ. ಗಂಡಸರಲ್ಲಿ ಗೆಳೆಯರೇ ಇಲ್ಲ ಪ್ರಾಯಕ್ಕೆ ಬಂದ ಪುರುಷರೆಲ್ಲ ಪರಪುರುಷರೇ. ತಂದೆಯೇನು ಅಣ್ಣ ತಮ್ಮಂದಿರೇನು, ಹೊಟ್ಟೇಲಿ ಹುಟ್ಟಿದ ಮಕ್ಕಳೇನು? ಎಲ್ಲರೂ ಪಾತಿವ್ರತ್ಯಕ್ಕೆ ಭಂಗ ತರುವಂಥವರೇ. ಸಲಿಗೆಗೆ, ನಂಬಿಕೆಗೆ, ಅನ್ಯೋನ್ಯತೆಗೆ ಅರ್ಹನಾದ ಗಂಡಸು ಪ್ರಾಯಶಃ ಒಬ್ಬನೇ ತಾಳಿಕಟ್ಟಿದ ಪ್ರಭೃತಿ. ಮಿಕ್ಕಾದವರೆಲ್ಲರೂ ಘಟಿಂಗರು. ಬದುಕನ್ನು ಬೂದಿಪಾಲು ಮಾಡತಕ್ಕವರು. ಯಾಕೆ ? ನಮ್ಮ ಪಾಲಿಗೆ ಬಂದ ದೇವರು ಸಹ ಚಿಕ್ಕವನೇ; ಬಾಲಗೋಪಾಲ !

" ಹೆಣ್ಣಾಗಿ ಹುಟ್ಟಬಾರದೂಂತ ಹಣೆ ಬಡಿದುಕೊಳ್ಳುವದು ಇದಕ್ಕೇ ಅಲ್ಲವೆ? ಬಾಲ್ಯದಿಂದಲೂ ಕಠಿಣಕಟ್ಟಪ್ಪಣೆ. ಆಟದಲ್ಲೂ ಪಾಟದಲ್ಲೂ ಹೀಗೇ ಆಡಬೇಕು, ಇಂತಿಷ್ಟೇ ಜಾಗದಲ್ಲಿ ಓಡಾಡಬೇಕು. ಹೆಣ್ಣುಮಕ್ಕಳು ಆಚೆ, ಗಂಡುಮಕ್ಕಳು ಈಚೆ. ನಡುವೆ ಬೆತ್ತ ಹಿಡಿದ ಮೇಸ್ಟ್ರು ಹಾಕಿದ ಗೆರೆ ದಾಟಿದರೆ, ಕಲಿಸಿದ ಕ್ರಮ ತಪ್ಪಿದರೆ, ಬೆನ್ನು ಪುಡಿ; ಅಥವಾ ಗಡೀಪಾರು. ಗುಣ, ಸ್ವಭಾವ, ಆರೋಗ್ಯ ಎಂಥದಿದ್ದರೂ ಸರಿಯೆ, ಎಲ್ಲರೂ ಏಕರೀತಿಯಿಂದ ವರ್ತಿಸಬೇಕು. ವ್ಯಕ್ತಿ ಭೇದಕ್ಕೆಡೆಯಿಲ್ಲ. ಸಾಮಾನ್ಯತೆಯೇ ಸುಖದ ಹೆದ್ದಾರಿ. ಅನುಕರಣವೇ ಮರ್ಯಾದೆಯ ರಾಜಮಾರ್ಗ. ಹಳ್ಳದ ಹನಿಯಂತಿರಬೇಕು. ರಥದ ಗಾಲಿಯಂತಿರಬೇಕು. ವಿನಯ ವಿಧೇಯತೆ ಇವೇ ಸ್ವರ್ಗದ ಬಾಗಿಲು ಕಾಯುವ ನಾಯಿಗಳು.

" ಆದರೆ ಅದೆಲ್ಲ ಮೊದಲಿಗಾಯಿತು. ಶಿಷ್ಯಸಂಪ್ರದಾಯಕ್ಕೆ ಕಟ್ಟು ಬಿದ್ದಿರುವವರು ಈಗ್ಯಾರಿದ್ದಾರೆ ? ಈ ಮಂಗಳೂರಲ್ಲಂತೂ ಭಯ–ಲಜ್ಜೆಗಳಿಂದ ತಲೆಬಾಗಿ ನಡೆಯುವ ಹೆಣ್ಣುಮಕ್ಕಳು ವಿರಳ. ಶಾಲೆಯಲ್ಲಿ ಬೆತ್ತದ ಬೆದರಿಕೆ, ಮನೆಯಲ್ಲಿ ಬತ್ತಲೆಯ ಹೆದರಿಕೆ. ಮತ್ತೆ ದೊಡ್ಡವಳಾದ ಮೇಲೆ ಸಂಸಾರದಲ್ಲಿ ಅತ್ತೆಯ ಅಂಕೆ, ನೆರೆಯಾಕೆಯ ನಾಲಿಗೆಯ ಅಂಜಿಕೆ. ಪರಗಂಡಸರ ಶಂಕೆ. ಇಡೀ ಬಾಳುವೆಯಲ್ಲಿ ಒಂದಿಷ್ಟೂ ಬೆಳಕಿಲ್ಲ. ಉಲ್ಲಾಸದ ಬದಲು ವಿರಕ್ತಿ; ಸುಖದ ಬದಲು ಸಂಕೋಚ, ಸಂತೋಷದ ಬದಲು ನಾಚಿಕೆ. ಇಂಥ ಸ್ಮಶಾನ ಸಂಸ್ಕೃತಿ ದಿನೇ ದಿನೇ ದೂರವಾಗುತ್ತಿದೆ. ದೂರವಾಗಬೇಕು. "

ಹೀಗೆ ವಿಚಾರ ತರಂಗಗಳಲ್ಲಿ ತೇಲುತ್ತ ಯಾವುದಾದರೊಂದು ರೇವಿಗೆ ತಲುಪುವಳು. ಅತ್ತೆಯನ್ನು ಕೇಳುವಳು ನಿರಾಶೆಯಿಂದ. "ಇವತ್ತಾದರೂ ಬಂದಾರೇನು ಇಂದಿರಮ್ಮ ?"

"ಏನೋಪ್ಪ. ಬಂದರೂ ಬೆಳಿಗ್ಗೆ ಬರಲಾರಳು. ಸಾಯಂಕಾಲ ಬಂದರೂ ಬರಬಹುದು."

ಈ ರೀತಿ ಆರು ದಿನಗಳು ದಾಟಿದ ನಂತರ ನಿರೀಕ್ಷಣೆಯೇ ಒಂದು ನಿತ್ಯಸಂಕಟವಾಗಿ ಬಿಟ್ಟಿತು. ಭಾನುವಾರ ಶಾರದಮ್ಮನ ಹತ್ತಿರ ತಿರುಗಿ ಕೇಳಿದಳು.

"ಇಂದಿರಮ್ಮನ ಸಮಾಚಾರವೇ ಇಲ್ಲ. ಅದೇನಮ್ಮ ?"

"ನನಗೇನು ಗೊತ್ತು ಮಾಲತಿ? ಕಾಲುನೋವು ಅಂತಿದ್ರು ಅಂತ ನೀನೇ ಹೇಳಿದಿ. ಜಾಸ್ತಿಯಾಯಿತೋ ಏನೋ ಪಾಪ."

ಇದನ್ನು ಕೇಳಿ ಮಾಲತಿಯ ಮುಖ ಸಪ್ಪಗಾಯಿತು. ಕಣ್ಣು ಒದ್ದೆಯಾಯಿತು. ಅದನ್ನು ನೋಡಿ ಶಾರದಮ್ಮ "ಹಾಗೊಂದು ವೇಳೆ ಇವತ್ತೂ ಬರದಿದ್ರೆ ನೀನೇ ಹೋಗಿಬಾ" ಅಂದರು. ಮಾಲತಿಗೆ ಹೊಸ ಜೀವ ಬಂದ ಹಾಗಾಯಿತು.

ಸಾಯಂಕಾಲ ಸುಮಾರು ನಾಲ್ಕುಗಂಟೆಗೆ ಆಕೆ ಮುಖ ತೊಳಕೊಳ್ಳುವುದಕ್ಕೆ ಬಚ್ಚಲಿಗೆ ಹೋದವಳು ಬರುವಾಗ ಹಾಲಿನಲ್ಲಿ ರಾಘವೇಂದ್ರರಾಯರು ಒಂದು ಕಾಗದ ಓದಿ ಹೇಳುತ್ತಿದ್ದರು ಶಾರದಮ್ಮ ನಿಂತು ಕೇಳುತ್ತಿದ್ದರು. "ಮುಗ್ಗುಲಾಗುವುದಕ್ಕೂ ಆಗುವುದಿಲ್ಲ." ತನ್ನ ಕೋಣೆಗೆ ಹೋಗುತ್ತಿದ್ದ ಮಾಲತಿ ನಿಂತು ಕೇಳಿದಳು. "ಕೆಲಸಕ್ಕೆ ಜನ ಸಿಕ್ಕುವದಿಲ್ಲ. ನಾನು ನಾಳೆ ಕಚೇರಿಗೆ ಹೋಗಿಬಿಟ್ಟರೆ ಮಗುವನ್ನು ನೋಡಿಕೊಳ್ಳುವವರಿಲ್ಲ. ಅಮ್ಮ ವಾಸಿಯಾಗಿ ಮನೆಯೊಳಗಾದರೂ ಓಡಾಡುವ ತನಕ ಹಗಲಿನ ಹೊತ್ತಿಗಾದರೂ ಶಾರದಮ್ಮ ಬಂದು ಹೋದರೆ ಮಹದುಪಕಾರವಿತ್ತು, ಅಂತ ಅಮ್ಮ ಹೇಳಿದ್ದಾಳೆ. ಡಾಕ್ಟರು ವಾಸುದೇವ ಪೈಗಳು ದಿನಕ್ಕೊಂದು ಸಲ ಬಂದು ನೋಡಿಕೊಳ್ಳುತ್ತಿದ್ದಾರೆ. ಒಂದು ವಾರದೊಳಗೆ ಗುಣವಾಗಬಹುದೆಂತ ಭರವಸೆ ಹೇಳುತ್ತಾರೆ."

" ಅಯ್ಯೋ, ಹೀಗಾದರೇನು ಗತಿ ? ವಾತದ ಉಪದ್ರ ಇಷ್ಟು ಜೋರಾಗದೆ ಬಹಳ ವರ್ಷವಾಯಿತು. ಏನಾದರೂ ಮಾಡಿಯೇ ತೀರಬೇಕಲ್ಲ" ಅನ್ನುತ್ತ ಶಾರದಮ್ಮ ತುಂಬ ಬೇಸರಪಟ್ಟಳು.

" ಸರಿ, ಹೇಗೆ ಬೇಕೋ ಹಾಗೆ ಮಾಡು; ನಾನೇತಕ್ಕೆ ಹೆಂಗಸರ ಆಲೋಚನೆಗೆ ?" ಅಂದು ಬಿಟ್ಟು ರಾಘವೇಂದ್ರರಾಯರು ತನ್ನ ಆಫೀಸಿಗೆ ಹೋಗುವುದರಲ್ಲಿದ್ದರು. ಆದರೆ ಶಾರದಮ್ಮ ಬಿಡಲಿಲ್ಲ.

" ಅಂಥ ತಲೆ ಹೋಗುವ ಕೆಲಸವೇನಿದೆ ಈಗ ? ಸ್ವಲ್ಪ ನಿಲ್ಲು."

" ಅಲ್ಲಮ್ಮ, ನಾನಿದ್ದು ಮಾಡೋದೇನಿದೆ ? ನೀನು ಹೋಗೋದಕ್ಕೆ ನನ್ನಡ್ಡಿಯಿಲ್ಲ. "

" ನಿನ್ನಡ್ಡಿ ನಿನ್ನಪ್ಪಣೆ ಹಾಗಿರಲಿ. ಬೆಳಗ್ಗಿಂದ ಸಂಜೆತನಕ ನಾನು ಅಲ್ಲೇ ಇದ್ದು ಬಿಟ್ಟರೆ ಇಲ್ಲಿ ?"

" ನಾನು ಕಚೇರಿಗೆ ಹೋದ ಮೇಲೆ ಹೋಗಿ ನಾನು ಬರುವಷ್ಟರೊಳಗೆ ಬಂದರಾಯಿತು. "

" ಚೆಲೊ ಆಲೋಚನೆ. ನಿನ್ನ ಹತ್ರ ಕೇಳಿದ್ದೇ ತಪ್ಪಾಯಿತು. "

ತಾಯಿ ಮಗ ಹೀಗೆ ಮಾತನಾಡುತ್ತಿದ್ದಾಗ ಮಾಲತಿ ಗಂಡನ ಕೈಯಿಂದ ಕಾಗದ ತೆಗೆದುಕೊಂಡು ಒಂದೆಡೆ ಕುಳಿತು ಓದಿದಳು. ಗೋಪಿನಾಥ ಕನ್ನಡದಲ್ಲೇ ಬರೆದದ್ದು ನೋಡಿ ಸಂತೋಷಪಟ್ಟಳು ಆದರೆ ಆತನ ಮೋಡಿ ಅಕ್ಷರಗಳ ಸರಪಳಿಯನ್ನು ಬಿಡಿಸಿ ಅರ್ಥಮಾಡಿಕೊಳ್ಳಲು ಪ್ರಯಾಸವಾಯಿತು. ಬುಧವಾರದಿಂದ ಕಾಲು ನೋವು ಏರುತ್ತ ಹೋಗಿ ಶುಕ್ರವಾರ ದಿನ ಕಾಲೂರುವುದಕ್ಕಾಗಲಿ ಮಡಚುವದಕ್ಕಾಗಲಿ ಸಾಧ್ಯವಾಗದೆ ಕುಳಿತಲ್ಲೇ ಇದ್ದರೆಂತಲೂ ಅಂದಿನಿಂದ ಅಡುಗೆಗೊಬ್ಬನನ್ನು ಗೊತ್ತುಮಾಡಿದೆಯೆಂತಲೂ ಮಗುವನ್ನು ನೋಡಿಕೊಳ್ಳುವವರಿಲ್ಲದೆ ಗೋಪಿನಾಥ ಕಚೇರಿಗೆ ಹೋಗದೆ ಮನೆಯಲ್ಲಿಯೇ ಇರಬೇಕಾಗಿ ಬಂತೆಂತಲೂ ಶನಿವಾರದಿಂದ ನೋವು ವಿಪರೀತವಾಗಿ ಇಂದಿರಮ್ಮ ಮಲಗಿದಲ್ಲೇ ಎಂತಲೂ ತಿಳಿದು ಬಂತು. ಓದುತ್ತ ಮಾಲತಿಗೆ ಪಂಬಿ 'ಅತ್ತೆ ಬೇಕು' ಎಂದು ಕರೆದಂತಾಗಿ ಮೈಜುಮ್ಮೆಂದಿತು. ಮಗುವನ್ನೆತ್ತಿಕೊಳ್ಳಲು ತೋಳುಗಳು ನೋವಾಗತೊಡಗಿದವು ಎದೆಯೊಳಗೆ ಅಳಲು ಮೊಳಗಿತು. ಗಂಡನ ಉಪೇಕ್ಷೆಯನ್ನು ನೋಡು ಅದು ಸ್ವಭಾವ ಸಹಜವಾದ

ದಡ್ಡತನವೋ ಅಥವಾ ಗೋಪಿನಾಥನ ಕುರಿತು ಉದಾಸೀನತೆಯೋ ಎಂದು ಚಿಂತಿಸುತ್ತ ಅವರ ಮುಖವನ್ನೇ ದಿಟ್ಟಿಸುತ್ತ ಕುಳಿತಳು.

“ ಮನೇಲಿ ಅನುಕೂಲವಿಲ್ಲದಿದ್ದರೆ ಸರಕಾರಿ ಆಸ್ಪತ್ರೇಗೆ ಹೋಗೋದೇ ಉತ್ತಮ. ಸ್ಪೆಶ್ಯಲ್ ವಾರ್ಡಿನಲ್ಲಿ ಬೇಕಾದ ಅನುಕೂಲವಿದೆ ” ಅಂದರು.

“ ಒಳ್ಳೇ ಗಂಡಸಪ್ಪ ನೀನು ! ನಾಳೆ ನಾನೆಲ್ಲಾದರೂ ಚಾಪೆ ಹಿಡಿದರೆ ನನಗೂ ಅದೇ ಗತಿ, ನಿನ್ನ ಆಡಳ್ತೇಲಿ !”

“ ನಿನಗಲ್ಲಮ್ಮ ನಾನು ಹೇಳಿದ್ದು. ”

“ ನಾನೇನು ಇಂದಿರಾಬಾಯಿಯೇನು ? ಅವಳು ನಿನಗೆ ದೂರವೇ ? ಹಾಗೆ ನೋಡಿದರೆ ಅವಳನ್ನ ಇಲ್ಲೆ ತಂದಿಟ್ಟುಕೊಂಡು ಆರೈಕೆ ಮಾಡಬೇಕು, ನಾವು. ಇವತ್ತು ಅವಳಿಗಾದ್ದು ನಾಳೆ ನನಗಾಗಬಾರದೂಂತಿಲ್ಲ. ನಿನ್ನ ಎತ್ತಿ ಆಡಿಸಿದವಳು ಅವಳು. ಕಷ್ಟ ಬಂದಾಗ ಆಸ್ಪತ್ರೆಗೆ ಹಾಕಿ ಹೊಲೆಯವರ ಕೈಲಿ ನೀರು ಕುಡಿಸೋ ಅಧರ್ಮ ನಾನಿರೋವರೆಗೆ ನಡೀಲಾರದು. ನನ್ನ ನಂತರ ನೀನೇನ್ಬೇಕಾದ್ರೂ ಮಾಡು. ” ಅಂದುಬಿಟ್ಟು ಹೊರಟರು.

“ ಅಮ್ಮಾ, ಅಮ್ಮಾ, ಹಾಗಲ್ಲಮ್ಮ. ಕೋಪಿಸಿಕೋ ಬೇಡ. ಅವರು ಬರೋದಿದ್ರೆ ಬರಲಿ. ಹೇಳಿ ಕಳುಹಿಸು ಮಾಲತಿ ಹತ್ರ. ನಾನೀಕ್ಷಣ ಫೋನ್ ಮಾಡಿ ಆಂಬುಲೆನ್ಸ್ ಕಾರು ಕಳುಹಿಸುತ್ತೇನೆ. ”

“ ರಾಘು, ಸಾಕು ನಿನ್ನುಪಕಾರ. ನಿನ್ನಾಫೀಸಿಗೆ ಹೋಗಿ ನಿನ್ನ ಕೆಲಸ ನೋಡು. ಫೋನ್‌ಗೀನಂತ ದುಡುಕಬೇಡ. ಇಂದಿರಮ್ಮ ಹಾಗೆಲ್ಲ ಬರೋ ವಳಲ್ಲ. ನಾನೂ ಮಾಲತಿ ಹೋಗಿ ನೋಡಿಕೊಂಡುಬರ್ತೇವೆ. ಒಂದು ಜಟಕಾ ತರಿಸು ಹೋಗು ” ಅಂದರು.

ಶಾರದಮ್ಮನ ಮಾತುಗಳನ್ನು ಕೇಳಿ ಮಾಲತಿಗೆ ಅವನಪ್ಪಿಕೊಳ್ಳಬೇಕೆ ನಿಸಿತು. ಆಕೆಯ ಮನಸ್ಸಿನ ಕಳವಳ ಮಾಯವಾಯಿತು. ಮೋಡಗಳೆಡೆ ಯಿಂದ ಚಂದ್ರ ಧುಮುಕಿ ಬಂದ ಹಾಗಾಯಿತು. ನೇರ ತನ್ನ ಕೋಣೆಗೆ ಹೋಗಿ ಎರಡೇ ನಿಮಿಷಗಳಲ್ಲಿ ಹೊರಟು ಬಂದಳು.

ಗೋಪಿನಾಥಗೆ ಆ ಪತ್ರ ಬರೆಯಲು ಎಳ್ಳಷ್ಟಾದರೂ ಮನಸ್ಸಿರಲಿಲ್ಲ. ಇನ್ನೊಬ್ಬರ ಸಹಾಯವನ್ನು ಯಾಚಿಸುವುದು ಆತನ ಸ್ವಭಾವಕ್ಕೆ ಅಹಿತ ವಾಗಿತ್ತು. ಸಂಸಾರದ ಕೊರತೆಗಳು ಪರರಿಗೆ ಗೊತ್ತಾಗಬಾರದು. ಮನೆಯ

ಕಸ ಕುಪ್ಪೆಗಳು ಇನ್ನೊಬ್ಬರ ಕಣ್ಣಿಗೆ ಬೀಳಬಾರದು. ಕೈಲಾದವುಟ್ಟಿಗೆ ತನ್ನ ದೋಣಿಯನ್ನು ತಾನೇ ದಾಟಿಸಬೇಕೆಂಬ ಧ್ಯೇಯ ಆತನದು. ಆದರೆ ಬುಧ ವಾರ ಗುರುವಾರ ಎರಡು ದಿನವೂ ಆತ ನಿತ್ಯ ಕಟ್ಟಳೆಯ ಕಚೇರಿ ಕೆಲಸವನ್ನು ಯಥೋಚಿತವಾಗಿ ನಿರ್ವಹಿಸಿ ರಾತ್ರಿಯೆಲ್ಲಾ ತನ್ನ ಸೇವೆಶುಶ್ರೂಷೆಗಳಿಗಾಗಿ ಜಾಗರವಿದ್ದು, ಮರುದಿನ ಮಗುವಿನ ಊಟಸ್ನಾನ ಉಪಚಾರಗಳನ್ನು ಲೋಪ ವಿಲ್ಲದೆ ಮಾಡಿದ್ದು ಸಾಲದೆ, ವಕೀಲ ಕೃಷ್ಣಯ್ಯನ ಸಹಾಯದಿಂದ ಒದಗಿಸಿ ಕೊಂಡ ಅಡುಗೆಯವನ ಮೇಲ್ವಿಚಾರಕ್ಕೆ ಬೇರೆ ತೊಡಗಿದ್ದನ್ನು ನೋಡಿ ಇಂದಿರಮ್ಮ ಬಲವಂತ ಮಾಡಿದರು.

"ಹೀಗೆ ಎಷ್ಟು ದಿನ ಒದ್ದಾಡೋದಕ್ಕೆ ಸಾಧ್ಯ ಗೋಪಿ? ಗ್ರಹಾ ಚಾರಕ್ಕೆ ನೀನೂ ಹಾಸಿಗೆ ಹಿಡಿದುಬಿಟ್ಟೇಂದ್ರೆ ಈ ಮನೆ ಗತಿಯೇನು? ಸ್ವಲ್ಪ ಯೋಚಿಸಿ ನೋಡು. ಶಾರದಾಬಾಯಿನ ಬರಹೇಳು. ಅವಳು ಬರದೆ ಇರ ಲಾರಳು. ಅಷ್ಟೇ ಅಲ್ಲ. ಈ ವಿಚಾರ ಅವಳಿಗೆ ತಿಳಿಸದೆ ಇರೋದು ಒಂದು ದೊಡ್ಡ ತಪ್ಪು ಅನಿಸುತ್ತೆ. ಹೋಗಿ ಹೇಳಿಬಿಟ್ಟು ಬಾಪ್ಪಾ, ಗೋಪಿ."

"ನೀನು ಹೇಳೋದೆಲ್ಲಾ ಸರೀಮ್ಮಾ. ಆದರೆ ನೋಡು, ನನ್ನಮ್ಮಗೆ ಮೈ ಚೆನ್ನಾಗಿಲ್ಲ, ಮಲಗಿಬಿಟ್ಟಿದ್ದಾಳೆ; ನನ್ನ ಮಗೂಗೆ ದಿಕ್ಕಿಲ್ಲ; ನಿನ್ನಮ್ಮನ್ನ ಕಳುಹಿಸಿಕೊಡೂಂತ ರಾಘವೇಂದ್ರನ ಹತ್ರ ಹೇಳೋದಕ್ಕೆ ನಾಲಿಗೆಯೇ ಮಗುಚೋದಿಲ್ಲವಲ್ಲ, ನಾನೇನ್ಮಾಡಲಿ?"

"ಹಾಗೆಂದರೇನು ಗೋಪೀ? ಆತ್ಮಾಭಿಮಾನ ಬೇಕು ನಿಜ. ಆದರೆ ಅತಿಯಾದರೆ ಅದೇ ಒಂದು ದುಃಖ. ನಮ್ಮಷ್ಟಕ್ಕೇ ನಾವಿದ್ದುಬಿಡೋಣ, ಯಾರ ಹಂಗೂ ಬೇಕಿಲ್ಲ, ಅನ್ನುವಷ್ಟು ಧೃತಿ ಯಾರಿಗೂ ಇಲ್ಲ. ಈಗ ನೋಡು, ಹಗಲುಹೊತ್ತು ಮಾತ್ರ ನಮಗೆ ಸಹಾಯ ಬೇಕು. ನಾಳೆ ಹಗಲು ರಾತ್ರಿಯೂ ನಾವು ಪರಾಧೀನರಾದರೆ? ಒಂದು ಮಾಡು. ಹೋಗಿ ಹೇಳೋ ದಕ್ಕೆ ಸಾಧ್ಯವಾಗದಿದ್ದರೆ ಪತ್ರ ಬರೆದಾದರೂ ತಿಳಿಸು. ಬಂದರೆ ಸಂತೋಷ. ಇಲ್ಲದೆಯಿದ್ರೆ ದೇವರಿದ್ದಾನೆ." ಅಂದಮೇಲೆ ಯತ್ನವಿಲ್ಲದೆ ಒಂದು ಕಾಗದ ಬರೆದು ಕಳುಹಿಸಿಬಿಟ್ಟು ಆ ವಿಚಾರವನ್ನೇ ಮರೆತಿದ್ದನು.

ಆದ್ದರಿಂದ ಸುಮಾರು ಐದುವರೆ ಗಂಟೆ ಸಮಯ ಆತ ತಾಯಿಯ ಮಂಚದ ಬಳಿ ಕುಳಿತಿದ್ದಾಗ ಅವರು ಆತನ ಹಿಂದೆ ಬಾಗಿಲನ್ನು ನೋಡುತ್ತ,

"ಗೋಪೀ, ಅದ್ಯಾರು ನೋಡು" ಅಂದಾಗ ಫಕ್ಕನೆ ತಿರುಗಿ ನೋಡಲು ಶಾರದಾಬಾಯಿ ಮಾಲತಿಯನ್ನು ಕಂಡು ಅತಿ ಸಂತೋಷಪಟ್ಟನು. ಒಡನೆ ಎದ್ದು ನಸುನಗುತ್ತ,

"ಅಮ್ಮ ಹೇಳಿದ್ದು ನಿಜ: ನೀವು ಬರದೆ ಇರೋದಿಲ್ಲಾಂತ" ಅನ್ನುತ್ತ ತಾನು ಕುಳಿತಿದ್ದ ಕುರ್ಚಿಯಲ್ಲಿ ಕುಳಿತುಕೊಳ್ಳುವಂತೆ ಸೂಚಿಸಿದನು. "ಇನ್ನೊಂದು ತರ್ತೇನೆ" ಎಂದು ಹಾಲಿಗೆ ಹೋಗುವಷ್ಟರಲ್ಲಿ ಮಾಲತಿ "ನನಗಾದರೆ ಬೇಡ" ಅನ್ನುತ್ತ ಇಂದಿರಮ್ಮನ ತಲೆಬುಡದಲ್ಲಿ ಮಂಚದ ಮೇಲೆ ಕುಳಿತಳು.

"ಹಾಗಾದರೆ ನನಗೇತಕ್ಕೆ ?" ಎಂದು ಹಿಂತಿರುಗಿ ಬಂದು ತಾಯಿಯ ಕಾಲು ಬುಡಕ್ಕೆ ಕುಳಿತು "ನೀವು ಅನಿರೀಕ್ಷಿತರಾಗಿ ಬಂದುದು ಮಾತ್ರವಲ್ಲ, ಇಬ್ಬರೂ ದಯಮಾಡಿಸಿದ್ದೀರಿ. ಅಂತೂ ನಮ್ಮ ಸಾಲದ ಹೊರೆ ಇಮ್ಮಡಿ ಯಾದ ಹಾಗಾಯಿತು" ಅಂದ ಒಂದು ಸಲ ಶಾರದಮ್ಮನನ್ನೂ ಮತ್ತೊಂದು ಸಲ ಮಾಲತಿಯನ್ನೂ ನೋಡುತ್ತ. ಆಗ ಆತನ ಕಣ್ಣಿಗೆ ಮಾಲತಿ ಯಾರೋ ಅಪರಿಚಿತ ತರುಣಿ ತನ್ನ ತಾಯಿಯೊಂದಿಗೆ ಭೇಟಿಗಾಗಿ ಬಂದವಳಂತೆ ತೋರಿದಳು.

"ಇದೇನು, ಸಾಲಗೀಲಾಂತ ಉದ್ದುದ್ದ ಹೇಳ್ತಿದ್ದೀಯಲ್ಲಾ; ನಮ್ಮನ್ನೆಲ್ಲ ನೀನು ತೀರ ಮರೆತುಬಿಟ್ಟಹಾಗಿದೆ, ಗೋಪಿನಾಥ" ಅಂದರು ಶಾರದಮ್ಮ.

"ಮರೆತಿದ್ರೆ ಚೆನ್ನಾಗಿತ್ತೋ ಏನೋ, ನಿಮಗೀ ತ್ರಾಸ ಕೊಡೋ ಬದಲು."

"ಅದಕ್ಕೆ ತಕ್ಕ ಜವಾಬು ಒಪ್ಪಿಸುತ್ತೇನೆ. ಈಗ ಇಂದಿರಾಬಾಯಿ—" ಎಂದು ಅವರ ಕಾಹಿಲೆಯ ಕುರಿತು ಕೂಲಂಕಷ ವಿಚಾರಿಸಿ ತಿಳಿದುಕೊಂಡು, ಆಮೇಲೆ ತಿರುಗಿ,

"ಗೋಪಿ, ನಿನಗೊಂದು ಹೇಳ್ತೇನೆ, ಕೋಪಿಸಿಕೋ ಬಾರದು. ನಿಮಗೆ ಗಂಡಸರಿಗೆ ಭೇದ ಬುದ್ಧಿ ಕೊಂಚ ಜಾಸ್ತಿ. ನೀವು ಬೇರೆ ನಾವು ಬೇರೆಂತ ತಿಳಕೋತೀರೇ ವಿನಾ ಸುಖದುಃಖ ಎಲ್ಲರಿಗೂ ಒಂದೆಂತ ಸರ್ವಥಾ ತಿಳ ಕೊಳ್ಳೋದಿಲ್ಲ. ಮುಖ್ಯ ಗುಟ್ಟೇನಂದ್ರೆ, ಇದ್ದಿದ್ದನ್ನ ಇದ್ದಹಾಗೆ ಎದುರಿಸಿ ಕಾದಾಡೋ ಧೈರ್ಯ ನಿಮಗಿಲ್ಲ. ಅದಕ್ಕೊಂದು ಅರ್ಥ ಕಲ್ಪಿಸಿಕೊಂಡು, ನಿಮ್ಮದೇ ಒಂದು ಹೆಸರಿಟ್ಟು, ಪಾಡು ಪಡುತ್ತಿರೋ ಕ್ರಮ ನಿಮ್ಮದು. ನಿಮ್ಮ

ನ್ಯಾಯ ನೀತಿ ತತ್ವ ತಕ್ರಾರು ಎಲ್ಲಾ ಅಷ್ಟೆ. ಅಲ್ವೇನೇ ಇಂದಿರಾಬಾಯಿ ? ನಮ್ಮ ರಾಘೂಗೆ ಹೇಳಿದ ಹಾಗೆ ಹೇಳ್ತಿದ್ದೇನೆ ನಿನ್ನ ಗೋಪಿಗೆ. ”

ಇಂದಿರಾಬಾಯಿಗೆ ಮಾತಿನಲ್ಲಿ ಸೇರಿಕೊಳ್ಳುವಷ್ಟು ತ್ರಾಣವಿರಲಿಲ್ಲ. ಕೇಳಿ ಮುಗುಳು ನಕ್ಕರು ಮಗನನ್ನೇ ನೋಡುತ್ತ. ಗೋಪಿನಾಥನೇ ಉತ್ತರ ಕೊಟ್ಟನು.

“ ನೀವೇನು ಹೇಳಿದ್ರೂ ನನಗೆ ಹಿತವೆ. ಹಿಂದೊಂದು ದಿನ ನೀವು ನನಗೆ ಕೈತುತ್ತು ಹಾಕಿ ನಾಲ್ಕು ಪಾಲಿನಷ್ಟು ಉಣಿಸಿದ್ರಂತೆ, ಅಮ್ಮ ಹೇಳುತ್ತಿದ್ದಳು. ಈಗಲೂ ಬಹುಮಟ್ಟಿಗೆ ಹಾಗೇನೇ. ನಮಗೆ ವಾಸ್ತವಿಕತೆಯನ್ನ ಎದುರಿಸು ವಷ್ಟು ತಾಕತ್ತು ಇಲ್ಲಾಂದ್ರಲ್ಲ, ಅದು ನಿಜ. ಆದರೆ ನಮ್ಮ ಪುರುಷಾರ್ಥ ವಾಸ್ತವಿಕತೆಯ ಪರಿಮಿತಿಯನ್ನು ಮೀರಿದಂಥಾದ್ದು. ನಮ್ಮ ಪೌರುಷದ ಪರಿ ನಮ್ಮ ಸಾಧನೆಗೆ ಸಮಾನವಾದ್ದು, ವಾಸ್ತವಿಕತೆಯ ಎಡರುಗಳನ್ನು ಗಣ್ಯ ಮಾಡದಂಥಾದ್ದು. ನಾವು ಜೀವನಕ್ಕಾಗಿ ಮನೆ ಬಾಗಿಲು ಬಿಟ್ಟು ಅಡವಿ ಯಲ್ಲೋ ಬೆಟ್ಟದಲ್ಲೋ ಬಹುದೂರ ಅಲೆದು ಒಂದಲ್ಲಒಂದು ಬಗೆಯ ಬೇಟೆ ಯಾಡತಕ್ಕವರು. ಹೋರಾಟವೇ ನಮ್ಮ ಆಜನ್ಮ ವೃತ್ತಿ. ಹಾಗಿರುವಾಗ ?”

ಇಂದಿರಮ್ಮ ಸಣ್ಣ ಸ್ವರದಿಂದ “ ಮಾಲತಿ ಯಾಕೋ ನಗುತ್ತಿದ್ದಾಳೆ ” ಅಂದರು. ಗೋಪಿನಾಥ'ನೋಡುವಾಗ ಮುಖ ತಗ್ಗಿಸಿ ಮುಗುಳು ನಗುತ್ತಿದ್ದಳು.

“ಮನೆಗೆ ಬಂದವರಿಗೆ ಕಾಫಿ ತಿಂಡಿಕೊಟ್ಟು ಉಪಚರಿಸುವ ಬದಲು ಒಣ ವೇದಾಂತ ಬಿಚ್ಚಿಕೊಂಡು ಕೂತಿದ್ದೇನಲ್ಲಾಂತಿರಬೇಕು. ನನ್ನ ತಪ್ಪು, ಬಂದೆ ಈ ಕ್ಷಣ ” ಅನ್ನುತ್ತ ಎದ್ದು ನಿಂತನು.

“ನೀನಿಲ್ಲೇ ಇರು. ಮಾಲತಿಗೆ ಅವಸರವಿಲ್ಲ ಕಾಫಿಗೆ. ನೀನೊಬ್ಬ ಅಡಿಗೇ ಯವನ್ನ ತಲಾಶಿಮಾಡಿದ್ದೀಯಂತಲ್ಲ, ಹೇಗಿದ್ದಾನೆ? ” ಎಂದು ಶಾರದಮ್ಮ ನಿಲ್ಲಿಸಿಕೊಂಡರು.

“ ಅವನೇ? ಅಡುಗೆ ಬರುತ್ತೆ, ಅಂದಿದ್ದು ಕೃಷ್ಣಯ್ಯ. ಆದರೆ ಈ ದೇಶದ ತಂಬ್ಳಿ, ತೊವೆ, ಮಜ್ಜಿಗೆ ಹುಳಿ ಬಿಟ್ಟು ಬೇರ್‍ಯಾವುದೂ ಗೊತ್ತಿರೋ ಹಾಗೆ ಕಾಣೋದಿಲ್ಲ, ಮಹಾರಾಯನಿಗೆ. ಗೊಡ್ಡು ಸಾರು ಮಾಡು ಅಂದಳು ಅಮ್ಮ. ಗಂಜಿ ನೀರು ಸೇರಿಸಬೇಕೇ ಅಂತ ಕೇಳಿದ. ಬೇಡ, ಒಂದು ಬೆಂಡೇಕಾಯಿ ಹುಳಿ ಮಾಡಿಬಿಡು ಅಂದಳು. ಮಸಾಲೆಗೆ ಏನೇನು ಹಾಕ್ಬೇಕೊಂತ ಕೇಳಿದ.

ಬಾಯಿಪಾಠ ಮಾಡಿಕೊಂಡು ಹೋದ. ಆದರೆ ಏನು ಹಾಕಿದನೋ ಏನು ಬೇಯಿಸಿದನೋ, ದೇವರಿಗೇ ಗೊತ್ತು. ಊಟಕ್ಕೆ ಕುಳಿತು ಹುಳಿ ಬಡಿಸು ಅಂದಾಗ ಥೊಪ್ಪಂತ ಒಂದು ಕರಿಮುದ್ದೆ ಹೊತ್ತು ಹಾಕಿದ ಎಲೆಮೇಲೆ, ಕಪ್ಪೆ ಬಿದ್ದ ಹಾಗೆ. ಕಪ್ಪೇದೇ ಬಣ್ಣ. ಆದರೂ ಧೈರ್ಯಗೆಡದೆ ನಾಲಿಗೆತುದಿಗೆ ಹಚ್ಚಿ ರುಚಿನೋಡಿದೆ. ತೆಂಗಿನಕಾಯಿ, ಹುಣಿಸೆಹಣ್ಣು ಹೊರತು ಬೇರೆ ಯಾವ ರುಚಿಯೂ ಗೊತ್ತಾಗಲಿಲ್ಲ. ”

“ಬ್ರಾಹ್ಮಣ ಹೌದೋ ಅಲ್ಲವೋ !” ಎಂದು ಮಾಲತಿ ತನ್ನಷ್ಟಕ್ಕೇ ಅನುಮಾನ ಪಟ್ಟದ್ದನ್ನು ಕೇಳಿ ಎಲ್ಲರೂ ನಕ್ಕರು.

“ ಬ್ರಾಹ್ಮಣನೇನೋ ಅಹುದು. ಕೋಟದವನು. ಶಿವಯ್ಯಾಂತ ಹೆಸರು. ಆದರೆ ಆತ ಬಂದ ಎರಡು ದಿನದಲ್ಲೇ ನಿರ್ಮಲವಾಗಿದ್ದ ಅಡಿಗೆಮನೆ ಎಮ್ಮೆ ಕೊಟ್ಟಿಗೆಯಂತಾಗಿ ಬಿಟ್ಟಿದೆ ” ಎಂದನು ಗೋಪಿನಾಥ.

“ ಅಯ್ಯೋ ! ನಾಳೆಯಿಂದ ನಾನೇ ಬಂದು ನೋಡಿಕೋತೇನೆ. ಇವತ್ತಿನ ಮಟ್ಟಿಗೆ ಏನಾದರೂ ಅಡಿಗೆ ಮಾಡಿಸಿಬಿಟ್ಟು ಹೋಗ್ತೇನೆ. ಹೀಗಾದರೇನು ಗತಿ ? ನಿನ್ನ ಕೂಸಿಗೇನು ಹಾಕಿದ್ದೀ, ಹೊಟ್ಟೆಗೆ ?” ಎಂದು ಪಶ್ಚಾತ್ತಾಪದಿಂದ ಶಾರದಮ್ಮ ಕೇಳಿದರು.

“ ಹಾಲು, ಗಂಜಿ, ಬಿಸ್ಕತ್ತು. ”

“ ಅಯ್ಯೋ ಯಾಕಾದೀತು ಹಾಲು ಬಿಸ್ಕತ್ತು ?”

“ ಮತ್ತೇನು ಮಾಡೋದು ?”

“ ಪಾಪ! ಎಲ್ಲಿದ್ದಾಳೆ ? ಸುದ್ದಿಯೇ ಇಲ್ಲವಲ್ಲ ?” ಮಾಲತಿ ಕೇಳಿದಳು.

“ ಇಲ್ನೋಡಿ” ಅನ್ನುತ್ತ ಗೋಪಿನಾಥ ತಾಯಿಯ ಮಗ್ಗುಲಿಂದ ಹೊದಿಕೆಯನ್ನು ಕೊಂಚ ಎತ್ತಿದನು. ಪಂಬಿಯ ಸೆಲೂಲ್ಯಾಡು ಗೊಂಬೆ ಸತ್ತಹಾಗೆ ಬಿದ್ದಿತ್ತು. “ ಇದಕ್ಕೂ ವಾತ. ಕಾಲುಸಿಡಿತ, ಜ್ವರ. ಕಾಲಿಗೆ ನೋಡಿ, ‘ಬೇಡೆಂಜ್’ ಸುತ್ತಿದ್ದಾಳೆ, ತಾಯಿ ಈಗ ತಾನೇ ಡಾಕ್ಟರನ್ನ ಕರಕೊಂಬರ್ತೇನೆಂತ ಹೋಗಿದ್ದಾಳೆ. ಅವಳ ಕೋಣೇಲೇ ಇರಬೇಕು.” ಎಂದನು.

“ ಹೊಟ್ಟೇಗಿಲ್ದೇದ್ರೂ ಕೂಸು ಆಡ್ತಾ ಇರೋದು. ನಿಮ್ಮ ಪುಣ್ಯ” ಅಂದರು ಶಾರದಮ್ಮ.

"ನಾನು ಹೋಗಿ ನೋಡ್ತೇನೆ" ಎಂದು ಮಾಲತಿ ಎದ್ದು, "ಬರ್‍ತಾ ನಿಮ್ಮನೇ ಸೇರಿಕೊಂಡಿರೋ ಕಿಚ್ಚನರನ್ನೂ ಕಂಡು ಮಾತಾಡ್ಸಿ ಬರ್‍ತೇನೆ" ಅಂತ ಹೇಳಿ ಹೋದಳು.

ಮಾಲತಿ ಹೋದಕೂಡಲೆ ಆಕೆಯಿದ್ದಲ್ಲಿಗೆ ಬಂದು ಶಾರದಮ್ಮಗೆ ಅತಿ ಹತ್ರ ಕುಳಿತು ಗೋಪಿನಾಥ, "ಈಗ ನೋಡಿ, ನಮ್ಮನ್ನ ಈ ಪೇಚಿನಿಂದ ಪಾರು ಮಾಡುವ ಭಾರ ನಿಮ್ಮದು. ನಿಮಗೆಷ್ಟು ತೊಂದ್ರೆಯೋ, ಅಸಾನು ಕೂಲವೋ ನಿಮಗೇ ಗೊತ್ತು, ಮುಚ್ಚುಮರೆಯಿಲ್ಲದೆ ಹೇಳಿಬಿಡಿ, ಏನಾದರೂ ಇದ್ರೆ. ಕೈಲಾದಷ್ಟು ಸುಧಾರಿಸಿಕೊಳ್ಳೋಣ. ಹೆಚ್ಚೆಂದ್ರೆ ಒಂದು ವಾರ." ಎಂದು ಗೋಗರೆದನು.

ಶಾರದಮ್ಮಗೆ ಈ ಸರಳವರ್ತನೆಯಿಂದ ಮನಸ್ಸು ಕರಗಿತು. ನಗು ಬಂತು.

"ಯಾತಕ್ಕೋ ನಗ್ತಾ ಇದ್ದೀರಲ್ಲಾ?" ಅಂತ ಕೇಳಿದನು.

"ಅಲ್ಲಾ, ಗೋಪಿನಾಥ, ಮೂರು ದಿನದಿಂದಲೂ ಊಟ-ನಿದ್ರೆ ಇಲ್ದೆ ಕಣ್ಣು ಹೊಂಡಬಿದ್ದಿದೆ, ಗಲ್ಲ ಬಾಡಿದೆ. ಆದರೂ ಕೂಡ ನಮ್ಮ ತ್ರಾಸ, ನಮ್ಮ ತೊಂದ್ರೇಂತ ನಮ್ಮ ಸುದ್ದೀನೇ, ಮಾರುದ್ದ ಮಾತುಗಳಲ್ಲಿ ಭಾಷಣ ಮಾಡ್ತಾ ಇದ್ದೀಯಲ್ಲಾ. ಏನು ಹೇಳಲಿ, ನಿನ್ನ ದಾಕ್ಷಿಣ್ಯಕ್ಕೆ? ಯೋಚನೆ ಮಾಡ ಬೇಡ. ನಾನಿದ್ದೇನೆ. ಮಾಲತಿಯಿದ್ದಾಳೆ. ನಿನ್ನಮ್ಮನ್ನ ಬಿಟ್ಟು ಹಾಕೋದಿಲ್ಲ" ಶಾರದಮ್ಮನ ಈ ಮೃದುಮಾತಿನ ಆಶ್ವಾಸನವನ್ನು ಕೇಳಿ ಗೋಪಿನಾಥಗೆ ಗಂಟಲು ಬಿಗಿದು ಬಂತು, ಕಣ್ಣು ತೇವಗೊಂಡಿತು. ಒಂದು ಕ್ಷಣ ಸುಮ್ಮ ಗಿದ್ದ. ಅದನ್ನು ನೋಡಿ ಇಂದಿರಮ್ಮ,

"ಗೋಪೀ, ನೀನು ಒಳಗೆ ಹೋಗಿ ಮಾಲತಿಗೆ ಏನಾದರೂ ಕುಡಿಯೋ ದಕ್ಕೆ ಕೊಡು. ಕೆಲಸಗಿತ್ತಿ ಹಾಲು ಕರೆದಾದ್ರೆ ಒಂದು ಸರ್ತಿ ಇಲ್ಲಿಗೆ ಬಂದು ಹೋಗಲಿ, ಹೇಳು. ಹಾಲು ಬಂದಿದ್ರೆ ಕಾಸೋದಕ್ಕೆ ಹೇಳು, ಹೋಗು." ಅಂದರು ಮೆತ್ತಗೆ ಮಲಗಿದಲ್ಲೆ.

ಗೋಪಿನಾಥಗೆ ಅರ್ಥವಾಯಿತು. ಬಾಗಿಲು ಮುಚ್ಚಿಕೊಂಡು ಹೋದನು. ಹಾಲನ್ನು ದಾಟಿ ಪಂಬಿಯ ಕೋಣೆಗೆ ಹೋಗುವಾಗ ಪಂಬಿಯನ್ನೆತ್ತಿಕೊಂಡ ಮಾಲತಿ ಎದುರಾದಳು. ಆಗ ಆಕೆ ತನ್ನವಳಲ್ಲ, ಆಕೆ ತಬ್ಬಿಕೊಂಡಿದ್ದ ಕಂದ ಆಕೆಯದಲ್ಲ, ಆಕೆಯಿದ್ದು ಬೆಳಗುತ್ತಿದ್ದ ಮನೆ ಅವಳದಲ್ಲವೆಂಬ ಭಾವನೆಯೇ

ಆಗಲಿಲ್ಲ, ಗೋಪಿನಾಥನಿಗೆ. ಆತನಿಗೆ ಒಮ್ಮೆಲೇ ಬಾಳುವೆ ಹೂಬಿಟ್ಟು ಪರಿಮಳ ಬೀರಿದಂತಾಯಿತು.

“ ಎಲ್ಲೇ ನಿನ್ನ ಡಾಕ್ಟ್ರು ?” ಎಂದು ಮಗಳನ್ನು ಪ್ರಶ್ನಿಸಿದ.

“ ಆಯು ?” ಪಂಬಿಗೆ ಮರೆತೇ ಹೋಗಿತ್ತು.

“ ನಾನು ಕೇಳಿದ್ದಕ್ಕೆ ಡಾಕ್ಟರು ಮೈಸೂರಿಗೆ ಹೋಗಿದ್ದಾರೆ ಅಂದಳು. ಸದ್ಯಕ್ಕೆ ಅವಳೇ ಔಷಧ ಮಾಡ್ತಾ ಇದ್ದಳು. ನೋಡಿ, ಅವಳ ಕೈ” ಅನ್ನುತ್ತ ಪಂಬಿಯು ಮುಷ್ಟಿಯನ್ನು ಬಿಡಿಸಿ ತೋರಿಸಿದಳು. ಅಂಗೈ ಮೊದಲೇ ಕೆಂಪಗಿದ್ದದ್ದು ರಕ್ತಮಯವಾದಂತಿತ್ತು.

“ ಎಲ್ಲಿ ಸಿಕ್ಕಿತಪ್ಪ ಕೆಂಪು ಕಾಗದ? ಇಲ್ಲಿ ಬಾ, ಕೈ ತೊಳೆಸಿಬಿಡುತ್ತೇನೆ. ಅತ್ತೇ ಸೀರೆಗೆ ತಗಲೀತು. ”

ಮುಷ್ಟಿಯೊಳಗಿನ ಗುಟ್ಟನ್ನು ರಟ್ಟುಮಾಡಿದ ಸಿಟ್ಟಿಗೆ ಪಂಬಿ ಕೈಬಣ್ಣವನ್ನು ‘ಅತ್ತೆ’ಯ ಗಲ್ಲಕ್ಕೆ ಹಚ್ಚುವ ಸಾಹಸದಲ್ಲಿದ್ದಳು. ಮಾಲತಿ ಆಕೆಯ ಕೈಗಳನ್ನು ಹಿಂದೂಡುತ್ತ ಮುಖವನ್ನು ಆಚೆಯೀಚೆ ತಿರುಗಿಸಿ ತಪ್ಪಿಸಿಕೊಳ್ಳುತ್ತ ನಗುತ್ತಿದ್ದಳು.

“ಅತ್ತೆ ಮುಖಕ್ಕೆ ಲೇಪಿಸಿದರೆ ಪರವಾಯಿಲ್ಲವೇನೋ” ಎಂದು ಕೇಳಿದಳು.

“ ಥಕ್ಕನೆ ಕಾಣಿಸದು ವ್ಯತ್ಯಾಸ. ಅರರೇ, ಪೋರೀ ಹಚ್ಚಿಯೇ ಬಿಟ್ಟಳಲ್ಲಾ! ಮುಖಕ್ಕೆ.” ಎಂದು ನಗುತ್ತ ಮಗುವಿನ ಎರಡೂ ಕೈಗಳನ್ನು ಬಿಗಿಹಿಡಿದು “ ಇಲ್ಕೊಡಿ ಅವಳನ್ನ ” ಅಂದನು.

“ ಬಯದಿಯ ” ಅನ್ನುತ್ತ ಕೈಬಿಡಿಸಿಕೊಳ್ಳಲು ಹೋರಾಡಿದಳು.

“ ಬಿಡಿ ಬಿಡಿ, ಪರವಾಯಿಲ್ಲ. ಒಂದು ಗಲ್ಲಕ್ಕೆ ಬಳಿದವರಿಗೆ ಮತ್ತೊಂದು ಗಲ್ಲ ತೋರಿಸೋದೇ ಈಗಿನ ಫೇಶನ್ನು, ಎರಡು ಗಲ್ಲಕ್ಕೂ ಬಳಿಯಲಿ. ಆದರೆ–ಈಗ–ಬಾಕಿಯಿರುವ ಗಲ್ಲ ಯಾವದು ? ”

“ ನನಗಂತೂ ಎರಡು ಬದಿಯೂ ಒಂದೇ ರಂಗು ಕಾಣುತ್ತೆ. ಪಂಬಿನೇ ಕೇಳಿ. ”

“ ಪಂಬಿ, ನಾವು ಹೋಗಿ ತೊಳಕೊಂಡು ಬರೋಣವೇ ? ಅಥವಾ ನಿನ್ನ ಕೈಲಿ ಉಳಿದ ಬಣ್ಣ ನಿನ್ನ ಪಪ್ಪಗೆ ಹಚ್ಚಿಬಿಟ್ಟು ಬರ್ತೀಯಾ? ಅವರಿಗೆ ಬಣ್ಣದ ಭೇದ ಗೊತ್ತಾಗೋದಿಲ್ಲವಂತೆ. ” ಎಂದು ಚೇಷ್ಟೆಯ ಮಾತುಗಳಿಂದ ತನ್ನ

ಗಲ್ಲಗಳಲ್ಲಿ ಅಡರಿದ್ದ ಉದ್ವೇಗವನ್ನು ಹೋಗಲಾಡಿಸಿ ಬಚ್ಚಲು ಮನೆ ಕಡೆ ಹೋದಳು. ಆಕೆ ನಡೆಯುವ ಸೊಬಗನ್ನು ನೋಡುತ್ತ ನಿಂತ ಗೋಪಿನಾಥ ಆಕೆ ಕಣ್ಮರೆಯಾಗುತ್ತಲೇ ಒಂದು ಕುರ್ಚಿಯಲ್ಲಿ ಕುಸಿದುಬಿದ್ದ. ನಂತರ ಕೆಲಸಗಿತ್ತಿಯ ಸ್ವರ ಕೇಳಿ ಎದ್ದು ಹೋಗಿ ಆಕೆಯನ್ನು ತಾಯಿಯ ಕೋಣೆಗೆ ಕಳುಹಿಸಿ ಅಡುಗೆಮನೆಗೆ ಹೋಗಿ ಹಾಲು ಕಾಸುವಂತೆ ಹೇಳಿ ತಿರುಗಿ ಹಾಲಿಗೆ ಬರುವಾಗ ಜತೆಗೆ ಮಾಲತಿಯೂ ಬಂದಳು.

" ನಿಮಗೆ ಕುಡಿಯೋದಕ್ಕೇನಾದರೂ ಕೊಡೂಂತ ಅಮ್ಮ ಹೇಳಿದ್ದು ಈಗ ನೆನಪಾಗುತ್ತೆ. "

" ಆಗಲಿ. "

" ಏನೂ ಬೇಡವೇ ? "

" ಬೇಕೋ ಅಂತ ಕೇಳಿದರೆ ತಾನೇ ಬೇಡ ಅನ್ನೋದು ? "

ಇಬ್ಬರೂ ನಕ್ಕರು, ಒಬ್ಬರನ್ನೊಬ್ಬರು ನೋಡುತ್ತ.

" ಈಗಲಾದರೂ ಕೇಳಲೇ ? ನಿಮಗೇನು ಬೇಕು ? "

" ಬಾಯಾರಿಕೆಯಿಲ್ಲ. "

" ಹಸಿವು ? "

" ಮಧ್ಯಾಹ್ನದ ಕಪ್ಪೆಹುಳಿ ಹಾಗೇ ಉಳಿದಿದೆಯೇನೋ ? "

" ಸದ್ಯದ ಆದವಚದಲ್ಲಿ ಅದೇ ಗತಿ. ಒಂದಿಷ್ಟು ಕಾಫಿ ಮಾಡಿಸಲೇ ? "

" ಬೇಕಿಲ್ಲ. ಈಗಿನ ಆದವಚಕ್ಕೇನಾಗಿದೆ ? ಈ ಮುದ್ದು ಮೋಹಿನಿ ಇದ್ದೆಡೆ ಯಾವಾಗಲೂ ಹಬ್ಬದೂಟವೇ ಅಲ್ಲವೆ ? "

ಅಷ್ಟರಲ್ಲಿ ಆ 'ಮುದ್ದು ಮೋಹಿನಿ' ಮಾಲತಿ ಕೈಯಿಂದ ಜಾರಿ ಕೆಳಗಿಳಿದು "ನಾನು ದೊಡ್ಡಮ್ಮ ಇದ್ದಯಿ ಹೋತೇನೆ ಪಪ್ಪ." ಎಂದು ಹೊರಟಳು.

" ಈಗ ಬೇಡಪ್ಪ. ಅವಳು ಕೆಲಸದಲ್ಲಿದ್ದಾಳೆ. ಇಲ್ಲಿ ಬಾ, ಇದನ್ನ ನೋಡ್ತಾ ಇರು. ಅನ್ನುತ್ತ ಗೋಪಿನಾಥ ಮಗುವನ್ನು ಹಾಲಿನ ನಡು ಮೇಜಿನ ಮೇಲೆ ಸ್ಥಾಪಿಸಿ ಒಂದು ಸಚಿತ್ರ ಮಾಸಪತ್ರಿಕೆಯನ್ನು ಆಕೆ ಕೈಗೆ ಹಚ್ಚಿ ತಾನೂ ಪಕ್ಕದ ಒಂದು ಕುರ್ಚಿಯಲ್ಲಿ ಕುಳಿತು ಮಾಲತಿಯನ್ನು ಕಣ್ಣಿಂದಲೇ ಕರೆದನು. ಮಾಲತಿಯೂ ಒಂದು ಕುರ್ಚಿಯಲ್ಲಿ ಆತಗಿದಿರಾಗಿ ಕುಳಿತಳು. ಆದಷ್ಟು ದೂರವಿರಬೇಕೆಂತ ಕುರ್ಚಿಯನ್ನು ಕೊಂಚ

ಹಿಂದೊತ್ತಿಕೊಂಡಳು. ಆತನೊಡನೆ ಒಬ್ಬಳೇ ಸಲಿಗೆಯಿಂದರಬೇಕೆಂದು ಹಂಬಲಿಸುತ್ತಿದ್ದವಳಿಗೆ ಆಗ ಧೈರ್ಯ ಸಾಲದೆ ಹಿಂತೆಗೆದಳು. ದೇಹ ಒಂದಾಗಿ ಮನಸ್ಸು ಎರಡಾಗಿ ಕಷ್ಟಕ್ಕೀಡಾದಳು.

"ಅಮ್ಮ ಏನು ಮಾಡ್ತಿದ್ದಾರೋ, ನೋಡಿಕೊಂಡು ಬರ್ತೀನಿ" ಎಂದಳು. ಆದರೆ ಕೂತಲ್ಲಿಂದ ಏಳಲಿಲ್ಲ. ಆಕೆಯ ಕಣ್ಣುಗಳನ್ನು ಸೆರೆಹಿಡಿಯಲು ಹೊಂಚು ಹಾಕುತ್ತಿದ್ದ ಗೋಪಿನಾಥನ ನೋಟವನ್ನು ತಪ್ಪಿಸಿಕೊಳ್ಳುವುದೇ ಒಂದು ಸಾಹಸವಾಯಿತು ಆಕೆಗೆ.

"ಹೋಗಬಹುದು, ಹೋಗಲೇ ಬೇಕಾದರೆ. ಆದರೆ, ನಿಮ್ಮಮ್ಮಗೆ ಇನ್ನರ್ಧ ಗಂಟೆಯಾದರೂ ಬಿಡುವಾಗಲಾರದು. ಬಟ್ಟೆಬರೆಗಳನ್ನೆಲ್ಲ ಬದಲಿಸುತ್ತಿರಬೇಕು. ಅಥವಾ ನಾನೇ ಎದ್ದು ಹೋಗಲೇ ?"

"ಅಯ್ಯೋ, ಬೇಡ."

"ಹಾಗಾದರೆ ಕೂತಿರಿ, ಇಲ್ಲೇ. ಅದರಲ್ಲೇನು ?"

ಮಾಲತಿ ಮನಸ್ಸು ಗಟ್ಟಿಮಾಡಿಕೊಂಡು ಆದಷ್ಟು ಆರಾಮವಾಗಿ ಕುಳಿತಳು. 'ಅವರೊಂದಿಗೆ ಸರಸವಾಡುತ್ತಿರುವದೇ ಸಾಕು. ಅವರ ಕಣ್ಣಿನ ಆಲಿಂಗನಕ್ಕೆ ಸರ್ವಥಾ ಸಿಕ್ಕಬಾರದು. ಅವರ ಗೆಲವಿಗೆ ನನ್ನ ತುಟಿಗಳರಳಬಾರದು. ಅವರ ಸನಿಹಕ್ಕೆ ನಾನು ಸೋಲಬಾರದು.' ಅಂತಂದುಕೊಳ್ಳುತ್ತಿರುವಾಗಲೇ ಮೇಜಿನ ಬುಡಕ್ಕಿದ್ದ ಆಕೆಯ ಒಂದು ಪಾದ ಗೋಪಿನಾಥನ ಪಾದಕ್ಕೆ ತಗಲಿ ಒಂದು ಕ್ಷಣ ಮೈಯೆಲ್ಲ ಉರಿದು ಬಿಟ್ಟಿತು. ಕಾಲು ಹಿಂತೆಗೆದು ಗೋಪಿನಾಥನನ್ನು ತಪ್ಪಿತಸ್ಥಳಂತೆ ನೋಡಲು, ಆತ ಏನೂ ಅರಿಯದವನಂತೆ ಪಂಬಿಯ ತಲೆಗೆ ತನ್ನ ತಲೆ ಜೋಡಿಸಿ ಪುಸ್ತಕದ ಚಿತ್ರಗಳನ್ನು ವಿವರಿಸುತ್ತಿದ್ದನು.

ಒಂದು ರೇಡಿಯೋ ಪೆಟ್ಟಿಗೆಯ ಚಿತ್ರದ ಕುರಿತು ಪಂಬಿ ಪ್ರಶ್ನೆ ಕೇಳುತ್ತಿದ್ದಳು. ತಾನು ಏನಾದರೂ ಹೇಳಬೇಕಲ್ಲ ಎಂಬದರಿಂದ ಅದೇ ಪ್ರಸ್ತಾಪವೆತ್ತಿ "ರೇಡಿಯೋ ಇದ್ರೆ ಒಂದು ಗೋಳಲ್ಲವೇ ಮನೇಲಿ ?" ಅಂದಳು.

"ಹೌದೇನು, ನನಗೆ ಹಾಗನಿಸೋದಿಲ್ಲ. ಅದೊಂದು ಮನೆಯ ಮಾಯಾದೀಪ ನನಗೆ" ಎಂದು ಮಗುವನ್ನು ಬಿಟ್ಟು ಒರಗಿ ಕುಳಿತು ಗೋಪಿನಾಥ ಉತ್ತರಕೊಟ್ಟನು.

" ನನಗೇನೋ, ನನ್ನದೊಂದು ವೊನ್ನೆ ಈಚಿಗೆ ಹಾಳಾಗಿಬಿಟ್ಟದ್ದು ಒಂದು ಕ್ಷೇಮ ಅಂತಸಿಸುತ್ತೆ. "

" ಛೆ! ನಾನಾ ರೀತಿಯ ಸಂಗೀತ ಕೇಳುವುದಕ್ಕೆ ಅದರಷ್ಟು ಉತ್ತಮ ವಾದ್ದು ಬೇರೆ ಯಾವದೂ ಇಲ್ಲ. "

" ಸಂಗೀತ ಕಚೇರಿಗೆ ಹೋಗಿ ಕೇಳಿದಷ್ಟು ಸುಖವಾಗುತ್ತದೆಯೆ ?"

" ಅದಕ್ಕಿಂತ ನಾಲ್ಕರಷ್ಟು ಸುಖ. ಸಂಗೀತಗಾರರನ್ನು ನೋಡುವ ಅಗತ್ಯ ವಿಲ್ಲ. ಅವರು ಮುಖ ವಿಕಾರಮಾಡೋದು, ಗಾಳಿಯೊಡನೆ ಮಲ್ಲಯುದ್ಧ ಮಾಡೋದು, ತೊಡೆ ಬಡಕೊಳ್ಳೋದು, ಇದ್ಯಾವ ಕಣ್ಣುಬೇನೆಯೂ ಇಲ್ಲ ವಷ್ಟೆ ? ಆ ಮೇಲೆ ಬೇಕಾದರೆ, ಇಷ್ಟವಿದ್ರೆ ಕೇಳಬಹುದು. ಬೇಡವಾದ್ರೆ ಸ್ವಿಚ್ ಆಫ್ ಮಾಡಬಹುದು. ಅಸಹ್ಯ ಹುಟ್ಟಿದ ಮೇಲೂ ಮಧ್ಯೆ ಎದ್ದು ಬರಲಾರದೆ ಕೂತು ಸಂಕಟ ಪಡಬೇಕಾಗಿಲ್ಲ. ಸಂಗೀತ ಮುಗಿದ ನಂತರ ಹೇಗಿತ್ತೂಂತ ಅಭಿಪ್ರಾಯ ಪ್ರಕಟಿಸಬೇಕಾಗಿಲ್ಲ. ಸಂಗೀತಗಾರರ ಮುಖ ಸ್ತುತಿಯನ್ನೂ ಮಾಡಬೇಕಾಗಿಲ್ಲ. ನಮ್ಮಷ್ಟಕ್ಕೇ ಆರಾಮವಾಗಿ ಕುಳಿತು ಕಣ್ಣು ಮುಚ್ಚಿ ಕೇಳಬಹುದು. "

" ಈ ದೃಷ್ಟಿಯಿಂದ ನಾನು ಗ್ರಹಿಸಲಿಲ್ಲ. ಈಗೇನಾದರೂ ಪ್ರೊಗ್ರಾಮಿ ದೆಯೇ ?"

" ಇಲ್ಲವಲ್ಲ. ಏಳುಗಂಟೆಗೆ ವೀಣೆಯಿದೆ, ಮದ್ರಾಸಿನಿಂದ. ನೀವು ಅಷ್ಟರ ತನಕ ಇದ್ದು ಹೋದರೆ ಚೆನ್ನಾಗಿತ್ತು. "

" ಪರವಾಯಿಲ್ಲ. "

" ನಿಮಗೆ ವೀಣೆ ಬರ್ತ್ತೇಂತ ನನ್ನ ನೆನಪು. "

" ನಿಮಗೆ ಹೇಗೆ ಗೊತ್ತು ?"

" ಹಿಂದೆ ಒಂದಾನೊಂದು ಕಾಲದಲ್ಲಿ ನಿಮ್ಮನೇಗೆ ಬಂದಿದ್ದೆ. ಆಗ ನೀವು ನುಡಿಸ್ತಾ ಇದ್ರಿ, ಒಳಗೆ." ತಾನು ಹೋದ ತಮ್ಮ ಕೆಲಸಕ್ಕೆ ಅಡ್ಡಿಯಾಗುತ್ತ ದೆಂತ ರಾಘವೇಂದ್ರರಾಯರು ಹೇಳಿ ಕಳುಹಿಸಿದ್ದು ನೆನಪಿದ್ದರೂ ಮಾಲತಿಗೆ ಮನಸ್ಸು ನೋಯಿಸಬಾರದೆಂತ ಹೇಳಲಿಲ್ಲ.

" ಹೌದು ನನ್ನ ವೀಣೆ ಮೂಲೆ ಪಾಲಾಗಿದೆ ಈಗ. " ಅಂದಳು.

ತನ್ನ ಪಿಟಲಿನಂತೆ ಎಂದು ತೋರಿತು ಗೋಪಿನಾಥನಿಗೆ. ಇವೆರಡು ವಾದ್ಯಗಳನ್ನೂ ಒಂದೇ ಪೆಟ್ಟಿಗೆಯಲ್ಲಿಟ್ಟು ಹೂತು ಗತಗಾನ ಸಮಾಧಿಯೊಂದನ್ನು ಕಟ್ಟಿಸಿದ್ದರೆ ಎಷ್ಟು ಚೆನ್ನಾಗಿತ್ತು; ಎಂತೆನಿಸಿತು. ಆತ ಪಿಟಲು ಅಭ್ಯಾಸಕ್ಕೆ ಕೈಹಾಕಿದಾಗ ಸಂಸಾರದ ಭಾರವನ್ನು ಹೊರವುದಕ್ಕೆ ತಂದೆಯಿದ್ದರು. ಆದರೆ ಕೈ ಕೂತುಕೊಳ್ಳುವಷ್ಟರಲ್ಲಿ ಅವರು ಕರೆಬಂದು ಹೋಗಿಬಿಟ್ಟರು. ಆ ಮೇಲೆ ವಿಘ್ನಗಳು ಒಂದರಮೇಲೊಂದು ಉರುಳಿಬಿದ್ದವು. ಉದ್ಯಮಕ್ಕೆ ತಕ್ಕ ಮನಶ್ಯಾಂತಿ ದೊರೆಯದೆ ಅಲ್ಲಿಗೇ ಬಿಡಬೇಕಾಗಿ ಬಂತು.

ಇಬ್ಬರೂ ಗತಿಸಿದ ಸವಿದಿನಗಳ ನೆನಪುಗಳ ತಲ್ಪದಲ್ಲಿ ಮೈಮರೆತಿದ್ದರು. ಮಾತುಕತೆ ಸರಳವಾಗಿ ನಡೆಯುತ್ತಿಲ್ಲವೆಂತ ಇಬ್ಬರಿಗೂ ಭಾಸವಾಯಿತು. ತಮ್ಮ ವಶದಲ್ಲಿದ್ದ ಸನ್ನಿವೇಶವು ಹೇಗೋ ಏನೋ ಒಂದು ದುರ್ದಮ್ಯವಾದ ಪ್ರವಾಹದಂತಾಗಿ ಇಬ್ಬರನ್ನೂ ಕೊಚ್ಚಿಕೊಂಡು ಹೋಗುತ್ತಿತ್ತು. ಸಮುದ್ರ ತೀರದಲ್ಲಿ ಮೊಳಕಾಲೆತ್ತರ ನೀರಿನ ನೊರೆಯಲ್ಲಿ ನಿಂತು ಜಲಕ್ರೀಡೆ ಆಡುತ್ತಿರುವವರನ್ನು ತಿಮಿಂಗಿಲ ತೆರೆಯೊಂದು ಬಂದು ಒಂದು ಗಳಿಗೆಗೆ ನುಂಗಿಬಿಟ್ಟಂತಾಯಿತು.

ಅಷ್ಟರಲ್ಲಿ ಪಾಬಿಗೆ ತಾನು ನೋಡುತ್ತಿದ್ದ ಪುಸ್ತಕದ ಮೇಲೆ ಕೋಪ ಬಂದು, “ಇದಯಿ ಏನಿಯ್ಯ, ಇದೇನು ಚೆನ್ನಾಗಿಯ, ಇನ್ನೊಂದು ಕೊಯು” ಅನ್ನುತ್ತ ಅದನ್ನು ಎಸೆದುಬಿಟ್ಟಳು. ಎಸೆದು ಬಿಟ್ಟದ್ದು ಸಾಲದೆ ಪುಸ್ತಕ ಎಲ್ಲಿ ಬಿತ್ತೆಂತ ನೋಡುವುದಕ್ಕೆ ಬಗ್ಗಿದಳು. ಮಗು ಮೇಜಿನಿಂದ ಕೆಳಗುರಳಿ ಬೀಳುವಷ್ಟರಲ್ಲಿ ಮಾಲತಿ ಫಕ್ಕನೆ ಎದ್ದು ಹಿಡಿದುಕೊಂಡಳು. ಆಗ ಆಕೆಯ ಕುರ್ಚಿಯ ಬುಡಕ್ಕೆ ಬಿದ್ದಿದ್ದ ಪುಸ್ತಕವನ್ನು ತೆಗೆಯಲು ಗೋಪಿನಾಥ ಕುಳಿತಲ್ಲಿಂದಲೇ ಬಗ್ಗಿ ಚಾಚಿದ್ದ ಕೈಮೇಲೆ ಮಾಲತಿಯು ಕಾಲೂರಿ ನಿಂತಳು. ಪಂಬಿಯನ್ನೆತ್ತಿ ಕೆಳಗಿಳಿಸುವ ತನಕ ಗಲಿಬಿಲಿಯಲ್ಲಿ ಆಕೆಗೆ ಗೊತ್ತಾಗಲಿಲ್ಲ. “ಅಯ್ಯೋ” ಅನ್ನುತ್ತ ಆತನ ಕೈ ಬೆರಳುಗಳನ್ನು ತನ್ನ ಎರಡು ಕೈಗಳೊಳಗಿಟ್ಟುಕೊಂಡು ಅಪ್ಪಚಿದಳು. ಆಕೆ ಬಗ್ಗಿದಾಗ ಸೆರಗು ತುಸ ಜಾರಿದ್ದು ಹಾಗೇ ಇತ್ತು. ಆಕೆಯ ಮೈಬಣ್ಣದ ಮೆರಗು, ಸೆರಗಿನೊಳಗಿನ ಸಿರಿಯು ಗೋಪಿನಾಥನ ಕಣ್ಣಿಗೆ ಬಿದ್ದು ಆತನ ಅಂತರಾಳದ ವರೆಗೆ ನಡುಗಿಸಿಬಿಟ್ಟಿತು.

“ಎಷ್ಟು ನೋವಾಯಿತೋ ಕ್ಷಮಿಸಿ. ನೋಡಲಿಲ್ಲ.” ಅನ್ನುತ್ತ ಆತನ ಕೈಬಿಟ್ಟು ಸೆರಗು ಸರಿಪಡಿಸಿಕೊಂಡಳು.

" ಪಂಬಿ ಬಿದ್ದಿದ್ದರೆ ?"

" ಬೀಳಲಿಲ್ಲವಲ್ಲ ?"

" ನಿಮ್ಮಿಂದಾಗಿ. "

" ಆದರೆ ನಿಮ್ಮ ಕೈ ?"

" ಏನೂ ಆಗಲಿಲ್ಲ. ಹಾಗೇ ಇದೆ. ನಿಮ್ಮ ಪಾದದ ಧೂಳು ಜಾಡಿಸಿದ ಕೈ ಯಾವುದೆಂತ ಗೊತ್ತಾಗೋದಿಲ್ಲ. "

" ಗರಡೀಮನೇಲಿ ಕಲ್ಲೆತ್ತಿ ದಡ್ಡಾದ ಕೈಯಲ್ಲವೆ ?" ಎಂದು ಊಹಿಸಿ ಹೇಳಿದಳು.

" ಗರಡೀಮನೇಲಿ ಕಲ್ಲೆತ್ತಿದ್ದು ಈ ಎದೆಮೇಲೆ "

" ಅದು ಕೂಡಾ ಎಷ್ಟು ದಡ್ಡಾಗಿದೆಯೋ ಯಾರಿಗೆ ಗೊತ್ತು ? "

" ಗೊತ್ತಾದರೆ ನಿಮಗೆ, ಇನ್ಯಾರಿಗೆ ? "

" ಪಪ್ಪ, ಅತ್ತೆ, ಇಬ್ರೂ ಬಯಬೇಕಂತೆ " ಅಂತ ಅಜ್ಜಿಯಿದ್ದಲ್ಲಿಗೆ ಓಡಿ ಹೋಗಿದ್ದ ಪಂಬಿ ಕರೆತಂದಳು. ಮಾಲತಿ ಗೋಪಿನಾಥರಿಬ್ಬರೂ ಆರೆ ಮನಸ್ಸಿನಿಂದ ಮಗುವನ್ನು ಹಿಂಬಾಲಿಸಿ ಹೋದರು.

## ೧೫

ಶಾರದಮ್ಮ ಸೊಸೆಯನ್ನು ಬರಹೇಳಿ ಅಡುಗೆಮನೆಗೆ ಹೋದರು. ಅಲ್ಲಿ ಗಲಬರಿಸದೆ ಇದ್ದ ಪಾತ್ರೆಗಳನ್ನೆಲ್ಲ ಹೊರಗೆ ಹಾಕಿ ಕೆಲಸಗಿತ್ತಿಗೆ ತೊಳೆದಿಡು ವಂತೆ ಹೇಳಿದರು. ತರಕಾರಿ, ಬಾಳೆಎಲೆ, ಕಟ್ಟಿಗೆರಾಶಿ ಇವೆಲ್ಲವನ್ನು ಶಿವಯ್ಯನ ಕೈಯಿಂದಲೇ ಒತ್ತರೆ ಮಾಡಿಸಿದರು. ಹಾಲು ಒಲೆಯ ಮೇಲಿದ್ದ ಬೂದಿಯನ್ನು ಆತನಿಂದಲೇ ತೆಗಿಸಿ, ಒರೆಸಿಸಿ, ಮುಚ್ಚಿಡತಕ್ಕವು ಗಳಿಗೆ ಮುಚ್ಚಿಡಿಸಿ, ಅಡುಗೆ ಒಲೆಯೊಳಗೆ ನಾಲ್ಕು ದಿನಗಳಿಂದ ತೆಗೆಯದೆ ಜಮೆಯಾಗಿದ್ದ ಬೂದಿ ಮಸಿಕುಪ್ಪೆಯನ್ನು ಬಳಿದು ಹೊರಗೆ ಹಾಕುವಂತೆ ಮಾಡಿಸಿ, ಸೆಗಣಿ ಸಾರಿಸಿಸಿ ಶುದ್ಧ ಮಾಡಿಸಿದರು. ಒಂದು ಕಾಲು ಗಂಟೆಯ ಅವಧಿಯಲ್ಲಿ ಅಡುಗೆಮನೆಯ ರೂಪವನ್ನೇ ಮಾರ್ಪಡಿಸಿದರು. ಆ ಬಳಿಕ ರಾತ್ರೆ ಅಡುಗೆಯ ವಿಧಾನವನ್ನು ವಿಶದವಾಗಿ ಕಂಠಪಾಠ ಮಾಡಿಸಿ, ಮರು ದಿನ ತಾವು ಬರುವವರೆಗಿನ ಕೆಲಸದ ರೀತಿಯನ್ನು ಹೇಳಿಕೊಟ್ಟರು. ಇದೆಲ್ಲ ಕ್ರಾಂತಿಯಾಗುತ್ತಿರುವಾಗ ಮಾಲತಿ ಜೀನಸು ಸಾಮಗ್ರಿಗಳು ಏನೇನಿವೆ,

ಎಷ್ಟಿವೆಯೆಂದು ಡಬ್ಬಗಳ ಮುಚ್ಚಳ ತೆಗೆದು ಇಣಿಕಿ ನೋಡಿ ತನಿಖೆ ಮಾಡಿದಳು. ರಾತ್ರಿಗೆ ಬೇಕಾದ ತರಕಾರಿಯನ್ನು ತೊಳೆದು ಹೆಚ್ಚಿಟ್ಟಳು. ಹೀಗೆ ಇವರಿಬ್ಬರು ಸೇರಿ ಅಡುಗೆಮನೆಯನ್ನು ಮುಗಿಸುವಷ್ಟರಲ್ಲಿ ಶಿವಯ್ಯ ಅವರ ಸಾಮರ್ಥ್ಯ, ಅವರ ಚಾತುರ್ಯಕ್ಕೆ ಬೆರಗಾಗಿ ಅವರ ದಾಸಾನುದಾಸನಾಗಿ ಬಿಟ್ಟಿದ್ದನು.

ಅವರಿಬ್ಬರ ಕೈಚಳಕಕ್ಕೆ ಬೆರಗಾದವನು ಶಿವಯ್ಯನೊಬ್ಬನೇ ಅಲ್ಲ. ಗೋಪಿನಾಥನೂ ಅವರು ನಿರಾಯಾಸದಿಂದ ಕೆಲಸ ನಿಬಾಯಿಸುವುದನ್ನು ನೋಡುತ್ತ ಒಂದೆಡೆ ನಿಂತು ಸಂತೋಷಪಡುತ್ತಿದ್ದನು. ಮನೆಗೆಲಸದಲ್ಲಿ ತನ್ನಮ್ಮನೇ ನಿಸ್ಸೀಮಳೆಂತ ಮಾಡಿದ್ದನು. ಆದರೆ ಶಾರದಮ್ಮ ಒಂದು ತೂಕ ಜಾಸ್ತೀನೇ; ಮಾಲತಿ ಸಹ ಕಡಿಮೆಯಲ್ಲ, ಎಂದನಿಸಿತು. ಮಾಲತಿ ಸೆರಗು ಕಟ್ಟಿಕೊಂಡು ತದೇಕಚಿತ್ತದಿಂದ ಕಾರ್ಯನಿರತಳಾದುದನ್ನು ನೋಡಿದಷ್ಟು ಸಾಲದೆನಿಸಿತು. ಆಕೆಯ ನಡುವಿನ ಬಂಕ, ತೋಳುಗಳ ಅಂದ, ಬಗ್ಗಿ ಏಳುವ ವಿನ್ಯಾಸ ಒಟ್ಟಿನಲ್ಲಿ ಆಕೆಯ ಮೈಕಟ್ಟಿನ ಲಾವಣ್ಯ ಆತನ ಹಸಿದ ಕಣ್ಣುಗಳಿಗೆ ಹಬ್ಬದೂಟವಾಗಿತ್ತು. ತಾನು ಅಷ್ಟು ಹೊತ್ತು ಅಲ್ಲೇ ಸಮೀಪವಿದ್ದರೂ ಆಕೆ ಒಂದು ಬಾರಿಯಾದರೂ ತನ್ನೆಡೆಗೆ ಕಣ್ಣೆತ್ತಲಿಲ್ಲವೆಂತ ಆತಗೆ ಎಷ್ಟು ಬೇಸರವಾಯಿತೊ ಅಷ್ಟೇ ಸಂತೋಷವಾಯಿತು. ತನ್ನ ಆತ್ಮಶ್ರೀಯನ್ನು ಆಕೆಯ ಹೃದಯಕ್ಕೇರಿಸಿದರೆ ಅದನ್ನವಳು ತುರುಬಿನಲ್ಲಿ ಮುಡಿದು ಜನಸಂತೆಯಲ್ಲಿ ಮೆರೆಯುವಂಥವಳಲ್ಲವೆಂತ ತನ್ನೊಳಗೇ ಹಿಗ್ಗುತ್ತಿದ್ದನು.

ಅಡುಗೆಮನೆಯಿಂದ ಮೂವರೂ ಮಾತನಾಡಿಕೊಳ್ಳುತ್ತ ಇಂದಿರಮ್ಮನ ಕೋಣೆಗೆ ಬಂದರು.

" ಇನ್ನು ಹೋಗೋಣವೇ ಮಾಲತಿ?" ಎಂದು ಶಾರದಮ್ಮ ಸೂಚಿಸಿದರು.

" ಹೋಗೋಣಮ್ಮ ಹೊತ್ತಾಯಿತು. ಈ ಮುದ್ದುಮರಿ ನಮ್ಮೊಟ್ಟಿಗೆ ಬಂದಿದ್ದರೆ ಚೆನ್ನಾಗಿತ್ತು. ನಾಳೆ ಬೆಳಿಗ್ಗೆ ಬರುವಾಗ ವಾಪ್ಸು ತಂದು ಬಿಡಬಹುದಿತ್ತು." ಅಂದಳು ಮಾಲತಿ, ಪಂಬಿಯ ಗಲ್ಲ ಹಿಡಿದು ಚುಂಬಿಸುತ್ತ.

" ಏನಪ್ಪ, ಹೋಗ್ತೀಯಾ ಅತ್ತೆಯ ಸಂಗಡ ?" ಎಂದು ಇಂದಿರಮ್ಮ ಕೇಳಿದರು.

" ಎಡಿ " ಅನ್ನುತ್ತ ಪಂಬಿ 'ಅತ್ತೆ' ಕಡೆಗೆ ಕೈನೀಡಿ ಅನುವಾದಳು. ಮಾಲತಿ ಎತ್ತಿಕೊಂಡಳು.

" ರೆಡಿ ? ಇಂಗ್ಲಿಷು ಬೇರೆ ಬರುತ್ತೇನಮ್ಮ ನಿನಗೆ ? " ಎಂದು ಶಾರದಮ್ಮ ಮೂಗಿನ ಮೇಲೆ ಬೆರಳಿಟ್ಟುಕೊಂಡು ಕೇಳಿದರು.

" ಹೂಂ. ಚಾಲೆಗೆ ಹೋಗಾಗ ಕಯಿತಿದ್ದು."

" ಓಹೋ. ಚಾಲೆಗೆ ಹೋಗಾಗ ಕಯಿತಿದ್ದು. "

" ಓಹೋ. ಶಾಲೆಗೆ ಹೋಗುವಾಗ ಕಲಿತದ್ದೇ ? ಪಾಪ, ಶಾಲೆಬಿಟ್ಟು ಎಷ್ಟು ವರ್ಷವಾಯಿತೋ ?" ಎಂದು ಮಾಲತಿ ಪಶ್ಚಾತ್ತಾಪಪಟ್ಟಳು.

" ಮೂಯು ನಾಕು ಎಡ್ಡು."

ಎಲ್ಲರಿಗೂ ನಗು ಬಂತು. ಮಾಲತಿ ಮಗುವನ್ನು ಎದೆಗೆ ಬಿಗಿದುಕೊಂಡು " ಮುದ್ದು ಚಿನ್ನ" ಅಂದಳು.

" ರಾತ್ರಿ ಪಪ್ಪ ಬೇಕೂಂದ್ರೆ ಎಲ್ಲಿಂದ ತರೋದು ಪಂಬಿ ?" ಎಂದು ಶಾರದಮ್ಮ ಎಚ್ಚರಿಸಿದರು.

ಪಂಬಿಗೆ ಅದೊಂದು ಸಮಸ್ಯೆಯಾಗಿ ತೋರಿ ತಂದೆಯ ಮುಖವನ್ನೇ ನಿರೀಕ್ಷಿಸಿದಳು.

ಗೋಪಿನಾಥ, " ಬಾ, ಮಗು. ಅವರೀಗ ಹೋಗಲಿ. ನಾವು ಇನ್ನೊಂದಿನ ಹೋಗೋಣ " ಅನ್ನುತ್ತ ಮಗುವನ್ನು ಮಾಲತಿ ಕೈಯಿಂದ ತಗೊಂಡನು.

ರಾತ್ರೆ ತನ್ನ ಊಟವಾದ ಮೇಲೆ ತಂದೆ ಊಟಕ್ಕೆ ಕುಳಿತಿದ್ದಾಗ ಪಂಬಿ ತನ್ನ ಎರಡು ದುಂಡಗಾದ ಮೃದುವಾದ ತೋಳುಗಳನ್ನು ಆತನ ಕೊರಳಿಗೆ ಸುತ್ತಿ ಹಾಕಿ ಕಾಲುಗಳಿಂದ ಹಿಂದಿನ ಗೋಡೆಗೆ ಮೀಟುತ್ತ ಉಯ್ಯಾಲೆ ಯಾಡುತ್ತಿದ್ದಳು. ಆ ಮೇಲೆ ತಂದೆ ಜತೆಯಲ್ಲಿ ಪರಿಷ್ಕಾರವಾಗಿ ಅಡಿಕೆಲೆ ತಿಂದಳು. ಆ ಮೇಲೆ ಬಾಯಿ ಕೆಂಪಗೆ ಮಾಡಿಕೊಂಡು ತಂದೆಯ ಕುರ್ಚಿ ಬಳಿ ಪುಟ ಪುಟ ಚಂಡಿನಂತೆ ನೆಗೆಯುತ್ತ,

" ಇವತ್ತೆಷ್ಟು ವಾಯ ?" ಎಂತ ಕೇಳಿದಳು.

" ಇವತ್ತು ಎಷ್ಟು ವಾರ ಅಂದ್ರೇನೇ, ಏನು ವಾರ ಅಂತ ಕೇಳು."

" ಹೂಂ. ಏನು ವಾಯ ?"

" ಭಾನುವಾರ "

" ಹೂಂ. ನಿಂಗೆ ?"

" ನಂಗೂ ಭಾನುವಾರ, ನಿಂಗೂ ಭಾನುವಾರ. "

" ದೊಡ್ಡಮ್ಮಗೆ ?"

" ದೊಡ್ಡಮ್ಮಗೂ, ಎಲ್ಲಾಗೂ. "

" ನಾಯಿ ? ಆವಾಗ ನಾಯಿ ?"

" ನಾಳೆ ಯಾವಾಗ ಅಂದ್ರೆ ?"

" ಎತ್ತುವಯಿ ಗಂಟೆಗೆ ?" ಅಷ್ಟರಲ್ಲಿ ಬಾಯಿಂದ ಎಂಜಲಿನ ಕೆಂಪುಧಾರೆಯೊಂದು ಆಕೆಯ ತುಟಿಗಳೆಡೆಯಿಂದ ಹೊರಚೆಲ್ಲಿ ಒಂದು ತೊಟ್ಟು ಕೆಳಗೆ ಬಿತ್ತು. ' ಥು, ಥು, ಥು ' ! ಎಂದು ಗೋಪಿನಾಥ ಕಾಲುಗಳನ್ನು ಮುದುರಿಸಿಕೊಳ್ಳುವಷ್ಟರಲ್ಲಿ ಪಂಬಿ ಆತನ ಪಂಚೆಯ ಸೆರಗನ್ನು ಎಳೆದು ಬಾಯಿ ಒರೆಸಿಕೊಂಡುಬಿಟ್ಟಳು. ಪಂಚೆಯು ಅಷ್ಟು ಜಾಗಕ್ಕೆ ಕೆಂಪು ಮುದ್ರೆಬಿತ್ತು. ಅದನ್ನು ಹಿಡಿದೆತ್ತಿ ತೋರಿಸಿ,

" ನೋಡಿದಿಯಾ ನಿನ್ನ ಕೆಲಸ? ಅತಿ ತಂಟೆಯಾಯಿತು, ನಿನಗೆ" ಎಂದು ಎದ್ದುಹೋಗಿ ಅಷ್ಟನ್ನೇ ತೊಳೆದುಕೊಂಡು ಬಂದನು. ಬಂದಮೇಲೆ ರೇಡಿಯೋ ಮೇಜಿನ ಬಳಿಗೆ ಹೋಗಿ ಗುಂಡಿಯನ್ನು ತಿರುಗಿಸುತ್ತಾ ನೋಡಿದನು. ರಾತ್ರೆ ಒಂಭತ್ತುವರೆ ಗಂಟೆ ಸಮೀಪಿಸಿದ್ದರಿಂದ ಹಿಂದುಸ್ತಾನದಲ್ಲೆಲ್ಲಿಯೂ ಕೇಳುವಂಥ ಸಂಗೀತ ಸಿಗಲಿಲ್ಲ. ಲಂಡನ್ನಿಗೆ ತಿರುಗಿಸಿ ನೋಡಲು ಜಗ್ಗನೆ ವಾದ್ಯ ಸಮ್ಮೇಳನದ ತೆರೆಯೊಂದು ಸುರಿದು ಬಿತ್ತು; ನಿಃಶಬ್ದವಾಗಿದ್ದ ಕೋಣೆಯನ್ನೆಲ್ಲ ತುಂಬಿಕೊಂಡಿತು. ತನ್ನ ತಂದೆ ರೇಡಿಯೋ ಪೆಟ್ಟಿಗೆ ಹತ್ತಿರ ಹೋಗಿ ಅಷ್ಟು ಹೊತ್ತು ಅದನ್ನು ಕೆಣಕಿ, ರೇಗಿಸಿ, ಗೋಳಿಡಿಸಿ, ಕೆಮ್ಮಿಸಿ ಮಾಡಿದ್ದೇ ವಿನಾ ಮತ್ತೇನೂ ಸ್ವಾರಸ್ಯವಿಲ್ಲವೆಂತ ಪೇಚಾಡುತ್ತಿದ್ದ ಪಂಬಿಗೆ ಈ ಜಲಸ ಜಲಧಾರೆಯನ್ನು ಕೇಳಿ ಹಿಡಿಸಲಾರದಷ್ಟು ಸಂತೋಷವಾಯಿತು. ಹಾರಿದಳು, ಕಿರುಚಿದಳು, ನಕ್ಕಳು ಕೈತಟ್ಟಿದಳು. " ಪಪ್ಪ, ಪಪ್ಪ, ಇಯಿ ಬಾ. ಕೂಕ ನನ್ನತ್ತ. " ಎಂದು ಕೂಗುತ್ತ ಓಡಿಹೋಗಿ ಒಂದು ಸೋಫದಲ್ಲಿ ಕುಳಿತು ತಂದೆಗೆ ಜಾಗಮಾಡಿ ಕರೆದಳು.

ಗೋಪಿನಾಥನ ನಿತ್ಯಜೀವನದ ಹಲವೇ ಸುಖನಿಮಿಷಗಳಲ್ಲಿ ಇವು ರಸರತ್ನಗಳಾಗಿದ್ದವು. ಮುದ್ದಿನ ಮಗಳೊಂದಿಗೆ ಬಾನುಲಿ ಗೀತಕ್ಕೆ ಮೈಯೊಡ್ಡಿ ಮೈಮರೆತುಬಿಡುವದು. ಪಂಬಿಗೆ ವಿವಿಧ ವಾದ್ಯಗಳ ಸಮ್ಮಿಳಿತ ಸ್ವರಗಳು ಬಾಣದ ಬುಟ್ಟಿಯಿಂದ ಹೊರಗುರುಳುವ ತರತರದ ಹಣ್ಣುಗಳಂತೆ. ಆಕೆಗೆ ಶ್ರುತಿಯೊಂದು ನಾದದ ಪರಿಚಯವಿತ್ತು. ಒಂದರಂತೆ ಮತ್ತೊಂದಿಲ್ಲ.

ಒಂದೊಂದಕ್ಕೆ ಒಂದೊಂದು ಗುಣ, ರೂಪ, ಸ್ವಭಾವ. ಕೆಲವು ಚೀರುವಂಥವು, ಕೆಲವು ಗರ್ಜಿಸುವಂಥವು, ಕೆಲವು ಗುಡುಗುವಂಥವು. ಮುರಿಯೋಂತ ಮೊರೆಯಿಡುವ ಸ್ವರಗಳು ಬೇರೆ. ಕಿಲಕಿಲನೆ ನಗುವಂಥವು ಬೇರೆ. ಈ ಕೋಲಾಹಲದ ನಡುವೆ ಸಾಬೂನಿನ ನೊರೆಗುಳ್ಳೆಗಳಂತೆ ಎದ್ದು ಗಾಳಿಗೆ ತೇಲಿ, ಬಿಸಿಲಲ್ಲಿ ನಡುಗಿ, ಸಿಡಿದು ಹೋಗುತ್ತಿದ್ದ ಹುಚ್ಚು ಪಾತರಗಿತ್ತಿ ಸ್ವರಗಳು ಬೇರೆ. ಮತ್ತಿನ್ನು ಹಲವಾರು ರಾಗಗಳು ಹಾಸಿಗೆಯನ್ನು ಬಿಟ್ಟಿದ್ದ ಅಪ್ಸರೆಯರಂತೆ ಅಲ್ಲೆ ಮೈಮುರಿದುಕೊಂಡು ಆಕಳಿಸಿ ಪರಿಮಳ ಬೀರಿ ಪುನಃ ನಿದ್ರಾವಶವಾಗುವಂಥವು.

ಇವೆಲ್ಲವಕ್ಕೂ ಪಂಬಿಯೆಂದರೆ ಅತಿ ಪ್ರೀತಿ. ಇವು ಬಾಗಿಲೆಡೆಯಲ್ಲೋ, ಕುರ್ಚಿ ಮೇಜುಗಳ ಬುಡದಲ್ಲೋ, ಚಿತ್ರಪಟಗಳ ಸಂದಿನಲ್ಲೋ ಅವಿತುಕೊಂಡು ಆಕೆಯೊಡನೆ ಕಣ್ಣುಮುಚ್ಚಾಲೆಯಾಡುತ್ತಿದ್ದವು. ಕೆಲವಕ್ಕೆ ರೆಕ್ಕೆಗಳಿದ್ದವು. ಥಳಥಳಿಸುವ ಬಣ್ಣದ ನುಣುಪಾದ ಗರಿಗಳು. ಪಂಬಿ ಕಣ್ಣಾರೆ ಕಂಡಿದ್ದಳು. ಕೆಲವು ಅಡುಗೆಮನೆಯ ಹಿಂದುಗಡೆಯಿದ್ದ ಚರಂಡಿಯ ನೀರಿನಂತೆ ಕಾಲು ಬೆರಳನ್ನು ನೆಕ್ಕುತಿದ್ದವು.

ಈ ಪುಣ್ಯಜೀವಿಗಳನ್ನೆಲ್ಲ ಆ ಒಂದು ಪೆಟ್ಟಿಗೆಯೊಳಗೆ ತುಂಬಿಸಿದ ಪುಣ್ಯಾತ್ಮರು ಯಾರೋ ! ಈ ನಾದನಕ್ಷತ್ರಗಳನ್ನು ಆ ಪಂಜರದೊಳಗೆ ಸೆರೆಹಿಡಿದು ಸಾಕುತ್ತಿರುವ ಮಂತ್ರವಾದಿ ಯಾರೋ ! ಆ ಕನಸಿನ ಕೊಪ್ಪರಿಗೆಯೊಳಗೆ ? ಪಂಬಿಯ ಅನುಮಾನವಿತ್ತು, ಪಪ್ಪನೇ ಆಗಿರಬೇಕೆಂತ. ಅದು ಹೇಗಿದ್ದರೂ ಆ ಪೆಟ್ಟಿಗೆಯ ಗುಟ್ಟೆಲ್ಲ ಆತನಿಗೆ ಗೊತ್ತಿತ್ತು. ಆತ ಹೋಗಿ ಕಿವಿ ಹಿಂಡುವುದೇ ತಡ, ಆ ಗಂಧರ್ವ ಗೆಳೆಯರು ಗುಂಪುಗುಂಪಾಗಿ ಕುಣಿಯುತ್ತ, ಕುಪ್ಪಳಿಸುತ್ತ ಪಂಬಿಯನ್ನು ಆಲಂಗಿಸುವುದಕ್ಕೆ ಮೈಮುತ್ತುತ್ತಿದ್ದುವು. ರಾತ್ರೆ ಮಲಗುವಾಗ ಆ ಪವಾಡದ ಪೆಟ್ಟಿಗೆಯನ್ನು ಮಗ್ಗುಲಲ್ಲಿಟ್ಟುಕೊಳ್ಳಬೇಕು, ಇಲ್ಲವೆ ಅದರ ಹೊಟ್ಟೆಯೊಳಗೆ ತಾನು ಮಲಗಬೇಕು, ಎಂಬಾಸೆ ಪಂಬಿಗೆ. ಆದರೆ ಯಾವ ಧೈರ್ಯ ? ನಡುರಾತ್ರೆ ಅವೆಲ್ಲ ಎಚ್ಚತ್ತು ತಾಂಡವಕ್ಕೆ ಸುರು ಮಾಡಿದರೆ ?

೧೬

ಮರುದಿನ ಸೋಮವಾರ ಶಾರದಮ್ಮ ಒಬ್ಬರೇ ಬಂದರು ಹತ್ತು ಗಂಟೆ ಹೊತ್ತಿಗೆ. ಆ ತನಕ ಆಫೀಸಿನ ನಿತ್ಯಕೆಲಸದ ಒತ್ತಡದಲ್ಲಿದ್ದ ಗೋಪಿನಾಥ

ನಿಗೆ ಹೊತ್ತು ಹೋದದ್ದೇ ಗೊತ್ತಾಗಿರಲಿಲ್ಲ. ಆದರೆ ಶಾರದಮ್ಮ ಒಬ್ಬರೇ ಬಂದುದನ್ನು ನೋಡಿ ಹೊತ್ತು ಹಠಾತ್ತಾಗಿ ಕಳಚಿ ಕಾಲುಬುಡಕ್ಕೆ ಬಿದ್ದಂತಾಯಿತು. ಆಫೀಸಿನಲ್ಲಿ ಕುಳಿತಿರಲಾರದೆ ಒಳಗೆ ಹೋಗಿ ಶಾರದಮ್ಮನ ಸಮೀಪ ಸುಳಿದಾಡಿದನು. ಏನು ಕೇಳಲಿ, ಹೇಗೆ ಕೇಳಲಿ ಎಂದು ತಿಳಿಯದೆ ಮನಸ್ಸಿನೊಳಗೆ ಬಗೆಬಗೆಯ ಸವಾಲುಗಳನ್ನು ಕಟ್ಟಿ ತೂಕಮಾಡಿ ತಿರಸ್ಕರಿಸಿದನು. ಬಾಯಿಬಿಟ್ಟು ಕೇಳದೆ ಇದ್ದರೇನೇ ಉತ್ತಮ. ಮಾಲತಿ ಬರಲಿಲ್ಲ. ನಿಜ. ಯಾತಕ್ಕೋ ? ಗಂಡ ಬೇಡವೆಂದರೋ ? ಆಕೆಗೆ ಮನಸ್ಸಿಲ್ಲವೋ ? ಅಥವಾ ಮಧ್ಯಾಹ್ನದ ನಂತರ ಬರುತ್ತಾಳೋ ? ಎಂಬೀ ಡೋಲಾಯಮಾನದಲ್ಲಿ ಕೊಂಚ ಕಾಲ ನೇಲುತ್ತಿದ್ದು ಆ ಮೇಲೆ ಸ್ನಾನಕ್ಕೆಂತ ಹೋದ. ಸ್ನಾನ ಮಾಡಿ ಬಂದು ತಲೆಬಾಚಿಕೊಂಡು ಊಟಕ್ಕೆ ಕುಳಿತಾಗ ಶಾರದಮ್ಮ ಇಂದಿರಮ್ಮನಿಗೆ ಹಾಲಾರಿಸುತ್ತಿದ್ದರು.

ಆಗ ಧೈರ್ಯಮಾಡಿ ಕೇಳಿಯೇಬಿಟ್ಟ, "ನೀವೊಬ್ರೇ ಬಂದ್ರೆಲ್ಲಾ ?"

"ಹೌದಪ್ಪ, ಇಬ್ಬರೂ ಬಂದೇನು ಮಾಡೋದು ಹೇಳು." ಅಂದರು.

ಈ ಉತ್ತರದಿಂದ ಆತ ಮತ್ತಷ್ಟು ಹತಾಶನಾದನು. ನಾಲ್ಕುದಿನಗಳಿಂದಲೂ ಸರಿಯಾಗಿ ಊಟವಿಲ್ಲದವನಿಗೆ ಅಂದು ಅಡುಗೆ ತಕ್ಕಮಟ್ಟಿಗೆ ಇದೆ, ಉಣಬಹುದು ಅಂತಿತ್ತು. ಆದರೆ ಈಗ ಹಸಿವೇ ಉಡುಗಿಹೋಯಿತು. ಅನ್ನ ಸೇರಲಿಲ್ಲ. ಊಟದ ಶಾಸ್ತ್ರ ಮಾಡಿ ಎದ್ದುಬಿಟ್ಟನು. ಇಂದಿರಮ್ಮ ತುಂಬ ವಾಸಿಯಾದ್ದರಿಂದ ಮಾತ್ರ ಕಚೇರಿಗೆ ಹೋಗುವಷ್ಟು ಮನಸ್ಸು ಸ್ವಾಧೀನದಲ್ಲಿತ್ತು.

ಆತ ಸಂಜೆ ಮನೆಗೆ ಬರುವಾಗ ಪಂಬಿಯದೇ ಒಂದು ಸಮಸ್ಯೆಯಾಗಿಬಿಟ್ಟಿತ್ತು, ಮನೆತುಂಬ. ಗಲಾಟೆಯೇನೂ ಇರಲಿಲ್ಲ. ಎಂದಿನಂತೆ ಬುದ್ಧನ ಪ್ರತಿಮೆಯಂತೆ ಹಸನ್ಮುಖಳಾಗಿ ಓಡಾಡುತ್ತಿದ್ದಳು. ಮನೆಯವರು ಮಾತ್ರ ಕಂಗಾಲಾಗಿದ್ದರು. ಪಂಬಿಗೆ ಬೆಳಗ್ಗಿಂದ ಉಪವಾಸ. ಊಟ, ಸ್ನಾನ, ಹಾಲು, ಕಾಫಿ, ಡ್ರೆಸ್ಸು ಯಾವುದೂ ಬೇಡ, ಪಪ್ಪ ಬರಲಿ, ಅಂತವಳ ಇಚ್ಛೆ. ಶಾರದಮ್ಮ ಎಷ್ಟು ಪುಸಲಾಯಿಸಿದರೂ ಇಂದಿರಮ್ಮ ಎಷ್ಟು ಬುದ್ಧಿ ಹೇಳಿದರೂ ಪ್ರಯೋಜನವಾಗಲಿಲ್ಲ. ಹಾಗೆಂತ ಅಳಲೂ ಇಲ್ಲ, ಹಟಮಾಡಲೂ ಇಲ್ಲ. "ಹಸಿವಾಗುವುದಿಲ್ಲವೇ ಮಗು ?" ಅಂತ ಕೇಳಿದರೆ, "ಆಗುತ್ತೆ ಏನ್ಮಾಡೋದು ?"

ಎಂಬ ಹಾಗೆ ಗಂಭೀರವಾಗಿ ತಲೆಯಾಡಿಸುವಳು. ತನ್ನ ಕೂಸನ್ನೆತ್ತಿಕೊಂಡು ಆದರ ಬೆನ್ನು ಸವರುತ್ತ, "ಅಯಿಬಾದು. ಪಪ್ಪ ಬಯ್ರಿ. ಚಾನ ವಾಜಿ ಆಂಗ ಆಕಿ, ಊತ ವಾತಿ, ಬೂವ ಕಕಂಡು ಹೋತಾಯೆ" ಅಂತ ಸಂತ ವಿಸುವಳು. ಶಿವಯ್ಯ ಮಾತ್ರ ಉಪಚಾರ ಮಾಡುವುದಕ್ಕೆ ಬಂದಾಗ ಸಿಡಿದು ಬಿದ್ದು "ನೀನು ಹೋಗು. ವುಂಗ! ಚತ್ತಾಕ ಬೇಕು, ನಿನ್ನ" ಅಂತ ಓಡಿಸಿ ಬಿಟ್ಟಳು.

ಆದ್ದರಿಂದ ಮನೆಗೆ ಬಂದಮೇಲೆ ಒಂದು ಅರ್ಧಗಂಟೆ ಪಂಬಿಯ ಕೆಲ ಸಕ್ಕೇ ಹಿಡಿಯಿತು. ಆ ಮೇಲೆ ಶಾರದಮ್ಮ ತಾನೇ ತಯಾರಿಸಿದ್ದ ಕಾಫಿ ತಿಂಡಿ ಯನ್ನು ತಿಂದು, ಮರುದಿನವೂ ಪಂಬಿ ಇದೇ ರೀತಿ ಮಾಡಿದರೇನು ಗತಿ, ಎಂದು ಪ್ರಸ್ತಾಪವೆತ್ತಿದನು. ಇಂದಿರಮ್ಮ ಮಗುವನ್ನೇ ಕೇಳಿದರು. ಆಗ ಹೊರಬಿತ್ತು ಆಕೆಯ ಇಂಗಿತ. ಅತ್ತೆ ಬರಲಿ, ಅತ್ತೆ ಉಣಿಸಲಿ, ಮುದ್ದು ಮರಿ ಅನ್ನಲಿ ಅಂತ.

"ಅಯ್ಯೋ ಕೂಸು! ಯಾರಿಗೆ ಗೊತ್ತು ನೀನು ಹೀಗೆ ಮಾಡ್ತೀಂತ? ನಿನ್ನತ್ತೆಯೇ ಬರುತ್ತಿದ್ದಳಲ್ಲ? ನಾಳೆ ಅವಳೇ ಬರಲಿ. ಅವಳಿಗೂ ನೀನಂದ್ರೆ ಪ್ರಾಣ" ಅನ್ನುತ್ತ ಶಾರದಮ್ಮ ತುಂಬ ಪಶ್ಚಾತ್ತಾಪಪಟ್ಟರು. ಈ ಆಶ್ವಾ ಸನದಿಂದ ಮಗುವಿಗಿಂತ ತಂದೆಗೇ ಹೆಚ್ಚು ಸಂತೋಷವಾಯಿತು. ತಾನು ಮರುದಿನ ಕಚೇರಿಯಿಂದ ಎಷ್ಟು ಜಾಗ್ರತೆಯಾಗಿ ಬರಬಹುದೆಂತ ಎಣಿಕೆ ಹಾಕಿದನು. ಅಲ್ಲದೆ ಅಂದು ಮನೆಯಲ್ಲೇ ಇರುವುದಕ್ಕಿಂತ ಕ್ಲಬ್ಬಿಗೆ ಹೋಗೋಣವೆನಿಸಿತು. ಆಗ ಸರಿಯಾಗಿ ಶಾರದಮ್ಮನೇ ಕೇಳಿದರು.

"ಗೋಪಿನಾಥ, ನಿನಗೆ ಕ್ಲಬ್ಬುಗಿಬ್ಬು ಇದ್ದರೆ ಹೋಗಿ ಬಾ, ಬೇಕಾದರೆ. ಅಥವಾ ರಾಘು ಮಾಡಿದಂತೆ ಸಾಯಂಕಾಲ ಕೂಡಾ ಆಫೀಸಿನ ಮೇಜಿಗೆ ಮೂಗು ಹಚ್ಚಿ ಕೂತುಕೋತೀಯಾ?"

"ಹಾಗೇನೂ ಇಲ್ಲ. ಸಾಯಂಕಾಲ ಹೆಚ್ಚಾಗಿ ಕ್ಲಬ್ಬಿಗೆ ಹೋಗಿ ಬರ್ತೀನೆ. ನಿಮ್ಮ ಮಗನಷ್ಟು ನನಗೆ ಕೆಲಸವೂ ಇಲ್ಲ. ಇದ್ದ ಕೆಲಸದಲ್ಲಿ ಅವನಷ್ಟು ಆಸಕ್ತಿಯೂ ಇಲ್ಲ."

"ಏನು ಕೆಲಸವೋ ಏನು ಆಸಕ್ತಿಯೋ ನಿಮಗೇ ಗೊತ್ತು. ಕಚೇರೀಲಿ ಮಾತಾಡಿ ಎದೆ ಒಣಗಿಸಿಕೊಳ್ಳೋದು ಸಾಲದೆ ಮನೇಲೂ ವಿಶ್ರಮಿಸಿ

ಕೊಳ್ಳದೆ, ಹಗಲೂ ಅಂತಿಲ್ಲ, ರಾತ್ರೇಂತಿಲ್ಲ, ಕುರ್ಚಿಗೆ ಆಣಿಹೊಡೆದಂತೆ ಬಿದ್ದಿರೋದು ಬಲು ಕೇಡು. ನೀನು ಹೋಗ್ತಿದ್ರೆ ಹೋಗು, ಪಂಬೀನ ನೋಡ್ಕೋತೇನೆ " ಅಂದರು. ಪಂಬಿಯೂ ಯಾತಕ್ಕೋ ಕರೆದರೂ ಒಲ್ಲೆ ಅಂದಳು. ಗೋಪಿನಾಥ ಒಬ್ಬನೇ ಹೋದನು, ಮರುದಿನದ ಸುಖವನ್ನು ಮುಂದಾಗಿ ಸವಿಯುತ್ತ. ಮೆಟ್ರೋ ಕ್ಲಬ್ಬಿನಲ್ಲಿ 'ಪೋಲಿ'ಗಳು ಕೆಲವರು ಬ್ರಿಜ್ ಆಡುತ್ತಿದ್ದರು. ಡಾಕ್ಟರೂ ಸಂಜೀವರಾಯರೂ ಒಂದು ಪಕ್ಷ; ಕೃಷ್ಣಯ್ಯನೂ ಕಮ್ತಿಯರೂ ಎದುರುಪಕ್ಷ. ಡಾಕ್ಟರು 'Dummy'ಯಾದ್ರಿಂದ ತಮ್ಮ ಕೈಯೆಲೆಗಳನ್ನು ಮೇಜಿನ ಮೇಲೆ ಹರವಿ ಕೈಮುಗಿದು ತಾಳ ಹಾಕುತ್ತ ಸಂತ ತುಕಾರಾಮನಂತೆ ಧ್ಯಾನನಿರತರಾಗಿದ್ದರು.

" ಪಾಂಡುರಂಗ ಧ್ಯಾನೀ. ಪಾಂಡುರಂಗ ಮಾ-ಆ-ನೀ-ಈ. "

ಗೋಪಿನಾಥನು ವಾಚನಾಲಯದಿಂದ ಒಂದು ಕುರ್ಚಿಯನ್ನು ಹೊತ್ತು ತಂದು ಕೃಷ್ಣಯ್ಯನಿಗೂ ಸಂಜೀವರಾಯರಿಗೂ ಮಧ್ಯ ಕುಳಿತನು.

" ಏನು ಬಿಡ್ಡು " ಎಂದು ಕೇಳಿದನು, ಸಂಜೀವರಾಯರು ಪಟ್ಟಿನ ಮೇಲೆ ಪಟ್ಟನ್ನು ಗೆದ್ದು ಕೂಡಿಡುವುದನ್ನು ನೋಡಿ,

" ಬಿಡ್ ಏನಾದರೇನು ? 'Little Slam' ಮಾಡಿದ್ದು ನೋಡಿದ್ರೋ ಇಲ್ಲವೋ ? ಕಾಫಿ ತರಿಸಿಕೊಡು, ನಿನ್ನ ಪಾರ್ಟಿಗೆ ಸೇರ್ತೇನೇಂದೆ ಕಮ್ತಿಗೆ. ಕೇಳಲಿಲ್ಲ. ಈಗ ನೋಡಿ ಆದ ಅನಾಹುತ. ಬ್ರಿಜ್ ಅಲ್ರೀ ಇದು, ಬ್ರಿಜ್ಜಲ್ಲ. ಇದು ಶಿಶುಹತ್ಯ, ಈ ತೊತ್ತಿನ ಕುನ್ನಿಗಳೊಡನೆ ಆಡೋದೂಂದ್ರೆ. " ಅನ್ನುತ್ತ ಕೊನೆಯ ಒಂದು ಪಟ್ಟನ್ನು ಬಿಟ್ಟುಕೊಟ್ಟು " ತಿನ್ನಿ " ಅಂದರು.

" ಆಮೇಲೆ ಡಾಕ್ಟರನ್ನು ನೋಡಿ, ಗೋಪಿನಾಥರಾಯರಿಗೆ ಬಿಟ್ಟುಕೊಡ್ರೀ ನಿಮ್ಮ ಸ್ಥಳ. ಅಪರೂಪಕ್ಕೆ ಬಂದಿದ್ದಾರೆ " ಅಂದರು.

" ಹೀಗೆ ಇರಲಿಯೇ ಅಥವಾ ಪಾರ್ಟಿಗೆ ಕಟ್ ಮಾಡೋಣವೇ ? " ಎಂದು ಕೇಳುತ್ತ ಗೋಪಿನಾಥ ಡಾಕ್ಟರು ಬಿಟ್ಟುಕೊಟ್ಟ ಸ್ಥಳದಲ್ಲಿ ಕುಳಿತನು.

" ಯಾಕ್ರೀ ಬದಲಾಯಿಸೋದು ? ಇರಲಿ ಹೀಗೇ. ಏನು ಕಮ್ತೀರೆ ? ಬಲು ಜೋರಾಗಿ ಹಾರ್ತಾರಲ್ಲ ಸಂಜೀವರಾಯರು ? " ಎಂದು ಉದ್ಗಾರ ತೆಗೆದರು ಕೃಷ್ಣಯ್ಯ.

" ಅದಕ್ಯಾತಕ್ರೀ ಇಷ್ಟು ಗಾಬ್ರಿ ? ಕಲಸಿ ಹಂಚಿಬಿಡಿ. ಇನ್ನು ಮುಂದೆ ಜನ್ಮ ಜನ್ಮಾಂತರಕ್ಕೂ ಬ್ರಿಜ್ ಆಡದ ಹಾಗೆ ಮಾಡೋಣ, ಪಾಪಿಗಳನ್ನ" ಅಂತ ಕಮ್ತಿಯರು ಧೈರ್ಯ ಹೇಳಿದರು.

" ನಿಮ್ಮ ಜೊತೇಲಿ ಬ್ರಿಜ್ ಆಡೋದಿಲ್ಲಾಂತ ಮೊದಲೇ ನಿಶ್ಚಯ ಮಾಡಿದ್ದೇನೆ. ಗೋಪಿನಾಥರಾಯರಿಗಾಗಿ ಒಂದು ರಬ್ಬರು ಆಗಲೀಂತಂತೇನೆ. " ಎಂದರು ಸಂಜೀವರಾಯರು.

ಆಟ ಪ್ರಾರಂಭವಾಯಿತು. ಡಾಕ್ಟರು ಸಚಿತ್ರ ಪತ್ರಿಕೆಯೊಂದನ್ನು ತರಲು ವಾಚನಾಲಯಕ್ಕೆ ಹೋದರು. ಅವರು ಹಿಂತಿರುಗಿ ಬರುವಾಗ ಗೋಪಿನಾಥ ಆಡುತ್ತಿದ್ದನು. ಸಂಜೀವರಾಯರು Dummy ಆಗಿದ್ದರು.

" ಬ್ರಿಜ್ಜಿನ ಹಾಡು ಕೇಳಿದ್ದೀರಾ ಡಾಕ್ಟ್ರೇ ? ಇಲ್ಲ ? ಅಯ್ಯೋ ಪೆದ್ದು, ಮೊದಲೇ ಹೇಳಿದ್ರಿ ! " ಅನ್ನುತ್ತ ಸುರುಮಾಡಿದರು ಸಂಜೀವರಾಯರು. ಹುಬ್ಬು ಹಾರಿಸಿದರು, ಕಣ್ಣು ಮಿಟಕಿಸಿದರು, ಕತ್ತು ಜಗ್ಗಿಸಿದರು, ಹೆಗಲು ಕುಣಿಸಿದರು. ಹಾಡಿದರು.

" ನೋಟ್ರಂಪು ಹೇಳ್ಯಾನ, ಕಣ್ಸನ್ನೆ ಮಾಡ್ಯಾನ,
" ಹಾಂಗೊಮ್ಮೆ ಹೀಂಗೊಮ್ಮೆ, ಇಣಿಕಿಣಿಕಿ ನೋಡ್ಯಾನ, ಜಾಣಾ.
ಡಬ್ಬಲ್ಲು ಮಾಡೀದ, ಹೆಮ್ಮೇಲಿ ಹಾರೀದ,
ಹಾಂಕಾರ ಮಾಡೀದ ಕಮ್ತಿನ ನೋಡುತ್ತ, ಕೋಣಾ.
ಬಿಟ್ಟಾನೆ ಪಾರ್ಟ್ನರು ? ನಂಬಾಟ್ಟೆವಾಲಾ ?
ಆಟೀನು ಎರಡಂದ, ಮೂರಂದ, ನಾಲ್ಕಂದ, ಜಾಣಾ.
ಕಮ್ತಿಯು ಪಾಸಂದ, ಹೇಸಂದ, ಬೂಸಂದ,
ಆಟೀನು ಆರಂದೆ. ಆಟಾನ ನೋಡ್ಮುಂದೆ ಕೋಣಾ. "

" ಶಹಭಾಷ್ " ಅನ್ನುತ್ತ ಡಾಕ್ಟರು ಅವರ ಹೆಗಲಿಗೊಂದೇಟು ಬಿಗಿದರು. ಎಲ್ಲರೂ ನಗುತ್ತಿರುವಾಗ ಸಂಜೀವರಾಯರು ಮಾತ್ರ ಹೆಗಲನ್ನು ನೇವರಿಸಿಕೊಳ್ಳುತ್ತ,

"ಅಯ್ಯೊ, ಮಿಸ್ಟರ್ ಮಹಾಶಯಾ, ಮುರಿದೇ ಬಿಟ್ರಲ್ಲೋ ಮೂಳೇನ? ಪರೋಪಕಾರಕ್ಕೆ ಬಿದ್ದೀತೂಂತ ಇಟ್ಟುಕೊಂಡಿದ್ದೆ. ಇನ್ನು ನೀವು ಸತ್ತರೆ ನಿಮ್ಮ

ಹೆಣ—" ಅನ್ನುವಷ್ಟರಲ್ಲಿ ಡಾಕ್ಟರು ಅದೇ ಹೆಗಲಮೇಲೆ ಮತ್ತೊಂದು ಹೇರಿಸಿದರು.

" ಅಯ್ಯೋ ! ಆಚೆ ಹೆಗಲಮೇಲಾದ್ರೂ ಹಾಕಬಹುದಿತ್ತಲ್ರೀ, ನಿಮ್ಮ ಸುತ್ತಿಗೇನ ?" ಅನ್ನುತ್ತ ಮೋರೆ ಸೊಟ್ಟಗೆ ಮಾಡಿಕೊಂಡು ಕಣ್ಮುಚ್ಚಿದರು.

" ಯಾಕ್ರಿ, ಹಿಂಸೆಕೊಡ್ತೀರಿ ಪಾಪ ? ಬದುಕಿಕೊಂಡಿರಲಿ, ಬಿಜ್ಜಿಗೊಂದು ಬಿಡಿ ಕೈ " ಎಂದರು ಕೃಷ್ಣಯ್ಯ ಅನುತಾಪದಿಂದ.

ಆಗ ಸಂಜೀವರಾಯರು ಕಣ್ಣು ತೆರೆದು, "ಇಂಥ ಕಸಾಯಿಗಳಿಗೆ ಅಹಿಂಸಾ ತತ್ವ ಉಪದೇಶಮಾಡಿ ಏನು ಪ್ರಯೋಜನ ? ಗಾಂಧೀಜೀಯವರಿಗೂ ಇವರಿಗೂ ಬದ್ಧವಿರುದ್ಧ. ಅವರನ್ನೋದು ಇವರ ಮಂಡೇಗೆ ಹೊಕ್ಕೋದೇ ಇಲ್ಲ" ಅಂದರು.

"ಗಾಂಧಿಯವರು ಹೇಳೋದನ್ನೆಲ್ಲಾ ಮಾಡ್ತೀರೇನ್ರೀ ನೀವು?" ಡಾಕ್ಟರು ಕೇಳಿದರು.

" ಅವರು ಹೇಳಿದ್ದೆಲ್ಲಾ ನಾವು ಮಾಡಿದ್ರೆ ಅವರಿಗೇನುಳೀತ್ರೀ ಹೇಳೋದಕ್ಕೆ ? ನೂಲು ತೆಗಿ, ಹೇಲು ತೆಗಿ, ಅಂತಾರಲ್ಲ ಪುಣ್ಯಾತ್ಮರು ? ಅವೆರಡನ್ನು ಬಿಟ್ಟು ಮಿಕ್ಕಾದ್ದಕ್ಕೆಲ್ಲ ನಾನು ರೆಡೀನೆ. " ಸಂಜೀವರಾಯರು ಹುರುಪುಗೊಂಡು ಹೇಳಿದರು. ಸಂಜೀವರಾಯರ ಕುಚೇಷ್ಟೆಗೆ ಆರಂಭವಾದಮೇಲೆ ಆಟ ಸುಸೂತ್ರವಾಗಿ ಸಾಗೋದಿಲ್ಲವೆಂತ ಗೋಪಿನಾಥಗೆ ಗೊತ್ತು. ಎದ್ದು " ನನಗೆ ಹೊತ್ತಾಯಿತು. " ಎಂದನು.

" ಕೂಡ್ರೀ; ಕೋಪಿಸಿಕೋಬೇಡ್ರಿ , ಕೂಡ್ರಿ. ರಬ್ಬರು ಆಗಲಿ. ಏನವಸರ, ಯಾರು ಕಾದಿರುತ್ತಾರೆ ನಿಮ್ಮನ್ನ?" ಎಂದರು ಸಂಜೀವರಾಯರು.

" ಅವರನ್ನ ಕಾದಿರೋವ್ರು ಯಾರೂ ಇಲ್ಲ. ಬಾರೋ ಗೋಪಿ, ನಾನೂ ಹೊರಟೆ " ಅನ್ನುತ್ತ ಡಾಕ್ಟರೂ ಎದ್ದು ನಿಂತರು.

" ಯಾರೂ ಇಲ್ಲಾಂತ ನಿಮಗೇನು ಗೊತ್ತು ? ಯಾವಳಾದರೂ ಒಬ್ಬಳು ಒತ್ತೆ ಮೋಹಿನಿ ತಗಲಿಕೊಂಡಿರಬಹುದು. ಹೆಬ್ಬಾಗಿಲಲ್ಲಿ ಹುಬ್ಬುಗಂಟು ಹಾಕ್ಕೊಂಡು ಯೋಚ್ನೆ ಮಾಡ್ತಾ ಕಾದಿರಬಹುದು. ಅವರ ಗುಟ್ಟು ಹೇಳ್ತಾರೇನು ?" ಎಂದರು ಸಂಜೀವರಾಯರು ಕಣ್ಣು ಹಾರಿಸುತ್ತ.

" ಇದ್ದಾಳೊಬ್ಬಳು. ನನ್ನ ದಾರಿ ನೋಡ್ತಾ ಇರೋವಳು." ಅಂದ ಗೋಪಿನಾಥ, " ಸ್ವಲ್ಪವೂ ತಡವಾಯ್ತೂಂದ್ರೆ ಅತ್ತೇಬಿಡ್ತಾಳೆ. ಬಾ ವಾಸು,

ಹೋಗೋಣ." ಅನ್ನುತ್ತ ಅವರಿಬ್ಬರೂ ದೂರದೂರದ ವಿದ್ಯುದ್ದೀಪಗಳ ನಸುಬೆಳಕಿನ ರಸ್ತೆಗಿಳಿದರು.

"ನಮ್ಮ ಮನೆಯಿಂದಾಗಿ ಹೋದರೆ ಸಾಲದೇನೋ ಗೋಪಿ" ಎಂದು ಡಾಕ್ಟರು ಕೇಳಿದ್ದಕ್ಕೆ,

"ಹೋಗೋಣ ನಡಿ. ಕ್ಲಬ್ಬಿನಿಂದ ಯಾಕೋ ಹೊರಬಿದ್ರೆ ಸಾಕಾಗಿತ್ತು." ಅಂದನು.

ಡಾಕ್ಟರ ಮನೆಯ ಗೇಟಿನೊಳಗೆ ಕಾಲಿಡುತ್ತಲೇ ಶುಭ್ರದೀಪಗಳಿಂದ ರಂಜಿತವಾದ ಮನೆಯೊಳಗಿಂದ ಸುಮಧುರ ಧ್ವನಿಯ ನಗು ಕೇಳಿಸಿತು. ಒಮ್ಮಿಂದೊಮ್ಮೆ ಆತನ ಮೈ ನಿಮಿರಿತು. ಆತನ ಜೀವನಾಡಿಗೆ ಆ ನಿನಾದದ ಗುರುತು ಸಿಕ್ಕಿತು. ಆದರೂ ಅದುವರೆಗೆ ಮಾಲತಿ ಗಟ್ಟಿಯಾಗಿ ನಗುವುದನ್ನು ಕೇಳಿರಲಿಲ್ಲವಾದ್ದರಿಂದ "ಯಾರೋ ಬಂದಹಾಗಿದೆ." ಎಂದು ಅನಗತ್ಯವಾದ ಪ್ರಶ್ನೆಮಾಡಿದನು.

"ಯಾರಾದರೆ ನಿನಗೇನೋ ? ಒಂದು ಗಳಿಗೆ ಬಂದು ಹೋಗು. ನಗುತಿರೋದು ರಾಘವೇಂದ್ರರಾಯರ ಹೆಂಡ್ತಿಯಿರಬೇಕು." ಅಂದರು ಡಾಕ್ಟರು.

ಮನೆಯ ಮುಂಬಾಗಿಲು ಹಾಕಿದ್ದರಿಂದ ಡಾಕ್ಟರು ಎರಡುಬಾರಿ ತಟ್ಟಿದರು.

"ಯಾರದು ? ಡಾಕ್ಟ್ರಿಲ್ಲ ಮನೇಲಿ" ಅಂದಳು ಮಾಲತಿ ಒಳಗಿಂದಲೇ.

"ಇದ್ದೂ ಇಲ್ಲಾನ್ನಬಾರದು ಮಹಾರಾಯಿತಿ" ಅನ್ನುತ್ತ ಬಾಗಿಲು ದೂಡಿಕೊಂಡು ಡಾಕ್ಟರು ಒಳಗೆ ಹೋದರು. ಗೋಪಿನಾಥನೂ ಇದ್ದದರಿಂದ ಸುಮಿತ್ರೆ ಮಾಲತಿಯರಿಬ್ಬರೂ ಎದ್ದು ನಿಂತರು.

"ಗೋಪಿನಾಥರಾಯರು ? ಇದೇನು ನಮ್ಮ ಪುಣ್ಯ ಇವತ್ತು ? ನೀವೀತನಕ ದೀಪಹಚ್ಚಿದ ಮೇಲೆ ಬಂದದ್ದೇ ಇಲ್ಲ. ಮಾಲತಿಯಂತೂ ಕತ್ತಲಾಗೋದ್ರೊಳಗೆ ತನ್ನ ಬಿಲಕ್ಕೆ ಸೇರಿಕೋತಾಳೆ. ಇವತ್ತು ಅವಳೂ ಇದ್ದಾಳೆ, ನೀವೂ ಬಂದ್ರಿ ? ದಯಮಾಡಿಸಿ, ಕೂತುಕೊಳ್ಳಿ" ಅನ್ನುತ್ತ ಉಲ್ಲಾಸದಿಂದ ಉಪಚರಿಸಿದಳು ಸುಮಿತ್ರೆ.

"ದೀಪ ಹಚ್ಚಿದ ಮೇಲೆ ನಾನು ಮನೆಬಿಟ್ಟು ಹೊರಡೋದೇ ಕಡಿಮೆ" ಅನ್ನುತ್ತ ಗೋಪಿನಾಥ ಡಾಕ್ಟರ ಪಕ್ಕದ ಒಂದು ಕುರ್ಚಿಯಲ್ಲಿ ಕುಳಿತನು.

" ಗಂಡಸರೆಲ್ಲರೂ ನಿಮ್ಮ ಹಾಗೇ ಇದ್ದರೆ ಸುಖವಿತ್ತು. " ಎಂದು ಗಂಡನನ್ನು ವ್ಯಂಗವಾಗಿ ನೋಡುತ್ತ ನುಡಿದಳು.

" ಹೆಂಗಸರಿದ್ದಲ್ಲಿ ಸಂಭಾಷಣೆ ಸುಸೂತ್ರವಾಗಿ ಯಾತಕ್ಕೋ ಸಾಗೋದಿಲ್ಲ ?" ಎಂದು ಡಾಕ್ಟರು ಹೆಂಡತಿಯ ಮಾತನ್ನು ಕಿವಿಗೆ ಹಾಕಿಕೊಳ್ಳದೆ ಗೋಪಿನಾಥನನ್ನು ಕೇಳಿದರು.

ಗೋಪಿನಾಥ ಸುಮಿತ್ರೆ ಮಾಲತಿಯರನ್ನು ನೋಡುತ್ತ " ನಾಲ್ಕುಮಂದಿ ಸೇರಿದರೆ ಮಾತಿನ ಹಂತ ಅವರ ಪೈಕಿ ಯಾರು ಕನಿಷ್ಟತಮವೋ ಅವರಿಗೆ ಅನುಕೂಲವಾಗುವಂತೆ ಇಳಿದುಬಿಡುತ್ತದೆ. ಕೆಳಗಿಳಿದು ಮಾತನಾಡಲ್ಕು ಕೈಲಾಗದವರು ಬಾಯಿ ಮುಚ್ಚಿಕೊಂಡು ಸುಮ್ಮನಿದ್ದುಬಿಡುತ್ತಾರೆ. ಹೀಗಾಗಿ ಮಾತುಕತೆ ತಾನಾಗಿಯೇ ನಿಂತುಬಿಡುತ್ತೆ " ಅಂದನು.

" ನಾನು ಒಪ್ಪಿದೆ " ಎಂದು ಡಾಕ್ಟರು ಅನುಮೋದಿಸಿದರು.

" ನಿನಗೆ ಅರ್ಥವಾಯಿತೇನೇ ಮಾಲತಿ ?" ಎಂದು ಸುಮಿತ್ರೆ ಜುಗುಪ್ಸೆಯಿಂದ ಕೇಳಿದಳು.

" ಸಂಭಾಷಣೆ ನಮ್ಮ ಮಟ್ಟಕ್ಕೆ ಇಳಿದ ಮೇಲೆ ಹೇಳ್ತೀನೆ " ಅಂದಳು ಮಾಲತಿ ಮುಗುಳ್ನಗುತ್ತ, ಯಾರನ್ನೂ ನೋಡದೆ.

" ಇವರನ್ನ ಸಿಟ್ಟಿಗೆಬ್ಬಿಸೋ ಕೆಲಸ ನಿನಗೇಕೆ ಬೇಕಿತ್ತೋ ಗೋಪಿ ? ತೆಪ್ಪಗಿದ್ರೆ ಚೆನ್ನಾಗಿತ್ತಲ್ಲೋ " ಎಂದು ಡಾಕ್ಟರು ಟೀಕಿಸಿದರು.

" ಸಿಟ್ಟಾದರೆ ಪರವಾಯಿಲ್ಲ. ಅಭಿಮಾನವಿಲ್ಲದೆ ಸಿಟ್ಟು ಬರೋದಿಲ್ಲ. ನನಗೆ ಅನುಮಾನ, ಅವರಿಬ್ಬರೂ ಒಳಗೊಳಗೇ ನಗ್ತಿದ್ದಾರೋ ಅಂತ. ಹಾಗಿದ್ರೆ ಬಲು ಕಷ್ಟ. ನೋಡು."

"ಈಗಲಾದರೂ ಅರ್ಥವಾಯಿತೇನೇ ಮಾಲತಿ?" ಎಂದು ಪುನಃ ಗಂಭೀರವಾಗಿ ಕೇಳಿದಳು.

" ಇನ್ನೂ ತೀರ ನಮ್ಮ ತಳಕ್ಕೆ ಬಂದಿಲ್ಲ. "

" ಗೋಪಿ, ನೀನು ದಮ್ಮಯ್ಯಾನ್ನಬಾರದೆ?" ಎಂದರು ಡಾಕ್ಟರು ನಿರಾಶೆಯಿಂದ. ಗೋಪಿನಾಥ ತನ್ನ ಮಾತಿನಿಂದ ಮಾಲತಿ ನಿಜವಾಗಿ ಕೋಪಿಸಿರಬಹುದೆ ಎಂದು ಯೋಚಿಸಿದ್ದವನಿಗೆ ಫಕ್ಕನೆ ನಗು ಬಂತು.

" ಸೋಲೋದು ಯಾವಾಗಲೂ ನಾವೇ ಗಂಡಸರು. ನಿಸರ್ಗಕ್ಕೆ ಪರಾಜಯವಿಲ್ಲ " ಎಂದನು.

" ನಿಸರ್ಗಕ್ಕೆ ಎಡೆ ಇದ್ರೆ ತಾನೆ, ನಿಮ್ಮ ಕೃತಕ ನಾಗರಿಕತನದಲ್ಲಿ ?"

" ಯಾವ ನಾಗರಿಕತನವಾದರೂ ಸುತ್ತಾಡಿ ಸುತ್ತಾಡಿ ಕೊನೆಗೆ ನಿಸರ್ಗಕ್ಕೆ ತಾನೆ ಹಿಂತಿರುಗಬೇಕು ? ನಮ್ಮದೆಲ್ಲ ಗುಬ್ಬಚ್ಚಿ ವ್ಯಾಪಾರ. ಎಲ್ಲಿಂದಲೋ ಒಂದು ಹುಲ್ಲುಕಡ್ಡಿ, ಎಲ್ಲಿಂದಲೋ ಒಂದು ಹತ್ತಿಚೂರು, ಒಂದು ತರಗೆಲೆ ತಗೊಂಬರೋದು; ಗೂಡು ಕಟ್ಟಿಕೊಳ್ಳೋದು. ಆ ಮೇಲೆ ಅದರ ಹೊರಗೆ ಕೂತು Science ಅನ್ನೊದು, Economics ಅನ್ನೋದು, Politics ಅನ್ನೋದು. ತಲೆ ತಲೆ ಚುಚ್ಚಿಕೊಳ್ಳೋದು, ಕೊನೆಗೆ ಬೆಕ್ಕಿನ ಬಾಯಿಗೆ ತುತ್ತಾಗೋದು. ಇದೇ ನಮ್ಮ ನವನಾಗರಿಕತನದ ಬುದ್ಧಿವಂತಿಕೆ" ಎಂದನು ಗೋಪಿನಾಥ.

" ಬೆಕ್ಕಿನಬಾಯಿಗೆ ಬೀಳೋದೇನೋ ನಿಜವೆ" ಎಂದು ಡಾಕ್ಟರು ಸುಮಿತ್ರೆ ಬೀಸಬಹುದಾದ ಏಟಿಗೆ ಬೆನ್ನು ತಿರುಗಿಸಿ ಒಪ್ಪಿಕೊಂಡರು.

ಸುಮಿತ್ರೆಗೆ ಇದು ತಕ್ಷಣ ಗೊತ್ತಾಗಿ, " ಹೌದು, ನಾಯಿಬಾಯಿಗೆ ಅನ್ನೋದಕ್ಕೆ ಸಾಧ್ಯವಿಲ್ಲ. ಗುಬ್ಬಚ್ಚಿಗಳು ಜಗಳಾಡಿ ಸೋತು ಕೆಳಗೆ ಬೀಳೋದು ಯಾವಾಗಂತ ಕಾದುಕೊಳ್ಳುವಷ್ಟು ಪುರಸೊತ್ತಿಲ್ಲ ನಾಯಿಗಳಿಗೆ." ಎಂದಳು.

ಎಲ್ಲರೂ ನಗುತ್ತಿರುವಾಗ ಮಾಲತಿಗೆ ನೆನಪಾಗಿ, " ನಾಯಿ ಅನ್ನುವಾಗ ನೆನಪಾಗುತ್ತೆ. ನಾವು ನೋಡಿಬಂದ ನಾಯಿಮರಿಗಳು ಎಷ್ಟು ಮುದ್ದಾಗಿದ್ದುವೆ, ಸುಮಿತ್ರೆ !"

" ಹೌದೂಂದ್ರೆ ! ಒಂದರ ಹಾಗೆ ಇನ್ನೊಂದು. ಹಾಗೆಂತ ಅದು ಬೇರೆ, ವ್ಯತ್ಯಾಸವೇನೂ ಇಲ್ಲ. ಎರಡೂ ಒಂದೇ. ಮಾತ್ರ ಬೇರೆ ಬೇರೆ-ಒಂದೇ." ಸುಮಿತ್ರೆಯ ಈ ಸ್ಪಷ್ಟವಾದ ವಿವರಣೆಯನ್ನು ಕೇಳಿ ಪ್ರತಿಯೊಬ್ಬರಿಗೂ ಸಹಿಸಲಾರದ ನಗು ಬಂತು.

ನಗುತ್ತ ಎದ್ದು ನಿಂತು ಗೋಪಿನಾಥ ಕೈಗಡಿಯಾರವನ್ನು ನೋಡಿದನು. ಆಗ ಮಾಲತಿ ಸಹ ಎದ್ದು ನೇರವಾಗಿ ಆತನನ್ನು ನೋಡುತ್ತ ಮನೆಗೆ ಬಂದು ಹೋಗೋದಿಲ್ಲವೆ ಇಲ್ಲಿವರೆಗೆ ಬಂದವರು ?" ಈ ಆಮಂತ್ರಣ ಅಷ್ಟು ಫಕ್ಕನೆ ಬಂದುದರಿಂದ ಗೋಪಿನಾಥನಿಗೆ ಆಕೆಯ ನೋಟವನ್ನು ಎದುರುಗೊಂಡು ಉತ್ತರಕೊಡಲು ಕೊಂಚ ಪ್ರಯಾಸವಾಯಿತು.

" ಆಗಲೇ ಹೊತ್ತು ಮೀರಿತು. ಮನೇಲಿ ಯಾರೂ ಇಲ್ಲ " ಎಂದು ತಡ ವರಿಸಿದನು.

" ನಿಮ್ಮಿಷ್ಟ. ನಾನೀಗ ಬರಲೇ, ಸುಮಿತ್ರೆ, ಡಾಕ್ಟ್ರೇ ?" ಎಂದು ಹೊರ ಟಳು ಮಾಲತಿ.

" ಒಬ್ಬರೇ ಹೋಗಬೇಡಿ. ಗೋಪಿ, ಅವರನ್ನ ಮನೆವರೆಗೆ ತಲ್ಪಿಸೋ. " ಎಂದು ಡಾಕ್ಟರು ಆಜ್ಞಾಪಿಸಿದರು.

" ಒಳ್ಳೇ ಜತೆ ! ಇವಳು ಕತ್ತಲೆಯಾಗೋದರೊಳಗೆ ಮನೆಗೆ ಸೇರತಕ್ಕ ವಳು. ಇವರು ಕತ್ತಲೆಯಾದಮೇಲೆ ಹೊರಗೆ ಕಾಲಿಡದವರು. ಯೋಗ್ಯ ಸಾರಥಿ ಒಬ್ಬರಿಗೊಬ್ಬರು. ಹೋಗಿ ಹೋಗಿ." ಸುಮಿತ್ರೆ ಹಾಸ್ಯಮಾಡಿದಳು.

" ಇಬ್ಬರೂ ಒಂದೇ ರೀತಿ. ಒಬ್ಬರ ಹಾಗೆ ಇನ್ನೊಬ್ರು. ಮಾತ್ರ ಬೇರೆ ಬೇರೆ. ಒಂದೇ " ಎಂದು ಡಾಕ್ಟರು ನಕಲಿ ಮಾಡಿ ಎಲ್ಲರನ್ನೂ ನಗಿಸಿದರು ಮತ್ತೊಮ್ಮೆ.

ಗೇಟಿನ ತನಕ ಅವರಿಬ್ಬರನ್ನು ಬಿಟ್ಟು ಬೀಳ್ಕೊಟ್ಟು ಡಾಕ್ಟರೂ ಸುಮಿ ತ್ರೆಯೂ ಹಿಂತಿರುಗಿದರು. ಮಾಲತಿಯನ್ನು ಮರುದಿನದ ತನಕ ನೆನಸಿ ಹಂಬ ಲಿಸಬಾರದಾಗಿ ಮನಸ್ಸನ್ನು ಬಿಗಿದಿಟ್ಟ ಗೋಪಿನಾಥನಿಗೆ ಈ ಅನಿರೀಕ್ಷಿತ ಸಂಘ ಟನೆ ನಿಜವೋ ಸುಳ್ಳೋ ಎಂಬ ಸಂಶಯವಾಗಿ ತಿರುಗಿ ನೋಡಿದನು. ನಸು ಬೆಳಕಿನ ನಾಲ್ಕಾರು ಜನರು ಮಾತ್ರವಿದ್ದ ವಿಶಾಲವಾದ ರಸ್ತೆಯಲ್ಲಿ ಮಾಲತಿ ತನ್ನೊಂದಿಗೆ ನೆಟ್ಟಗೆ ಮುನ್ನೋಡುತ್ತ ತ್ವರೆಯಿಂದ ನಡೆಯುತ್ತಿದ್ದಳು. ಬೀಸುತ್ತಿದ್ದ ಕೈ ಕೈ ತಾಗುವಷ್ಟು ಸಮೀಪವೂ ಅಲ್ಲ; ಕೈನೀಡಿದರೆ ಮುಟ್ಟಲು ಸಿಗದಷ್ಟು ದೂರವೂ ಅಲ್ಲ. ಮಾತಿಲ್ಲದೆ ಇಬ್ಬರೂ ಸರಸರನೆ ಸಾಗಿದರು. ಆತನಿಗೆ ಮಾಲತಿಯದೇ ಅರಿವು. ಆಕೆಗೆ ಗೋಪಿನಾಥನದೇ ಅರಿವು. ಒಬ್ಬರಿ ಗೊಬ್ಬರು ಬಂಧಿಸಲ್ಪಟ್ಟಂತೆ, ಇಬ್ಬರನ್ನೂ ಒಂದೇ ಶಕ್ತಿ ಸೆಳೆದಂತೆ ಮುಂದು ವರಿದರು. ಅವರು ಉಸಿರೆತ್ತಿದಿದ್ದರೂ ಅವರ ಮೌನದಲ್ಲಿ ಮಾತಿಗೆ ಸಿಗದ ಸಲಿ ಗೆಯ ಸವಿಯಿತ್ತು. ಡಾಕ್ಟರ ಮನೆಯಲ್ಲಿ ನಿರರ್ಗಳವಾಗಿ ಮಾತನಾಡುತ್ತ ನಗುತ್ತ ಇದ್ದವರಿಗೆ ಇಬ್ಬರಿಗೂ ಯಾವ ಪ್ರಸ್ತಾಪವೆತ್ತುವುದೆಂತ ಗೊತ್ತಾಗ ಲಿಲ್ಲ. ಹೀಗೆ ಮೂಕಯಾತ್ರೆ ಮಾಡುವುದರಲ್ಲಿ ಅರ್ಥವಿಲ್ಲ, ಏನಾದರೂ ಹೇಳ ಬೇಕೆಂತ ಮಾಲತಿ ನಿರ್ಧರಿಸುವಾಗಲೇ ಆಕೆಯ ಮನೆಯ ಗೇಟು ಬಂದು ಬಿಟ್ಟಿತು. ಆಕೆ ಗೇಟಿನ ಬಳಿ ನಿಂತು ಪುನಃ ಕೇಳಿದಳು:

" ಬಂದು ಹೋಗಬಾರದೆ ?"

" ಇಲ್ಲ ಮಾಲತಿ, ಹೊತ್ತಾಯಿತು. " ಆಕೆಯ ಹೆಸರನ್ನು ಉಪಯೋಗಿಸಿದ್ದು ಅದೇ ಮೊದಲು. ಆಕೆಯೊಂದಿಗೆ ಅಷ್ಟು ಸಮಯವಿದ್ದು ಆಕೆಯ ಹೆಸರನ್ನಾದರೂ ಉಚ್ಚರಿಸಬೇಡವೆ ? ರಸ್ತೆ ಮೇಲೆ ಬರುವಾಗ ಕೈ ಹಿಡಿಯಬಹುದಿತ್ತು, ಏಕಾಂತದ ಪ್ರೇಮವಾಕ್ಯಗಳನ್ನಾಡಬಹುದಿತ್ತು. ಏನೂ ಮಾಡದೆ ಒದಗಿಬಂದ ಸುಸಂದರ್ಭವನ್ನು ಕಳಕೊಂಡಿದ್ದರು. ಆದರೆ ಮಾಲತಿ ಅದನ್ನು ಗಮನಿಸಿದ ಹಾಗೆ ಕಾಣಲಿಲ್ಲ.

" ಹೋಗ್ತೀರಾ ? "

" ಹೌದು, ಹೋಗಲೆ ? "

" ಬರೋದಿಲ್ಲಾಂದ ಮೇಲೆ ಹೋಗಲೇಬೇಕಲ್ಲ " ಅನ್ನುತ್ತ ನಸುನಕ್ಕಳು. ಆತನೂ ನಸುನಕ್ಕನು.

" Good night "

" Good night " ಅಂದಳು. ಆದರೂ ಗೇಟಿನ ಬಾಗಿಲು ಅರೆತೆರೆದು ಹಿಡಿದಿದ್ದವಳು ಪೂರ್ತಿ ತೆರೆದು ಒಳಗೆ ಹೋಗಲು ಕಾಲೇಳಲಿಲ್ಲ. ರಸ್ತೆಯ ದೀಪಸ್ತಂಭಗಳು ಗೇಟಿನ ಆಚೆಯೀಚೆ ಬಹು ದೂರವಿದ್ದುದರಿಂದ ಒಬ್ಬರ ಮುಖ ಒಬ್ಬರಿಗೆ ಸರಿಯಾಗಿ ಕಾಣುತ್ತಿದ್ದಿಲ್ಲ.

" ಸರಿ ಹಾಗಾದರೆ ಬರ್ತೇನೆ. " ಅನ್ನುತ್ತ ಕತ್ತು ಓರೆಮಾಡಿ ಹೇಳಿದನು. ಮಾಲತಿ ಉತ್ತರ ಕೊಡದೆ ಗಂಟಲೊಳಗೇ ನಗುತ್ತ ನಿಂತಳು. ಪಾಪ, ಒಬ್ಬರೇ ಬಹುದೂರ ಹೋಗಬೇಕಲ್ಲ ಎಂದನಿಸಿತು.

" Good night " ಎಂದನು.

" ಆಗಲೇ ಹೇಳಿದಿರಲ್ಲ ? "

" ನೆನಪಿಲ್ಲ. ಹೋಗಲೇನು ? "

" ಬರೋದಿಲ್ವೇ ? "

" ಇಲ್ಲ. ಮಾಲತಿ, ಸಾಧ್ಯವಿಲ್ಲ. Good night "

" Good night. "

ಗೋಪಿನಾಥನಿಗೆ ಹತ್ತು ಹೆಜ್ಜೆ ಹೋದಮೇಲೆ ಕೇಳಿಸಿತು, ಗೇಟಿನ ಅಗುಳಿ ಹಾಕಿದ್ದು.

೧೭

ಮರುದಿನ ಮಂಗಳವಾರ ಬೆಳಕು ಹರಿಯುವುದಕ್ಕೆ ಮುಂಚಿತವಾಗಿಯೇ ಗೋಪಿನಾಥನಿಗೆ ಎಚ್ಚರಿಕೆಯಾದರೂ ಹಾಸಿಗೆ ಬಿಟ್ಟೇಳಲಿಲ್ಲ. ಅವಸರ ವೇನು ಎಂದೆನಿಸಿತು. ಆಗ ಥಕ್ಕನೆ ಮಾಲತಿಯ ಮೆದುಕೈ ಆತನ ಮೈ ದಡವಿ ಎಬ್ಬಿಸಿದಂತಾಗುವುದು. "ಇಂದು ಮಾಲತಿ ಬರುತ್ತಾಳೆ. ಬಂದವಳು ಸಂಜೆತನಕ ಇಲ್ಲೇ ಇರುತ್ತಾಳೆ, ನನ್ನ ಮನೆಯಲ್ಲಿ, ನನ್ನ ಮಾಲತಿ." ಅಂದು ಕೊಳ್ಳುತ್ತ ಎದ್ದನು. ಹೊರಗೆ ಅರುಣೋದಯವಾಗಿರಲಿಲ್ಲ. ಆದರೆ ಒಳಗೆಲ್ಲ ಬೆಳಗಿತ್ತು ಪ್ರೇಮಪ್ರಭಾತ. ದಿನನಿತ್ಯದ ಸಾಮಾನ್ಯತೆಯ ಜಡತೆ ಮಾಯ ವಾಗಿ ಅಪೂರ್ವ ಆನಂದವು ಮೂಡಿತು. ತಾನೇ ವಿಸ್ಮಿತನಾದ ತನ್ನ ಮನೋ ವೈಭವವನ್ನು ನೆನೆದು. "ಅಷ್ಟೊಂದು ಅನುರಕ್ತನಾಗಿರುವೆನೆ ಅವಳಲ್ಲಿ? ಆಕೆಯ ಮುನ್ನೋಟದ ಮುಂಬೆಳಕಿನಿಂದಲೇ ಇಷ್ಟು ಉಲ್ಲಸಿತನಾಗಬೇಕಾ ದರೆ? ನಾನಿದುವರೆಗೆ ಎಂದೂ ಸುಖಿಯಾಗಿರಲಿಲ್ಲವೆ? ಅಥವಾ ನನ್ನ ನಾಲಿ ಗೆಗೆ ಸುಖದ ಸವಿಯ ನೆನಪಿಲ್ಲದೆ ಇರಬಹುದೆ? ಇರಬೇಕು. ಸಂತೆಯ ಸುಖಕ್ಕೆ ಹೇಸಿ, ಶಮದಮಗಳೆಂಬ ಅಂಗರಕ್ಷಕರನ್ನಿಟ್ಟುಕೊಂಡು ಈ ಹಾಳು ಕೋಟೆಯಲ್ಲಿ ಒಂಟಿಯಾಗಿರುವುದು ಶ್ರೇಯಸ್ಕರವಾಗಿರಬಹುದು; ಭುವದ ಭಾವನೆಯಿಲ್ಲದವರಿಗೆ. ಸುರಕ್ಷಿತವಾಗಿರಬಹುದು, ಭೋಗಲಾಲಸೆಯ ಭಯ ವಿದ್ದವರಿಗೆ. ಆದರೆ ಜನ್ಮ ತೆತ್ತಿದ್ದು ನಿರರ್ಥಕ. ಹೆಣ್ಣು ಕೊಟ್ಟ ಜೀವವನ್ನು ಹೆಣ್ಣಿಗೇ ಕೊಡಬೇಕು; ಹೆಣ್ಣಿಗಾಗಿ ಸವೆಯಿಸಬೇಕ; ಹೆಣ್ಣಿಗಾಗಿ ತ್ಯಾಗ ಮಾಡಬೇಕು. ಈ ಮೂಲ ಭಾವನೆಯಿಲ್ಲದ ಶ್ರಮವೆಲ್ಲ ವ್ಯರ್ಥ. ಆದ್ದರಿಂ ದಲೇ ನನ್ನ ಪ್ರಾಣ ನೆರಳಿನಂತಾಗಿ ಆ ಪ್ರಾಣಪ್ರಿಯೆಯನ್ನು ಹಿಂಬಾಲಿಸು ತ್ತಿದೆ. ನನ್ನ ಇಂದ್ರಿಯಗಳು ಆ ಹುಡುಗಿಯ ಕಾಲಿಗೆ ಕಟ್ಟಿದ ಗೆಜ್ಜೆ ಗಳಂತಿವೆ." ಅನ್ನುತ್ತ ಮಗ್ಗುಲಲ್ಲಿದ್ದ ಪಂಬಿ ಅಲುಗಾಡಿದ್ದರಿಂದ ಬೆನ್ನು ನೇವರಿಸುತ್ತ ಮತ್ತೆ ಚಿಂತಿಸತೊಡಗಿದನು.

"ಆಕೆಯೂ ನನ್ನಂತೆ ಅಂಗಲಾಚುತ್ತಿರುವುದು ಹೌದಾದರೆ ಯಾತಕ್ಕಾಗಿರ ಬಹುದು? ಆಕೆಗೆ ಕಡಿಮೆಯಾದದ್ದೇನು? ಮಕ್ಕಳಿಲ್ಲವೆಂತಲೆ? ಅಷ್ಟೇಯೆ? ಅದಕ್ಕೊಂದು ಅರ್ಥವಿದೆ ನಿಜ. ಆದರೆ—? ಎಂಥ ವಿಪರ್ಯಾಸವಿದು! ಅಥವಾ ಎಳೆಮೈಯ ಬಿಸಿರಕ್ತವನ್ನು ತಣಿಸಲು ಮಾತ್ರ ನನ್ನನ್ನು ಬಾ

ಎನ್ನುತ್ತಿರಬಹುದೆ? ಮಕ್ಕಳಿಲ್ಲದ ಹೆಂಗಸರು ಚಪಲೆಯರು. ಆದರೆ ಮಾಲತಿ? ಆಕೆ ಕರೆದರೆ, ನಾನು ನನ್ನೀ ಸ್ವಾತಂತ್ರ್ಯದ ದುರ್ಗವನ್ನು ಬಿಟ್ಟು ಆಕೆಯ ಕೈ ಹಿಡಿದು ಹೋದರೆ ಎಲ್ಲಿಗೊಯ್ಯುವಳೊ ? ಕೆಳಗಿಳಿದರೆ ಪರವಾ ಇಲ್ಲ. ಮತ್ತೆ ತಿರುಗಿ ಮೇಲೇರಿದರೆ ಬಿಟ್ಟು ಬಂದ ಘಟ್ಟಕ್ಕಿಂತಲೂ ಎತ್ತರವಾದ ಘಟ್ಟಕ್ಕೆ. ಅದರ ಬದಲು ಕೆಳಕೆಳಗೆ ಪಾತಾಳಕ್ಕೇ ಇಳಿಸಿದರೆ ? ಹಾಳು ಭಾವಿಯ ತಳದಲ್ಲೇ ಇರೋಣ, ಅಂಗೈಯಷ್ಟು ಅಗಲದ ಆಕಾಶದ ಮೇಲಿಂದ ಕಾಣಿಸುತ್ತಿದ್ದರೆ ಸಾಕು, ಎಂದರೆ ? ಸರ್ವನಾಶ !

“ ಮಾಲತಿ ಅಂಥವಳಲ್ಲ. ಹಾಗಿದ್ದಿದ್ದರೆ ನನ್ನ ಚೇತನ ಆಕೆಯ ಅಡಿಯಾಳಾಗಿರುತ್ತಿದ್ದಿಲ್ಲ, ಆಕೆಯಲ್ಲಿ ಅವಳದೇ ಆದ ಒಂದಪೂರ್ವ ಒಳ್ಳೆತನವಿದೆ. ಆಕೆಯಿದ್ದೆಡೆ ಯಾವ ಯಾವ ಸನ್ನಿವೇಶದಲ್ಲೂ ಈ ಪ್ರತಿಭೆ ಕಂಡುಬರುತ್ತದೆ. ಅಲ್ಲದೆ ನನ್ನೊಳಗೇ ಆಕೆ ನನ್ನವಳೆಂದು ಕಿರುಸ್ವರವೊಂದು ಚಿರಶ್ರುತಿ ಹಿಡಿಯುತ್ತಲೇ ಇದೆ. ಇದು ಬರೀ ಭ್ರಾಂತಿಯಾಗಿರಲಾರದು. ಆಕೆಯಲ್ಲಿಲ್ಲದ ಗುಣಲಾವಣ್ಯಗಳನ್ನು ಕಲ್ಪಿಸಿಕೊಂಡು, ಆಕೆಗೆ ಉಡಿದುಂಬಿ, ನನ್ನ ಹೃದಯಪೀಠದಲ್ಲಿ ಪ್ರತಿಷ್ಠೆಮಾಡಿ ಪ್ರೇಮಾರಾಧನೆ ಮಾಡುತ್ತಿರುವುದೂ ಒಂದು ವಿಧದ ಸ್ವಾರ್ಥಪ್ರೋತ್ಸಾಹವೇ. ಆದರೆ ಇದು ಹಾಗಲ್ಲವೆಂತ ಅಂತರಾತ್ಮವೇ ಪ್ರೇರಿಸುತ್ತದೆಯಲ್ಲ. ಮಾಲತಿ, ನೀನು ನನ್ನೊಬ್ಬನ ಅಧೀನ, ನಾನು ನಿನ್ನ ಅಧೀನ. ಎಂಥ ವಿಧಿ ವಿಡಂಬನ! ಮಾಲತಿ, ಮಾಲತಿ !”

ಗಂಧದ ಗಿಣಲಿಗೆ ಅತ್ತರಿನ ಬಿಂದುಗಳನ್ನು ಒಂದೊಂದಾಗಿ ತೇಲಿಬಿಟ್ಟಂತೆ ಆಕೆಯ ನಾಮಾಕ್ಷರಗಳನ್ನು ಉಚ್ಚರಿಸಿದನು.

ಅಂದು ಡಿಸ್ಟ್ರಿಕ್ಟ್ ಕೋರ್ಟಿನಲ್ಲಿ ಕ್ರಿಮಿನಲ್ ಸೆಸ್ಸೆನ್ ಆದ್ದರಿಂದ ಸಿವಿಲು ಅಪೀಲುಗಳನ್ನು ತೆಗೆಯುವುದಿಲ್ಲ. ಸಬ್‌ಕೋರ್ಟಿನಲ್ಲಿದ್ದ ಒಂದು ಕೇಸನ್ನು ನೋಡಿಕೊಂಡರೆ ಮುಗಿಯಿತು, ಅನ್ನುತ್ತ ಆ ದಾವೆಯ ಕಕ್ಷಿಗಾರರೊಂದಿಗೆ ಆಫೀಸಿನಲ್ಲಿದ್ದಾಗ ಒಳಗಿಂದ ಪಂಬಿಯ ಸವಾರಿ ಬಂತು. ಗೋಪಿನಾಥ ತಲೆ ಬಗ್ಗಿಸಿದ ಮೇಲೆ ತನ್ನ ಗಲ್ಲವನ್ನು ಆತನ ಗಲ್ಲಕ್ಕೆ ಹಚ್ಚಿ “ ಒಯುಗೆ ಬಯು ಬೇಕಂತೆ ” ಅಂದಳು. ಆಗ ಅಲ್ಲಿದ್ದವರ ಪೈಕಿ ಯಾರೋ “ ವಾರಂಟು ” ಅಂದರು. ಈ ಅಧಿಕಪ್ರಸಂಗ ಆಕೆಯ ಕಿವಿಗೆ ಬಿದ್ದ ತಕ್ಷಣ “ ವಾಯಾಂಟು ನೀನೇ ” ಅಂತಂದು ಬಿಟ್ಟು ಗಂಭೀರವಾಗಿ ತಂದೆಯ ಕೈಹಿಡಿದು

ಕರೆದುಕೊಂಡು ಹೋದಳು. ಕಕ್ಷಿಗಾರರ ಕಣ್ಣುತಪ್ಪಿದ್ದೇ ತಡ ತಿರುಗಿ ನಿಂತು ತೋಳುಗಳನ್ನು ನೀಡಿದಳು. ಎತ್ತಿಕೊಳ್ಳುವವರಿದ್ದಾಗ ನಡೆಯಬಾರದೆಂತ ಪಂಬಿಯ ಮತ. ಗೋಪಿನಾಥ ಮಗುವನ್ನೆತ್ತಿಕೊಂಡು ಒಳಗೆ ಹೋದನು.

ಇಂದಿರಮ್ಮ ವಾಸಿಯಾಗಿದ್ದರು. ಕಾಲು ಬಗ್ಗಿಸಿ ಮಗ್ಗುಲಾಗುವಷ್ಟು ಗುಣವಿತ್ತು. ಆದರೂ ಹಿಂದಿನ ದಿನಗಳ ನೋವು, ಜ್ವರ, ಉಪವಾಸಗಳಿಂದ ನಿತ್ರಾಣವಿತ್ತು.

" ಏನು ಬೇಕಮ್ಮಾ ?"

"ನನಗೇನೂ ಬೇಡ. ಮಾಲತಿ ಇನ್ನೂ ಬರಲಿಲ್ಲ. ಅವಳು ಬರೋಮುಂಚೆ ನೀನು ಕೋರ್ಟಿಗೆ ಹೋಗೋದಾದ್ರೆ ಒಂದು ಸಲ ಒಳಗೆ ಹೋಗಿ ಎಲ್ಲಾ ನೋಡಿಕೊಂಡು ಬಿಡು. ಒಂದು ವೇಳೆ ಅವಳು ಬಾರದಿದ್ರೆ ನೀನು ಕಚೇರಿಯಿಂದ ವಾಪ್ಸು ಬರೋವರೆಗಿನ ಏರ್ಪಾಡೆಲ್ಲ ಮಾಡಿಹೋಗು."

" ಬಾರದೆ ಇದ್ದಾಳೇ ?"

" ಏನಪ್ಪ. ಬಾರದ ಹಾಗೇನೂ ಇಲ್ಲ. "

" ಗಂಡ ಬೇಡಾಂದ್ರೆ ? "

" ಅವನೇಕೆ ಬೇಡಾಂತಾನೆ ? "

" ಸುಮ್ಮನೆ. ಗಂಡಾಂತ ಅಧಿಕಾರ ಚಲಾಯಿಸೋದು. "

" ಗೋಪಿ, ನಿನಗೆ ಮುಖ್ಯ ಅವನ್ನ ಕಂಡರಾಗೋದಿಲ್ಲ. ಹಾಗಿರಬಾರದು "

" ಅಂಥಾದ್ದೇನೂ ಇಲ್ಲಮ್ಮ. ಲೋಕನೀತಿಯೇ ಹಾಗೆ. ಹೆಂಡತೀಂದ್ರೆ ಊಳಿಗದಾಳು. "

" ಆಕೋ, ಅದ್ಯಾರೋ ಬಂದ್ರು ನೋಡು. "

ಬೀದಿಮಗ್ಗುಲಿನ ಚಿಕ್ಕ ಗೇಟಿನ ಚಿಲುಕ ಕಳಚಿದ ಸದ್ದು ಕೇಳಿಸಿತು. ಜಗ್ಗನೆ ಎದ್ದು ಗೋಪಿನಾಥ ಹೊರಗೆ ಹೋದನು. ಮಾಲತಿಯೇ ಗೇಟನ್ನು ಮುಚ್ಚಿ ಮೇಲೆ ಬಂದಳು. ಆತನನ್ನು ನೋಡಿ, " ತಡವಾಯ್ತೇನು ? " ಎಂದು ಕೇಳಿದಳು.

" ಇಲ್ಲ, ನನಗೆ ಬೆಳಗಾದ್ದೇ ಈಗ. " ಅನ್ನುತ್ತ ಆಕೆಯ ಹಿಂದೆ ಇಂದಿರಮ್ಮನ ಕೋಣೆಗೆ ಹೋದನು.

“ಇವತ್ತು ತುಂಬ ವಾಸಿಯಾದ ಹಾಗಿದೆ, ನಿಮ್ಮನ್ನು ನೋಡಿದರೆ” ಎಂದಳು.

“ಹೌದಪ್ಪ. ಎಷ್ಟೋ ವಾಸಿ. ಇವತ್ತು ನೀನು ಚಾರ್ಜು ತಗೊಂಡಿದ್ದೀಯಾ ?” ಎಂದರು ಇಂದಿರಮ್ಮ ಸಂತೋಷದಿಂದ.

“ಹೌದು. ನಿಮ್ಮ ಮೊಮ್ಮಗಳು ನಿನ್ನೆ ಸತ್ಯಾಗ್ರಹ ಹೂಡಿದ್ದಳಂತಲ್ಲಾ ? ಅವಳೆಲ್ಲಿ ?”

ಪಂಬಿ ತಂದೆಯನ್ನು ಕರೆತಂದು ಬಿಟ್ಟು ತಾನು ಅರ್ಧಮಾಡಿ ಹೋಗಿದ್ದ ಕೆಲಸದಲ್ಲಿದ್ದಳು, ಇಂದಿರಮ್ಮ ಮಲಗಿದ್ದ ಮಂಚದ ಬುಡದಲ್ಲಿ. ಕೈತಪ್ಪಿ ಉರುಳಿಹೋಗಿದ್ದ ಬಳೆಯನ್ನು ಹಾಕಿಕೊಳ್ಳುತ್ತಿದ್ದಳು. ತನ್ನ ಪ್ರೀತಿಯ ಅತ್ತೆಯ ಸ್ವರ ಕೇಳಿ “ನಾನಿಯಿದ್ದೀನೆ” ಅಂತ ತನ್ನ ಮುಕ್ಕಾಮು ತಿಳಿಸಿದಳು.

“ಎಲ್ಲಿ ?” ಎಂದು ಅತ್ತಿತ್ತ ನೋಡಿದಳು ಮಾಲತಿ.

“ಮಂಚದ ಬುಡದಲ್ಲಿದ್ದಾಳೆ” ಎಂದನು ಗೋಪಿನಾಥ.

ಮಾಲತಿ ಮಂಡಿಯೂರಿ ಇಣಿಕಿ ನೋಡಿದಳು. “ಹೊರಗೆ ಬಾಮ್ಮಾ. ಮಂಡೆ ಗುಡಕ್ಕನ್ನುತ್ತಲ್ಲಾ ? ಬಳೆ ನಾನು ಹಾಕ್ತೀನೆ ಬಾ” ಅಂದಳು. ಮಗು ಅಂಬೆಗಾಲಿನಲ್ಲಿ ಹೊರಗೆ ಬಂದಮೇಲೂ ನೆಟ್ಟಗೆ ನಿಲ್ಲದೆ ಚತುಷ್ಪಾದಳಾಗಿಯೇ ಮುಂದುವರಿದಳು.

“ಛೀ ! ನಾಚಿಕೆಗೇಡು. ಅಂಬೆಗಾಲಿಕ್ಕೋದು, ಇಷ್ಟು ದೊಡ್ಡವಳು. !” ಅಂದಳು ಮಾಲತಿ.

“ಪಪ್ಪ ಕಯಿಂಚಿದ್ದು” ಎಂದುತ್ತರ ಕೊಟ್ಟಳು ಪಂಬಿ.

ನಿನ್ನ ಪಪ್ಪ ಇನ್ನೇನೆಲ್ಲ ಕಲಿಸಿದ್ದಾರೋ ಅಂತ ಅತ್ಯಾಶ್ಚರ್ಯಪಡುತ್ತ “ನಿನಗಿನ್ನ ಸ್ನಾನ, ಊಟ ಆಗಬೇಕಲ್ಲ. ಯಾರು ಮಾಡಿಸೋದು?” ಎಂದು ಕೇಳಿದಳು. ಮಗು ತನ್ನ ಗಿಡ್ಡ ತೋರುಬೆಟ್ಟನ್ನು ಮಾಲತಿ ಕಡೆಗೆ ಗುರಿಯಿಟ್ಟು ಅದಕ್ಕೆ ಸರಿಯಾಗಿ ಓರೆಗಣ್ಣನ್ನು ಹೂಡಿದಳು. ಮಾಲತಿ ಪಂಬಿಯನ್ನೆತ್ತಿಕೊಂಡಳು. ಅಂಗಿ ಟವಲುಗಳನ್ನು ತಾನು ತರುತ್ತೇನೆಂತ ಹೇಳಿ ಗೋಪಿನಾಥ ಅವರಿಬ್ಬರನ್ನು ಬಚ್ಚಲಿಗೆ ಕಳಹಿಸಿದನು. ಅವರು ಹೋಗಿ ಒಂದೆರಡು ನಿಮಿಷಗಳ ಮೇಲೆ ಅಂಗಿ ಟವಲುಗಳನ್ನು ತಗೊಂಡು ಹೋಗಿ ನೋಡುವಾಗ

ಕೆಲಸಗಿತ್ತಿ ತನ್ನ ಕೈಲಾದಷ್ಟು ಸಹಾಯ ಮಾಡೋಣವೆಂತ ನೀರು ತೋಡಿಟ್ಟು ಮಾಲತಿ ಮಗುವಿಗೆ ಸ್ನಾನಮಾಡಿಸುವುದನ್ನು ನೋಡುತ್ತ ಹರಟುತ್ತ ನಿಂತಿದ್ದಳು, ಬಚ್ಚಲು ಮನೆಯಲ್ಲಿ. ಮಾಲತಿ ಸೆರಗು ಬಿಗಿದುಕೊಂಡು ಸೀರೆಯ ನಿರಿಯೊಂದನ್ನೆತ್ತಿ ಮೇಲೆ ಕಟ್ಟಿಕೊಂಡಿದ್ದಳು. ಆಕೆಯ ರವಿಕೆ ಆಕೆಯ ಮೈಗೆ ಹತ್ತಿಕೊಂಡು ಎದೆಯ ಬಿಗು ಸೊಬಗನ್ನೂ ದುಂಡಗೆ ನುಣುಪಾದ ನಳಿತೋಳುಗಳ ಚೆಲುವನ್ನೂ ಎತ್ತಿ ತೋರಿಸುತ್ತಿತ್ತು. ಆಕೆ ಒಂದು ಕಾಲನ್ನು ಒಂದಡಿ ಎತ್ತರವಿದ್ದ ತಿಟ್ಟಿಯ ಮೇಲಿಟ್ಟುಕೊಂಡುದರಿಂದ ಆಕೆಯ ನಡುತೊಡೆಗಳ ರಸಾಕೃತಿಯ ರೇಖೆಗಳು, ಒಳಲುಂಗದ ಲೇಸಿನ ಅಂಚು, ತೊಯ್ದು ಕೆಂಪಗಿದ್ದ ಆಕೆಯ ಪಾದಕಮಲಗಳು, ಇವು ಆತನ ಮತಿಗೆಡಿಸಿದವು. ಆದರೆ ನಿಲ್ಲುವುದು ತರವಲ್ಲ. ಆ ಅಧಿಕಪ್ರಸಂಗಿ ಕೆಲಸಗಿತ್ತಿಯನ್ನು ಶಪಿಸುತ್ತ, ತಂದ ಬಟ್ಟೆಗಳನ್ನು ಗಳುವಿಗೆ ಸಿಕ್ಕಿಸಿ ಹಿಂತಿರುಗಿ ಬಂದುಬಿಟ್ಟನು.

ತಾಯಿ ಮಗ ಆಂದಿನ ಊಟ ಕಾಫಿಯ ಕುರಿತು ಚರ್ಚಿಸುತ್ತಿರುವಾಗ ಪಂಬಿಯನ್ನೆತ್ತಿಕೊಂಡು ಮಾಲತಿ ಬಂದಳು.

“ ಅಡಿಗೆ ಊಟದ ವಿಚಾರ ನಮಗೇ ಇರಲಿ, ಹೆಂಗಸರಿಗೆ. ನೀವು ತಲೆ ಹಾಕಬೇಡಿ ” ಎಂದಳು.

“ ಅಡಿಗೆ ವಿಚಾರ ಸರಿಯೆ. ಆದರೆ ಊಟ ?”

“ ಕರೆದಾಗ ಬನ್ನೀ, ಅಷ್ಟೆ. ”

“ ಹೇಳಿದಾಗ ಹೋಗಿ, ಅಷ್ಟೆ. ನಮಗೆ ಮನೆಯೊಳಗಿನ ಅಧಿಕಾರ ಇಷ್ಟೇ ಅಲ್ವೇ ?”

“ ಅಧಿಕಾರವೆಲ್ಲಿ ಬಂತು, ಮನೆಯೊಳಗೆ ?”

“ ಅಧಿಕಾರಬಲದಿಂದಲ್ಲವೇ ಲೋಕವೆಲ್ಲ ನಡೀತಿರೋದು ?”

“ ನನಗೆ ಹಾಗನಿಸೋದಿಲ್ಲ. ಏನು ಇಂದಿರಮ್ಮ ?”

“ ಏನೋಪ್ಪ. ಯಾರಿಗೂ ಯಾರ ಮೇಲೂ ಯಾವ ಅಧಿಕಾರವೂ ಇಲ್ಲವೆಂತಲೇ ನನ್ನ ಭಾವನೆ. ಅಧಿಕಾರವಿರೋದು ಒಬ್ಬನಿಗೇನೇ. ಅದೂ ಕೂಡ ನಮ್ಮ ದೃಷ್ಟಿಯಿಂದ. ” ಅಂದರು ಅವರಿಬ್ಬರ ವಾಗ್ವಾದಕ್ಕೆ ನಗುತ್ತ.

“ ಇರಲಿ. ಜಗವೆಲ್ಲ ಬೆಳೆಯೋದು ಬೆಳಗೋದು ಪರಸ್ಪರ ಪ್ರೀತಿಯಿಂದ, ವಿಶ್ವಾಸದಿಂದ, ಸಹಾನುಭೂತಿಯಿಂದ ಅಂತಿಟ್ಟುಕೊಳ್ಳೋಣ. ಆದರೆ

ಜಗತ್ತಿನಲ್ಲಿ ಯಾವ ವರ್ಗದಲ್ಲೂ ಭೇದವಿಲ್ಲದೆ ಇಲ್ಲ. ಭೇದವಿದ್ದಲ್ಲಿ ಅಧಿಕಾರ ತಾನಾಗಿಯೇ ಬರುತ್ತೆ. " ಎಂದು ಗೋಪಿನಾಥ ಪ್ರತಿಪಾದಿಸಿದ.

" ಭೇದಬುದ್ಧಿ ಗಂಡಸರಲ್ಲಿ ಮಾತ್ರ " ಎಂದು ಕಟುತರವಾಗಿ ಟೀಕಿಸಿ ಬಿಟ್ಟು ಮಾಲತಿ ಗೋಪಿನಾಥನ ಮುಖವನ್ನೇ ದಿಟ್ಟಿಸಿದಳು. ಆಗ ಇಂದಿರಮ್ಮ,

" ಹೇಗೂ ಇರಲಿ. ನೀನೀಗ ನಿನ್ನ ಅಧಿಕಾರ ಇಲ್ಲಿ ಚಲಾಯಿಸುವಂತಿಲ್ಲ ವಷ್ಟೆ ? ನಿನ್ನ ಆಫೀಸಿಗೆ ಹೋಗು " ಎಂದವನನ್ನು ಅಟ್ಟಬಿಟ್ಟರು.

ಮಾಲತಿ ಆಡಿದ ಮಾತಿನ ಮಹತ್ವ ಆಕೆಗೇ ಗೊತ್ತಿರಬಹುದೋ ಇಲ್ಲವೋ ಎಂದು ಯೋಚಿಸುತ್ತ ಗೋಪಿನಾಥ ತನ್ನಾಫೀಸಿಗೆ ಹೋಗಿ ಅಭ್ಯಾಸಬಲ ದಿಂದ ನಿತ್ಯಕೆಲಸದಲ್ಲಿ ನಿರತನಾದನು. ಊಟಮಾಡುವಾಗ ಮಾಲತಿ ಅಡುಗೆ ಮನೆಯಲ್ಲಿರಬಹುದೆಂತ ಊಹಿಸಿದ್ದನು. ಆದರೆ ಆಕೆ ಆ ಹೊತ್ತಿಗೆ ಇಂದಿ ರಮ್ಮನ ಶುಶ್ರೂಷೆಯಲ್ಲಿದ್ದಳು. ಹೀಗಾಗಿ ಅಡುಗೆ ತಕ್ಕಮಟ್ಟಿಗೆ ರುಚಿ ಯಾಗಿದ್ದರೂ ಉಂಡದ್ದು ಉಂಡ ಹಾಗಾಗಲಿಲ್ಲ. ಕಚೇರಿಗೆಂತ ಡ್ರೆಸ್ ಮಾಡಿ ಕೊಂಡು ಹಾಲಿಗೆ ಬಂದರೂ ಮಾಲತಿ ನೋಡಲು ಸಿಗಲಿಲ್ಲ. ಹೊರಡುವುದಕ್ಕೆ ವೇಳೆಯಾಗುತ್ತ ಬಂತು. ಆಕೆಯನ್ನು ಒಮ್ಮೆಯಾದರೂ ನೋಡದೆ ಹೋಗ ಬೇಕೇ ? ಎಂಬ ಕಳವಳದಲ್ಲಿ ನೇಲುತ್ತಿರುವಾಗಲೇ ಇಂದಿರಮ್ಮನ ಕೋಣೆ ಯಿಂದ ಕಿಚಿಕಿಚಿ ನಗುತ್ತ ಪಂಬಿ ಓಡಿಬಂದಳು. " ಕಳ್ಳೀ, ಎಲ್ಲಿ ಓಡ್ತೀ, ನೋಡ್ತೇನೆ. " ಅನ್ನುತ್ತ ಮಾಲತಿಯೂ ಓಡಿ ಬಂದಳು. ಸೂಟುಬೂಟು ಹ್ಯಾಟುಗಳಿಂದ ಸಾಲಂಕೃತನಾದ ಗೋಪಿನಾಥ ಫಕ್ಕನೆ ಎದುರಾದುದನ್ನು ನೋಡಿ ತಟಸ್ಥಳಾಗಿ ಅಸ್ತವ್ಯಸ್ತವಾದ ಎದೆ ಸೆರಗನ್ನು ಸರಿಪಡಿಸಿಕೊಂಡಳು.

ಗೋಪಿನಾಥ ಮಗಳನ್ನು ಸೆರೆಹಿಡಿದು, "ಏನು ಮಾಡಿದಳು ತುಂಟತನ?" ಎಂದು ಕೇಳಿದನು.

" ನನ್ನ ಚೈನು ಕಿತ್ಕೊಂಡು ಬಂದಿದ್ದಾಳೆ. ನೋಡಾಣಾಂತಂದ್ರು ಇಂದಿ ರಮ್ಮ. ಅವರಿಗೆ ಕೊಡುವಾಗ ಈ ಕಳ್ಳಿ ಕಸಕೊಂಡು ಪಾರು."

" ಹೌದೇನೇ? ಹಾವಳಿ ಹನುಮ ಆಗಿಬಿಟ್ಟಿದ್ದೀಯಲ್ಲ. ಎಲ್ಲಿದೆ ತೋರಿಸು, ಅತ್ತೆ ಚೈನು. "

ಪಂಬಿ ಒಂದರೆಕ್ಷಣ ತನ್ನ ಮುಷ್ಟಿಯೊಳಗಿದ್ದ ನಗವನ್ನು ಬಿಡಿಸಿ ತೋರಿಸಿ ಒಡನೆ ಮುಚ್ಚಿ ಯಾರಿಗೂ ಸಿಗದಲ್ಲಿ ತನ್ನ ಬೆನ್ನಹಿಂದೆ ಅಡಗಿಸಿದಳು.

"ಅಯ್ಯೋ, ಹಾಗೂ ಮುದ್ದಿಮಾಡಿ ಹಿಡಕೊಂಡ್ರೆ ಯಾಕಾದೀತು ಚೈನು ?" ಅಂದ.

"Albert Chainಉ. ಗಟ್ಟಿಮುಟ್ಟಾಗಿದೆ. ಇರಲಿ ಅವಳ ಕೈಲೇ" ಅಂದಳು.

ಗೋಪಿನಾಥ ಹೋಗುವಾಗ ಬೇಗ ಬಂದು ಬಿಡುತ್ತೇನೆ ಅನ್ನುವುದಕ್ಕೆ ಸಂಕೋಚಪಟ್ಟು ಏನೂ ಹೇಳದೆ ಹೋಗಿಬಿಟ್ಟನು. ಬೇಗ ಬನ್ನಿ ಅನ್ನುವುದಕ್ಕೆ ಮಾಲತಿಗೆ ನಾಚಿಕೆ ಬಿಡಲಿಲ್ಲ.

ಒಂದು ಗಂಟೆಯೊಳಗೆ ತನ್ನ ಊಟ, ಪಂಬಿಯ ಊಟ, ಇಂದಿರಮ್ಮಗೆ ಸಾಗುಕೇರು, ಎಲ್ಲವನ್ನೂ ಪೂರೈಸಿ, ಪಂಬಿಯನ್ನು ಮಗ್ಗುಲಲ್ಲಿ ಮಲಗಿಸಿಕೊಂಡು ಹಾಡು ಹೇಳಿ ನಿದ್ದೆ ಮಾಡಿಸಿದಳು. ಅನಂತರ ಇಂದಿರಮ್ಮನ ಅಪೇಕ್ಷೆ ಮೇರೆಗೆ ಯುದ್ಧದ ಸಮಾಚಾರ ಹೇಳಿದಳು. ಅವರಿಗೂ ಜೋಂಪು ಹತ್ತಿದ ಮೇಲೆ ಮನೆಯ ತನಿಖೆಗೆ ಪ್ರಾರಂಭಿಸಿದಳು. ಮೊತ್ತಮೊದಲು ಗೋಪಿನಾಥನ ಆಫೀಸು ಕೋಣೆಯ ಬಾಗಿಲು ತೆರೆದು ನುಗ್ಗಿದಳು ಗೋಡೆ ಸುತ್ತಲೂ ಲಾ ಪುಸ್ತಕಗಳ ಕಪಾಟುಗಳು. ಅಂತರಂತರವಾಗಿದ್ದ ನಾಗೊಂದಿಗೆಗಳ ಮೇಲೆ ದಫ್ತರುಗಳ ಸಾಲುಗಳು. ಯಜಮಾನನ ಆಗಮನವನ್ನೇ ಎದುರು ನೋಡುವಂತಿದ್ದ ತಮ್ಮ ತಮ್ಮ ಸ್ಥಾನದಲ್ಲಿ ಹಲವಾರು ಕುರ್ಚಿಗಳು, ಮೇಜುಗಳು, ಮರದ ಸ್ಕ್ರೀನು, ಟ್ಯಾಪುರ್ರೈಟರು, ಎಲ್ಲವೂ ಒತ್ತರೆಯಾಗಿದ್ದುವು. ಒಂದೇ ಒಂದು ಚೂರು ಕಾಗದವಾಗಲಿ, ಕಸಕಡ್ಡಿಯಾಗಲಿ ಎಲ್ಲಿಯೂ ಕಾಣಸಿಗಲಿಲ್ಲ. ದಿನನಿತ್ಯ ಕಕ್ಷಿಗಾರರು ಬಂದು ಹೋಗಿ ಕೆಲಸ ನಿರ್ವಹಿಸುವ ಕೇಂದ್ರದಂತೆ ತೋರಲಿಲ್ಲ. ತನ್ನ ಗಂಡನ ಆಫೀಸನ್ನು ಜ್ಞಾಪಿಸಿಕೊಂಡಳು. ಅದು ಇದಕ್ಕಿಂತಲೂ ವಿಶಾಲವಾಗಿತ್ತು. ಅಲ್ಲಿ ಇನ್ನೂ ಹೆಚ್ಚು ಪುಸ್ತಕಗಳಿದ್ದುವು. ಆದರೆ ಈ ವಾರಣವಿರಲಿಲ್ಲ. ಭಾರೀ ಆಫೀಸಿನ ವಿಲಕ್ಷಣಗಳೆಲ್ಲ ವಿಪುಲವಾಗಿದ್ದುವು. ಮೇಜಿನ ಮೇಲೆ ಚೆಲ್ಲಾಪಿಲ್ಲಿಯಾಗಿ ಹರವಿದ್ದ ಪೇರಿದ್ದ ಕಾಗದ ಪುಸ್ತಕ ಇತ್ಯಾದಿಗಳು; ಓರೆಕೋರೆ ಕುರ್ಚಿಬೆಂಚುಗಳು; ಎಲ್ಲಿ ನೋಡಿದರೂ ಧೂಳು, ಕಾಗದದ ಚೂರುಗಳು, ತಂಬಾಕುತುಂಡುಗಳು, ಹಸಿ ಅಡಿಕೆ ಹೋಳುಗಳು, ವೀಳ್ಯದೆಲೆಯ ತೊಟ್ಟುಗಳು, ಸುಣ್ಣದ ಬೊಟ್ಟುಗಳು, ನಾಮಗಳು. ಮಾಲತಿ ಗೋಪಿನಾಥನ ಕೀಲಿಕುರ್ಚಿಯ ಬಳಿ ನಿಂತು

ಅದರ ನಯವಾದ ಬೆನ್ನಮೇಲೆ ಕೈಯಾಡಿಸಿದಳು. ಮೇಜನ್ನು ಸವರಿದಳು. ಅದರ ಮೇಲಿದ್ದ ದಾವೆಯು ದಪ್ತರುಗಳನ್ನು ತೆಗೆದು ಮುಖಪರದೆಯ ಮೇಲೆ ಬರೆದಿದ್ದ ವಿಚಿತ್ರ ಸಂಖ್ಯೆಗಳನ್ನೂ ಭಾಷೆಯನ್ನೂ ಓದಿ ಹಾಗೆಯೇ ಮಡಗಿದಳು.

ಅಲ್ಲಿಂದ ಬಂದು ಗೋಪಿನಾಥನ ಶಯ್ಯಾಗೃಹಕ್ಕೆ ಪ್ರವೇಶಮಾಡಿದಳು. ಅಲ್ಲಿಯೂ ಅದೇ ಒತ್ತರೆ, ಅದೇ ಶುಚಿತ್ವ, ಅದೇ ವಾರಣ. ಮಂಚ, ಚಿಕ್ಕ ಮೇಜು, ಸೋಫ ಡ್ರೆಸ್ಸಿಂಗ್‌ಮೇಜು, ಬಟ್ಟೆಯ ಕಪಾಟು, ಯಾವುದನ್ನೂ ಸ್ಥಳಾಂತರ ಮಾಡುವಂತಿಲ್ಲ. ಪ್ರತಿಯೊಂದು ವಸ್ತುವೂ ಎಲ್ಲಿರಬೇಕೋ ಅಲ್ಲಿತ್ತು. ಮಂಚದ ಬಳಿ ಕನ್ನಡಿ ಚೌಕಗಳ ಬೀರುವೊಂದರೊಳಗೆ ನೂರಾರು ಪುಸ್ತಕಗಳು ಸಾಲುಸಾಲಾಗಿ ಕವಾಯತಿಗೆ ನಿಂತ ಶಿಪಾಯಿಗಳಂತಿದ್ದುವು. ಹಿತ್ತಲಿನ ಪಾರ್ಶ್ವದ ಕಿಟಕಿಗಳೆರಡು ಮುಚ್ಚಿದ್ದರಿಂದ ಒಳಗೆ ನಸುಗತ್ತಲಾಗಿ ಕೋಣೆಯು ಗೆಳೆಯರ ಗೂಡಿನಂತಿತ್ತು. ಪ್ರತಿಯೊಂದು ವಸ್ತುವಿನ ಮೇಲೂ ಗೋಪಿನಾಥನ ವ್ಯಕ್ತಿತ್ವದ ಮುದ್ರೆಯಿತ್ತು. ಪ್ರಾಯಶಃ ಆತನಿಗೆ ತುಂಬ ಬೇಕಾದವರನ್ನು ಮಾತ್ರ ಈ ಗುಪ್ತಮಂದಿರಕ್ಕೆ ಬರಬಿಡುತ್ತಿದ್ದನು. ಮಾಲತಿ ಹೇಳದೆ ಕೇಳದೆ ಹೋಗಿದ್ದರೂ ತಾನು ತಪ್ಪು ಮಾಡಿದೆ, ಶೀಲವನ್ನು ಅತಿಕ್ರಮಿಸಿದೆ ಎಂಬ ಭಾವನೆಯಾಗಲಿಲ್ಲ. ಇದೇ ತನ್ನ ಮೊದಲಿನ ಕೋಣೆ. ಇಲ್ಲೆ ತಾನಿದ್ದುದು. ಈಗಲೂ ತನ್ನದೇ, ಇನ್ನು ಮುಂದೆಯೂ ತನ್ನದೇ ಎಂದೆನಿಸಿ ಅತಿ ನೆಮ್ಮದಿಯುಂಟಾಯಿತು. ಈ ಸುಖದೊಡನೆ ಅಸಹನೀಯವಾದ ವೇದನೆಯೊಂದು ಬೆರೆತುಕೊಂಡಿತು. ಕೋಣೆಯೊಳಗೆಲ್ಲ ಸುಳಿದಾಡಿದಳು. ದಿನಪ ಅಸ್ತಮಿಸುವಾಗ ಬಿಟ್ಟು ಹೋದ ಮೋಡವು ಪಡುವಣ ದಿಗಂತದಲ್ಲಿ ಅಲೆದಾಡಿದಂತೆ.

ಕಿಟಕಿಗಳನ್ನು ತೆರೆದು ಪುಸ್ತಕ ಸಂಗ್ರಹವನ್ನು ಪರಿಶೀಲಿಸಿದಳು. ಆಕೆಯ ಮನೆಯಲ್ಲಿ ಆಕೆ ಬಂದಮೇಲೆ ಕೊಂಡು ಕೊಂಡ ಕೆಲವು ಕನ್ನಡ ಇಂಗ್ಲಿಷು ಗ್ರಂಥಗಳಲ್ಲದೆ ಬೇರೆ ಎಲ್ಲವೂ ಲಾ ಪುಸ್ತಕಗಳೇ. ಆಗಾಗ ಮಹಿಳಾ ಸಮಾಜದ ಪುಸ್ತಕಾಲಯದಿಂದ ಎರವಾಗಿ ತಂದು ಓದುತ್ತಿದ್ದಳು. ಇಲ್ಲಿ ಸಾಹಿತ್ಯ ಮತ್ತು ಲಲಿತಕಲೆಯ ಕುರಿತು ಅನೇಕ ಪುಸ್ತಕಗಳಿದ್ದುವು. ವಸ್ತುವಿಜ್ಞಾನದ ಬರೆಹಗಳೊಂದೆಡೆ, ಮನೋವಿಜ್ಞಾನದ ಕುರಿತು ಅನೇಕ ಅನೇಕ ಪ್ರಕಟನೆಗಳು

ಇನ್ನೊಂದೆಡೆ. ನಡುವೆ ಅಲ್ಲಲ್ಲಿ ಪ್ರಪಂಚದ ಮಹಾಪುರುಷರ ಚಿಕ್ಕ ಚಿಕ್ಕ ಪ್ರತಿಮೆಗಳು. ಇವೆಲ್ಲ ಗೋಪಿನಾಥನ ಉದ್ದಾಮ ಓದುಗಾರಿಕೆಯನ್ನು, ವಿಕಸಿತ ರಸಿಕತನವನ್ನು, ಕಲಾಭಿರುಚಿಯ ಸಾಮರಸ್ಯವನ್ನು ಚಿತ್ರಿಸುತ್ತಿದ್ದುವು. ಆತನ ಜನಸಾಮಾನ್ಯತೆಗೆ ನಿಲುಕದ ರಸಜೀವನದ ಪ್ರತಿರೂಪ ಆತನ ಸೂಕ್ಷ್ಮ ಶರೀರದಂತೆ ಕೋಣೆಯ ಮೂಲೆಮೂಲೆಗಳಲ್ಲಿ ಅವಿತಿದ್ದಂತೆ ತೋರಿತು. ಮೆತ್ತಗೆ ಸದ್ದು ಮಾಡದೆ ಸುತ್ತಾಡುತ್ತಿದ್ದ ಮಾಲತಿಗೆ ತಾನಾವುದೋ ಸ್ವಪ್ನ ದ್ವೀಪದಲ್ಲಿ ಏಕಾಂಕಿಯಾಗಿ ಸಂಚರಿಸುತ್ತಿರುವಂತೆ ವಿಚಿತ್ರ ಭಯವಾಯಿತು. ಬೀರುವಿನ ಬಾಗಿಲು ಹಿಡಿದೆಳೆದಳು. ಬೀಗ ಹಾಕಿರಲಿಲ್ಲ. ತ್ವರೆಯಿಂದ ಪುಸ್ತಕಗಳನ್ನು ಒಂದೊಂದಾಗಿ ತೆಗೆದು, ಪುಟ ತಿರುವಿ, ತಿರುಗಿ ಒಳಗಿಟ್ಟಳು. ಕಂದುಬಣ್ಣದ ತೊಗಲಿನ ಹೊದಿಕೆಯ, ಚಿನ್ನದ ವರ್ಣಕಿನ ಹೆಸರಿದ್ದ ಪುಸ್ತಕವೊಂದು ಸ್ವಲ್ಪ ವಿಶೇಷವಾಗಿ ಕಂಡಿತು. ತೆಗೆದು ನೋಡಲು ಷೆಲ್ಲಿಯ ಕಾವ್ಯಮಾಲೆಯಾಗಿತ್ತು. ತುಂಬ ಉಪಯೋಗಿಸಿದ ಪುಸ್ತಕದಂತಿತ್ತು. ಬಹುಶಃ ಗೋಪಿನಾಥನಿಗೆ ಅತಿ ಒಲವಿನ ಗ್ರಂಥವಾಗಿರಬೇಕು. ಅಂತ ಊಹಿಸಿ ಆದನ್ನೆತ್ತಿಕೊಂಡು ಕಿಟಕಿಯ ಬಳಿಯಲ್ಲಿದ್ದ ಸೋಫದಲ್ಲಿ ಕುಳಿತು ಮೇಲಿಂದ ಮೇಲೆ ಅಲ್ಲಲ್ಲಿ ಓದಲಾರಂಭಿಸಿದಳು. ಷೆಲ್ಲಿಯು ವಿಖ್ಯಾತ ಆಂಗ್ಲಕವಿಯೆಂದು ಕೇಳಿದ್ದರೂ ಅದುವರೆಗೆ ಓದಿರಲಿಲ್ಲ. ಆತನ ಚಿಕ್ಕ ಚಿಕ್ಕ ರಸಾತ್ಮಕ ಕೃತಿಗಳು ಆಕೆಯ ಮನಸ್ಸನ್ನು ಮೆಚ್ಚಿಸಲು ಹೆಚ್ಚು ವಿಳಂಬವಾಗಲಿಲ್ಲ. ಓದುತ್ತ ಎಷ್ಟು ಹೊತ್ತು ತಲ್ಲೀನಳಾಗಿದ್ದಳೋ ಶಿವಯ್ಯ ಬಾಗಿಲವರೆಗೆ ಬಂದು ಕಾಫಿಯ ವಿಚಾರ ಪ್ರಸ್ತಾಪಿಸಿದ್ದರಿಂದ ಗೊತ್ತಾಯಿತು ತಾನಿಲ್ಲಿದ್ದೇನೆಂಬುದು. ಪುಸ್ತಕವನ್ನು ಮೇಜಿನ ಮೇಲಿಟ್ಟು ಬೀರುವಿನ ಬಾಗಿಲು ಮುಚ್ಚಿ ಕಾಫಿಮಾಡುವುದಕ್ಕೆ ಹೋದಳು. ಇಂದಿರಮ್ಮಗಿನ್ನೂ ದಣಿವಿನ ನಿದ್ರೆ. ಪಂಬಿಯೂ ಮಲಗಿದ್ದಳು ಗೊಂಬೆಯಂತೆ. ಮನೆಯೊಳಗೆ ನಿಶ್ಶಬ್ದ. ಹೊರಗೆ ಬಿಸಿಲಿನ ಝಳಪು, ಒಳಗೆ ತಂಪಾಗಿತ್ತು. ಹಿತ್ತಲಿನಿಂದ ಕಿರಿಗಾಳಿಯೊಂದು ಆಗಾಗ ಒಳಗೆ ಬಂದು ಹೋಗುತ್ತಿತ್ತು.

ಕಾಫಿ ಮಾತ್ರ ಮಾಡಿಟ್ಟು ಬಂದಳು ತಿರುಗಿ ಶಯ್ಯಾಗೃಹಕ್ಕೆ. ತಿಂಡಿಯೇನೂ ಮಾಡಬೇಕಾಗಿಲ್ಲ. ಕಚೇರಿಯಿಂದ ಬರುವಾಗ ಏನಾದರೂ ತರುತ್ತಾನೆ ಗೋಪಿನಾಥ ಅಂತಂದಿದ್ದರು ಇಂದಿರಮ್ಮ. ಎರಡನೇ ಬಾರಿ

ಪುಸ್ತಕವನ್ನೆತ್ತಿದಾಗ ತಾನಿನ್ನು ಅವರು ಮಲಗುವ ಕೋಣೆಯಲ್ಲಿರುವುದು ಉಚಿತವಲ್ಲ, ಇಲ್ಲಿಗೆ ಬರಲೇಬಾರದಿತ್ತು ಅವರಿಲ್ಲದಿರುವಾಗ, ಒಂದುವೇಳೆ ಪಂಬಿಯೋ ಇಂದಿರಮ್ಮನೋ ಕೂಗಿ ಕರೆದರೂ ಕೇಳಿಸದು, ಅನ್ನುತ್ತ ಪುಸ್ತಕ ತಗೊಂಡು ಹಾಲಿಗೆ ಬಂದಳು. ಒಂದು ಕುರ್ಚಿಯಲ್ಲಿ ಕುಳಿತು ಪುಸ್ತಕ ಬಿಡಿಸಿದಳು. ಆದರೆ ಓದಲಾಗಲಿಲ್ಲ. ಹಟಹಿಡಿದು ಓದಿದಳು. ಅರ್ಥವಾಗಲಿಲ್ಲ. ಆಕೆಯ ಮನಸ್ಸು ವಿನಾಕಾರಣ ಕುಸಿದುಹೋಯಿತು. ಅಲ್ಲಿ ಆಗ ತನಗೆ ಬೇಕಾದವರು ಯಾರೂ ಇಲ್ಲ, ಯಾರಿಗೂ ತಾನು ಬೇಡ, ತಾನು ತಬ್ಬಲಿ, ಬರಬಾರದಿತ್ತು. ತನ್ನನ್ನು ಈ ಮನೆಯಲ್ಲಿ ಕೇಳುವವರೇ ಇಲ್ಲ, ತಾನೊಬ್ಬಳು ಚಾಕರಿಯವಳು, ಮುಸುರೆ ತಿಕ್ಕುವವಳು. ಯಾವ ಸ್ಥಾನ ವಿದೆ ತನಗಲ್ಲಿ, ಯಾವ ಮಾನ? ಎಲ್ಲವೂ ನಿರ್ದಯ, ನೀರಸ, ನಿರರ್ಥಕ! ಎಂದು ತೋರಿತು, ಇದ್ದಕ್ಕಿದ್ದ ಹಾಗೆ.

ಈ ಶೂನ್ಯಸಮಾಧಿಯಲ್ಲಿ ನಿಶ್ಚೇತಳಾಗಿರುವಾಗಲೇ ಗೋಪಿನಾಥನ ಬೂಟ್ಸಿನ ಸದ್ದು ಕೇಳಿಸಿತು. ತಟ್ಟನೆ ಎದ್ದಳು. ಗಡಿಯಾರ ನೋಡಲು ನಾಲ್ಕೂ ಕಾಲಿಗೆ ಸಮೀಪಿಸಿತ್ತು. ಗೋಪಿನಾಥ ಹಾಲಿನೊಳಗೆ ಕಾಲಿಡುವು ದಕ್ಕೂ ಮಾಲತಿ ತಿರುಗಿ ನೋಡುವುದಕ್ಕೂ ಸರಿಬಿತ್ತು. ಒಂದು ಗಳಿಗೆ ಇಬ್ಬರ ಕಣ್ಣುಗಳೂ ಸಂಧಿಸಿ, ಇಬ್ಬರೂ ಚಮಕಿತರಾದರು. ಗೋಪಿನಾಥ ಮುಂದೆ ಬಂದು ಮೇಜಿನ ಮೇಲಿದ್ದ ಪೆಲ್ಲಿಯನ್ನು ನೋಡಿ,

"ಅತ್ಯುತ್ತಮ ಜತೆಗಾರನನ್ನ ಆರಿಸಿದಿರಿ" ಎಂದನು.

"ಇನ್ನೂ ಪರಿಚಯವಾಗಬೇಕಷ್ಟೆ. ನಿಮ್ಮ ಲೈಬ್ರರಿಯಿಂದ ಕದ್ದು ತಂದೆ."

"ಬೇರೇನೂ ಕದ್ದುಕೊಳ್ಳಲಿಲ್ಲವಷ್ಟೆ?"

"ಏನೂ ಸಿಗಲಿಲ್ಲ, ನೋಡಿದೆ."

"ಅಂದ್ರೆ? ಅಮೂಲ್ಯವಾದದ್ದು ಯಾವುದೂ ಸಿಗಲಿಲ್ಲವೇ, ಪೆಲ್ಲಿಗಿಂತ?"

"ಇತ್ತೋ ಏನೋ. ನನಗದರ ಬೆಲೆ ಗೊತ್ತಾಗದಿರಬಹುದು."

ಗೋಪಿನಾಥ ನಕ್ಕು, "ಅಮ್ಮ? ಪಂಬಿ?" ಎಂದು ಕೇಳಲು ನಿದ್ರಿಸು ತ್ತಿದ್ದಾರೆಂತ ತಿಳಿಸಿದಳು.

"ಕಾಫಿ ಕುಡಿದಾಯಿತೇ?" ಎಂದು ಕೇಳಿದನು.

"ಇಲ್ಲ."

"ನನ್ನ ಕಾದಿರೇನು? ಪರವಾಯಿಲ್ಲ. ನಾನೀಕ್ಷಣ ಡ್ರೆಸ್ಸು ಬದಲಿಸಿ ಬರ್ತೇನೆ. ಈ ಪೊಟ್ಟಣಗಳನ್ನು ತಗೊಳ್ಳಿ." ಅನ್ನುತ್ತ ತನ್ನ ಕೈಲಿದ್ದ ತಿಂಡಿ ಕಟ್ಟುಗಳನ್ನು ಆಕೆಗೆ ಒಪ್ಪಿಸಿ ಶಯ್ಯಾಗೃಹಕ್ಕೆ ಹೋದನು. "ನಾನಿಲ್ಲದಾಗ ಮಾಲತಿ ಇಲ್ಲಿಗೆ ಬಂದು ಎಷ್ಟು ಹೊತ್ತು ಇದ್ದಳು, ಏನು ಮಾಡಿದಳು? ಎಲ್ಲಿ ಕೂತಳು? ನನ್ನಾಸೆಯಿದ್ದಷ್ಟು ಕೆಚ್ಚಿದೆ ನನಗಿರುತ್ತಿದ್ದರೆ ಆಕೆಯನ್ನು ಮುದ್ದಿಸಿ ಹಿಂಡಿ ನುಚ್ಚುನುರಿ ಮಾಡುತ್ತಿದ್ದೆ. ನಾನು ಭೀರು," ಎಂದು ಶೋಕಿಸುತ್ತ ಕಚೇರಿಯ ವೇಷ ಬದಲಿಸಿ ನಿತ್ಯ ಉಡುಪನ್ನುಟ್ಟು ಹಾಲಿಗೆ ಹೋದನು. ಆಗ ತಿಂಡಿಗಳನ್ನು ತಟ್ಟೆಯಲ್ಲಿಡಲು ಅಡುಗೆಮನೆಗೆ ಹೋದ ಮಾಲತಿ ಕಾಫಿ ತರಬಹುದೇ ಎಂದು ಕೇಳಲು ಬಂದಳು.

"ನಾನು ಬಚ್ಚಲಿಗೆ ಹೋಗಿ ಕೈಕಾಲು ತೊಳೆದುಕೊಂಡು ಬರ್ತೇನೆ. ಒಟ್ಟಿಗಿದ್ದು ಕಾಫಿ ಕುಡಿಯೋಣ, ಆಗಬಹುದೆ?" ಅಂತನ್ನುತ್ತ ಬಚ್ಚಲು ಕಡೆಗೆ ಹೋದನು. ಹಿಂತಿರುಗಿ ಬರುವಾಗ ಅಡುಗೆ ಮನೆಗೆ ಹೋಗಿ ಮಾಲತಿ ಹತ್ತಿರ,

"ಮುಂಚೆ ಅಮ್ಮಗೆ ಕೊಟ್ಟುಬಿಟ್ಟು ಆಮೇಲೆ ನಾವು ಕುಡಿಯೋಣ" ಎಂದನು.

"ಎದ್ದಿದ್ದಾರೇನು? ನಾನೇ ಹೋಗಿ ಕೊಟ್ಟುಬರ್ತೇನೆ. ತಿಂಡಿ?"

"ಅಯ್ಯೋ, ನಮ್ಮಮ್ಮ ನಿಮ್ಮತ್ತೆ ಎಲ್ಲಾ ಒಂದೇ ಜಾತಿ. ಹೋಟೇಲು ತಿಂಡಿ ಮುಟ್ಟೋದಿಲ್ಲಾಂತ ಶಪಥ ಹಾಕಿರಬೇಕು."

"ನಾವೂ ಹಾಗೆಯೇ ಇದ್ರೆ ಚೆನ್ನಾಗಿತ್ತು."

"ಆದರೆ ಈಗ ತಂದದ್ದನ್ನ?"

"ತಂದ ಪಾಪ ತಿಂದು ಪರಿಹಾರ" ಅನ್ನುತ್ತ ಒಂದು ಲೋಟ ಕಾಫಿ ತಗೊಂಡು ಮಾಲತಿ ಇಂದಿರಮ್ಮನ ಕೋಣೆಗೆ ಹೋದಳು. ಅಲ್ಲಿಂದ ಬರುವಾಗ ಪಂಬಿಗೂ ಎಚ್ಚರಿಕೆಯಾಗಿ ಮುಖ ಬಾಡಿಸಿಕೊಂಡು ಬಂದಳು. ಆಕೆಗೂ ಇಂದಿರಮ್ಮನ ಜತೆಯಲ್ಲೇ ಕಾಫಿ ತಿಂಡಿ ತಂದುಕೊಟ್ಟಳು. ಹೀಗಾದ ಮೇಲೆ ತಾನಿನ್ನು ಗೋಪಿನಾಥನೊಂದಿಗೆ ಬೇರೆಯಿರುವುದು ಚೆಂದವಲ್ಲವೆಂತ ತನ್ನ ಪಾಲಿನ ಕಾಫಿ ತಿಂಡಿಯನ್ನು ಇಂದಿರಮ್ಮನ ಕೋಣೆಗೆ ಒಯ್ದಳು. ಮಾಲತಿ ಅಲ್ಲಿಗೆ ಹೋದಮೇಲೆ ತನ್ನದೇನುಳಿಯಿತು ಬೇರೆ ಅಂತ ಅಂದುಕೊಳ್ಳುತ್ತ ಗೋಪಿನಾಥ ತಾನೂ ಆ ಕೂಟಕ್ಕೆ ಸೇರಿದ. ಕಾಫಿಯಾದ ಬಳಿಕ

ಮಾಲತಿ ಉಪಕರಣಗಳನ್ನು ತೆಗೆಯುವುದಕ್ಕೆ ತೊಡಗಿದಾಗ ಗೋಪಿನಾಥ ಅಡ್ಡ ಬಂದು, ಬೇಡ, ಶಿವಯ್ಯನ ಹತ್ರ ಹೇಳೋಣವೆಂದನು. ಆದರೆ ಶಿವಯ್ಯ ನನ್ನ ತರಕಾರಿ ಜಿನಸುಗಳನ್ನು ತರೋದಕ್ಕೆ ಪೇಟೆಗೆ ಕಳುಹಿಸಿದ್ದೇನೆ, ಅಂದಳು ಮಾಲತಿ. ಈ ಸಮಸ್ಯೆಯನ್ನು ನೋಡಿ ಪಂಬಿ ಒಂದುಪಾಯವನ್ನು ಹೇಳಿದಳು.

" ನನ್ನ ತಯೆ ಮೇಯೆ ಇದು, ಪಪ್ಪ ! ನಾನು ಹೋಯುತ್ತೀನೆ " ಅಂತ.

" ಅದಕ್ಕೇನು ? ಈಕೋ " ಅನ್ನುತ್ತ ಒಂದು ತಟ್ಟೆಯನ್ನು ಆಕೆಯ ತಲೆಯ ಮೇಲಿಟ್ಟ. ಅದನ್ನು ತನ್ನೆರಡು ಕೈಗಳಿಂದಲೂ ಆಧರಿಸಿ ಹಿಡಿದು ಕೊಂಡು ಪಂಬಿ ದೇವರನ್ನು ಉತ್ಸವಕ್ಕೆ ಹೊರುವವರಂತೆ ನಿಧಾನವಾಗಿ ಹೊರಟಳು. ಉಳಿದ ಪಾತ್ರೆಗಳನ್ನು ಪಾಲು ಮಾಡಿಕೊಂಡು ಮಗುವಿನ ಇಬ್ಬದಿಗಳಲ್ಲಿ ಗೋಪಿನಾಥನೂ ಮಾಲತಿಯೂ ಹಿಂಬಾಲಿಸಿದರು. ಹಾಲು ದಾಟಿದ ಮೇಲೆ ಪಂಬಿ ಹಿಂತಿರುಗಿ ನೋಡಿದಳು. ಪಪ್ಪನ ಹತ್ರವೂ 'ಅತ್ತೆ' ಹತ್ರವೂ ಮೂರು ಮೂರು ಲೋಟಗಳೂ ತಟ್ಟೆಗಳೂ ಇದ್ದುವು. ತಾನು ಒಂದನ್ನೇ ಹೊರವುದರಲ್ಲಿ ನ್ಯಾಯವಿಲ್ಲವೆಂತ ಭಾವಿಸಿ,

" ಪಪ್ಪ, ನನ್ನ ಕೈಯಿಕ್ಕೆ ಏನಿಯ್ಯಯ್ಯ?" ಅನ್ನುತ್ತ ತಾರತಮ್ಯ ಮಾಡಿದಳು. ತಲೆ ಮೇಲಿದ್ದ ತಟ್ಟೆ ' ಟಣ್ ' ಅಂತ ಬಿತ್ತು.

" ತಲೆ ಮೇಲಿದ್ದದ್ದು ಮರತೇ ಹೋಯಿತೆ?" ಎಂದು ಕೇಳುತ್ತ ಮಾಲತಿ ಬಗ್ಗಿ ತಟ್ಟೆಯನ್ನು ತನ್ನ ಕೈಯಲ್ಲಿದ್ದುದಕ್ಕೆ ಕೂಡಿಸಿಕೊಂಡಳು.

" ಹೇಯಿದಾಂಗೆ ಹೌದು " ಎಂದು ಮಗು ಪುನಃ ತಟ್ಟೆಯೊಂದನ್ನು ಹೊತ್ತುಕೊಂಡು ಮುನ್ನಡೆದಳು. ಅಡುಗೆಮನೆಯ ಹೊರ ಜಗಲಿಯಲ್ಲಿ ಕೆಲಸಗಿತ್ತಿ ಎದುರಾಗಿ ಆಕೆ ಪಾತ್ರೆಗಳನ್ನೆಲ್ಲ ತೊಳೆಯುವುದಕ್ಕಾಗಿ ತಗೊಂಡಳು. ಪಂಬಿ ಮಾತ್ರ ಕೊಡಲಿಲ್ಲ. " ನಾನೇ ತೊಯಿತೇನೆ " ಅಂದಳು. " ಅವಳು ತೊಳೀತಿರಲಿ, ನೀನು ನೋಡಿಕೋ " ಎಂದು ಕೆಲಸಗಿತ್ತಿಗೆ ಹೇಳಿ ಗೋಪಿನಾಥ ಮಾಲತಿಯನ್ನು ನೋಡುತ್ತ, " ನಾವು ಹೋಗೋಣ " ಎಂದು ಮೆತ್ತಗೆ ಸೂಚಿಸಿದನು.

ಇಬ್ಬರೂ ಒಳಗೆ ಬರುವಾಗ ಮಾಲತಿ, " ಈ ಎಳೆಪ್ರಾಯದಲ್ಲಿ ಮಕ್ಕಳೆಷ್ಟು ಚೆಂದ ! ಎಷ್ಟು ಸ್ವಾರಸ್ಯ !" ಎಂದು ಸಂತೋಷಪಟ್ಟಳು.

“ ಅದರಲ್ಲೂ ಈ ಪ್ರಾಯದಲ್ಲಿ; ಮಾತು ಕಲಿಯುವಾಗ. ನಿಮಗೂ ಆ ಬಾಲ್ಯದಲ್ಲಿದ್ರಾಗುತ್ತಿತ್ತು ಅಂತ ಕಾಣುತ್ತೇನು?” ಅನ್ನುತ್ತ ಹಿಂತಿರುಗಿದನು.

“ ಸಾಧ್ಯವಿದ್ದರೆ ಸಂತೋಷವಾಗಿರುತ್ತಿದ್ದೆ. ಆ ತಿಳಿಮನಸ್ಸು, ತಿಳಿಗಣ್ಣು, ತಿಳಿಬಣ್ಣ ಬಹಳ ಕಾಲ ಉಳಿಯೋದಿಲ್ಲ. ”

“ ಉಳಿಯೋದಿಲ್ಲ. ಯಾವುದೂ ಉಳಿಯೋದಿಲ್ಲ. ಯಾವುದೂ ನಿಂತಲ್ಲಿ ನಿಲ್ಲೋದಿಲ್ಲ. ” ಎಂದನು.

ಗೋಪಿನಾಥ ತನ್ನ ಕೋಣೆಯೊಳಗೆ ಹೋಗಿ ಕಿಟಕಿಯ ಬಳಿಯ ಸೋಫದ ಸೀಟನ್ನು ತಟ್ಟಿ ಜಾಡಿಸಿ ಎರಡು ಹಸ್ತಗಳನ್ನು ನೀಡಿ ಮುಗುಳು ನಗುತ್ತ ನಾಟಕೀಯವಾಗಿ,

“ ಈ ಪೀಠವನ್ನು ಅಲಂಕರಿಸಬೇಕು. ” ಎಂದು ವಿಜ್ಞಾಪಿಸಿದನು.

ಮಾಲತಿಗೂ ಆ ಭಾವಭಂಗಿ ಮನೋದತ್ತವಾಗಿತ್ತು. ಅದೇ ರೀತಿ ಮಂದ ಹಾಸವನ್ನು ಬೀರುತ್ತ,

“ ತಾವು ನಿಂತಿರುವಾಗ ನಾನು ಹೇಗೆ ತಾನೇ ಕುಳಿತುಕೊಳ್ಳಲಿ ?” ಎಂದಳು.

“ ಹೆಂಗಸರಿಗೇನೇ ಪ್ರಥಮ ಮನ್ನಣೆ ಸಲಬೇಕು. ”

“ ಗೌಣ ವಿಷಯಗಳಲ್ಲಿ ಮಾತ್ರ. ” ಅನ್ನುತ್ತ ಕುಳಿತಳು.

ಗೋಪಿನಾಥ ಮಂಚದ ಮೇಲೆ ಕುಳಿತು,

“ ಅದು ನಮ್ಮ ಭಾಗದ ಅಕ್ಷಮ್ಯ ಅಪರಾಧ. ಆದರೆ ಇನ್ನುಮುಂದಿನ ದಿನಗಳು ನಿಮ್ಮವೇ : ಹೆಂಗಸರದು, ಮಕ್ಕಳದು. ”

“ ನಿಮ್ಮನ್ನೋಡಿದರೆ ಆ ನಿರೀಕ್ಷೆಯಿಂದ ನಿಮಗೇನೂ ಸುಖವಿದ್ದ ಹಾಗೆ ಕಾಣೋದಿಲ್ಲ. ” ಎಂದಳು, ಆತ ನೆಲವನ್ನೇ ನೋಡುತ್ತ ಚಿಂತಾಪರನಾಗಿದ್ದರಿಂದ. ಈ ಮಾತನ್ನು ಕೇಳಿ ಗೋಪಿನಾಥ ತಟಕ್ಕನೆ ಕಣ್ಣೆತ್ತಿ ಮಾಲತಿಯ ಮುಖಕಮಲವನ್ನು ದಿಟ್ಟಿಸಿದನು. ಆ ನೋಟದ ಅನುರಾಗವನ್ನು ಹೀರಿಕೊಂಡು ಮಾಲತಿಯ ಹಣೆಗಲ್ಲಗಳು ನಸುಗೆಂಪಾದುವು.

“ ಇಲ್ಲ. ಈ ತಲೆ ಎಲ್ಲೋ ಹೋಗಿತ್ತು. ”

“ ಎಲ್ಲಿಗೋ ? ”

“ ಆ ಮುಂದಿನ ದಿನ ಅಂದೆನಲ್ಲ ಅಲ್ಲಿಗೆ. ”

"ಆ ಪುಣ್ಯದಿನ ಉದಯವಾಗುವಷ್ಟರಲ್ಲಿ ನಾವೆಲ್ಲ ಎಲ್ಲೋ ಏನೋ!"

"ಯಾತಕ್ಕೆ? ಪ್ರಯತ್ನಪಟ್ಟರೆ ಆ ಸುಯೋಗ ಇಂದೇ ಇಲ್ಲೇ ಲಭಿಸಬಹುದು."

ಮಾಲತಿಗೆ ಗೋಪಿನಾಥ ಬರುವುದಕ್ಕೆ ಸ್ವಲ್ಪ ಮುಂಚೆಯಿದ್ದ ನಿರಾಶೆ ನಿರುತ್ಸಾಹದ ಮಬ್ಬು ಮಾಯವಾಗಿ ತಾನು ಯಾವುದೋ ಒಂದು ಹೊಸ ಸುಖದ ಸಮೀಪದಲ್ಲಿದ್ದಂತೆ ಭಾವನೆಯಾಯಿತು.

"ಲಭಿಸಲಿ. ಹಂಬಿ ಕಾಲದಲ್ಲೇ ಬರಲಿ, ಆ ಪುಣ್ಯದಿನ." ಅಂದಳು. ಆಮೇಲೆ ಮಾತು ಮುಂದುವರಿಯಲಿಲ್ಲ. ಮಾಲತಿಗೆ ಹೊತ್ತುಮೀರಿದ ನೆನಪಾಗಿ, "ಶಿವಯ್ಯ ಬಂದನೋ ಏನೋ. ರಾತ್ರೆ ಅಡುಗೆಯ ಏರ್ಪಾಟು ಮಾಡಿಬಿಟ್ಟು ಹೋಗ್ತೇನೆ. ಬಂದ ಕೆಲಸವೆಲ್ಲ ಮುಗಿಯಿತು. ಇನ್ನಿದ್ದು ಮಾಡೋದೇನು?" ಎಂದಳು ಕುಳಿತಲ್ಲಿಂದ ಕದಲದೆ.

"ಕೆಲಸವಾದ ಮೇಲೆ ಸ್ವಲ್ಪವೂ ಇರಬಾರದೆ? ಕಾರ್ಯತಃ ಸಲ್ಲಿಸುವ ಉಪಕಾರಕ್ಕಿಂತ ಹೆಚ್ಚಿನ ಕಾಣಿಕೆಯೊಂದಿದೆ.

ಮಾಲತಿಗೆ ತನ್ನ ಮುಖ ಮೈಯನ್ನೆಲ್ಲ ಮುದ್ದಿಸುವ ಆತನ ಕಣ್ಣುಗಳನ್ನು ಎದುರಿಸಲು ನಾಚಿಕೆಯಾಗಿ ಕಿಟಕಿಯ ಹೊರಗೆ ನೋಡುತ್ತ ಸುಮ್ಮನಿದ್ದಳು.

"Thanks" ಅಂದ ಗೋಪಿನಾಥ.

"ಯಾತಕ್ಕೆ? ನಾನು ಹೊರಟೆ ಈ ಕ್ಷಣ." ಎಂದು ಥಕ್ಕನೆ ತಿರುಗಿ ನೋಡಿದಳು.

"ತಿರುಗಿ ನೋಡಿದ್ದಕ್ಕೇ. ಮುಂಗಡವಾಗಿ Thanks ಅಂದೆ."

"ಹಾಗಾದರೆ ಮುಂಗಡವಾಗಿ ನಿಮಗೊಂದು Thanks"

"ಅಯ್ಯೋ, ಇನ್ನೇನು ಮಾಡಲಿ? ನನ್ನಿಂದೇನು ಆಗಬೇಕು?"

"ಅಭಯ ಕೊಟ್ಟರೆ ಹೇಳುತ್ತೇನೆ."

"ಆಗಲಿ, ದೇವರಿದ್ದಾನೆ."

"ನೀವು ನನ್ನ ಬಹುವಚನದಲ್ಲಿ ಸಂಬೋಧಿಸುವುದನ್ನು ಬಿಡಬೇಕು."

"ವಚನತ್ರಯಗಳಲ್ಲದೆ ನಾಲ್ಕನೇದು ಯಾವುದಿದೆ?"

"ನಾನು ತಮಾಷೆಗಂದದ್ದಲ್ಲ."

"ಆದರೆ ನಗ್ತಾ ಇದ್ದೀರಲ್ಲ?"

"ನಿಮಗೇನು, ಹುಚ್ಚು ನಾನು ಹೋಗ್ತೀನೆ." ಎಂದು ನಿಜವಾಗಿಯೂ ಎದ್ದು ನಿಂತಳು.

"ಬೇಡ. ಸ್ವಲ್ಪ ಇರು, ದಯವಿಟ್ಟು."

"ಮನೇಲಿ ಕಾದಿರುತ್ತಾರೆ. ನಾಳೆ ಬರ್ತೀನಲ್ಲ?"

"ಬರ್ತೀ ತಾನೇ ?"

ಹಲವು ದಿನಗಳಿಂದಲೂ ಆರೈಕೆಯಿಲ್ಲದೆ ಹೊಂಡಬಿದ್ದ ಆತನ ಕಣ್ಣುಗಳ ಆರ್ತತೆಯನ್ನು ನೋಡಿ ಮಾಲತಿಗೆ 'ಅಯ್ಯೋ' ಎಂದನಿಸಿ ಉತ್ತರ ಹೇಳಲಾರದೆ, ತಲೆಯಾಡಿಸಿ ಹೊರಟುಹೋದಳು.

೧೮

ಬುಧವಾರ. ಗುರುವಾರ. ಇಂದಿರಮ್ಮ ದಿನೇದಿನೇ ವಾಸಿಯಾಗುತ್ತ ಬಂದರು. ಆದರೆ ಅವರು ವಾಸಿಯಾದ ಹಾಗೆಲ್ಲ ಮಾಲತಿಗೆ ಚಿಂತೆ ಪ್ರಬಲವಾಗುತ್ತ ಬಂತು. ಅವರು ಪೂರ್ತಿಯಾಗಿ ಗುಣಹೊಂದಿ ಮೊದಲಿನಂತೆ ಎದ್ದು ಮನೆಗೆಲಸ ಮಾಡುವಂತಾದರೆ? ತಾನಾಯಿತು, ತನ್ನ ಮನೆಯಾಯಿತು. ಆಮೇಲೆ 'ಅತ್ತೆ' 'ಅತ್ತೆ' ಎಂತ ಕಟ್ಟಿಕೊಳ್ಳುವ ಮುದ್ದು ಪಂಬಿಯೂ ಇಲ್ಲ, ತಾನು ಅಮರಲೋಕದಿಂದ ಬಂದವಳಂತೆ ತನ್ನನ್ನು ನೋಡುವ ಗೋಪಿನಾಥರಾಯರೂ ಇಲ್ಲ, ತನ್ನ ಮಟ್ಟಿಗೆ. ಇಂದಿರಮ್ಮ ವಾತಪೀಡಿತರಾಗಿ ಹಾಸಿಗೆ ಹಿಡಿದದ್ದು ಆಕೆಗೊಂದು ಮಹದುಪಕಾರವಾಗಿ ಪರಿಣಮಿಸಿತ್ತು. ಅವರ ಕಾಹಿಲೆಯಿಂದ ಆಕೆಯ ಮನೋವೃತ್ತಿಗೆ ಅನುಗುಣವಾದ ಕಸಬು ದೊರೆತಂತಾಗಿತ್ತು. ಹೆತ್ತ ತಾಯಿಯಾಗುವ ಅದೃಷ್ಟವಿರದಿದ್ದರೂ ಕೆಲವು ದಿನಗಳ ಮಟ್ಟಿಗೆ ಸಾಕು ತಾಯಿಯಾಗುವ ಭಾಗ್ಯ ಒದಗಿತ್ತು. ಮಗುವಿಗೇತಕ್ಕೆ, ಇಂದಿರಮ್ಮನಿಗೂ ಗೋಪಿನಾಥರಾಯರಿಗೂ ಸಹ ತಾನಲ್ಲದೆ ಬೇರೆ ದಿಕ್ಕಿರಲಿಲ್ಲವೆಂಬ ಹಿಗ್ಗು ಮಾಲತಿಗೆ. ತನ್ನಿಂದ ಅವರೆಲ್ಲರಿಗೆ ಒಂದು ಅನುಕೂಲವಾಯಿತೆಂಬ ಸಂತೋಷ.

ಇದನ್ನೆಲ್ಲ ನೆನಸುತ್ತಿರುವಾಗ ಒಂದು ವಿಷಯ ಅತಿ ವಿರಳವಾದ್ದೆಂತ ಮಾಲತಿಗೆ ತೋರಿತು. ಗೋಪಿನಾಥಗೆ ಮಿಕ್ಕ ಗಂಡಸರ ದರ್ಪ ಎಳ್ಳಷ್ಟೂ ಇರಲಿಲ್ಲ. ಯಾವುದರಲ್ಲೂ ತನ್ನ ಯಜಮಾನಿಕೆಯನ್ನು ಮುಂತರುತ್ತಿದ್ದಿಲ್ಲ;

ತನ್ನ ಪ್ರಭುತ್ವವನ್ನು ಅಭ್ಯಾಸಿಸುತ್ತಿರಲಿಲ್ಲ. ಮನೆಯೊಳಗೆ ಎಲ್ಲ ಕೆಲಸಕ್ಕೂ ನೆರವಾಗುತ್ತಿದ್ದ. ಮನೆಗೆಲಸ ಗಂಡಸರು ಮಾಡಬಾರದೆಂಬ ತಪ್ಪು ತಿಳುವಳಿಕೆ ಯಿಂದುಂಟಾದ ದುರಹಂಕಾರವಿರಲಿಲ್ಲ. ಕೆಲಸದಲ್ಲೂ ಹೆಣ್ಣುಮಕ್ಕಳ ಹಸ್ತ ಕೌಶಲವಿತ್ತು. ಇದಕ್ಕಿಂತಲೂ ವಿಶೇಷವಾದ ಸಂಗತಿಯೇನೆಂದರೆ, ಆತ ಮಗುವನ್ನೆತ್ತಿಕೊಂಡರೆ ವಿಚಿತ್ರವಾಗಿ ಕಾಣುತ್ತಿದ್ದಿಲ್ಲ. ಇತರ ಗಂಡಸರು ಮಕ್ಕಳನ್ನೆತ್ತಿಕೊಂಡಾಗ, ಅದರಲ್ಲೂ ಎತ್ತಿಕೊಂಡು ರಸ್ತೆಮೇಲೆ ಬಂದಾಗ ಅವರ ಪಾಡು ಶೋಚನೀಯ. ಕಂಡವರ ಮಕ್ಕಳನ್ನು ಕದ್ದು ತಂದವರಂತೆ, ಹೆಂಡಂದಿರ ಕಾಟ ತಡೆಯಲಾರದೆ, ಅಪ್ಪಣೆ ಮೀರಲಾರದೆ, ಹೇಗೋ ಹೊತ್ತುಕೊಂಡು ಹೊರಬಿದ್ದವರಂತೆ, ದೊಡ್ಡ ತಪ್ಪು ಮಾಡಿದವರಂತೆ ನಾಚಿಕೆ, ಕಳವಳ, ಜುಗುಪ್ಸೆ ಎಲ್ಲವೂ ಒಟ್ಟುಗೂಡಿ ಅವರನ್ನು ನೋಡಿದರೆ ಬೇಡವೆನಿಸುತ್ತಿದ್ದುವು. ಸ್ನೇಹಿತರು ಯಾರಾದರೂ ಎದುರು ಸಿಕ್ಕರೆ ಅವರ ಅವಸ್ಥೆ ಹೇಳತೀರದು. ಸಾಧ್ಯವಿದ್ದರೆ ಮಗುವನ್ನು ಜೇಬಿನೊಳಗೆ ತುರುಕಿ ಕೊಳ್ಳುತ್ತಿದ್ದರೋ ಏನೋ! ಎಂದು ತೋರಿತು ಮಾಲತಿಗೆ.

ಬುಧವಾರ ಗೋಪಿನಾಥಗೆ ಕಚೇರಿಯಿಂದ ಬೇಗ ಮನೆಗೆ ಬರುವುದಕ್ಕೆ ಅನುಕೂಲವಾಗಲಿಲ್ಲ. ಬಂದು ಒಂದರ್ಧ ತಾಸಿನೊಳಗಾಗಿ ಮಾಲತಿ ಹೋಗಿ ಬಿಟ್ಟಳು. ಗುರುವಾರ ಎರಡು ಗಂಟೆಯಾಗಬೇಕಾದರೆ ಗೋಪಿನಾಥ ಮನೆಗೆ ಬಂದನು. ಅಂದು ಯಾವ ಕಾರಣದಿಂದಲೋ ಮನೆಯೊಳಗೆ ಕಾಲಿಡುವಾಗ ಪರೀಕ್ಷಾ ಮಂದಿರಕ್ಕೆ ಪ್ರವೇಶಿಸುವ ವಿದ್ಯಾರ್ಥಿಯಂತೆ ಎದೆ ಬಡಿಯುತ್ತಿತ್ತು. ಹಾಲಿನಲ್ಲಿ ಯಾರೂ ಇರಲಿಲ್ಲ. ನಿಶ್ಶಬ್ದ, ನಿರ್ಜನವಾಗಿತ್ತು. ತಾಯಿಯ ಕೋಣೆಗೆ ಹೋದ ಸದ್ದುಮಾಡದೆ. ಅವರಿಗೆ ಅಂದೇ ಮಾಲತಿ Sponge Bath ಮಾಡಿಸಿದ್ದರಿಂದ ಗಾಢನಿದ್ರೆ. ಪಂಬಿಯೂ ಒಂದು ಕಿರಿಗೆಯನ್ನುಟ್ಟು ಮಗ್ಗುಲಿನಲ್ಲಿ ತನ್ನ ಗೊಂಬೆಯನ್ನಿಟ್ಟುಕೊಂಡು ನಿದ್ರಾಪರವಶಳಾಗಿದ್ದಳು ಸೀರೆಯುಡಿಸಿದ್ದು ಮಾಲತಿಯ ಕೆಲಸವಾಗಿರಬೇಕೆಂದು ಊಹಿಸಿದನು. ಅಲ್ಲಿಂದ ಶಯ್ಯಾಗೃಹಕ್ಕೆ ಹೋದನು.

ಕಪಾಟಿನ ಕೆಳಗೆ ಪುಸ್ತಕಗಳ ರಾಶಿಯ ನಡುವೆ ಮಾಲತಿ ಪರಿಷ್ಕಾರ ವಾಗಿ ಕುಳಿತು ತೊಡೆಯ ಮೇಲಿದ್ದ ಒಂದು ಕಾಗದದ ಮೇಲೆ ಏನೋ ಬರೆಯುತ್ತಿದ್ದಳು. ಗೋಪಿನಾಥ ಮೆತ್ತಗೆ ಬಂದುದು ಬಾಗಿಲಿಗೆ

ವಿಮುಖಳಾಗಿದ್ದುದರಿಂದ ಗೊತ್ತಾಗಲಿಲ್ಲ. ಒಂದು ಕ್ಷಣ ಹಾಗೆಯೇ ನಿಂತು " ಮಾಲತಿ!" ಎಂದನು. ಆಕೆ ಜಗ್ಗನೆ ಎದ್ದು,

" ಒಬ್ಬಳಿಗೇ ಬೇಜಾರವಾಗಿ, ಬೇಕಾದ ಪುಸ್ತಕಗಳ ಪಟ್ಟಿ ಮಾಡುತ್ತಾ ಇದ್ದೆ." ಅಂದಳು. ಮಾಲತಿಗೆ ಸ್ವಲ್ಪವೂ ಸಂಕೋಚವಾಗಲಿಲ್ಲ. ಅದುವರೆಗೆ ಆತನ ಮೆಚ್ಚುಗೆಯ ಪುಸ್ತಕಗಳೊಂದಿಗೆ ರಾಸಕ್ರೀಡೆಯಾಡುತ್ತಿದ್ದಾಳೆಗೆ ಆತ ಬೇರೆ, ಆತನ ಪುಸ್ತಕಗಳು ಬೇರೆ ಎಂದನಿಸಲಿಲ್ಲ. ಆತ ಅಷ್ಟು ತ್ವರೆಯಾಗಿ ಥಕ್ಕನೆ ಬಂದುದೂ ಆಶ್ಚರ್ಯವೆನಿಸಲಿಲ್ಲ. ಆ ಕೋಣೆಯಲ್ಲಿ, ಆ ಕಪಾಟಿನಲ್ಲಿ ಅಸಂಖ್ಯಾತ ಪುಟಗಳೆಡೆಯಲ್ಲಿ ಅವಿತಿದ್ದ ವ್ಯಕ್ತಿ ಮೂರ್ತಿವತ್ತಾಗಿ ಜೀವಂತನಾಗಿ ಎದ್ದುಬಂದಂತೆ ಭಾವನೆಯಾಯಿತು.

" ಆಮೇಲೆ ಮಾಡೋಣ, ನಾನು ಬರುತ್ತೇನೆ. ಈಗ ಈ ' ಲಂಚ ' ವನ್ನ ತೆಗೆದಿಡಿ." ಅನ್ನುತ್ತ ಯಥಾಪ್ರಕಾರ ತಂದಿದ್ದ ತಿಂಡಿ ಕಟ್ಟುಗಳನ್ನು ಆಕೆಗೆ ಕೊಟ್ಟನು.

" ನಿಮಗಿನ್ನೂ ಆ ಬಹುವಚನದ ಚಟ ಬಿಡಲಿಲ್ಲ." ಅನ್ನುತ್ತ ಬೊಗಸೆ ಹಿಡಿದಳು. ಒಂದು ಪೊಟ್ಟಣ ಬಿಚ್ಚಿಹೋಗಿ ಚೆಲ್ಲಿ ಬಿಡುವುದರಲ್ಲಿತ್ತು. ಅಷ್ಟರಲ್ಲಿ ಗೋಪಿನಾಥ ತನ್ನ ಕೈಗಳನ್ನು ಮಾಲತಿಯ ಕೈಗಳ ಕೆಳಗೆ ಹಿಡಿದನು. ಕೈಯೊಡ್ಡಿದ ರಭಸಕ್ಕೆ ಆ ಕಟ್ಟಿನ ತಿಂಡಿಯೆಲ್ಲ ಕೆಳಗೆ ಬಿತ್ತು. ಅತಿ ಸಮೀಪವಿದ್ದ ಪರಸ್ಪರ ಮುಖ ನೋಡುತ್ತ ಇಬ್ಬರೂ ನಕ್ಕರು, ತುಸು ನಾಚುತ್ತ. ಗೋಪಿನಾಥನ ಬೈತಲೆಯಲ್ಲೂ ಕೆನ್ನೆಗಳಲ್ಲೂ ಬೆವರುಹನಿಗಳನ್ನು ನೋಡಿ ಮಾಲತಿ,

" ನಡದು ಬಂದಿರಾ ಬಿಸಿಲಲ್ಲಿ ? " ಎಂದು ಕೇಳಿದಳು ತನ್ನ ಕೈಗಳನ್ನು ಹಿಂದೆಳಕೊಳ್ಳುತ್ತ.

" ಹೌದು. ಎಲ್ಲೂ ಜಟಕ ಸಿಗಲಿಲ್ಲ." ಅನ್ನುತ್ತ ಆತ ತನ್ನ ಕರವಸ್ತ್ರದಿಂದ ಮುಖ ಒರಸಿಕೊಂಡನು.

" ಡ್ರೆಸ್ಸು ಬದಲಿಸಿಕೊಳ್ಳಿ. ನಾನು ಕಾಫೀಗೆ ಇಟ್ಟುಬಿಟ್ಟು ಬರ್ತೇನೆ." ಅನ್ನುತ್ತ ಮಾಲತಿ ಕೈಲಿದ್ದ ಕಟ್ಟುಗಳನ್ನು ಅಲ್ಲೇ ಡ್ರೆಸಿಂಗ್ ಮೇಜಿನ ಮೇಲಿರಿಸಿದಳು.

“ ಕಾಫಿಗವಸರವಿಲ್ಲ. ನೀವು–ಅಲ್ಲ, ನೀನಿಲ್ಲೇ ಇರು. ” ಅನ್ನುತ್ತ ಕೋಟು ತೆಗೆದಿಟ್ಟು, ಮಂಚದ ಮೇಲೆ ಮಡಚಿಟ್ಟಿದ್ದ ಪಂಜೆಯನ್ನೂ ಜುಬ್ಬವನ್ನೂ ಟವಲನ್ನೂ ತಗೊಂಡು ಹಾಲಿಗೆ ಹೋದನು. ಒಂದೆರಡು ನಿಮಿಷಗಳಲ್ಲಿ ಶರಾಯಿ, ಶರಟು, ಕಾಲರು ಟಾಯಿಗಳ ಸಮೇತ ಬಂದನು. ಬೂಟ್ಸುಗಳನ್ನು ಹಾಲಿನಲ್ಲೇ ಬಿಟ್ಟು ಬಂದುದನ್ನು ಕಂಡು ಮಾಲತಿ ಮೆಲ್ಲಗೆ ಹೋಗಿ ತಗೊಂಡು ಬಂದಳು. ಅಷ್ಟರಲ್ಲಿ ಗೋಪಿನಾಥ ಅದಕ್ಕಾಗಿಯೇ ಬರುತ್ತಿದ್ದ ವನು ಎದುರು ಸಿಕ್ಕಿದನು.

“ ಛೆ ಛೆ ! ಎಂದಿಗೂ ಬಿಡೆ. ಆದಾಗದು. ” ಅನ್ನುತ್ತ ಆಕೆಯ ಕೈಯಿಂದ ಕಿತ್ತುಕೊಳ್ಳುವುದಕ್ಕೆ ಹೋದನು. ಆದರೆ ಆಕೆ ಬೂಟ್ಸುಗಳನ್ನು ತನ್ನ ಹಿಂದೆ ಹಿಡಿದುಕೊಂಡಳು. ಆತನೂ ಆಕೆಯ ಹಿಂದುಗಡೆ ಸರಿದು ಕೈಚಾಚಿದನು. ಆಗವಳು ಫಕ್ಕನೆ ಬೂಟ್ಸು ಹಿಡಿದಿದ್ದ ಕೈಯನ್ನು ತನ್ನ ತಲೆಮೇಲೆ ನೀಡಿ. ದಳು.

“ ನೀವೀಗ ಸುಮ್ಮನಿರದೇ ಇದ್ರೆ ಈ ಪಾದುಕೆಗಳನ್ನು ತಲೆಮೇಲಿಟ್ಟು ಕೊಳ್ಳುವುದು ಖಂಡಿತ. ” ಎಂದು ಹೆದರಿಸಿದಳು. ಗೋಪಿನಾಥ ಯತ್ನವಿಲ್ಲದೆ ದೂರ ಸರಿದು ನಿಂತ. ಆಕೆ ಬೂಟ್ಸುಗಳನ್ನು ಅವುಗಳ ಸ್ಥಾನಕ್ಕೊಪ್ಪಿಸಿ, “ ನೀರಿಟ್ಟು ಬರುತ್ತೇನೆ, ನೀವು ಮುಖ ತೊಳೆದುಬನ್ನಿ. ” ಎಂದಪ್ಪಣೆಯಿತ್ತು ಅಡುಗೆಮನೆಗೆ ಹೋದಳು.

ಸ್ವಲ್ಪ ಸಮಯದನಂತರ ಶಯ್ಯಾಗೃಹದಲ್ಲಿದ್ದ ಒಂದೇ ಸೋಫದಲ್ಲಿ ಕಿಟಿಕಿಯ ಬಳಿ ಮಾಲತಿ ಕುಳಿತು ಪುಸ್ತಕದ ಕಪಾಟಿನ ಕೆಳಗೆ ನೆಲದ ಮೇಲೆ ಕುಳಿತ ಗೋಪಿನಾಥನು ತನಗಾಗಿ ಪುಸ್ತಕಗಳ ಪಟ್ಟಿಯೊಂದನ್ನು ತಯಾ ರಿಸುವುದನ್ನು ನೋಡುವುದಕ್ಕಾಗಿ ಬಗ್ಗಿದ್ದಳು. ಗೋಪಿನಾಥ ತಾನು ಆರಿಸಿದ ಪುಸ್ತಕಗಳನ್ನು ಒಂದೊಂದಾಗಿ ಮಾಲತಿಗೆ ಕೊಡುತ್ತಿದ್ದ. ಆಕೆ ಕೈನೀಡಿ ತಗೊಂಡು ಅದನ್ನೊಮ್ಮೆ ನೋಡಿ ಅಲ್ಲೇ ಕೆಳಗೊಂದೆಡೆ ಬೇರೆಯಾಗಿಡು ತ್ತಿದ್ದಳು. ಆಕೆ ಪುಸ್ತಕವನ್ನವಲೋಕಿಸುವಾಗ ಆತ ಆಕೆಯ ಮುಖವನ್ನವ ಲೋಕಿಸುತ್ತಿದ್ದ. ಆಕೆ ಪುಟಗಳನ್ನು ತಿರುವುತ್ತ ಅವು ಯಾವ ಬಗೆಯ ರಸ ದೂಟದ ಆಮಂತ್ರಣವಾಗಿರಬಹುದೆಂದು ಕೌತುಕಪಡುತ್ತಿದ್ದರೆ, ಆತ ಆಕೆಯ ಮುಗಳ ರೂಪವನ್ನು ಹಸಿವಿಂದ ಹೀರುತ್ತ ಆಕೆಯ ಅಂತರ್ಯವನ್ನು ತಿಳಿಯುವ ಕಸಿವಿಸಿಯಲ್ಲಿದ್ದನು.

“ ಇಷ್ಟು ಸಾಕು, ಸದ್ಯಕ್ಕೆ. ಷೆಲ್ಲಿಯನ್ನು ಓದಿಹೇಳಿದರಾಗುತ್ತಿತ್ತು.” ಅಂದಳು.

“ ರ್ಯಾಟ್ ಹೋ, ಎಲ್ಲಿದೆ ಪುಸ್ತಕ ? ” ಅನ್ನುತ್ತ ತವಕದಿಂದೆದ್ದನು.

“ ಅಲ್ಲೇ ನಿಮ್ಮ ಬಲಗಡೆ ಇದೆ.”

ಕುಕ್ಕರಿಸಲು ಸರಿಯಾದ ಯಾವ ಸ್ಥಳವೂ ತೋಚದೆ ಮಾಲತಿಯ ಕಾಲು ಬುಡಕ್ಕೆ ಕುಳಿತುಕೊಳ್ಳಬೇಕೆಂದಿದ್ದನು. ಆದರೆ ಮಾಲತಿ ಒಪ್ಪಲಾರಳು ಎಂಬುದರಿಂದ ಆಕೆಯ ಸಮೀಪ ಕಿಟಕಿಯ ದಾರವಂದದ ಮೇಲೆ ಕುಳಿತು ಕಿರುಕುಳದಿಂದ,

“ ಓ ಮಾಲತಿ, ಲಾಲಿಸು ” ಎಂದು ಪುಸ್ತಕವನ್ನು ತೆರೆದನು. ಆಕೆ ಅಷ್ಟೇ ಹರ್ಷಚಿತ್ತಳಾಗಿ ಅತಿ ವಾರಣವಾಗಿ ಕುಳಿತು ಕೈಗಳನ್ನು ಜೋಡಿಸಿ ತೊಡೆಯ ಮೇಲಿಟ್ಟುಕೊಂಡು ಗದ್ದವನ್ನು ತುಸ ಮೇಲಕ್ಕೆತ್ತಿ, ಕತ್ತನ್ನು ಕೊಂಚ ನೀಡಿ, ಲಾಲಿಸುವುದಕ್ಕೆ ಅನುವಾದಳು.

“ ಕಿಟಕಿಯ ಹೊರಗಿಂದ ಒಂದು ಗುಲಾಬಿಹೂ ನಿನ್ನನ್ನೇ ನೋಡುತ್ತಿದೆ, ಆದರದಿಂದ. ತಂದು ಮುಡಿಸಲೇ ”.

“ ಷೆಲ್ಲಿಯೇನದು ? ” ಅನ್ನುತ್ತ ಆಶ್ಚರ್ಯವನ್ನು ನಟಿಸಿದಳು.

“ ಹೋಗಲಿಬಿಡು. ” ಎಂದು ಹಲ್ಲೆಡೆಯಿಂದ ಉಸಿರೆಳೆಯುತ್ತ, “ ಈಗ ಕೇಳು. ಇದು ಷೆಲ್ಲಿ, ” ಎಂದು ಓದಲಾರಂಭಿಸಿದನು. ಸುರುವಿನಲ್ಲಿದ್ದ ಅಳುಕು ಓಡುತ್ತ ಮಾಯವಾಗಿ ಕ್ರಮೇಣ ಮಾಲತಿ ತನ್ನ ಅತಿ ಹತ್ತಿರವಿದ್ದು ಕೇಳುತ್ತಿದ್ದಾಳೆಂಬ ಮನವರಿಕೆಯೂ ದೂರವಾಯಿತು. ಆಕೆಯೇ ತನ್ನ ರಸನೆಯಲ್ಲಿ ಲೀನಳಾಗಿ ಧ್ವನಿಗೂಡಿಸುವಂತೆ ಸ್ಫೂರ್ತಿಯಾಯಿತು. ಕಣ್ಣೀರು ಸುರಿಸಿ ಕಲಿತ ಸಂದೇಶವನ್ನು ಕವನಕಟ್ಟಿ ಹಾಡಿದ ಕವಿಸಾರ್ವಭೌಮನ ರಸಗೀತಗಳನ್ನು ಲೀಲಾಜಾಲವಾಗಿ, ಭಾವಾವಿಷ್ಟನಾಗಿ, ಮುಕ್ತಕಂಠದಿಂದ ಓದಿದನು. ಮಾನವತೆಯ ನಿರ್ದಯತೆಯನ್ನು ಸಹಿಸಲಾರದ, ಸಮಾಜದ ಕ್ಷುದ್ರ ಕಪಟ ಸಂಪ್ರದಾಯಗಳಿಗೆ ಕಟ್ಟುಬೀಳಲಾರದ ವೀರ ಕವಿಪುಂಗವ ಷೆಲ್ಲಿಯ ಯಮಯಾತನೆ ತನ್ನದೇ ಎಂಬಂತೆ ಮೈಮರೆತು ಓದಿದನು.

ಷೆಲ್ಲಿಯನ್ನು ಓದಲು ಅಪೇಕ್ಷಿಸಿದಾಗ ಕವಿಯ ಪರಿಚಯ ಮಾಡಿಕೊಳ್ಳಬೇಕೆಂಬ ಅಭಿಲಾಷೆ ಮಾಲತಿಗೆ ನಿಜವಾಗಿಯೂ ಇರಲಿಲ್ಲ. ಗೋಪಿನಾಥಗೆ

ಓದುವ ಕೆಲಸ ಹಚ್ಚಿ ಒಂದೆಡೆ ಅವನಷ್ಟಕ್ಕೇ ಇರುವಂತೆ ಮಾಡಿದರೆ ಆತನ ಅಗಲವಾದ ಎದೆ, ಬಲಯುತವಾದ ಕೊರಳು, ತೊಲೆತೂಕದಷ್ಟು ಕೂಡ ಕೊಬ್ಬಿಲ್ಲದ ಕಟ್ಟುಕಟ್ಟಾದ ಮೈ, ಜಂತ್ರದಿಂದ ಕೆತ್ತಲ್ಪಟ್ಟಂತಿದ್ದ ಕೈಗಳು ನಸುಗೆದರಿದ ತಲೆ, ಇವನ್ನು ನಿರಾತಂಕವಾಗಿ ನಿಧಾನವಾಗಿ ಕಣ್ತುಂಬ ನೋಡುತ್ತ ಕುಳಿತಿರಬಹುದೆಂಬ ಪ್ರತ್ಯಾಸೆ ಮಾತ್ರವಿತ್ತು. ಇದರೊಂದಿಗೆ ಪ್ರಾಸಂಗಿಕವಾಗಿ ಆತನ ಸ್ವರದ ಸವಿಯನ್ನು ಕೇಳಿದ ಹಾಗೂ ಓದುಗಾರಿಕೆ ಯನ್ನು ತಿಳಿದ ಹಾಗೂ ಹೆಸರಾಂತ ಕವಿತೆಗಳ ಅನುಭವ ಮಾಡಿಕೊಂಡ ಹಾಗೂ ಆಗುವುದೆಂಬ ಲವಲವಿಕೆಯೂ ಹಿನ್ನೆಲೆಯಲ್ಲಿತ್ತು. ಗೋಪಿನಾಥ ನನ್ನು ಕೊಂಚಕಾಲವಾದರೂ ತನ್ನವನೆಂತ ಮಾಡಿಕೊಳ್ಳುವ ಚಪಲವೇ ಪ್ರಧಾನವಾಗಿತ್ತು. ಆದರೆ ಆ ಕೋಣೆಯ ಸ್ನೇಹಪರ ವಾತಾವರಣವೂ ಕಾವ್ಯವಸ್ತುವಿನ ಕಾವ್ಯವಾಚನದ ಆಕರ್ಷಣವೂ ಆಕೆಯ ಮುಕ್ತ ಮನ ಸ್ಥಿತಿಯೂ ಎಲ್ಲವೂ ಒಂದಕೊಂದು ಅನುಗೂಡಿದ್ದರಿಂದ ಸ್ವಲ್ಪ ಸಮಯ ದೊಳಗಾಗಿ ಆಕೆ ಭಾವಪರವಶಳಾದಳು. ಗೋಪಿನಾಥ ಆ ಕೋಣೆಯ ಅರೆ ಬೆಳಕು ಅರೆನೆರಳಿನಲ್ಲಿ ಬೆರೆತು ಅವ್ಯಕ್ತವಾಗಿ ಅದರೊಂದಿಗೆ ತಾನೂ ಹಗುರ ಹಗುರಾಗುತ್ತ ತೇಲಿಹೋದಂತಾಯಿತು. ತನ್ನ ಹೃದಯಗಹ್ವರದ ಜೇನು ಗೂಡಿನೊಳಗೆ ಗೋಪಿನಾಥನ ಮಂಜುಲಸ್ವರವು ರಸಾಮೃತವನ್ನು ಹನಿಹನಿ ಯಾಗಿ ತುಂಬಿಸುತ್ತಿದ್ದಂತೆ ಅತ್ಯಂತ ಸುಖವುಂಟಾಯಿತು. ತನ್ನ ಚೇತನವೇ ಸಮೂಲ ಪರಿವರ್ತನೆ ಹೊಂದಿ ಹೊಸ ರೂಪವನ್ನು ತಾಳಿದಂತೆಯೂ ಬಾಳುವೆ ಯಲ್ಲಿ ನವಮಧು ಜಿನುಗಿದಂತೆಯೂ ಆತ್ಮಕ್ಕೆ ಹೊಸ ಜಾಗೃತಿಯುಂಟಾ ದಂತೆಯೂ ವಿಚಿತ್ರವಾದ ಅಪೂರ್ವಾನುಭವವಾಯಿತು. ಮನೋವಲ್ಲಭ ನೊಂದಿಗೆ ಅತ್ಯುನ್ನತ ಕನಸಿಗೂ ಮೀರಿದ ಯಾವುದೋ ಒಂದು ಧವಳಗಿರಿಯ ಶಿಖರಕ್ಕೆ ಏರಿದಂತಾಗಿ ಸಹಿಸಲಾರದ ಆನಂದದಿಂದ ಉಸಿರು ಬಿಗಿಬಿಗಿದು ಬಂತು. ತತ್ತರಿಸಿ ಒಂದು ಕ್ಷಣ ಕಣ್ಣುಮುಚ್ಚಿದಳು.

ಗೋಪಿನಾಥ ಮುಂದುವರಿದ :

I love Love–though he has wings,
And like light can flow,
But above all other things,

Spirit- I love thee-
Thou art love and life! O come,
Make once more my heart thy home.

ಮಾಲತಿಗೆ ವೇಳೆ ವಿಸ್ತಾರಗಳ ಅರಿವೇ ಇರಲಿಲ್ಲ. ಗೋಪಿನಾಥನ ಸ್ವರ ಅತಿದೂರದಿಂದ ಕೇಳಿಸಿದಂತಾಗಿ ಕಣ್ಣು ತೆರೆದು ನೋಡಿದಳು. ಆತನ ಮುಖ ಹೊಳೆಯುತ್ತಿತ್ತು. ಹಲವು ಪುಟಗಳನ್ನು ಮಗುಚಿ ನಸುನಗುತ್ತ ಓದಿದನು :

" I fear thy kisses gentle maiden,
Thou needst not fear mine,
My Spirit is too deeply laden-
Ever to burden thine.
I fear thy mind, thy tone, thy motion,
Thou needst not fear mine,
Innocent is thy heart's devotion
With which I worship thine. "

ಮಾಲತಿಗೆ ಕೊರಳು ಹಿಸುಕಿದಂತಾಗಿ ತಲೆಬಾಗಿದಳು. ಸಂಸಾರ ಸೆರೆಯಲ್ಲಿ ತನ್ನನ್ನು ಸಿಲುಕಿಸಿದ ಸರಪಣಿ ಕಳಚಿ ಕಾಲುಬುಡಕ್ಕೆ ಬಿದ್ದುದನ್ನು ನೋಡುವಂತೆ ಕುಳಿತಳು, ಗಾಬರಿಪಡುತ್ತ.

" ಸಾಕೇ ? "

" ಇಲ್ಲ. ಮುಂದೋದಿ " ಎಂದಳು ತಲೆಯೆತ್ತದೆ.

ಗೋಪಿನಾಥನ ಎದೆಯೊಳಗೂ ಸಮೀಪಿಸುತ್ತಿದ್ದ ಭಾವನೆಗಳ ಬಿರುಗಾಳಿಯ ಹೂಂಕಾರವೆದ್ದಿತ್ತು. ಮುಂಗಾರು ಮಳೆಯು ಭೋರ್ಗರೆಯುತ್ತ ಬೀಳುವ ಮುನ್ನ ಸುಳಿಗಾಳಿಯು ನೆಲದ ಧೂಳನ್ನೆಬ್ಬಿಸಿ ತರಗೆಲೆಗಳೊಂದಿಗೆ ಬೊಗರೆಯಾಡುತ್ತ ಧಾವಿಸಿದಂತೆ ಗದ್ಗದ ಸ್ವರದಿಂದ ಓದಿದನು :

" Seraph of Heaven, too gentle to be human,
Veiling beneath that radiant form of woman
All that is insupportable in thee,
Of light, and love, and immortality. "
" I never thought before my death to see

Youth's vision thus made perfect Malathi
I love thee."

ಷೆಲ್ಲಿಯ ಪ್ರೇಮಪೂಜ್ಯಳಾದ ಎಮಿಲಿಯ ಸ್ಥಾನದಲ್ಲಿ ತನ್ನ ಹೃದಯದ ರಾಣಿಯಾದ ಮಾಲತಿಯನ್ನಿಟ್ಟು ಓದಿದ್ದು ಆಕೆಗೆ ಹೇಗನಿಸಿತು ಎಂದು ನೋಡಲು ಪುಸ್ತಕವನ್ನು ಮುಚ್ಚಿ ಕಣ್ಣೆತ್ತಿದ್ದನು. ನೋಡಲು ಎದೆಯೊಡೆದಂತಾಗಿ ಜಗ್ಗನೆ ಎದ್ದನು. ಮಾಲತಿ ಮುಖ ತಿರುಗಿಸಿ ಸೋಫದ ಬೆನ್ನಿಗೆ ಒತ್ತಿದ್ದಳು. ಭುಜಗಳೆರಡು ನಡುಗುತ್ತಿದ್ದುವು. ಅಯ್ಯೋ ಎಂದನ್ನುತ್ತ ಸೋಫದ ಮೇಲೆ ಒಂದು ಮೊಣಕಾಲೂರಿ ಆಕೆಯ ರಟ್ಟೆಗಳನ್ನು ಹಿಡಿದು ಮೆತ್ತಗೆ ತಿರುಗಿಸಿದ. ಮೂರ್ಛೆ ಹೋಗಿರಬಹುದೆಂಬ ಭೀತಿಯಿಂದ ಮುಖವನ್ನು ತನ್ನ ಎರಡು ಕೈಗಳಿಂದಲೂ ಹಿಡಿದೆತ್ತಿ, 'ಮಾಲತಿ, ಮಾಲತೀ' ಎಂದನು. ಮಾಲತಿ ಕಣ್ದೆರೆದಳು. ಆಕೆಯ ತೋಯ್ದ ಕಣ್ಣುಗಳಲ್ಲಿ ಆತನ ಆತ್ಮದ ಕರೆಗೆ ಮರುಕೂಗು, ಆತನ ಜೀವದ ಮೊರೆಗೆ ಮರುರೋದನ ಕಂಪಿಸುತ್ತಿತ್ತು. ಬಗ್ಗಿ ಒದ್ದೆ ಹವಳದಂತಿದ್ದ ಆಕೆಯ ತುಟಿಗಳ ಮೇಲೆ ತನ್ನ ಬೆಂದ ತುಟಿಗಳನ್ನಿಟ್ಟು ಒತ್ತಿದನು. ಆಕ್ಷಣ ಪ್ರಜ್ವಲಿಸಿದ ಜ್ವಾಲೆಯಂತೆ ಮಾಲತಿ ನೆಗೆದೆದ್ದು ತೋಳುಗಳನ್ನು ಗೋಪಿನಾಥನ ಕೊರಳುಸುತ್ತ ಎಸೆದು ಬಿಗಿದಪ್ಪಿದಳು. ಮುತ್ತಿಗೆ ಮುತ್ತು, ಆಲಿಂಗನಕ್ಕೆ ಆಲಿಂಗನ ಕೊಟ್ಟಳು.

"ಓ ಮಾಲತಿ, ನನ್ನ ಮಾಲತಿ, ನನ್ನ ಚಿನ್ನ" ಅನ್ನುತ್ತ ಗೋಪಿನಾಥ ಹೃದಯಮಥನದ ನೋವಿನಿಂದ ನೆರಳಿದನು. ಆಕೆಯ ಬಾಹುಲತೆಗಳನ್ನು ತುಸ ಸಡಿಲಿಸಿ ಆಕೆಯ ಹೆಗಲನ್ನು ಹಿಂದೊತ್ತಿ ನೋಡಿದನು, ಅರಳುವ ಹೂವಿನ ಮೇಲೆ ಅರುಣದ ಹನಿಗಳು ರಂಜಿಸುವಂತೆ ಆಕೆಯ ಮುಖ ಕಮಲದ ಮೇಲೆ ಅಳುನಗು ನಲಿಯುತ್ತಿರುವುದನು.

"ಅಯ್ಯೋ, ಗೋಪಿನಾಥ! ನನ್ನ ಸ್ವಾಮಿ!" ಅನ್ನುತ್ತ ಮಾಲತಿ ಅಳುತ್ತ ಮುಖವನ್ನು ಆತನ ಹೆಗಲಮೇಲಿರಿಸಿದಳು. ಆಕೆಯನ್ನು ಬಿಗಿದಪ್ಪಿ ಮುಖವೆಲ್ಲ ಮುದ್ದಿಟ್ಟು ಆಮೇಲೆ ಮೆಲ್ಲಗೆ ಸೋಫದಲ್ಲಿ ಕುಳ್ಳಿರಿಸಿದನು. ತಾನು ಕೆಳಗೆ ಮಂಡೆಯೂರಿ ಆಕೆಯ ಎರಡು ಕೈಗಳನ್ನು ತನ್ನ ವಶದಲ್ಲಿಟ್ಟುಕೊಂಡು, "ಆಗಿಹೋಯಿತಲ್ಲ? ಇನ್ನು ನಮ್ಮ ಮುಂದಿನ ಗತಿಯೇನು?" ಎಂದನು.

ಮಾಲತಿ ನಿರುತ್ತರಳಾದಳು. ಆತನ ತಲೆಯನ್ನು ತನ್ನ ತೊಡೆಯ ಮೇಲೆತ್ತಿ ಕ್ರಾಪಿನ ಇಬ್ಬದಿಗಳನ್ನು ನೇವರಿಸಿದಳು. ಆಕೆಯ ಮುಖದಲ್ಲಿ ಜನ್ಮಸಿದ್ಧಿಯನ್ನು ಪಡೆದ ಪ್ರಶಾಂತತೆಯಿತ್ತು. ಆಸೆ, ಅನುಮಾನ, ಅಳುಕು, ಅಂಜಿಕೆ ಎಲ್ಲ ಅಲ್ಪಭಾವನೆಯೂ ತೊಯ್ದು ತೊಳೆದು ಹೋಗಿ ಪಾವನವಾದ ಪ್ರಸನ್ನತೆ ಮಾತ್ರ ವಿರಾಜಿಸುತ್ತಿತ್ತು.

ಗೋಪಿನಾಥ ಎದ್ದು ನಿಂತು ಬೈತಲೆಯನ್ನು ತಿದ್ದಿಕೊಳ್ಳುತ್ತ,

"ನನ್ನ ಕ್ರಾಪೆಲ್ಲ ಕೆದರಿಬಿಟ್ಟೆ" ಎನುತ್ತ ನಕ್ಕನು.

"ಅಷ್ಟೇ ತಾನೆ? ನೀವು ಕೆದರಿಬಿಟ್ಟದ್ದನ್ನು ತಿದ್ದೋದಕ್ಕೆ ಎರಡು ಕೈ ಸಾಲದು." ಎಂದು ಆವಳು ಎದ್ದು ಹೋಗಿ ಡ್ರೆಸ್ಸಿಂಗ್ ಮೇಜಿನ ಕನ್ನಡಿ ಯೆದುರಿಗೆ ಮುಂದಲೆ ತಿದ್ದಿಕೊಂಡಳು. ಹಣೆಮೇಲಿನ ಕುಂಕುಮ ಮಾಸಿದ್ದನ್ನು ಕಂಡು ತಿರುಗಿ

"ಸ್ವಲ್ಪ ಕನ್ನಡಿ ನೋಡಿಕೊಳ್ಳಿ" ಎಂದಳು ನಗುತ್ತ.

ಗೋಪಿನಾಥನಿಗೆ ಸಂಶಯವಾಗಿ ಅಂಗೈಯಿಂದ ಹಣೆಯನ್ನೊರಸಿಕೊಂಡನು.

"ಹೋಗಲಿಲ್ಲ" ಎಂದಳು, ಮತ್ತಷ್ಟು ನಗುತ್ತ. ಹತ್ತಿರ ಬಂದು ಆತನ ಕಣ್ಣೊಳಗಿನ ಪುಂಡತನವನ್ನು ನೋಡಿ ಒಂದು ಹೆಜ್ಜೆ ಹಿಮ್ಮೆಟ್ಟಿ,

"ನೀವು ಕೈ ಕಟ್ಟಿಕೊಂಡು ಕಣ್ಮುಚ್ಚಿ ಕೂತರೆ ಅಳಿಸುತ್ತೇನೆ" ಅಂದಳು.

ಗೋಪಿನಾಥ ಹಾಗೆಯೆ ಮಾಡಿದನು. ತನ್ನ ಹೃದಯೇಶನ ಹಣೆಯಿಂದ ಪ್ರಥಮ ಚುಂಬನದ ಗುರುತನ್ನು ಅಳಿಸಿಬಿಟ್ಟು ಮಾಲತಿ ಅಲ್ಲಿಂದ ಅದೃಶ್ಯಳಾದಳು.

## ೧೯

ಕಾಫಿ ಕುಡಿಯುವಾಗ ಗೋಪಿನಾಥ ಮಾಲತಿ ಎದುರೆದುರಾಗಿ ಕುಳಿತು, ಇಂದಿರಮ್ಮ ಇದ್ದ ಕಾರಣ ಒಬ್ಬರನ್ನೊಬ್ಬರು ಕದ್ದು ನೋಡುತ್ತ, ಅಂದಿನ ಅನುಭವದ ಪ್ರತಿವರ್ತನೆಯೇನಿರಬಹುದೆಂದು ಪರಸ್ಪರ ತುಲನೆ ಮಾಡುತ್ತಿದ್ದರು. ಅವರಿಗೆ ಕಾಫಿ ತಿಂಡಿ ಯಾವುದೂ ಬೇಕಾಗಿರಲಿಲ್ಲ. ಒಬ್ಬರ ಬಳಿ ಒಬ್ಬರಿದ್ದರೆ ಸಾಕಿತ್ತು. ತಾವು ಇದುವರೆಗೆ ಬೇರೆಬೇರೆ ಜನ್ಮವೆತ್ತಿ ಬೆಳೆದು ಬೇರೆಬೇರೆ ಸಂಸಾರಕ್ಕೆ ಗಂಟುಬಿದ್ದು ಬಾಳುತ್ತಿದ್ದುದೇ ಒಂದು

ಅರ್ಥವಿಲ್ಲದ ಸೋಜಿಗವಾಗಿತ್ತು. ತಮ್ಮ ಮುಂದೆ ಮೇಜಿನ ಮೇಲಿದ್ದುದನ್ನು ತಿನ್ನುವುದಕ್ಕಿಂತ ಹೆಚ್ಚಿನ ಹಸಿವಿಂದ ಮೇಜಿನ ಎದುರಿರುವವರನ್ನು ನೋಡಿ ಸವಿಯುತ್ತಿದ್ದರು, ಮಾಲತಿಯೂ ಗೋಪಿನಾಥನೂ.

ನಾಲ್ಕೂ ಮುಕ್ಕಾಲು ಗಂಟೆಯಾದ ಮೇಲೆ ಕಚೇರಿಯಿಂದ ಗೋಪಿನಾಥನ ಗುಮಾಸ್ತರು ಬಂದರು. ಗುಮಾಸ್ತರೊಂದಿಗೆ ಇಬ್ಬರು ಕಕ್ಷಿಗಾರರೂ ಬಂದರು. ಹೀಗಾಗಿ ಮಾಲತಿ ತನ್ನ ಮನೆಗೆ ಹಿಂತಿರುಗಿ ಹೋಗುವಾಗ ಗೋಪಿನಾಥ ಆಫೀಸಿನಲ್ಲೇ ಇದ್ದನು.

"ಏನು ಸಂಜೀವರಾಯರೇ, ಅಪರೂಪ ಬಂದು ಬಿಟ್ರಲ್ಲ ?"

"ಅದೊಂದು ಜತೆ ಪಕಾಲ್ತಿದೆ ನೋಡಿ. ಅದರ ತಾರೀಕು ಯಾವಾಗಾಂತ ತಿಳಿಯಬೇಕಾಗಿದೆ."

"ಅಷ್ಟೇ ಏನ್ರಿ ? ನಿಮ್ಮನ್ನೋಡಿದರೆ ಏನೋ ವಿಶೇಷವಿದ್ದ ಹಾಗಿದೆಯಲ್ಲ?"

"ಏನಿಲ್ಲ, ಪಾಪ ! ಆ ಹೆಗ್ಗಡೇರ ಮೇಲೆ D. O. I. ಕೇಸಾಗಿತ್ತಲ್ಲ, ಮುಡಿಗ ಮೂವತ್ತು ರೂಪಾಯಿಯಂತೆ ಮಾರಿದ್ದು? ಆ ಕೇಸು ಬಿಟ್ಟು ಹೋಯ್ತು. ಅದೇ ಇವರ ಮಾತೀಲಿ ಅಷ್ಟು ವಿನಯ, ಅಷ್ಟು ದಾಕ್ಷಿಣ್ಯ" ಅಂದರು ಕೃಷ್ಣಯ್ಯ.

"ತಿಳಿಯಿತು. ನಾನಾದರೂ ಒಂದಿಷ್ಟು ಕಾಫಿಕೊಟ್ಟು ಕೇಸು ಗೆದ್ದಿದ್ದಕ್ಕೊಂದು ಹಬ್ಬ ಆಚರಿಸೋಣ." ಅಂದನು ಗೋಪಿನಾಥ. ಒಳಗೆ ಹೋಗಿ ಕಾಫಿ ಮಾಡಲು ಶಿವಯ್ಯಗೆ ಹೇಳಿಬಿಟ್ಟು ಬರುವಾಗ ಸಂಜೀವರಾಯರ ಮುಖ ಮತ್ತಷ್ಟು ಬಾಡಿತ್ತು.

"ಇದೇನ್ರೀ ಇದು ? ತಿಂಡಿ ಇಲ್ಲವೆಂತ್ಲೋ ?"

"ಯಾರಿಗೆ ಬೇಕ್ರೀ ತಿಂಡಿ ? ಈ ಕಾಫಿ ಸಿಗುತ್ತೇಂತ ಧೈರ್ಯವಿದ್ದಿದ್ರೆ ನನ್ನ ನಾಲ್ಕು ಹುಡುಗರನ್ನ ಕಟ್ಟಿಕೊಂಡು ಬರುತ್ತಿದ್ದೆ." ಅಂದರು.

"ನಮ್ಮನೇಗೊಬ್ರು ಸಂನ್ಯಾಸಿ ಬಂದಿದ್ರು ಗೋಪಿ, ಒಂದು ವಾರಕ್ಕೆ ಹಿಂದೆ. ಹೇಳಿದ್ದೇನೋ ?" ಎಂದು ಕೇಳುತ್ತ ಕೃಷ್ಣಯ್ಯ ಕೈಸನ್ನೆಮಾಡಿ ಸಂಜೀವರಾಯರಿಂದ ಬೆಂಕಿ ಪೊಟ್ಟಣ ತಗೊಂಡರು.

"ಇಲ್ಲವಲ್ಲ."

"ಸಂಜೀವರಾಯರ ಪರಿಚಯಸ್ಥರಾಗಿರಬೇಕು; ಗೋಕರ್ಣದವರಂತೆ. ಉಡುಪಿ ಮುಗಿಸಿ ಧರ್ಮಸ್ಥಳಕ್ಕೆ ಹೋಗುವವರು ನಮ್ಮನೇಗೆ ಬಂದಿಳಿದರು. ತುಂಬ ಯೋಗ್ಯರು. ಕಾವಿಬಟ್ಟೆ : ಉಟ್ಟದ್ದು ಹೊದ್ದದ್ದು ಎಲ್ಲವೂ. ಇಂಥಿಂಥ ರುದ್ರಾಕ್ಷಿ ಮಣಿಗಳ ಮಾಲೆಯೊಂದು. ಲಕ್ಷಣವಾಗಿದ್ರು ತಂಬಿಗೆ ತಲೆ ಮಾಡಿ ಕೊಂಡು. ನನ್ನ ಹೆಂಡ್ತಿ ಕೇಳಿದಳು, ದೂರದಿಂದ ಕೈಮುಕ್ಕೊಂಡು : ಆಹಾರ ವೇನು ತರ್ಕೋತೀರೀಂತ. ಹೀಗಂದು ಕೈ ಅಭಯಹಸ್ತವನ್ನು ನೀಡಿ-ತಾಮಸ ಆಹಾರ ವರ್ಜ್ಯ. ಒಂದಿಷ್ಟು ಕೇಸರಬಾತು ಅಥವ ಶೀರ; ಶಾಮಿಗೆ ಪಾಯಸ ಅಥವಾ ಕೀರು; ಯಾವ್ರುದೂ ಆಗಬಹುದೂಂದ್ರು. ರಾತ್ರೆ ಹೊತ್ತು ಮಾತ್ರ ಏನೂ ಬೇಕಾಗಿಲ್ಲಾಂದ್ರು. ಪಾಪ! ಸುಮ್ಮನೆ ಹೇಳ ಬಾರದು. ಇದ್ರೆ ಒಂದಿಷ್ಟು ಹಾಲು, ಬಾದಾಮು ರುಬ್ಬಿ ಹಾಕಿದ್ರೆ ಚೆನ್ನಾ ಗಿತ್ತು. ಬಾದಾಮು ಸಿಗೋದಿಲ್ವೇ, ಪರವಾಯಿಲ್ಲ, ಬರೇ ಹಾಲು ಸಾಕು. ಜತೇಲಿ ಇದ್ದೇ ಇದೆಯಲ್ಲ: ಬಾಳೆಹಣ್ಣು-ಕಿತ್ತಳೆಹಣ್ಣು ಅಂದರು."

"ಮರುದಿನ ಬೆಳಿಗ್ಗೆ ?" ಎಂದು ಸಂಜೀವರಾಯರು ಅತಿ ಕುತೂಹಲ ದಿಂದ ಕೇಳಿದರು ಆ ಸನ್ಯಾಸಿಯ ಸಾಮರ್ಥ್ಯಕ್ಕೆ ಮೆಚ್ಚಿ.

"ಬೆಳಿಗ್ಗೆ ಯಾವ ರಗಳೆಯೂ ಇಲ್ಲ. ನಾವ್ಯಾರೂ ಅವರ ಹತ್ರ ಹೋಗದೆ ಇದ್ದುದನ್ನು ನೋಡಿ ಅವರೇ ಕರೆದು ಹೇಳಿದ್ರು : ಬೆಳಿಗ್ಗೆ ಲಗು ಆಹಾರ ವಾಗಬೇಕು. ಇಡ್ಲಿ, ಚಟ್ನೆ ಬೆಣ್ಣೆ, ಅಥವಾ ತುಪ್ಪದ ದೋಸೆ. ಅದ್ಯಾವ್ರುದೂ ಪ್ರಯಾಸಾಂತಿದ್ರೆ ಒಂದಿಷ್ಟು ಅವಲಕ್ಕಿ ಮೊಸ್ರು ಕೊಟ್ರೂ ತಿಂತೇನೆ ಅಂದ್ರು. ನನ್ನ ಹೆಂಡ್ತಿ ಮೋರೆ ಕಪ್ಪಾದ್ದನ್ನು ನೋಡಿಯೋ ಏನೋ, ಕನಿಕರದಿಂದ, ಮನೇಲೇ ಮಾಡಬೇಕೂಂತಿಲ್ಲ, ಹೊಟೇಲಿನಿಂದ ತರಿಸಿಕೊಟ್ರೂ ಆಗಬಹುದು ಅಂದ್ರು."

"ಸರಳ ಸ್ವಭಾವದವರು ಎಲ್ಲರೂ ಹಾಗೇನೇ. ಒಳಗೊಂದು ಹೊರ ಗೊಂದು ಇಲ್ಲ." ಅನ್ನುತ್ತ ಸಂಜೀವರಾಯರು ವ್ಯಾಖ್ಯಾನ ಮಾಡಿದರು.

"ಎಷ್ಟು ದಿನ ಅವರ ಪಾದಪೂಜೆ ಮಾಡಿದೆಯೋ ?" ಎಂಬ ಗೋಪಿ ನಾಥನ ಪ್ರಶ್ನೆಗೆ,

"ಮೂರೇ ದಿನ. ಮೂರೇ ದಿನ. ಅವರು ಹೊರಟುಹೋಗೋ ದಿನ ಅವಳನ್ನು ಕರೆದು ಮಹಾನುಭಾವರು ಇನ್ನಿರೋದಿಲ್ಲ, ಏನಾದ್ರೂ ವರ ಬೇಡಿಕೋ ಅಂದೆ. ಆಗ ಬಂದ ಕೋಪ ಇನ್ನೂ ನನ್ನ ಮೇಲೆ ತೆಗೀತಾ ಇದ್ದಾಳೆ." ಅಂದರು ಕೃಷ್ಣಯ್ಯ.

ಆಗ ಸಂಜೀವರಾಯರು ಆ ಪುಸ್ತಕಗಳ ಕಪಾಟುಗಳನ್ನು ನೋಡು ತ್ತಿದ್ದವರು ಫಕ್ಕನೆ, "ಗೋಪಿನಾಥರಾಯರೆ, ನಿಮ್ಮದೊಂದು ಪುಸ್ತಕ ಸಂಗ್ರಹವಿದೆಯೆಂದು ಕೇಳಿದೆ, ಎಲ್ಲಿದೆ ನೋಡೋಣ. ನೀವು ಮಾತು ಮಾತಿಗೂ ಮಾರುದ್ದ ಶಬ್ದಗಳನ್ನು ಚೆಲ್ಲಾಡುತ್ತೀರಲ್ಲಾ, ಅದೆಲ್ಲ ನಿಮ್ಮ ಸರಕೆ, ಅಥವಾ ಕದ್ದ ಮಾಲೇ ಪರೀಕ್ಷೆ ಮಾಡಬೇಕು. ಇತ್ತೀಚೆಗೆ ಹೊರ ಬಿದ್ದ ಬಿಸಿಬಿಸಿ ಬರಹಗಳು ನಾಲ್ಕನ್ನ ಕೊಡಿ ನೋಡೋಣ. ಇವತ್ತೇ ಮುಗಿಸಿಬಿಡ್ತೇನೆ" ಅಂದರು.

"ಹೂಂ ಅನ್ನೋ ಗೋಪಿ, ಹೂಂ ಅನ್ನು. ಇನ್ನೊಂದು ಗಳಿಗೆಯಲ್ಲಿ ಪುಸ್ತಕ ಎರವು ಕೇಳಿದ್ದು ಮರೆತೇ ಹೋಗುತ್ತೆ. ಇವರೇ ಆ ಪುಸ್ತಕ ಬಿಟ್ಟು ಬೇರೆ ಓದೋವ್ರು? ಇವರು ಕಲ್ತೋರು?" ಅಂತ ಕೃಷ್ಣಯ್ಯ ಸಲಹೆ ಕೊಟ್ಟರು

"ಗೋಪಿನಾಥರಾಯರೆ, ಈ ಕೃಷ್ಣಯ್ಯಗೆ ನನ್ನ ನೋಡಿದರೆ ಹೊಟ್ಟೆ ಕಿಚ್ಚು. ಅವರ ಮಾತು ಕಿವಿಗೆ ಹಾಕ್ಕೋಬೇಡಿ" ಅಂದರು ಸಂಜೀವ ರಾಯರು.

"ಎರೇಹುಳ ಗೊತ್ತೇ ಗೋಪಿನಾಥ? ಒಂದು ಎರೇಹುಳಕ್ಕೆ ಮಳೆಗಾಲ ದಲ್ಲಿ ಮದುವೆಮಾಡಿಕೊಳ್ಳೋಣಾಂತ ಆಸೆ ಹುಟ್ಟಿತು. ಹೆಣ್ಣು ಹುಡುಕಿ ಕೊಂಡು ಎಲ್ಲಿಗೆ ಹೋಗೋದು? ಮಹಾಶೇಷನ ಮಗಳನ್ನೇ ಕೇಳೋಣ, ಯಾಕಾಗಬಾರದು? ಅವನಿಗೂ ಹೆಡೆಯಿದೆ, ನನಗೂ ಇದೆ, ಅಂತಂದು ಕೊಂಡು ಹೋಗಿ ಕೇಳಿತಂತೆ. ಆ ಮಹಾರಾಯ ಹೂಂ ಅಂದ. ಆದರೆ ಸದ್ಯ ಬೇಡ, ಬೇಸಿಗೆ ಬರಲಿ ಅಂದ. ಅವನಿಗೆ ಗೊತ್ತು, ಮಳೆಗಾಲ ದಾಟಿ ತೂಂದ್ರೆ ಈ ಕ್ರಿಮೀದು ಹುಟ್ಟೇ ಅಡಗುತ್ತೆ ಅಂತ."

"ಯಾವುದೋ ಪುರಾಣದಲ್ಲಿದೆ ಈ ಕತೆ. ಈಗೇನ್ರೀ, ಕ್ಲಬ್ಬಿಗೆ ಹೋಗೋ ಣವೇ? ನೀವು ಹೊರಡೋದರಲ್ಲೇ ಇಲ್ಲವಲ್ಲ?" ಅನ್ನುತ್ತ ಸಂಜೀವ ರಾಯರು ಎದ್ದರು. ಗೋಪಿನಾಥ ಒಳಗೆ ಹೋಗಿ ಕಾಫಿ ತಂದುಕೊಟ್ಟು ಏನೇನೋ ಕುಂಟು ನೆಪ ಹೇಳಿ ತಾನು ಬರುವುದಿಲ್ಲವೆಂತ ಸಮಾಧಾನಮಾಡಿ ಅವರಿಬ್ಬರನ್ನು ಕಳುಹಿಸಿಕೊಟ್ಟನು. ಆತನಿಗೆ ಆ ಗಳಿಗೆಯಲ್ಲಿ ತನ್ನಷ್ಟಕ್ಕೇ ಇರಬೇಕೆಂಬಾಸೆ. ಸ್ವಲ್ಪ ಸಮಯಕ್ಕೆ ಮುಂಚೆ ಮಾಲತಿಯಿಂದ ದೊರೆತ

ಅಪ್ಯತಾನುಭವದ ನೆನಹು ಹಿಂದಿನ ರಾತ್ರಿಯ ಮಳೆ ಮರುದಿನ ಮುಂಜಾನೆ ಎಲೆಗಳ ಸಂದುಗಳಿಂದ ತಟತಟ ಜೊಟ್ಟುವಂತೆ ಆತನ ಮನಸ್ಸು ಕಲಕಿ ಸುತ್ತಿತ್ತು.

ಪೆಲ್ಲಿಯನ್ನು ಓದಿ ಹೇಳುವ ನಿಮಿತ್ತದಿಂದ ತನ್ನೆದೆಯ ಹೊರೆಯನ್ನು ಆಕೆಯ ಎದೆಯುರಿಗೆ ಸುರಿದು ಜ್ವಾಲೆಯೆಬ್ಬಿಸಿದ್ದು, ಆಕೆ ಹುಚ್ಚು ಹಾವಿನಂತೆ ತನ್ನ ಕೊರಳನ್ನು ಸುತ್ತಿಕೊಂಡದ್ದು, ಮಗುವಿನಂತೆ ಅಸಹಾಯಕಳಾಗಿ ಅತ್ತದ್ದು, ಆಕೆಯ ಚೆಂದುಟಿಗಳನ್ನು ಹೀರಿದ್ದು, ಆಕೆ ತನ್ನ ಸರ್ವಸ್ವವನ್ನೂ ತನಗರ್ಪಿಸಿದ್ದು, ಪ್ರತಿಯೊಂದು ರಸನಿಮಿಷವೂ ಆತನ ಸ್ಮೃತಿಪಟದ ಮೇಲೆ ಬಂದು ಕುಣಿದು ಗಮನವನ್ನು ಸೂರೆಗೊಂಡಿತು. ತನಗೆ ಆಕೆಯ ಮೇಲಿದ್ದ ಪ್ರೇಮ ಆಕೆಗೆ ತನ್ನ ಮೇಲಿರಬಹುದೋ ಎಂಬ ಚಿಂತೆ ಒಂದು ಕ್ಷಣಕ್ಕಾದರೂ ಹಿಂತಿರುಗಿ ಬರಲಿಲ್ಲ. ತಮ್ಮಿಬ್ಬರ ಸಮ್ಮಿಲನ ಆಗಲೇ ಬೇಕಿತ್ತು ಈ ಆತ್ಮೀಯತೆ ಈ ಜನ್ಮದ ಸಂಪರ್ಕದಿಂದುಂಟಾದುದಲ್ಲ. ಅತಿ ಹಿಂದಿನ ನಂಟುತನವಿರಬೇಕು; ಜನ್ಮಜನ್ಮಾಂತರಗಳ ಸ್ನೇಹವಾಗಿರಬೇಕು. ನೂಲತಿ ತನ್ನಾಣೆಯಾಗಿ ಅಸಂಖ್ಯಾತ ಉದಯಾಸ್ತಗಳನ್ನು ಅನುಭವಿಸಿರಬೇಕು. ತಾವಿಬ್ಬರು ಪರಸ್ಪರ ಪರಿಪೂರಕರಾಗಿದ್ದಿರಬೇಕು, ಒಬ್ಬರ ಪ್ರತಿಬಿಂಬ ಇನ್ನೊಬ್ಬರಾಗಿ. ಈ ಯುಗಪರಂಪರೆಯ ಆತ್ಮಬಂಧುತ್ವವನ್ನು ಅಲ್ಲಗಳೆಯಲು ಯಾರಿಗೆ ತಾನೇ ಸಾಧ್ಯ? ವಿಧಿಸಂಕಲ್ಪವೇ ಹಾಗಿರಲು ಮನುಷ್ಯಪ್ರಯತ್ನವೆಲ್ಲಿ ಬಂತು? ತಮ್ಮಿಬ್ಬರನ್ನೂ ನಲ್ಮೆಯ ನಡುಕಡಲಿಗೆ ಕೊಚ್ಚಿಕೊಂಡು ಹೋದಂಥ ಜೀವಪ್ರವಾಹದೆದುರಿಗೆ ಮಾನವ ನೀತಿನಿಯಮಗಳೆಲ್ಲಿ?

ಈ ಕನಸಿನ ಮೆರವಣಿಗೆಯಲ್ಲಿ ಗೋಪಿನಾಥ ಸಾಗುತ್ತಿರುವಾಗ ಪಂಬಿ ಬಂದು,

"ನಾನು ಅತ್ತೆ, ಚೀಯೆ ಉಚ್ಚು" ಅನ್ನುತ್ತ ತನ್ನ ಕಿರಿಗೆಯನ್ನು ಮುದ್ದೆ ಮಾಡಿ ತಂದುಕೊಟ್ಟಳು. ಸೀರೆ ಉಡಿಸಿಕೊಂಡು ಹಾಲಿನ ಹೊಸಲು ದಾಟುವಷ್ಟರಲ್ಲಿ ಅದು ಬಿಚ್ಚಿಹೋಯಿತು. ಬಿಚ್ಚಿಹೋದದ್ದನ್ನು ಒಂದು ಗಂಟು ಮಾಡಿ ಸೊಂಟದಮೇಲೆತ್ತಿ ಹಿಡಕೊಂಡು ತಿರುಗಿ ಬಂದಳು. ಆದರೆ ಎರಡನೇ ಸಾರೆ ಉಡಿಸಿದ್ದು ಸರಿಯಾಗಲಿಲ್ಲ. 'ಅತ್ತೆ' ಉಡಿಸಿದಹಾಗಾಗಲಿಲ್ಲವೆಂದಳು.

"ಅತ್ತೇ ಹುಚ್ಚು ನಿನಗೂ ಹಿಡಿದಿದೆಯೋ ? ಸರಿ, ಅಮ್ಮನೇನು ಮತ್ತೆ ? ಅವಳೂ ಅಷ್ಟೆ" ಅನ್ನುತ್ತ ಹೇಗೋ ಉಡಿಸಿ ಕಳುಹಿಸಿದನು.

ಅತ್ತ ಮಾಲತಿಗೆ ತಾನು ಮನೆಬಿಟ್ಟು ಬಹಳ ದಿನಗಳಾದಂತಾಗಿ ಮನೆಯನ್ನೂ ಮನೆಮಂದಿಯನ್ನೂ ಜ್ಞಾಪಿಸಿಕೊಳ್ಳುತ್ತ ಹಿಂತಿರುಗಿ ಬಂದಳು. ಪುಣ್ಯಕ್ಷೇತ್ರವಲ್ಲಿ ತೀರ್ಥಸ್ನಾನ ಮಾಡಿಬಂದವಳಂತೆ ಆಕೆಯ ದೇಹವೂ ಆತ್ಮವೂ ನಿರ್ಮಲವಾಗಿ ಹಗುರಾಗಿದ್ದುವು. ಸಂಶಯ, ಭಯ, ಪಶ್ಚಾತ್ತಾಪ ಯಾವ ಕಳವಳವೂ ಇರಲಿಲ್ಲ. ಮನಸ್ಸು ಶಾಂತವಾಗಿತ್ತು, ಕಾರುಣ್ಯಮಯವಾಗಿತ್ತು. ಬದುಕಿನಲ್ಲಿ ಹೊಸ ಆಸಕ್ತಿ ಹೃದಯಸ್ಥವಾಗಿತ್ತು. ಹೊಸ ಬೆಳಕೊಂದು ಕೈತೋರಿಸಿ ಕರೆಯುವಂತಿತ್ತು, ಯಾವುದೋ ಅತಿಮಾನುಷ ಪ್ರಪಂಚಕ್ಕೆ. ಕಂಡಷ್ಟು ದೂರ, ಹೋದಷ್ಟು ಮುಂದೆ ಕಾಣುತ್ತಿತ್ತು, ಹೊಸ ಹಾದಿ: ಏರುತ್ತ ಹತ್ತುತ್ತ ಶಿಖರದಿಂದ ಶಿಖರಕ್ಕೆ. ಗಂಡನನ್ನು ವಂಚಿಸಿದೆ, ಅತ್ತೆಗೆ ದ್ರೋಹ ಮಾಡಿದೆ, ಮಂಗಳಸೂತ್ರವನ್ನು ಅಪವಿತ್ರಗೊಳಿಸಿದೆ. ಮನೆಗೆ ಅಪಕೀರ್ತಿಯನ್ನು ತಂದೆ ಎಂಬ ಯಾವ ಆತ್ಮನಿಂದೆಯೂ ಇರಲಿಲ್ಲ. ಮನೆಮಂದಿಯ ಮೇಲಿದ್ದ ಪ್ರೀತಿ-ವಿಶ್ವಾಸಗಳು ಕಡಿಮೆಯಾಗುವ ಬದಲು ಮುಂಚಿನಗಿಂತ ಇಮ್ಮಡಿಯಾಗಿತ್ತು.

ಆದರೆ ಅವರೆಲ್ಲರಲ್ಲೂ ಒಂದು ಅಪರಿಚಿತ ವ್ಯತ್ಯಾಸ, ನವೀನತೆ ಕಂಡು ಬಂತು. ಅಷ್ಟು ಬದಲಾಗಿದ್ದಳು ಮಾಲತಿ, ಆ ಪ್ರೇಮಸಂಸ್ಕಾರದಿಂದ. ಅಂದಿನ ವರೆಗೆ ಮನೆಯಲ್ಲಿ ಕಲೆತು ಸೇರಿಹೋಗಿದ್ದವಳಿಗೆ ಅಂದು ತಾನು ಬೇರೆ, ಮನೆಮಂದಿ ಬೇರೆ ಎಂದನಿಸಿತು ಆಕೆಯ ಮನೋವೃತ್ತಿಯಲ್ಲಿ ನಿರ್ಲಿಪ್ತತೆ ಮೂಡಿಬಂದಿತ್ತು. ತನ್ನನ್ನು ತಾನೇ ಅತಿ ಎತ್ತರದಿಂದ ಅವಲೋಕಿಸುವಂತೆ ಭಾಸವಾಯಿತು. ತಾನಿನ್ನು ಈ ಮನೆಯಲ್ಲೇತಕ್ಕಿರಬೇಕು? ಇರಬೇಕೇಕೆಂತ ಅರಿಕೆ ಮಾಡುವ ಅಧಿಕಾರ ಯಾರಿಗಿದೆ? ನನ್ನ ಆಂತರ್ಯದ ಪರಿಚಯವಿಲ್ಲದ ಗಂಡನಿಗಾಗಲಿ ಅತ್ತೆಗಾಗಲಿ ನನ್ನೊಡನೆ ಯಾವ ಸಂಬಂಧ? ತಾನು ಆಶಿಪಟ್ಟು ಪರಿಶ್ರಮದಿಂದ ಸಜ್ಜುಗೊಳಿಸಿದ ಮನೆ, ಹಾಸುಹೊಕ್ಕಾಗಿ ಬೆಳೆದ ಸುವ್ಯವಸ್ಥೆ, ಮನಃಪೂರ್ತಿಯಾಗಿ ಆದರ ಒಲವಿಂದ ನೋಡುವ ರಾಘವೇಂದ್ರರಾಯರು, ಶಾರದಮ್ಮ ಅಭಿಮಾನ ವಾತ್ಸಲ್ಯದಿಂದ ಗೌರವಿಸುವ ಭೀಮಾಚಾರ್ಯರು, ತಿಮ್ಮಕ್ಕ ಎಲ್ಲರೂ ಎಲ್ಲವೂ ನಿಜವೇ. ಆದರೆ

ನಿತ್ಯ ಬಾಳುವೆಯ ನೆರಳಿಗೂ ನಿಲುವಿಗೆ ನಿಲುಕದ ಜನ್ಮಸಾಫಲ್ಯದ ನೇಸರಿಗೂ ಎಲ್ಲಿಯ ಹೋಲಿಕೆ? ಆ ಪರಿವು, ಆ ಪ್ರಜ್ಞಾನ, ಆ ಪ್ರಪಂಚವೇ ಬೇರೆ. ಅದಕ್ಕೂ ಇದಕ್ಕೂ ಅಜಗಜಾಂತರ.

'ನನ್ನ ತಪ್ಪೆ? ನಾನ್ಯಾವುದಕ್ಕೂ ಒಲ್ಲೆಯೆನ್ನಲಿಲ್ಲ ಅವರಿಗೆ. ನನ್ನ ಪಾಲಿಗೆ ಬಂದ ಯಾವ ಸಂಪತ್ತನ್ನೂ ಮರೆಗೊಳಿಸಲಿಲ್ಲ. ಆದರೆ ಕೊಳ್ಳಲು ಅವರ ಕೈಲಾಗದಿದ್ರೆ? ನಾನೇನು ಮಾಡಲಿ? ಅವರ ಯೋಗ್ಯತೆಯೆ ಅಷ್ಟು! ಮಣ್ಣಿನೊಳಗಿನ ಚಿನ್ನದ ಖನಿ ಕಣ್ಣಿಗೆ ಕಾಣಿಸದಿದ್ರೆ? ಕೈಗೆ ಸಿಗದಿದ್ರೆ? ನನ್ನ ತಪ್ಪೇನು? ಒಂದೇ ಒಂದು ಕ್ಷಣದ ಗೋಪಿನಾಥರಾಯರ ಅಂಗಸ್ಪರ್ಶದಿಂದುಂಟಾಗುವ ರೋಮಾಂಚನ ನನ್ನ ಪತಿಯ ಅತ್ಯುತ್ಕಟ ಆಮೋದದಲ್ಲೂ ಲಭಿಸಲಿಲ್ಲ. ಇದನ್ನು ಯಾರಲ್ಲಿ ಹೇಳಲಿ? ಇದೀಗ ನನಗೆ ಗೊತ್ತಾದ ಮೇಲೆ ಅದಿಲ್ಲದೆ ಹೇಗಿರಲಿ?' ಎಂದು ಹಲುಬಿದಳು ಅಷ್ಟು ದೊಡ್ಡದಾದ ಮನೆಯಲ್ಲಿದ್ದವಳಿಗೆ ಉಸಿರಾಡುವುದು ಕೂಡ ಕಷ್ಟವಾಗಿ ತೋರಿ ಕೋಣೆಯನ್ನು ಬಿಟ್ಟು ಹೊರಗಿನ ಅಂಗಳಕ್ಕೆ ಹೋಗಿ ಅಲ್ಲಿ ಕತ್ತಲಲ್ಲಿ ಒಬ್ಬಳೇ ತಿರುಗಾಡುತ್ತಿದ್ದಳು. ಶಾರದಮ್ಮ ಊಟಕ್ಕೆ ಕರೆಯುವ ತನಕ ಅಲ್ಲೇ ಇದ್ದಳು.

ಮರುದಿನ ಬೆಳಗ್ಗಿನ ತಿಳಿಬೆಳಕಿನಲ್ಲಿ ಮಾಲತಿಗೆ ತನ್ನ ಹಿಂದಿನ ರಾತ್ರಿಯ ಸಂಕ್ಷೋಭೆಯು ಒಂದು ದುಃಸ್ವಪ್ನವಾಗಿ ತೋರಿತು. ಹೊಸ ಪ್ರಯಾಣಕ್ಕೆ ಹೊರಟಂತೆ ಉತ್ಸಾಹದಲ್ಲಿದ್ದಳು. ಗೋಪಿನಾಥನನ್ನು ಸ್ಮರಿಸುತ್ತ 'ನನ್ನನ್ನು ನಿಜವಾಗಿ ಪರಿಪೂರ್ಣವಾಗಿ ಗುರುತಿಸಿದ್ದು ಅವರೊಬ್ಬರೇ. ನನ್ನಲ್ಲಿ ಅತಿ ಸುಂದರವಾಗಿದ್ದನ್ನ, ಅತ್ಯಮೂಲ್ಯವಾದ್ದನ್ನು ಹುಡುಕಿ ತೆಗೆದದ್ದು ಅವರೇ. ಆದ್ದರಿಂದಲೇ ಅವರು ಸಮೀಪವಿದ್ದರೆ ಸಾಕು, ಒಂದು ಉತ್ತೇಜನ, ಒಂದು ಉತ್ಕರ್ಷತೆ. ಅವರು ನೋಡುವುದು ಎಲ್ಲರಂತೆ ಹೊರಗಣ್ಣಿನಿಂದಲ್ಲ; ಕಲಾವಿದರಂತೆ ಒಳಗಣ್ಣಿನಿಂದ. ಗೋಪಿನಾಥರಾಯರು ನನ್ನ ಅಂತರ್ಯವನ್ನು ಬಲ್ಲರು. ಪೆಲ್ಲಿಯನ್ನು ಓದಿದಂತೆ ಓದಬಲ್ಲರು. ಅವರೊಡನೆ ಮಾತನಾಡುತ್ತಿದ್ದರೆ ಜೀವನಯಾತ್ರೆಗೆ ಹತ್ತಾರು ಹೊಸ ದಾರಿಗಳನ್ನು ತೋರಿಸಿ ಕೊಟ್ಟಂತಾಗುತ್ತದೆ' ಅಂತಂದುಕೊಳ್ಳುತ್ತ ಎಂಟುಗಂಟೆಯಾಗುತ್ತಲೇ ಗೋಪಿನಾಥನ ಮನೆಯ ದಾರಿ ಹಿಡಿದಳು.

ಅಂದು ಹೆಚ್ಚಿನ ಕೆಲಸವೇನೂ ಇಲ್ಲದ್ದರಿಂದ ಮಾಲತಿಯ ದಾರಿಯನ್ನೇ ನೋಡುತ್ತ ಒಳಗೆ ಹೊರಗೆ ಲಾಲಿ ಹಾಕುತ್ತಿದ್ದ ಗೋಪಿನಾಥ, ಆಕೆ ಅಂಗಳದ

ಮೆಟ್ಟಿಲುಗಳನ್ನೇರಿ ಬರುವಾಗ ಎದುರಾದನು. ಆತನನ್ನು ನೋಡಿ ನಿಂತು ಸ್ನೇಹ ಭಾವದಿಂದ ನಸುನಗುತ್ತ,

" ಕಕ್ಷಿಗಾರರು ಇನ್ನೂ ಯಾರೂ ಬರಲಿಲ್ಲವೇ ?" ಎಂದು ಕೇಳಿದಳು

ಗೋಪಿನಾಥನನ್ನು ಈ ಗೆಳೆತನದ ಗೆಲವು ಬೆರಗುಮಾಡಿತು. ಆಶ್ಚರ್ಯ ದಿಂದ ಆಕೆಯನ್ನು ನೋಡುತ್ತ, ' ಈಕೆ ನನ್ನ ಕಾಮಿನಿಯಾಗುವ ಬದಲು ಕೆಳದಿಯಾದರೆ ಎಷ್ಟು ಆನಂದ !' ಎಂತ ತನ್ನಷ್ಟಕ್ಕೇ ಯೋಚಿಸಿದನು. 'ನಿನ್ನೆ ನಡದ್ದನ್ನೆಲ್ಲ ತೀರ ಮರೆತು ಬಿಟ್ಟಿರಬಹುದೇ ? ಆಗಲಿ, ಆ ಸಾಹಸದಲ್ಲಿ ನಾನೇತಕ್ಕೆ ಹಿಂದುಳಿಯಬೇಕು ?' ಎಂದು ನಿರ್ಧರಿಸಿ,

" ಇಲ್ಲ. ಸದ್ಯಕ್ಕೆ ನೀವೇ. ಆಫೀಸಿನೊಳಗೆ ಬನ್ನಿ " ಅಂದನು.

" ನೀವೇ ಅಂದಮೇಲೆ ಆಫೀಸಿಗಲ್ಲದೆ ಬೇರೆಲ್ಲಿಗೂ ಬರುವಂತಿಲ್ಲ" ಅನ್ನುತ್ತ ಆಫೀಸಿಗೆ ಹಿಂಬಾಲಿಸಿದಳು.

" ಹೇಗಿದೆ ನಮ್ಮಾಫೀಸು ? ಕಚೇರಿಯ ವಾಸನೆ ಇಲ್ಲೂ ಇದೆಯೆ ?"

" ನಾನು ಮೊದಲೊಂದು ಸಲ ಬಂದಿದ್ದೆ, ಈ ಆಫೀಸಿಗೆ " ಅನ್ನುತ್ತ ಗೋಪಿನಾಥನಿಗೆ ಎದುರಾಗಿ ಒಂದು ಕುರ್ಚಿ ಹಿಡಿದು ಕುಳಿತಳು.

" ಯಾವಾಗ ?"

" ಅದು ನನ್ನ ಗುಟ್ಟು. "

" ಮತ್ಯಾತಕ್ಕೆ ಹೇಳಿದ್ದು ?"

" ಗುಟ್ಟೂಂತ ತಿಳಿಸೋದಕ್ಕೆ "

" ಗುಟ್ಟು ಬಿಡದ ಗಿರಾಕಿಗಳು ಸಾಮಾನ್ಯವಾಗಿ ವಕೀಲರಲ್ಲೂ ಡಾಕ್ಟ ರಲ್ಲೂ ಹೋಗೋದಿಲ್ಲವಲ್ಲ ?"

" ಗುಟ್ಟು ಬಿಡುವ ಹೆಂಗಸರೇ ಇಲ್ಲವಲ್ಲ ಸಾಮಾನ್ಯವಾಗಿ ?"

" ಗುಟ್ಟು ಬಿಡಿಸಬಲ್ಲ ಜಾಣ ಬರುವವರೆಗೆ ಮಾತ್ರ. "

" ಆ ಮೇಲೆ ?"

" ಆ ಮೇಲೆ ಗುಟ್ಟು ಆತನ ಕೈಯೊಳಗೆ "

" ಆತನ ಗುಟ್ಟು ಹೆಣ್ಣಿನ ಕೈಯೊಳಗೆ "

" ಅಲ್ಲ. ಹೆಣ್ಣಿನ ಹುಟ್ಟು ಗಂಡಸಿಗಾಗಿ, ಗಂಡಿನ ಹುಟ್ಟು—

" ಹೆಣ್ಣಿಗಾಗಿ. "

"ಅಲ್ಲ. ಒಬ್ಬನೇ ಒಬ್ಬ ಗೋವಿಂದನಿಗಾಗಿ."

"ಅಂದ್ರೆ? ನನಗರ್ಥವಾಗಲಿಲ್ಲ. ನಮಗೂ ನಮ್ಮ ದೇವರಿಗೂ ಮಧ್ಯೆ ನೀವಿಲ್ಲದೆ ಕಳೀದು ಅಂತಲೇ? ನಿಮ್ಮನ್ನು ಗೆಲ್ಲದ ವಿನಾ ನಮಗೆ ಬಿಡುಗಡೆ ಇಲ್ಲವೆಂತಲೇ?"

"ಹಾಗಲ್ಲ. ಅದು ಸಾಂಪ್ರದಾಯಿಕ ದೃಷ್ಟಿ. ಆದರೆ ನನ್ನ ಮತ ಬೇರೆ. ದೇವರು ಇದ್ದಲ್ಲಿಗೆ ನಾವು ಹೋಗಬೇಕು. ಆದರೆ ನೀವಿದ್ದಲ್ಲಿಗೆ ಅವನೇ ಒರುತ್ತಾನೆ. ಬರುತ್ತಾನಂತೇನು, ಅಲ್ಲೇ ಅವನ ಬಿಡಾರ."

"ನಮ್ಮ ಬಿಡಾರಕ್ಕೆ ಬಂದವನು ನಿಜವಾಗಿ ದೇವರೋ ಅಥವಾ ಗಂಡಸು ವೇಷ ಹಾಕಿದ ದೇವರೋ ಹೇಗೆ ಗೊತ್ತಾಗಬೇಕು?"

"ದೇವರು ಯಾವಾಗಲೂ ಗಂಡಸೇ" ಅನ್ನುತ್ತ ನಕ್ಕನು.

"Thanks," ಅನ್ನುತ್ತ ಎದ್ದಳು.

"ನನ್ನ ಫೀಸು?" ಅಂತ ಕೇಳಿದನು ಕೈನೀಡಿ.

"ಬರೀ ಕೈಲಿ ಬಂದಿದ್ದೇನಲ್ಲ. ಕೆಲಸಗಿತ್ತಿ ಹತ್ರಕೊಟ್ಟು ಕಳುಹಿಸುತ್ತೇನೆ" ಅಂದಳು.

"ತರೋದಕ್ಕೆ ನನ್ನಾಳನ್ನ ಕಳುಹಿಸುತ್ತೇನೆ." ಅನ್ನುತ್ತ ಫಕ್ಕನೆ ಎದ್ದು ಆಕೆಯಿದ್ದಲ್ಲಿಗೆ ಧಾವಿಸಿ ಬಂದನು ಆದರೆ ಅಷ್ಟರಲ್ಲಿ ಮಾಲತಿ ಮಿಂಚಿನ ವೇಗದಿಂದ ಮಾಯವಾದಳು.

ಅನಂತರ ಸ್ನಾನದ ಸಮಯದ ತನಕ ಗೋಪಿನಾಥನಿಗೆ ಬಿಡುವಿರಲಿಲ್ಲ. ಸ್ನಾನಕ್ಕೆಂತ ಹೋಗುವಾಗ ಇಂದಿರಮ್ಮನ ಕೋಣೆಗೆ ಇಣಿಕಿದನು. ಪರಮಾಶ್ಚರ್ಯವಾಯಿತು. ಇಂದಿರಮ್ಮ ಒಂದು ಸೋಫದಲ್ಲಿ ದಿಂಬಿಗೆ ಒರಗಿ ಕುಳಿತಿದ್ದರು. ಕೋಣೆಯ ರೂಪವೇ ಮಾರ್ಪಾಟಾಗಿತ್ತು. ಮಂಚ ಮೊದಲಿದ್ದಲ್ಲಿರಲಿಲ್ಲ. ಕೈಮೇಜು ಬೇರೊಂದೆಡೆಯಲ್ಲಿತ್ತು. ಬೋಗುಣಿ ಅದೃಶ್ಯವಾಗಿತ್ತು. ಕಿಟಕಿಯ ದಾರವಂದವ ಮೇಲೆ ಹೂಕುಂಡದಲ್ಲಿ ಒಂದು ಗೊಂಚಲು ಗುಲಾಬಿ ಹೂಗಳಿದ್ದವು. ಕೋಣೆಯಿಡೀ ಮಡಿಮಡಿಯಾಗಿ ಆಕರ್ಷಕವಾಗಿತ್ತು. ಇಷ್ಟು ರೂಪಾಂತರ ಮಾಡಿದ್ದು ಸಾಲದೆ ಮಾಲತಿ ಹಾಸಿಗೆಯನ್ನು ಬಿಸಿಲಿಗೆ ಹಾಕಿಸಿ ಬೇರೊಂದನ್ನು ತಾನು ಮಂಚದ ಮೇಲೆ ಬಿಡಿಸಿ ಅದಕ್ಕೆ ಹೊದಿಕೆಯನ್ನು ಹಾಸುತ್ತಿದ್ದಳು.

“ ಏನಮ್ಮ ಇದು ? ಕೋಣೆಯ ಗುರ್ತವೇ ಸಿಗೋದಿಲ್ಲ. ನಿನ್ನೆ ನೋಡಿದರೂ ಅಷ್ಟೆ. ಒಂದು ವಾರದಿಂದ ಹಾಸಿಗೆವಾಸ ಮಾಡಿದವಳೂಂತ ಯಾರೂ ಹೇಳುವ ಹಾಗಿಲ್ಲ ” ಎಂದು ಸಂತೋಷದಿಂದ ಕೇಳಿದನು.

“ ಅದೆಲ್ಲ ಈ ಮಾಲತಿ ಸಾಹಸ. ಕಾಹಿಲೆಯುವರ ಕೋಣೇಂತ ಕಾಣಲೇ ಬಾರದಂತೆ. ಎಷ್ಟು ಬೇಡವೆಂದರೂ ಕೇಳೋದಿಲ್ಲ. ” ಅಂದರು

“ ಹೇಳಿದ್ದು ಕೇಳೋ ಜಾತಿಯೇ ಅಲ್ಲಮ್ಮಾ ಈಗಿನ ಹೆಣ್ಣುಮಕ್ಕಳು ” ಎಂದು ತನ್ನ ಕೆಲಸದಲ್ಲಿ ನಿರತಳಾಗಿದ್ದ ಮಾಲತಿಯನ್ನು ಬೇಕೆಂತಲೇ ಕೆಣಕಿದನು. ಆದರೆ ಆಕೆ ಫೀಸು ಕೇಳಿದ್ದಕ್ಕೆ ತಾನಾಡಿದ ಮಾತಿನಿಂದ ಗೋಪಿನಾಥನಿಗೆ ಎಷ್ಟು ಬೇಸರವಾಯಿತೋ ಎಂದು ತನ್ನಷ್ಟಕ್ಕೇ ಕಳವಳಪಡುತ್ತಿದ್ದವಳು ತಿರುಗಿ ಹುಡುಗಾಟಿಕೆಯ ಚಪಲಕ್ಕೆ ಒಳಗಾಗಬಾರದೆಂತ ಸುಮ್ಮಗಿದ್ದಳು. ಗೋಪಿನಾಥ ತಾನಾಡಿದ ಮಾತಿನಿಂದ ಆಕೆಗೆ ಅಸಮಾಧಾನವಾಗಿರಬೇಕೆಂತ ಗ್ರಹಿಸಿ ಹೋಗಿಬಿಟ್ಟನು.

ಊಟ ಮುಗಿಸಿ ಕಚೇರಿಗೆ ಡ್ರೆಸ್ಸು ಮಾಡುತ್ತಿರುವಾಗ ಪಂಬಿ ಕಡು ಕೋಪವನ್ನು ಕಿರೀಟದಂತೆ ಹೊತ್ತುಕೊಂಡು ಬಂದಳು.

“ ಏನು ಪಂಬಿ, ಗಲ್ಲ ಬಾತಿದೆಯಲ್ಲ ಸಿಟ್ಟಿನಿಂದ ?”

“ ಅತ್ತೆ ನನ್ನತ್ತ ತುಯು ಮಾತಾಯದು.”

“ ನಿನ್ನ ಹತ್ರ ತುಳು ಮಾತಾಡಿದ್ರೇ ?”

“ ಹೂಂ.”

“ ಉಂಟೇ ಎಲ್ಲಾದ್ರೂ ! ಏನು ಹೇಳಿದ್ರು ?”

ಅಷ್ಟರಲ್ಲಿ ಮಾಲತಿ ಬಂದಳು.

“ ನನ್ನ ದೂರು ಹೇಳಿದಳೆ ?” ಅಂತ ಕೇಳಿದಳು.

“ ನೀವು ಅವಳ ಹತ್ರ ತುಳು ಮಾತಾಡಿದಿರಂತೆ.”

“ ಬಾಂಬು ತುಯು ಮಾತಾತಾಯಾ ಪಪ್ಪ ?” ಅಂತ ತಲೆಯಾಡಿಸುತ್ತ ಮಾಲತಿಯನ್ನು ಕೊಲತಿಯೆಂಬ ತಿರಸ್ಕಾರದಿಂದ ನೋಡುತ್ತ ಕೇಳಿದಳು ಪಂಬಿ.

“ ಇಲ್ಲಪ್ಪ. ಬ್ರಾಹ್ಮಣರು ತುಳು ಮಾತಾಡೋದಿಲ್ಲ. ಶೂದ್ರರು ಮಾತ್ರ.”

"ಉಡುಪೀಲಿದ್ದಾರಲ್ಲ ತುಯು ಮಾತಾಡೋ ಬಾಂಬು ?" ಅಂದಳು ಮಾಲತಿ.

"ಚುಯ್ಯೆ"

"ಸುಳ್ಳೆ ? ಅಲ್ಲಪ್ಪ. ಕೇಳು ನಿನ್ನ ಪಪ್ಪನ ಹತ್ರ. ಅವರಿಗೆ ಗೊತ್ತಿಲ್ಲದ ಸಂಗತಿಯಿಲ್ಲ." ಅಂದಳು ಆತನ ಮೇಲೆ ಕಟಾಕ್ಷವನ್ನು ಎಸೆದು. ಗೋಪಿನಾಥ ಗಣ್ಯ ಗೃಹಸ್ಥನಂತೆ ಡ್ರೆಸ್ಸು ಮಾಡಿದ್ದರೂ ಒಳಗೆ ಶಾಲೆ ತಪ್ಪಿಸುವ ವಿದ್ಯಾರ್ಥಿಯಂತಿದ್ದ. ತಾಯಿ ಕರೆದು 'ಮೈ ಚೆನ್ನಾಗಿಲ್ಲದೆ ಇದ್ರೆ ಹೋಗಬೇಡಪ್ಪ" ಅಂತ ಬೆನ್ನುತಟ್ಟಿದ್ರೆ ಕಚೇರಿಗೆ ಹೋಗದೆ ಕೂತುಬಿಡುವುದರಲ್ಲಿದ್ದ.

"ಇವಳ ಹತ್ರ ತುಳು ಮಾತನಾಡುವ ಪ್ರಸಂಗವೇನು ಬಂತು ?"

"ಕೆಲಸಗಿತ್ತಿ ಎಮ್ಮೆಗೆ ಸ್ನಾನ ಮಾಡಿಸುತ್ತಿದ್ದಳು. ಇವಳಲ್ಲಿಗೆ ಹೋಗಿ ತುಳು ಕೊಚ್ಚತಾಯಿದ್ದಳು. ನಾನು ಹೋಗಿ ಎತ್ತಿಕೊಂಡು ಬರುವಾಗ ತುಳು ಮಾತಾಡಿಬಿಟ್ಟೆ. ತಕ್ಷಣ ನನ್ನ ಕೈಯಿಂದ ಜಾರಿ ಬಿಟ್ಟು ಇಲ್ಲಿ ನಿಮ್ಮ ಹತ್ರ ಓಡಿ ಬಂದಳು."

"ಅಲ್ಲಾಂದ್ರೆ ! ತಪ್ಪಲ್ವೇ ನಿಮ್ಮದು ? ಶೂದ್ರ ಹತ್ರ ಆವಳು ಸರ್ವಥಾ ಕನ್ನಡ ಮಾತಾಡೋದಿಲ್ಲ. ನಮ್ಮ ಹತ್ರ ತುಳು ಮಾತಾಡೋದಿಲ್ಲ."

"ದೊಡ್ಡ ಮರ್ಜಿ. ಪಂಬಿ, ನನಗೆ ಗೊತ್ತಿರಲಿಲ್ಲ. ಇನ್ನು ತುಳು ಮಾತಾಡೋದಿಲ್ಲ. ಬಾ, ಪಪ್ಪ ಕೋರ್ಟಿಗೆ ಹೋಗಲಿ."

ಪಂಬಿ ಎರಡು ಮನಸ್ಸಿನ ನಡುವೆ ನೇಲುತ್ತಿರುವದನ್ನು ನೋಡಿ ಗೋಪಿನಾಥ

"ಹೋಗಮ್ಮ ಹೋಗು. ಅತ್ತೆ ಬಾ ಅಂತಾಳೆ. ನಿನಗಿರೋ ಪುಣ್ಯ ನನಗಿಲ್ಲ. ಹೋಗು" ಅನ್ನುತ್ತ ಮಗಳನ್ನು ಎತ್ತಿ ಚುಂಬಿಸಿದನು.

"ಏನು ಹುಚ್ಚು ನಿಮಗೆ ! ಮಗುವಿನ ಮುಂದೆ !" ಎಂದು ಇಂಗ್ಲಿಷಿನಲ್ಲಿ ಎಚ್ಚರ ಹೇಳಿ ಪಂಬಿಯನ್ನು ತನ್ನ ಕೈಗೆ ತಗೊಂಡಳು.

"ಪಂಬೀನ ಅಮ್ಮನ ಹತ್ರ ಕೊಟ್ಟು ಬಾ. ನಾನಿಲ್ಲೇ ಇರ್ತೇನೆ" ಅಂದ ಇಂಗ್ಲಿಷಿನಲ್ಲೆ. ಹೇಳುವಾಗ ತನ್ನಪೇಕ್ಷೆಯಂತೆ ಮಾಲತಿ ಬಂದಾಳೆಂಬ ಭರವಸೆಯಿರಲಿಲ್ಲ. ಆದರೆ ಆಕೆ ಹೋಗುವಾಗ ನಡೆದ ರೀತಿಯಲ್ಲಿ ಹಿಂತಿರುಗಿ ಬರುವಂತಿತ್ತು. ಆತನ ಊಹೆ ತಪ್ಪಲ್ಲ. ಮಾಲತಿ ಮರಳಿ ಬಂದಳು. ತ್ವರೆಯಿಂದ

ಬಂದರೆ ತುಂಬಿತುಳುಕುತ್ತಿದ್ದ ಲಾಲಿತ್ಯ ಚೆಲ್ಲಿಹೋಗುವವೆಂಬ ಭಯದಿಂದ ಮುಂದಗಮನೆ ಹತ್ತಿರ ಬಂದು ನಿಂತಳು.

"ಬಂದೆನಲ್ಲ, ಯಾತಕ್ಕೆ ?"

"ಸುಮ್ಮಗೆ. ಹೇಳಿಬಿಟ್ಟು ಹೋಗೋಣಾಂತ"

ಆ ಏಟಿಗೆ ಇಬ್ಬರಿಗೂ ನಗುಬಂತ . ಗೋಪಿನಾಥ ನೀಡಿದ ಕೈಗೆ ಮಾಲತಿ ಕೈಕೊಟ್ಟಳು. ಆಮೇಲೆ ಒಂದು ಗಳಿಗೆ ಹಿಂತೆಗೆದರೂ ಗೋಪಿನಾಥ ಮೆಲ್ಲ ಮೆಲ್ಲಗೆ ತನ್ನೆಡೆಗೆ ಸೆಳೆದಾಗ ಪ್ರತಿಯತ್ನ ಮಾಡಲಾರದೆ ಹೋದಳು. ಮತ್ತೆ ನಡೆದ ವಿಚಾರ ಆಕೆಯ ಗಮನಕ್ಕೇ ಬರಲಿಲ್ಲ. ಸರ್ವಾಂಗವೂ ನಿರ್ಜೀವವಾಗಿ ಬಿಟ್ಟು ತುಟಿಗಳಲ್ಲಿ ಮಾತ್ರ ಪಂಚಪ್ರಾಣಗಳು ಮಿಡಿಯುತ್ತಿದ್ದುವು.

"ಮಾಲತಿ, ಮುದ್ದು, ನನ್ನೋಡು. ಏನಾದರೂ ಹೇಳು. ನನ್ನ ಹೆಸರೆತ್ತಿ ಕರೆ" ಅನ್ನುತ್ತ ತನ್ನೆದೆಯ ಮೇಲೆ ತಲೆಯಿಟ್ಟು ನಿಶ್ಚೇತಳಾಗಿದ್ದ ಮಾಲತಿಯನ್ನು ಬೇಡಿದನು. ಆಕೆ ತಲೆಯೆತ್ತದೆ

"ಏನು ಹೇಳಲಿ ?" ಎಂದು ಕನವರಿಸಿದಳು.

"ನಮ್ಮ ಮುಂದಿನ ಬದುಕಿನ ಕಥೆ."

"ಇಂದಿನ ಕಥೆ ಸಾಲದೆ ? ನಾಳೆಯ ವಿಚಾರವೇತಕ್ಕೆ ?" ಅನ್ನುತ್ತ ತಲೆಯೆತ್ತಿ ನೋಡಿದಳು

"ಸಾಲದು, ಚಿನ್ನ. ನಾವಿರುವುದೇ ನಾಳಿನ ದಿನದಲ್ಲಿ. ಭವಿಷ್ಯತ್ತೇ ನಮ್ಮ ಬಿಡಾರ."

"ನೀನಿದ್ದಲ್ಲೇ ನನ್ನ ಬಿಡಾರ" ಎಂಬಂತೆ ಉತ್ತರ ಹೇಳುವುದರ ಬದಲು ಆತನನ್ನು ಒಮ್ಮೆ ಚುಂಬಿಸಿ ತಕ್ಕೆಯಿಂದ ಬಿಡಿಸಿಕೊಂಡಳು.

"ಹೋಗಿಬನ್ನಿ ಹೊತ್ತಾಗಲಿಲ್ಲವೇ ?"

"ವಾಪ್ಸು ಬರುವ ವರೆಗೆ ಇರ್ತೀಯಲ್ಲ ?"

ಆತನ ಗಾಬರಿ ನೋಡಿ ನಕ್ಕಳು. 'ಇರ್ತೇನೆ. ಮಾತ್ರ ಬೇಗಬನ್ನಿ' ಅಂದಳು. ಆತ ಹೋಗುವಾಗ ನೆನಪಾಗಿ "ಒಂದು ಸಂಗತಿ ಮರೆತೆ. ಬರುವಾಗ ತಿಂಡಿಗಿಂಡಿಯೇನೂ ತರಬೇಡಿ" ಅಂದಳು.

"ಅದೇನು ? ಮುತ್ತುಗಳ ವೃಷ್ಟಿನ್ನ ಸಾಕೆಂತಲೇ ?" ಎಂದು ಊಹಿಸುತ್ತ ಕೇಳಿದನು

" ಮ ನೇಲೇ ಏನಾದರೂ ಮಾಡಬೇಕೂಂತಿದ್ದೇನೆ. "

" ನೀನೇನು ಕೊಟ್ಟರೂ ಆಗಬಹುದು "

" ಯಾರ ಕೈಲಿ ಕೊಟ್ಟು ಕಳುಹಿಸಿದರೂ—?"

" ಆಗಬಹುದು " ಗೋಪಿನಾಥನಿಗೆ ಅರ್ಥವಾಯಿತು.

" ನಾನಾಗ ಹಾಗೆ ಹೇಳಬಾರದಿತ್ತು. "

" ಮಾಲತಿ. ನಿಮ್ಮ ಕೆಲಸಗಿತ್ತೀನ ನಾನೀವರೆಗೆ ನೋಡಿಲ್ಲ. ಎಷ್ಟು ಕುರೂಪಿಯೇ ಆಗಿರಲಿ. ಆಕೆಹತ್ರ 'ಈ ಮುತ್ತು ನನ್ನ ನಲ್ಲಗೆ ಕೊಟ್ಟು ಬಾ' ಅಂತ ನೀನು ಕಳುಹಿಸಿದರೆ ಕೊಳ್ಳಲು ಸಿದ್ಧನಿದ್ದೇನೆ. ನೀನು ಮಾತ್ರ ಚುಂಬಿಸಿ ಕಳುಹಿಸಬೇಕು. " ಅನ್ನುತ್ತ ನಗುತ್ತಿರುವ ಆಕೆಯ ಗಲ್ಲಗಳನ್ನು ಮುದ್ದಿಸಿ ಹೊರಟುಹೋದನು.

ಗೋಪಿನಾಥ ಕಣ್ಮರೆಯಾದ ಮೇಲೆ ಮಾಲತಿಗೆ ನಿಲ್ಲಲಾರದಷ್ಟು ನಿತ್ರಾಣ ವಾಗಿ ಅಲ್ಲೇ ಸೋಫದಲ್ಲಿ ಬಿದ್ದುಕೊಂಡಳು. ಇದ್ದ ಶಕ್ತಿಯನ್ನೆಲ್ಲ ಗೋಪಿ ನಾಥ ಹೀರಿಬಿಟ್ಟಿದ್ದನು. ಆದರೆ ಅಶಕ್ತತೆಯಲ್ಲಿ ಅಮಲಿನ ನೆಮ್ಮದಿಯಿತ್ತು. ಹಾಗೆಯೇ ಕುಳಿತಲ್ಲಿಯೇ ಅಂತರ್ಧಾನವಾಗುವ ಹಾಗಿದ್ದರೆ ಪರಮಸುಖ ವಿತ್ತು. ಇಂದಿರಮ್ಮಗೆ ಸ್ನಾನ ಮಾಡಿಸಬೇಕು. ಪಂಬಿಗೆ ಸ್ನಾನವಾಗಬೇಕು. ಇಂದಿರಮ್ಮಗೆ ಬಡಿಸಿ ಎಂಜಲುಬಳಿದು ಗೋಮಯ ಹಚ್ಚಬೇಕು. ಪಂಬಿಗೆ ಉಣಿಸಿ ಕೈತೊಳೆಸಬೇಕು. ತನಗೆ ಊಟವಾಗಬೇಕು. ಕಾಫಿ ಮಾಡಬೇಕು. ತಿಂಡಿಮಾಡಬೇಕು. ಕೆಲಸಾವಳಿಗಳು ಕಂಣೆದುರಿಗೆ ಸಾಲುಕಟ್ಟಿನಿಂತಿವೆ. ನಿಜ. ಆದರೆ ಮಾಡಿದರೆ ಸರಿ, ಅವಸರವೇನು ಎಂದನಿಸಿತು. ಯಾವುದರಲ್ಲೂ ಆಸಕ್ತಿಯಿರಲಿಲ್ಲ. ಇಹದ ಗಮನವೆ ಇರಲಿಲ್ಲ, ಮಾಲತಿಗೆ. ಕನಸಿನ ಕೀಲಿ ಕುದುರೆಯನ್ನೇರಿ ಹುಚ್ಚು ಮನಸ್ಸು ಬೀಸಿದಲ್ಲಿಗೆ ತೇಲಿಹೋಗೋಣ ವೆಂದನಿಸಿತು.

ಕಾಲಮೇಲೆ ಕಾಲು ಹಾಕಿ ಪಾದವನ್ನು ಅಲುಗಾಡಿಸಿದಳು. ಎದ್ದು ನಿಂತಳು. ಗೋಪಿನಾಥನ ಮಂಚದ ಮೇಲೆ ಕುಳಿತು ಆಚೆಯೀಚೆ ಎರಡು ಕೈಗಳಿಂದಲೂ ಹಾಸಿಗೆಯನ್ನು ನೇವರಿಸಿದಳು. ಆ ಮೇಲೆ ಕಾಲುಗಳನ್ನು ಮೇಲಿಟ್ಟು ಚಾಚಿ ತಲೆಯನ್ನು ದಿಂಬಿನ ಮೇಲಿಳಿಸಿ ಮಲಗಿದಳು. ಆಕೆಗೆ ಇಪ್ಪತ್ತೈದು ವರ್ಷಗಳ ಹಿಂದೆ ತಾನು ತಾಯಿಯ ಹೊಟ್ಟೆಯೊಳಗಿದ್ದುದು

ನೆನಪಾಯಿತೋ ಏನೋ ಅದೇ ರೀತಿ ತನ್ನನ್ನು ತಾನೇ ತಬ್ಬಿಕೊಂಡಂತೆ ಮುರುಟಿಕೊಂಡಳು. ಹಾಗೆಯೇ ನಿದ್ರೆ ಮಾಡುವುದರಲ್ಲಿದ್ದಿರಬಹುದು. ಆಗ ಪಂಬಿಯ ಕರೆ ಕೇಳಿಸಿತು.

" ಅತ್ತೇ ಮಾಯತಿ ಅತ್ತೇ ಎಯ್ಯಿದ್ದೀ "

ತಟ್ಟನೆ ಎದ್ದು ಕುಳಿತಳು. ಪಂಬಿ ಕೋಣೆಯೊಳಗೆ ಕಾಲಿಟ್ಟು ನಿಂತು ಮೂಗಿನ ಒಂದು ಪಾರ್ಶ್ವಕ್ಕೆ ಬೆರಳಿಟ್ಟುಕೊಂಡಳು.

" ಆಯದು, ಪಪ್ಪನ ಮಂಚದಯಿ ಮನ್ನಿದು ? ಅಪ್ಪ. ಕಯ್ಯಿ ! " ಎಂದಳು.

" ನನ್ನ ಕಳ್ಳಿ ಅಂತಿಯಾ ? ಬಾಯಿಲ್ಲಿ. "

" ಪಪ್ಪಬಯ್ಯಿ ಹೇಯಿಕೊತ್ತೇನೆ " ಅನ್ನುತ ಬೆರಳನ್ನಾಡಿಸಿದಳು.

ಅಯ್ಯೋ ಗ್ರಹಚಾರ ! 'ಪಪ್ಪ' ನ ಹತ್ರ ಹೇಳಿಕೊಟ್ಟರೆ ಪರವಾಯಿಲ್ಲ. 'ದೊಡ್ಡಮ್ಮ' ನ ಹತ್ರ ಹೇಳಿಕೊಟ್ಟರೆ ಮೋಸ. ಹೇಗಾದರೂ ಮಾಡಿ ಪಂಬಿಗೆ ಈ ವಿಷಯ ಮರೆಸಿ ಬಿಡಬೇಕು, ಅದರ ಹತ್ರ ರಾಜಿ ಮಾಡಿಕೊಳ್ಳಬೇಕು. ಎಂದು ತವಕಪಟ್ಟಳು. ಎದ್ದು ಹೋಗಿ ಮಗುವನ್ನೆತ್ತಿಕೊಂಡು ಮುದ್ದಾಡುತ್ತ ಬಚ್ಚಲುಮನೆಗೆ ಸ್ನಾನ ಮಾಡಿಸುವುದಕ್ಕೆ ನಡೆದಳು.

ಮಧ್ಯಾಹ್ನದ ಮೇಲೆ ಎಂದಿನಂತೆ ಕಾಫಿ ತಿಂಡಿಗಾಗಿ ಇಂದಿರಮ್ಮನ ಕೋಣೆಯಲ್ಲಿ ಒಟ್ಟುಸೇರಿದಾಗ ಗೋಪಿನಾಥ ಒಂದು ಸಮಾಚಾರ ತಿಳಿಸಿದನು.

" ಅಮ್ಮ. ನಿನಗೆ ವಸಂತರಾಯರು, ನಾಗರತ್ನಮ್ಮನ ಗಂಡ, ಅವರ ಜ್ಞಾಪಕವಿದೆಯೇನಮ್ಮ ? ಹೋದವರ್ಷ ಹೆಂಡ್ತಿಯ ಬಾಣಂತಿತನಕ್ಕೆ ಬ್ರಾಂಡಿ ಬದಲಿಗೆ ಬೇರೇನಾದರೂ ಇದೆಯೇಂತ ಕೇಳೋದಕ್ಕೆ ಬಂದಿದ್ರು ? ಅವರು ನಿನ್ನೆ ರಾತ್ರಿ ಕ್ಲಬ್ಬಿನ ಉಪ್ಪರಿಗೆಯಿಂದ ಉರುಳಿಬಿದ್ದು ತಲೆ ಒಡ ಕೊಂಡು ಆಸ್ಪತ್ರೇಲಿದ್ದಾರೆ. "

" ಅಯ್ಯೋ, ಏನಾಯಿತಪ್ಪ ! "

" ಕುಡಿಕತನ. ಮತ್ತೇನೂ ಇಲ್ಲ. ಬ್ರಾಂಡಿಬದಲು ಬೇರೇನೂ ಇಲ್ಲ ವೆಂತ ಒಂದು ಬಾಟ್ಲಿ ತಂದರು; ಹೆಂಡ್ತಿಗೇಂತ. ಸ್ವಲ್ಪಸ್ವಲ್ಪವೇ ರುಚಿ ನೋಡೋದಕ್ಕೆ ಆರಂಭ. ಹೆಂಡ್ತೀ ಬಾಣಂತನ ಮುಗಿಯುವಾಗ ದಿನ

ಕ್ಕೊಂದು ಬಾಟ್ಳಿಗಿಟ್ಟಿತ್ತು ಅಭ್ಯಾಸ ನಿನ್ನೆ ಅತಿರೇಕವಾಗಿ ಬಿದ್ದೇಬಿಟ್ರು. ಇಪ್ಪತ್ತು ಮೆಟ್ಟಿಲುಗಳ ಕೆಳಗೆ. ”

“ ಹೇಗಪ್ಪ ಬಿದ್ರು ಪಾಪ !” ಇಂದಿರಮ್ಮಗೆ ತುಂಬ ಪಶ್ಚಾತ್ತಾಪ ವಾಯಿತು.

“ಇಳೀತಾ ಇದ್ದೇನೆ ಎಂಬೋದನ್ನ ತಿಳಿಯದೆ ಹತ್ತುತ್ತಾ ಹೋದರೂಂತ ಕಾಣುತ್ತೆ ” ಎಂದು ಸೂಚಿಸಿದಳು, ಮಾಲತಿ.

“ ಆದ್ರೂ ಹಾಗೇನೇ ” ಅಂದನು ಗೋಪಿನಾಥ.

“ ಎಷ್ಟು ಬೇಕು ಕಾಲು ತಪ್ಪಿ ಬೀಳೋದಕ್ಕೆ ? ಒಂದು ಹೆಜ್ಜೆ ಹೆಚ್ಚು ಅಥವಾ ಕಡಿಮೆ. ಯಾರು ಯಾವ ಕಾಲಕ್ಕೆ ತಪ್ಪಿಬೀಳ್ತಾರೋ ಗೊತ್ತೆ ಆಗೋದಿಲ್ಲ. ಒಂದೇ ಒಂದು ಸರ್ತಿ ದಾರಿ ತಪ್ಪಿತು, ಕಾಲು ಜಾರಿತೂಂದ್ರೆ, ಮುಗಿಯಿತು; ಮನುಷ್ಯನ ಅವಸ್ಥೆ. ” ಎಂದು ತನ್ನಷ್ಟಕ್ಕೇ ವ್ಯಥೆಪಟ್ಟರು ಇಂದಿರಮ್ಮ.

“ ಎಲ್ಲರೂ ಯಾಕಮ್ಮ, ತಪ್ಪಿಬೀಳ್ತಾರೆ ? ನಡಿದರೆ ನೋಡಿಕೊಂಡು ಎಚ್ಚರದಲ್ಲಿರೋವ್ರು ಹಾಗೆಲ್ಲ ಬೀಳೋದಿಲ್ಲ ” ಎಂದು ಗೋಪಿನಾಥ ಸಮರ್ಥಿಸಿದನು.

“ಎಷ್ಟು ಎಚ್ಚರದಲ್ಲಿದ್ರೂ ಸಾಲದು, ಗೋಪಿ. ಗ್ರಹಾಚಾರ ಯಾವಾಗ ಬರುತ್ತೆ, ಯಾವ ವೇಷದಲ್ಲಿ ಬರುತ್ತೆ ಅನ್ನೋದಕ್ಕಾಗೋದಿಲ್ಲ. ಇದೇ ವಸಂತ ರಾಯರು ನೋಡು. ಕಳೆದ ವರ್ಷ ಇಲ್ಲಿಗೆ ಬಂದಾಗ ಹೇಗಿದ್ರು, ಎಷ್ಟು ಚೆನ್ನಾಗಿದ್ರು ? ಎಷ್ಟು ಸುಖದಲ್ಲಿದ್ರು? ಒಂದು ಚಪಲ, ಒಂದು ವಿಷಗಳಿಗೆ. ಸಮಾಪ್ತಿಯಾಯಿತೋ ಇಲ್ಲವೋ ಅವರ ಕತೆ ? ”

ಅಲ್ಲದೇ ಇದ್ರೂ ಇಂಥ ಕೆಟ್ಟಚಾಳಿಗಳು ಅತಿಸುಲಭದಲ್ಲಿ ಗಂಡಸರನ್ನ ಅಂಟಿಕೊಳ್ಳುತ್ತೆ. ” ಎಂದು ವ್ಯಾಖ್ಯಾನ ಮಾಡಿದಳು ಮಾಲತಿ ಗೋಪಿನಾಥನನ್ನು ನೋಡುತ್ತ.

“ ಇಂಥ ಕೆಟ್ಟ ಚಾಳಿಗಳೂಂದ್ರೆ ? ” ಎಂದು ಗೋಪಿನಾಥ ಕೇಳಿದನು.

“ ಇದ್ದಾವಲ್ಲ ಬೇಕಾದಷ್ಟು— ”

“ ಕಾಮ ಕ್ರೋಧ ಮದ— ಇತ್ಯಾದಿ ಷಡ್ವೈರಿಗಳು, ಅಲ್ವೇ ” ಎಂದು ಅಡ್ಡ ಮಾತನಾಡಿದನು.

"ಅಲ್ಲಲ್ಲ. ಅವು ಒಳಗಿನ ಹಿತಶತ್ರುಗಳು: quislings. ನಾನನ್ನೋದು ಹೊರಗಿನವು. ನಾಗರಿಕರ ಹವ್ಯಾಸಗಳು. ಇಸ್ಪೀಟಾಡೋದು, ಪೇಪರು ಓದೋದು, ರಾಜಕಾರಣ ಅನ್ನೋದು ಸಿಕ್ಕಾಬಟ್ಟೆ ಜಗಳಾಡೋದು, ದೇಶೋದ್ಧಾರ ಅನ್ನೋದು ಹೆಂಡತಿ ಮಕ್ಕಳನ್ನ ಮರೆತುಬಿಡೋದು, ಇಂಥವು" ಅಂದಳು ಮಾಲತಿ.

"Plus ಬೀಡಿ, ಬೀರು, ಬ್ರಾಂದಿ, ಬಂಡು, ಬಡಾಯಿ ಇತ್ಯಾದಿ, ಇತ್ಯಾದಿ: ಸರಿಸರಿ; ಇವು ನಮ್ಮ ಗಂಡಸುತನದ ಹೆಗ್ಗುರುತುಗಳು. ಇವು ಯಾವುವೂ ಇಲ್ಲದೇ ನಾವು ಬದುಕಿರೋಣವೇ—ಇಲ್ಲ. ಇವುಗಳಿಂದ ಮುಕ್ತನಾದವ ಹೆಂಗಸರ ಗುಲಾಮನೆಂತ ಬೇರೆ ಹೇಳಬೇಕಾಗಿಲ್ಲ." ಅಂದನು ಗೋಪಿನಾಥ

"ಹೆಂಗಸರ ಹೆದರಿಕೆ ಅಷ್ಟಿದೆ. ಅಲ್ವೇ?" ಎಂದು ಕೇಳಿದಳು ಮಾಲತಿ.

"ಅರ್ಥವಾಗದ್ದು, ಅನಿಶ್ಚಿತವಾದ್ದು, ಅಗಾಧವಾದ್ದು, ಅಜೇಯವಾದ್ದು ಅಂದ್ರೆ ಯಾರಿಗೂ ಹೆದರಿಕೆಯಲ್ಲವೇ?"

"ಅಷ್ಟಾದರೂ ಇರಲಿ, ಅಭಿಮಾನ. ಹೆಂಗಸರ ಭಯವೇ ಜ್ಞಾನದ ಆರಂಭ" ಅಂದಳು. ಆಗ ಪಂಬಿ ನಿದ್ರೆಯಿಂದ ಎದ್ದು ಕೂಗಿದಳು. ತಕ್ಷಣ ಮಾಲತಿ ಎದ್ದು ಹೋದಳು. ಆಕೆ ಹೋಗುವುದನ್ನೇ ದಿಟ್ಟಿಸಿ ನೋಡುತ್ತಿದ್ದ ಗೋಪಿನಾಥನನ್ನು ಎಚ್ಚರಿಸಿ,

"ಗೋಪಿ, ಏನು ನೋಡ್ತೀ" ಎಂದು ಕೇಳಿದರು. ಇಂದಿರಮ್ಮ.

"ಏನಿಲ್ಲಮ್ಮ. ಮಾಲತಿ— ನಿನ್ನ ಸೊಸೆಯಾಗಬೇಕಿತ್ತು" ಅಂದನು.

ಮತ್ತೊಂದರ್ಧ ತಾಸಿನಲ್ಲಿ ಮಾಲತಿ ಮನೆಗೆ ಹಿಂತಿರುಗಿ ಹೋದಳು.

## ೨೦

ಮಾಲತಿ ಮನೆಗೆ ಬಂದೊಡನೆ ರಾಘವೇಂದ್ರರಾಯರು ಮರುದಿನ ಬೆಳಗ್ಗಿನ ರೈಲಿಗೆ ಮದ್ರಾಸಿಗೆ ಹೋಗುವವರಿದ್ದಾರೆಂತಲೂ ಟಿಕೆಟು ತರುವುದಕ್ಕಾಗಿ ಸ್ಟೇಶನಿಗೆ ಹೋಗಿದ್ದಾರೆಂತಲೂ ತಾನು ಹಿಂತಿರುಗಿ ಬರುವುದರೊಳಗಾಗಿ ಆಕೆ ಬಿಡಾರಿ ಒಂದು ಸೂಟುಕೇಸು ಒಂದು ಹೋಲ್ಡಾಲನ್ನು ತಯಾರಾಗಿಡುವಂತೆ ಅಪ್ಪಣೆ ಮಾಡಿದ್ದರೆಂತಲೂ ಶಾರದಮ್ಮ ಹೇಳಿ ತಿಳಿಸಿದರು. ಮಾಲತಿ ಕೂಡಲೆ ಉಗ್ರಾಣಕ್ಕೆ ಸ್ವತಹ ಹೋಗಿ ಒಂದರ ಬದಲು ಎರಡು ಸೂಟುಕೇಸುಗಳನ್ನೂ ಒಂದು ಹೋಲ್ಡಾಲನ್ನೂ ತಂದು ಪ್ರಯಾಣಕ್ಕೆ

ಸಿದ್ಧಗೊಳಿಸಲು ಪ್ರಾರಂಭಿಸಿದಳು. ಆಕೆ ಬಟ್ಟೆ ತುಂಬುತ್ತಿರುವಾಗ ರಾಘವೇಂದ್ರರಾಯರು ಬಂದರು.

" ಯಾವಾಗ ಬಂದಿಯೇ ? ಇದೆಲ್ಲ ಪ್ಯಾಕು ಮಾಡೋ ಪಜೀತಿ ನನ್ನ ಮೇಲೆಯೇ ಬೀಳುತ್ತೋಂತ ಯೋಚ್ನೇಲಿದ್ದೆ. ನಾಳೆ ಮದ್ರಾಸಿಗೆ ಹೋಗ್ತೇನೆ."

" ಅಮ್ಮ ಹೇಳಿದರು. ನಾನು ಬಂದು ಒಂದರ್ಧ ಗಂಟೆಯಾಗಬಹುದು. ಅದೇನು ಅಷ್ಟು ಪಕ್ಕನೆ ಹೊರಟಿರಿ ?"

" ಒಂದು ದೊಡ್ಡ ಕೆಲಸವಿದೆ. ನಾಳೆಯೇ ಹೋದರೆ ಸೋಮವಾರ ವಾಪ್ಸು ಬಂದುಬಿಡಬಹುದು. ಸಿಲ್ಕು ಸೂಟೊಂದು ಟ್ವೀಡು ಸೂಟೊಂದು ನೆನಪಿನಲ್ಲಿ ಹಾಕಿಬಿಡು."

" ಎರಡನ್ನೂ ಹಾಕಿಟ್ಟಿದ್ದೇನೆ. ಇದರಲ್ಲಿ " ಅನ್ನುತ್ತ ತನ್ನ ಪಕ್ಕದಲ್ಲಿ ತುಂಬಿ ಮುಚ್ಚಿಟ್ಟಿದ್ದ ಪೆಟ್ಟಿಗೆಯನ್ನು ತೋರಿಸಿದಳು.

"ಇದ್ಯಾತಕ್ಕೆ ಮತ್ತೆ ?" ಎಂದು ಆಶ್ಚರ್ಯದಿಂದ ಆಕೆ ಎದುರು ಬಾಯಿ ಕಳಕೊಂಡಿದ್ದ ಸೂಟುಕೇಸನ್ನು ತೋರಿಸಿದರು.

" ನನಗೆ. "

" ಏನು ? "

" ನನಗೆ, ಅಂದೆ. "

" ನಿನಗ್ಯಾತಕ್ಕೆ ? ನೀನೂ ಬರ್ತೀಯೇನು, ಮದ್ರಾಸಿಗೆ ? "

" ಹೌದು, ಬರಲೇ ? "

" ಅಲ್ಲಾಂದ್ರೆ ! " ಅವರಿಗೆ ಗಾಬರಿಯಾಯಿತು. ಈ ಮಿಂಚಿನ ವೇಗದ ಮನೋವೃತ್ತಿ ಅವರಿಗೆ ಅರ್ಥವಾಗಲಿಲ್ಲ. ತಾನು ಮೂರು ದಿನಗಳಿಂದಲೂ ಹೊರಡುವ ಕಳಕಳಿಯಲ್ಲಿದ್ದರೆ ಆಕೆ ಅರ್ಧಗಂಟೆಯೊಳಗೆ ಹೊರಟು ಕೂತಿದ್ದಾಳೆ !

" ನನ್ನ ಸೂಟುಕೇಸೂ ಪ್ಯಾಕು ಮಾಡ್ತೇನೆ ? "

" ಮಾಡು, ಮಾಡು, ಮಾಡು. ಅದಕ್ಕೇನೀಗ. ಆದರೆ ಕೆಳಗಿನ ಬರ್ತು ಬೇಕಾದರೆ ಈಗಲೇ ರಿಸರ್ವ ಮಾಡಬೇಕಲ್ಲ ? "

" ಮಾಡಬೇಕು. ಮಾಡಿಬಿಡಿ. "

" ಮಾಡಿಬಿಡಿ ? ಎಷ್ಟು ಸಲೀಸಿನಲ್ಲಿ ಹೇಳ್ತಿಯೋ, ಕೂತಲ್ಲೇ ? ಈಗತಾನೆ ಸ್ಟೇಶನಿನಿಂದ ಬಂದವನು ಕೋಟು ಕೂಡಾ ತೆಗೀಲಿಲ್ಲ. ವಾಪ್ಸು ಹೋಗ ಬೇಕಲ್ಲ. ? "

"ಬೇಡ. ನಾನೇ ಹೋಗಿಬರ್ತೀನೆ. ನೀವು ಪ್ಯಾಕು ಮಾಡ್ತಿರಿ, ಕೂತಲ್ಲೆ." ಅನ್ನುತ್ತ ಎದ್ದಳು.

" ಥು ಥು ! ಅದೆಲ್ಲ ಆಗದು ನನ್ನ ಕೈಲಿ ನಾನೇ ಹೋಗಿ ರಿಸರ್ವ ಮಾಡಿ ಬರ್ತೀನೆ. ಮೊದಲೇ ಹೇಳಿದ್ರೆ ಚೆನ್ನಾಗಿತ್ತು. ಈಗಲಾದ್ರೂ ಖಂಡಿತ ತಾನೆ, ನೀನ್ನು ಬರೋದು ? "

ಒಂದು ಕ್ಷಣ ಜುಗುಪ್ಸೆಯಿಂದ " ನಾನು ಬರೋದಿಲ್ಲ. ನೀವೊಬ್ರೇ ಹೋಗಿ " ಅಂತನ್ನಬೇಕೆಂತ ತೋರಿತು, ಮಾಲತಿಗೆ. ಆದರೆ ಉತ್ತರ ಹೇಳದೆ ಸುಮ್ಮನಿದ್ದು ಬಿಟ್ಟಳು.

" ಟಿಕೆಟು ತಂದಮೇಲೆ ಬರೋದಿಲ್ಲಾಂದುಬಿಟ್ರೆ ? "

" ಇಲ್ಲ. ನನ್ನ ಮನಸ್ಸು ಇನ್ನು ಬದಲಾಗುವ ಹಾಗಿಲ್ಲ. ಅದನ್ನು ಈ ಹ್ಯಾಂಡುಬ್ಯಾಗಿನೊಳಗೆ ಹಾಕಿ ಬೀಗ ಹಾಕಿದ್ದೇನೆ."

" ಏನೋ ನಿನಗೇ ಗೊತ್ತು. ಹೋಲ್ಡಾಲು ? "

" ಓ ಅಲ್ಲಿದೆ. ಕಟ್ಟಬೇಕಷ್ಟೆ "

ಬೇಗ ಕಟ್ಟು. ಆಡ್ತಿರಬೇಡ " ಎಂದು ಆಜ್ಞೆಯಿತ್ತು ಹೋದರು. ಮಾಲತಿ ಪ್ಯಾಕುಮಾಡಿ ಪೂರೈಸುವುದರೊಳಗೆ ಶಾರದಮ್ಮ ಬಂದು ಅಚ್ಚರಿಗೊಂಡು ಕೇಳಿದರು.

" ಇದೇನು ಮಾಲತಿ, ನೀನೂ ಹೋಗ್ತಿಯೇನು ಗಂಡನ ಜತೆಗೆ ?"

" ಹೌದಮ್ಮ. ಹೋಗೋಣಾಂತನಿಸುತ್ತೆ. ಹೋಗಲೆ ?"

" ಹೋಗಪ್ಪ. ಅವನೇನು ಹೇಳಿದ ?"

" ಬಾ ಅಂದ್ರು. ಆದರೆ ಸಂತೋಷಪಟ್ಟ ಹಾಗೆ ಕಾಣಲಿಲ್ಲ."

"ಕಾಣಲಿಲ್ಲವೆ ? ನೀನು ಸಹ ಬಂದಿದ್ರೆ ಆಗ್ತಿತ್ತು ಅಂತ ಹಂಬಲಿಸುತ್ತಿದ್ದ?"

" ಅದೇನೋ. ಲೊಚಗುಟ್ತಾ ಟಿಕೆಟು ತರೋದಕ್ಕೆ ಹೋದರು."

" ಅವನ ಸ್ವಭಾವ ಗೊತ್ತಿಲ್ವೇ ಮಾಲತಿ ?"

"ಗೊತ್ತು ಆದರೆ ಒಳಗಿದ್ದ ಸಂತೋಷವನ್ನ ಸ್ವಲ್ಪವಾದರೂ ಹತ್ತಿರ ವಿದ್ದವರಿಗೆ ಹಂಚಿದರೆ ಎಷ್ಟು ಸುಖವಿತ್ತು ?"

"ನಿಜ. ಆದರೆ ನಿನಗೆಷ್ಟಿದೆ ಹೇಳು, ಮನಬಿಚ್ಚಿ ಮಾತಾಡುವ ಗುಣ ? ನಿನ್ನದು ಕೆಲವೆಲ್ಲ ನನಗೆ ಅರ್ಥವಾದರೆ ತಾನೆ, ಅವನಿಗಾಗೋದು ?" ಎಂದರು ಪ್ರೀತಿಯಿಂದ ಮುಗುಳು ನಗುತ್ತ.

ಬಟ್ಟೆ ಸು ಬೀರುವಿಗೂ ಪೆಟ್ಟಿಗೆಗೂ ನಡುವೆ ಓಡಾಡುತ್ತಿದ್ದ ಮಾಲತಿ ಈ ಆರೋಪವನ್ನು ಕೇಳಿ ತಟಸ್ಥಳಾದಳು.

"ನನ್ನ ಮನಸ್ಸು ನಿಮ್ಮ ಕಂಣಿಗೆ ಬಿಡಿಸಿಟ್ಟ ಪುಸ್ತಕಾಂತ ತಿಳಿದಿದ್ದೆ."

"ಆ ಶಕ್ತಿ ಇರೋದು ನಿನ್ನ ಮನಸ್ಸಿನಲ್ಲಿ ಬರೆದವನೊಬ್ಬನಿಗೆ ಮಾತ್ರ. ಮತ್ತೆನೂ ಅಲ್ಲ, ಮಾಲತಿ. ನನ್ನ ಮಟ್ಟಿಗೆ ಹೇಗೂ ಆಗುತ್ತೆ. ಆದರೆ ರಾಘು ವಿಗೆ ಸುಧಾರಿಸಿಕೊಂಡು ಹೋಗೋ ಬುದ್ಧಿ ಕೊಂಚ ಕಡಿಮೆ. ಅವನ ಆಂತರ್ಯ ಮಾತ್ರ—"

"ನನಗೊತ್ತಮ್ಮ. ತಿಳಿಹೃದಯ ಅವರದು; ದೊಡ್ಡ ಮನಸ್ಸು."

"ನಿನ್ನ ಚಮತ್ಕಾರ, ಚಪಲತೆ ಇವೆಲ್ಲ ಅವನಿಗೆ ತಲೆಶೂಲೆಗಳೇ. ನಿನ್ನಂತೆ ಅವನಿಗೂ ಕೊಂಚ ಹುಡುಗಾಟ ಇದ್ದಿದ್ರೆ ಚೆನ್ನಾಗಿತ್ತು. ಆದರೆ ಸಾಂಪ್ರ ಯಿಕ ಹಿರೆತನದ ಹೊಣೆ ಹೊತ್ತವರಿಗೆ ಹುಡುಗಾಟ ಬರಲಾರದು."

"ನಿತ್ಯ ನಡತೆಯೂ ರೂಢಿಗೆ ಕಟ್ಟುಬಿದ್ರೆ ಹೇಗಮ್ಮ ?" ಅನ್ನುತ್ತ ಪೆಟ್ಟಿಗೆ ಮುಂದೆ ಕುಳಿತು ಬಟ್ಟೆಗಳನ್ನು ಮಡಿಕೆ ಮಾಡಿ ಅಂತರಾಂತರ ತುಂಬಿ ಸುತ್ತಿದ್ದಳು.

"ಕಟ್ಟು ಕಟ್ಟಳೆ ಇರಬೇಕಾದ್ದೇ ನಿತ್ಯ ನಡತೆಗೆ. ಪ್ರಕೃತಿ ನಿಯಮ ಗಳನ್ನ ಅತಿಕ್ರಮಿಸಿದರೆ ನೀನು ಮುಗ್ಗರಿಸಿ ಬೀಳಬಹುದು. ಮಿಕ್ಕವರಿಗೆ ಏನೂ ಆಗೋದಿಲ್ಲ. ಆದರೆ ದಿನಚರ್ಯೆ ಹಾಗಲ್ಲ. ಅದು ಒಂದು ಶಿಸ್ತಿನಲ್ಲಿರ ದಿದ್ರೆ ಎಡವಿ ಬೀಳೋದು ಸುತ್ತುಮುತ್ತಲಿನವರು. ಅಲ್ವೇ, ನೋಡು."

"ಇರಬಹುದು. ಆದರೆ ದಿನಾ ಪ್ರೋಗ್ರಾಮು ಪ್ರಕಾರ ಇರೋದು ಸಾಧ್ಯವೇ ?"

"ಮುಕ್ಕಾಲು ಪಾಲು ಮಂದಿ ಹಾಗೆ ತಾನೇ ಇರೋದು ?" ಎಂದರು ಶಾರದಮ್ಮ. ಮಾಲತಿ ಅವರ ಮುಖ ನೋಡಿದಳು. ಮಾತು

ಮುಂದರಿಸುವುದಕ್ಕಾಗಿ ಚರ್ಚಿಸುತ್ತಿದ್ದಾರೆ ವಿನಹ ಶಿಕ್ಷಣ ದೃಷ್ಟಿಯಿಂದಲ್ಲ ನೆಂತ ಗೊತ್ತುಮಾಡಿಕೊಂಡು. "ಪಾಪ, ಅವರ ದುರವಸ್ಥೆ" ಅಂದಳು.

ಶಾರದಮ್ಮ ಸುಮ್ಮನಿದ್ದುದನ್ನು ನೋಡಿ

"ಇರಬೇಕಲ್ಲ. ಬ್ರಹ್ಮಕೊಟ್ಟ ಕೀಲಿ ಮುಗಿಯುವ ತನಕ. ಜೀವವನ್ನು ಸಾವಿಗೆ ಒತ್ತೆಯಿಟ್ಟು. ಈ ವೈಲ್ ಸೀರೆಗೂ ಈ ಒರ್ಗೇಂಡೀಗೂ ಸರಿಬೀಳುತ್ತೇನಮ್ಮ?" ಅನ್ನುತ್ತ ಸೀರೆ ಬ್ಲೌಸುಗಳೆರಡನ್ನು ಜೋಡಿಸಿ ಹಿಡಿದು ತೋರಿಸಿದಳು.

ಶಾರದಮ್ಮ ನಕ್ಕರು. "ಒಪ್ಪುತ್ತೆ ಇರಲಿ" ಅಂದರು.

"ಆಗಿಂದಾಗ ಏನಾದರೊಂದು ಹೊಸತು ಬೇಕೆನಿಸುವುದು ಸ್ವಾಭಾವಿಕ ವಲ್ಲವೇನಮ್ಮ ? ನಾಟಕದವರು ಕೂಡಾ ಹೊಸ ಡ್ರೆಸ್ಸು, ಹೊಸ ಸೀನೆರಿ, ಹೊಸ ನಟನಟಿಯರು ಅಂತ ಆಸೆ ತೋರಿಸುತ್ತಾರೆ. ನಮಗೆ ಒಂದು ಹೊಸ ಅನುಭವ, ಹೊಸ ಪರಿಚಯ, ಹೊಸ ಹಬ್ಬ, ಹೊಸ ಪುಸ್ತಕ, ಯಾವುದೂ ಇಲ್ಲದೆ ಹೋದರೆ ಕಡೆಗೊಂದು ಹೊಸ ಸೀರೆಯಾದರೂ ಬೇಕಲ್ಲ ?"

"ಬೇಕು, ನಿಜ. ಆದರೆ ಹೊಸದರ ಮೇಲೆ ಸಾಮಾನ್ಯವಾಗಿ ಯಾವಾಗಲೂ ಸುರುವಿಗೆ ಅಪನಂಬಿಕೆಯಿದ್ದೇ ಇರುತ್ತೆ. ಹಾಕಿದ ಗೆರೆ ದಾಟಬೇಕಾದರೆ ಜಾಣತನ ಬೇಕು, ಧೈರ್ಯಬೇಕು. ಅನೇಕರಿಗೆ ಆಗದಮಾತು. ಮತ್ತೆ ನ್ನೊಂದು, ನೋಡು. ಹೊಸತೆಲ್ಲಿ ಸುರು, ಹಳತೆಲ್ಲಿ ಕೊನೆಯಂತ ಎಷ್ಟೋ ಸಲ ಗೊತ್ತೇ ಆಗೋದಿಲ್ಲ. ಹಳತಾದ ನನಗೆ ಹೊಸತೆಲ್ಲವೂ ಪ್ರೀತೀನೇ. ನನ್ನದು ಮುಗಿದ ಕತೆ. ಇನ್ನು ಬದುಕಿದ್ದರೆ ನಿಮ್ಮಿಬ್ಬರನ್ನ ನೋಡಿ ಸಂತೋಷ ಪಡೋದಕ್ಕೆ. ನೀನಿರೋವರೆಗಂತೂ ಹೊಸ ಹೊಸ ಯೋಚನೆ ಗೇನೂ ಕಡಿಮೆಯಾಗಲಾರದು. ನೀನೇನು, ಕೈಕಟ್ಟಿಕೂತಿದ್ದೀಯಲ್ಲ ? ಹೊಲ್ಡಾಲು ಕಟ್ಟೋದು ಯಾವಾಗ ?"

"ನಿಮ್ಮನ್ನ ಬಿಟ್ಟು ಮದ್ರಾಸಿಗೆ ಹೋಗಲೇ ಬೇಡವೇ ಅಂತ ಯೋಚ್ನೆ."

"ಮಾತಿನ ಮಲ್ಲಿ ! ಏಳು ಸಾಕಾದರೆ. ಹೋಲ್ಡಾಲು ಕೆಲಸದವ ಕಟ್ಟಲಿ."

"ಬೇಡ, ನಾನೇ ಕಟ್ಟುತ್ತೇನೆ. ಅವರಿಗೆ ಸರಿ ಬೀಳದು. ಆದರೆ ಹೋದ ಲ್ಲೆಲ್ಲಾ ಹಾಸಿಗೆ ಹೊತ್ತುಕೊಂಡು ಹೋಗೋ ಕ್ರಮ ಅಸಹ್ಯವಲ್ಲವೇ ನಮ್ಮ ?" ಅನ್ನುತ್ತ ನಕ್ಕಳು.

"ಗಂಡ ಹೋದಲ್ಲೆಲ್ಲ ಹೆಂಡ್ತಿ ಬೆನ್ನುಹತ್ತಿ ಹೋಗೋದು ?"

"ಬೆನ್ನುಹತ್ತಿ ಹೋಗಬಾರದು. ಕೈ ಕೈ ಹಿಡಕೊಂಡು ಹೋಗಬೇಕು" ಅಂದಳು ಹೋಲ್ಡಾಲನ್ನು ತನ್ನ ಹತ್ತಿರ ಎಳೆದುಕೊಂಡು. ಮದುವೆಯಾಗಿ ಹಲವು ವರ್ಷಗಳಾಗಿದ್ದರೂ ಮಾಲತಿ ಆಟದ ಕನ್ನೆಯಂತಿದ್ದಾಳೆ. ಇನ್ನವಳಿಗೆ ಮಕ್ಕಳಾದರೆ ಹೇಗಿರುತ್ತಾಳೆ! ಸದ್ಯ ಮಗುವೂ ಅವಳೇ, ತಾಯಿಯೂ ಅವಳೇ, ಎಂದು ತನ್ನೊಳಗೇ ದುಃಖಿಸುತ್ತ ಶಾರದಮ್ಮ ಅಲ್ಲಿಂದ ತೆರಳಿದರು.

ಹೋಲ್ಡಾಲನ್ನು ಬಿಗಿದು ಕಟ್ಟಿಯಾದ ಮೇಲೆ ಆ ತನಕ ವಿಸ್ತಾರವಾಗಿದ್ದ ಆವರಣ ಹಠಾತ್ತಾಗಿ ಸಂಕುಚಿತವಾದಂತೆ ತೋರಿ ಮಾಲತಿ ಶೂನ್ಯ ಮನಸ್ಕಳಾಗಿ ಸುಯ್ಯುಬಿಡುತ್ತ ಕುಳಿತು ಬಿಟ್ಟಳು. ಪ್ರಯಾಣದ ಸುಖನಿರೀಕ್ಷೆಯ ಬದಲು ಆತ್ಮಪರೀಕ್ಷೆಯ ಪ್ರಶ್ನೆಗಳು ಅಂತರ್ಯದ ತಳದಿಂದ ಮೀನುಗಳಂತೆ ಮೇಲಕ್ಕೆದ್ದು ಗುಳ್ಳೆಯೊಡೆದು ಚಿಕ್ಕ ಚಿಕ್ಕ ಅಲೆಗಳನ್ನೆಬ್ಬಿಸಿದವು. ಮದ್ರಾಸಿಗೆ ಹೋಗುವುದೇತಕ್ಕೆ ? ಆ ತಮಿಳು ತೆಲುಗರ ಕೊಂಪೆಯಲ್ಲಿ ನೋಡತಕ್ಕದ್ದೇನಿದೆ ? ಪತಿಯ ಸಖಿಯಾಗಿಯೇ ? ಅಲ್ಲ. ಅವರಿಗೆ ರೈಲು ಪ್ರಯಾಣದಲ್ಲಿ ಗಾದಿಯುದ್ದಕ್ಕೂ ನಿದ್ದೆ. ಪರ್ಯಟನ ಚಪಲಕ್ಕಾಗಿಯೇ ? ಅದೂ ಅಲ್ಲ. ಈ ಕಾಲದಲ್ಲಿ ಪ್ರಯಾಣದಲ್ಲಿ ಸುಖವಿಲ್ಲ. ವಿಪರೀತ ಜನನುಗ್ಗು. ಹಾಗಾದರೆ ತಲೆ ತಪ್ಪಿಸಿಕೊಂಡು ದೇಶಾಂತರ ಹೋಗುವವರಂತೆ ಗಂಟು ಮೂಟೆ ಕಟ್ಟಿ ಕೂತಿರುವ ಅರ್ಥ ? ಆ ತನಕ ಬಾಯಿತೆರೆದುಕೊಂಡು ಆದರಭಾವದಿಂದ ಪೆಟ್ಟಿಗೆಗಳು ಈಗ ಬಾಯಿಮುಚ್ಚಿಕೊಂಡು ಒಂದು ಮೂಲೆಯಲ್ಲಿ ಬೇರೆ ಬಿಡಾರ ಮಾಡಿದ್ದವು. ಎದ್ದು ಹೋಲ್ಡಾಲಿನ ಮೇಲೆ ಕುಳಿತಳು. ಆದರೆ ಕಟ್ಟಿಟ್ಟ ಸಾಮಾನಿನ ಮೇಲೆ ಕುಳಿತರೆ ಪ್ರಯಾಣಕ್ಕೆ ವಿಘ್ನಬರಬಹುದೆಂತ ಜಗ್ಗನೆ ಎದ್ದಳು. ಹೋಲ್ಡಾಲನ್ನು ಕಾಲಿಂದ ಒದ್ದು ಅರ್ಧ ಬಿಚ್ಚಿ ಅದರೊಳಗಿನ ಗಾದಿಯಮೇಲೆ ಕುಳಿತು ತಲೆಯ ಹಿಂದೆ ಎರಡೂ ಕೈಗಳನ್ನಿಟ್ಟುಕೊಂಡಳು.

ಸುಖಕ್ಕೆ ಹೆದರಿ ಓಡಿಹೋಗುತ್ತಿದ್ದಳು. ಜೀವಾನಂದದ ಕರೆ ಕಿವಿಶೂಲೆಯಾಗಿ ಅದು ಕೇಳದಷ್ಟು ದೂರ ಹೋಗುವುದರಲ್ಲಿದ್ದಳು. ಯಾವಾತನ ಕಾಲಸಪ್ಪಳಕ್ಕೆ ಆಕೆಯ ಎದೆ ನಡುಗುತ್ತಿತ್ತೋ ಅತನಿಂದ ಪಾರಾಗಲು ಆಣಿ ಮಾಡಿದ್ದಳು. ನಗರ ನಿವಾಸಿಗಳು ಆತ್ಮಶೂನ್ಯತೆಯನ್ನು ತಾಳಲಾರದೆ ವಿವಿಧ

ವಾಹನಗಳನ್ನೇರಿ ದೇಶವಿದೇಶ ಅಂಡಲೆಯುವುದನ್ನು ಆಕೆ ಹೀಯಾಳಿಸುವ ಕ್ರಮ. ಈಗ ಆಕೆಯೇ ಬದುಕಿನ ಸಾರ್ಥಕತೆಯನ್ನು ತಪ್ಪಿಸಿಕೊಳ್ಳುವುದರಲ್ಲಿದ್ದಳು. ತಾನಿದ್ದೆಡೆ ಸಿದ್ಧಿಯು ಬಾರದಿದ್ದರೆ ಸಿದ್ಧಿಯಿದ್ದೆಡೆ ತಾನು ಸಾಗಬೇಕು, ಅನ್ನುತ್ತಿದ್ದವಳು ಈಗ ಸುಖಸಿದ್ಧಿಯು ಸಮೀಪಿಸಿದ ಹಾಗೆಲ್ಲ ದೂರ ದೂರ ಸರಿಯುತ್ತಿದ್ದಳು. ಹರಿಯು ಹಚ್ಚಿದ ಹಣತೆಯಿಂದ ದೃಷ್ಟಿದೋಷವಿದ್ದರಿಗೆ ಕಣ್ಣುಬೇನೆಯಾಗಬಹುದು. ಆದರೆ ಹಾಗೆಂತ ಅದನ್ನು ಹೂತಿಟ್ಟು ಕತ್ತಲಲ್ಲಿ ತಡವರಿಸುವುದೆ? ಅಥವಾ ಮನೆಯ ಹೆಬ್ಬಾಗಿಲ ಹೊಸಲಲ್ಲಿಡುವುದೇ? ಎಂದು ಕೇಳುತ್ತಿದ್ದವಳು ಈಗ ಆ ಬೆಳಕನ್ನು ಕೈಯಾರೆ ನಂದಿಸುವುದರಲ್ಲಿದ್ದಳು.

ಆಕೆಯನ್ನಾವರಿಸಿದ್ದ ಮನೋವೃತ್ತಿಯ ಒತ್ತಡ ಅಷ್ಟು ಪ್ರಬಲವಾಗಿತ್ತು. ದೇಹಸುಖವಿದ್ದಲ್ಲಿ ಆತ್ಮಶಾಂತಿಯಾಗಲಾರದು. ವಿಷಯೋಪಭೋಗವು ಆತ್ಮವಿಕಸನಕ್ಕೊಂದು ತೊಡಕು—ಎಂದಷ್ಟೇ ವಿವೇಕ ವಚನಗಳನ್ನು ಕೇಳಿದ್ದಳು. ಆದರೆ ತನ್ನಲ್ಲಿ ನೆಲೆಯಾಗಿರುವ ಆದಿಶಕ್ತಿ ಅಥವಾ ದೈವಾಂಶ ಎಷ್ಟೇ ಪ್ರಮಾಣದ್ದಾಗಲಿ ಅದು ಇಂದ್ರಿಯಗಳ ಮೂಲಕವೇ ಹೊರಬೀಳಬೇಕಲ್ಲದೆ ಆದಕ್ಕೆ ಬೇರೆಶರನ ಬಿಡುಗಡೆಯಿಲ್ಲ, ಮಾನವತೆಯ ಪರಿಪೂರ್ಣತೆಗೆ ಆತ್ಮನ ಈ ಆವಿರ್ಭಾವ ಆವಶ್ಯಕ, ಆತ್ಮ ದೇಹ ಇವೆರಡರ ಹದವನ್ನು ಒಂದೇ ಅನುಭವಾಮೃತ ಪಾನದಿಂದ ನೀಗಿಸುವ ಸುಯೋಗ ಒಂದು ಜನ್ಮದಲ್ಲಿ ಎರಡಾವರ್ತಿ ಒದಗಿ ಬರುವುದಿಲ್ಲ. ಬಂದಾಗ ಬಳಸಿಕೊಳ್ಳುವಷ್ಟು ಧೈರ್ಯಬೇಕು. ಯೋಗ್ಯತೆಬೇಕು, ಪುಣ್ಯಪಡೆದಿರಬೇಕು. ಅಂತ ಈ ರೀತಿ ಯಾರೂ ಮಾಲತಿಗೆ ಬೋಧಿಸಿರಲಿಲ್ಲ.

ತನ್ನನುಭವದ ಅಮಲಿನಿಂದ ಮಾಲತಿಗೆ ಮುಂದಿನ ಬಾಳೆಲ್ಲ ಎರಡೆರಡಾಗಿ ಕಾಣಿಸತೊಡಗಿತು. ಎರಡು ಮನೆ, ಎರಡು ಸಂಸಾರ, ಎರಡು ದಾರಿ, ಎರಡು ಕರ್ತವ್ಯ. ಇವೆರಡೂ ಪ್ರಿಯವಾದವು, ಹಿತವಾದವು. ಆಯ್ಕೆಗೆ ಒಂದು ಹೆದ್ದಾರಿ, ಒಂದು ಅಡ್ಡದಾರಿ ಇದ್ದರೆ ಸುಲಭ. ವಿಪರ್ಯಾಸಕ್ಕೆ ಎಡೆಯಿರುವುದಿಲ್ಲ. ಎರಡೂ ರಾಜರಸ್ತೆ, ಅಥವಾ ತಳರಸ್ತೆಗಳಾದರೇನೇ ಪ್ರಮಾಣ. ಒಳ್ಳೆತನವು ಯಾವುದರಲ್ಲಿ ಹೆಚ್ಚು. ಯಾವುದರಲ್ಲಿ ಕಡಿಮೆಯೆಂತ ಸಮ ಸಮವಾಗಿರುವವುಗಳಲ್ಲಿ ಗೊತ್ತುಹಿಡಿಯುವುದೇ ಕಣ್ತೆರವ ಚೇತನದ

ಮುಖ್ಯ ಸಮಸ್ಯೆ. ಒಳ್ಳೆಯದೊಂದು ಕೆಟ್ಟದೊಂದು, ಕರಿದೊಂದು ಬಿಳಿದೊಂದು ಇವುಗಳೆರಡರಲ್ಲಿ ಆರಿಸಿಕೊಳ್ಳುವುದು ಮಕ್ಕಳ ಒಗಟು.

ಮಾಲತಿ ಕಣ್ಣು ಮುಚ್ಚಿದಳು. ಈ ದ್ವಂದ್ವತೆಯಿಂದ ತಲೆಸುತ್ತುತ್ತಿತ್ತು. ಇಬ್ಬರು ಮಾಲತಿಯರಿರಬಹುದೆ? ಗೋಪಿನಾಥನ ಎದೆಯ ಮೇಲೊರಗಿ ಸುಖ ಸಮಾಧಿಯಲ್ಲಿದ್ದ ಮಾಲತಿಯೊಬ್ಬಳು, ನಾಳಿನ ರೈಲಿಗೆ ಹೊರಟು ಹೋಲ್ಡಾಲಿಗೊರಗಿ ಮುಳ್ಳಿನ ಹಾಸಿಗೆ ಮೇಲಿದ್ದ ಮಾಲತಿಯೊಬ್ಬಳು. ಈ ಎರಡು ವೇಷಗಳಲ್ಲಿ ತನ್ನ ನಿಜಸ್ವರೂಪ ಯಾವುದು? ಎರಡು ಭೂಮಿಕೆಗಳೂ ಸ್ವಭಾವ ಸಹಜವಾಗಿದ್ದುವು. ಮಾತ್ರ ಒಂದು ವೇಷವನ್ನು ಕಳಚಿಬಿಡದೆ ಮತ್ತೊಂದನ್ನು ಹಾಕಿಕೊಳ್ಳಲು ಸಾಧ್ಯವಿರಲಿಲ್ಲ. ಒಂದು ಪಾತ್ರವನ್ನು ವಹಿಸಿ ಯಥೋಚಿತವಾಗಿ ವೇಷಧಾರಿಣಿಯಾಗಿ ಸಂಸಾರ ರಂಗಕ್ಕೇರಿದ ಮೇಲೆ ನಡುನಾಟಕದಲ್ಲಿ ವೇಷಬದಲಾಯಿಸುವುದು ಸಾಧ್ಯವೇ? ಸಲ್ಲದ ಸೊಕ್ಕು. ಆದ್ದರಿಂದಲೇ ಈ ಆಮಿಷದಿಂದ ಆದಷ್ಟು ದೂರವಿರುವುದೇ ಲೇಸು. ಸಾಧ್ಯವಾದಷ್ಟು: ಮೂರುದಿನವಾದರೆ ಮೂರುದಿನ. ಅಂತೂ ಕಂಬಿ ಕಿತ್ತಿ ಕಾಲಿಗೆ ಬುದ್ಧಿ ಹೇಳುವುದರಲ್ಲಿದ್ದಳು.

೨೧

ಶನಿವಾರ ಬೆಳಿಗ್ಗೆ ಸಹಕಾರಿ ಸಂಘಗಳ ಡಿಪ್ಯೂಟಿ ರಿಜಿಸ್ಟ್ರಾರವರಿಂದ ಗೋಪಿನಾಥನಿಗೊಂದು ಗುಪ್ತ ಪತ್ರಬಂತು. ಆಹಾರ ಇಲಾಖೆಯ ಪ್ರಧಾನ ಅಧಿಕಾರಿಯಾದ ಕಮಿಶನರು ಮದ್ರಾಸಿನಿಂದ ಸೋಮವಾರ ಸಾಯಂಕಾಲ ಬರುತ್ತಾರೆ. ಅದೇದಿನ ವರ್ತಕಸಂಘದವರಾಗಲಿ ಇನ್ನಿತರ ಸಂಸ್ಥೆಯವರಾಗಲಿ ಅವರನ್ನು ಕಂಡು ಮಾತನಾಡುವ ಮುಂಚಿತವಾಗಿ ಗೋಪಿನಾಥನು ಭೇಟಿಮಾಡಿ ಜಿಲ್ಲೆಯ ನಿಜಸ್ಥಿತಿಯನ್ನು ಕೂಲಂಕಷವಾಗಿ ವಿವರಿಸಿ ಹೇಳಬೇಕು, ಎಂಬ ಸೂಚನೆಯಿತ್ತು ಅದರಲ್ಲಿ. ಹಾಗಾದರೆ ತಾನಿನ್ನು ಸ್ವಪ್ನ—ಶಾಯಿಯಾಗಿದ್ದರೆ ಪ್ರಯೋಜನವಿಲ್ಲ. ಕಾರ್ಯ ಪ್ರವರ್ತನಾಗಬೇಕು. ವಿಪಕ್ಷದವರು ಕಮಿಶನರನ್ನು ತಮ್ಮ ಪಂಥಕ್ಕೆ ತಿರುಗಿಸುವ ಪ್ರಯತ್ನ ಮಾಡದೆ ಇರಲಾರರು, ಅದಕ್ಕೆ ಮುಂಚಿತವಾಗಿಯೇ ಅವರ ದೃಷ್ಟಿಯನ್ನು ಜನತೆಯ ಹಿತಚಿಂತನೆಯ ಕಡೆಗೆ ಪರಿವರ್ತಿಸುವಂತೆ ಮಾಡುವುದು ಅತ್ಯಗತ್ಯ. ಅದಕ್ಕಾಗಿ ಇಡೀ ಜಿಲ್ಲೆಯ ವಸ್ತುಸ್ಥಿತಿಯ ವಿವರಗಳನ್ನು,

ಅಂಕೆ ಸಂಖ್ಯೆ ಸಮಾಚಾರಗಳನ್ನು ಸಂಗ್ರಹಿಸಿಕೊಳ್ಳಬೇಕು. ಅಂದರೆ ಜಿಲ್ಲೆಯೆಲ್ಲ ಸುತ್ತಾಡಬೇಕು, ಮುಂದಿರುವ ಮೂರೇ ದಿನಗಳಲ್ಲಿ ಎಂದು ನಿರ್ಧಾರಕ್ಕೆ ಬಂದನು.

ಸರಕಾರದ ಸಾಗುವಳಿಯ ಲೆಕ್ಕ ಪತ್ರಗಳು ನಿಷ್ಪ್ರಯೋಜನವೆಂತ ಆತಗೆ ಮೊದಲೇ ಗೊತ್ತು. ಹಿಂದೆ ಇದೇ ಕಮೀಶನರು ದಕ್ಷಿಣ ಕನ್ನಡ ಜಿಲ್ಲೆ 'ತೇಮಾನು' ಕ್ಷೇತ್ರವೋ ಅಥವಾ 'ಕೊಸರು' ಕ್ಷೇತ್ರವೋ ಎಂದು ಕಲೆಕ್ಟರಿಗೆ ಬರೆದು ವಿಚಾರಿಸಿದ್ದಾಗ, ಅವರು ತಮ್ಮ ಜಿಲ್ಲೆಯಲ್ಲಿ ಯಾವುದಕ್ಕೂ ಕೊರತೆಯಿಲ್ಲ, ಬೇಕಾದರೆ ಮಲಬಾರು ಜಿಲ್ಲೆಗಳಿಗೂ ಕೊಡುವಷ್ಟು ಧಾನ್ಯವಿದೆಯೆಂದು ಮರುಟಪ್ಪಾಲಿಗೇನೇ ಉತ್ತರ ಕಳುಹಿಸಿದ್ದರು. ಅಂದರೆ ತಮ್ಮ ಅಧಿಕಾರ ಕ್ಷೇತ್ರದ ನ್ಯೂನತೆಯನ್ನು ಒಪ್ಪಿಕೊಂಡರೆ ತಮ್ಮ ಆಡಳಿತಕ್ಕೆ ಎಲ್ಲಿ ನ್ಯೂನತೆ ಬರುತ್ತದೋ ಎಂಬ ಭಯದಿಂದ ನಾಲ್ಕು ಗೆರೆ ಗೀಚಿಬಿಟ್ಟು ಜಿಲ್ಲೆಯ ಹದಿಮೂರು ಲಕ್ಷ ಪ್ರಜೆಗಳಿಗೆ ಒಂದು ವರ್ಷದಲ್ಲಿ ಮೂರು ತಿಂಗಳ ಉಪವಾಸ ವಿಧಿಸಿಬಿಟ್ಟಿದ್ದರು ತಮ್ಮ ನೌಕರಿ, ತಮ್ಮ ಸಂಬಳ, ತಮ್ಮ ಗೌರವ ಇವುಗಳ ಪಾಲನೆಯಲ್ಲೇ ಜೀವಸವೆಯಿಸುವ ಸರಕಾರಿ ಅಧಿಕಾರಿಗಳ ಆಶ್ರಯದಲ್ಲಿ ಇಂಥ ಪರೋಪಕಾರದ ಕೆಲಸ ಪೂರೈಸಲಾರದು ಎಂಬದು ಆತಗೆ ಅನೇಕವೇಳೆ ಮನದಟ್ಟಾಗಿತ್ತು. ಈ ವಿಚಾರದಲ್ಲಿ ಭೂಮಾಲಿಕರೆಷ್ಟು ಮಂದಿ, ಒಕ್ಕಲಿಗರೆಷ್ಟುಮಂದಿ, ಹೊಲಗಳೆಷ್ಟು, ಉತ್ಪತ್ತಿಯೆಷ್ಟು, ಪರದೇಶದಿಂದ ಬರತಕ್ಕ ಆಹಾರ ಸಾಮುಗ್ರಿಗಳೆಷ್ಟು ? ಇದೆಲ್ಲ ವಿವರಗಳನ್ನು ಸ್ವಲ್ಪ ಸ್ವಲ್ಪವಾಗಿ ಕೆಲವು ತಿಂಗಳುಗಳಿಂದ ಸಂಗ್ರಹಿಸುತ್ತಲೇ ಇದ್ದನು. ಆದರೆ ಕಮಿಶನರನ್ನು ಕಾಣುವ ಮೊದಲು ಈ ಭಾಗದಲ್ಲಿ ಸಂಪೂರ್ಣ ಸಿದ್ಧತೆಯಿರಬೇಕೆಂತ ಡಿಪ್ಯೂಟಿ ರಿಜಿಸ್ಟ್ರಾರಿಗೆ ಬರೆದು ತಿಳಿಸಿದನು.

ಅರ್ಧತಾಸಿನೊಳಗಾಗಿ ಅವರೇ ಬಂದರು. ಪ್ರತಿಯೊಂದು ಕೇಂದ್ರಕ್ಕೂ ಸ್ವತಃ ಹೋಗಬೇಕೆಂದು ಅಭಿಪ್ರಾಯಪಟ್ಟರು. ಅವರನ್ನೂ ಬರುವಂತೆ ವಿಜ್ಞಾಪಿಸಿಕೊಂಡುದಕ್ಕೆ ಇಂಥ ಪತ್ತೇದಾರಿ ಕೆಲಸಕ್ಕೆ ತಾನು ಎದುರು ಬೀಳುವುದು ಸಮಂಜಸವಲ್ಲ, ಗೋಪಿನಾಥ ಒಬ್ಬನೇ ಹೋಗುವುದು ಉಚಿತ, ತನ್ನ ಕಾರು ಆತನ ವಶವಿರಲಿ, ಕೆಲಸ ಮುಗಿಯುವತನಕ ಎಂದರು. ಆ ಪ್ರಕಾರ ಅಂದೇ ಹನ್ನೊಂದುಗಂಟೆಗೆ ಊಟಮಾಡಿ ಸಂಚಾರಕ್ಕೆ

ಹೊರಡುವುದಾಗಿ ಗೋಪಿನಾಥ ನಿಶ್ಚಯಿಸಿದನು. ಆಕೂಡಲೇ ಹೊರಟಿದ್ದರೆ ಊಟಕ್ಕೆ ಉಡುಪಿಯಲ್ಲಿರಬಹುದಿತ್ತು. ಆದರೆ ಹೋಗುವ ಮುನ್ನ ಒಮ್ಮೆ ಯಾದರೂ ಮಾಲತಿಯನ್ನು ನೋಡುವ ಹಾರೈಕೆ. ತಾಯಿಗೆ ತಿಳಿಸಲು ಹೋಗಿ ನೋಡುವಾಗ ಇಂದಿರಮ್ಮ ಅವರ ಕೋಣೆಯಲ್ಲಿರಲಿಲ್ಲ. ಶೀರ ವಾಸಿ ಯಾಗುವಷ್ಟರಲ್ಲಿ ಹೀಗೂ ಮಾಡುತ್ತಾಳಲ್ಲ ಎಂದು ಚಿಂತಿಸುತ್ತ ಬರುವಾಗ ಅವರೇ ಬಂದರು. ಒಳಗಿಂದ ಹೆಜ್ಜೆಯಮೇಲೆ ಹೆಜ್ಜೆಹಾಕುತ್ತ ಅವರ ಬಲಗೈ ಬೆರಳೊಂದನ್ನು ಹಿಡಿದು ಮೊಂಮಗಳು ನಡೆಸಿಕೊಂಡು ಬರುತ್ತಿದ್ದಳು. ಅವರಿಗೆ ತನ್ನ ಪ್ರವಾಸದ ಕಾಲಕ್ರಮುವನ್ನು ತಿಳಿಸಿ,

" ಮಾಲತಿ ಬಂದ್ರೆ ಇವೊತ್ತು ಇಲ್ಲೇ ನಿಲ್ಲಿಸಿಕೋಮ್ಮ " ಎಂದನು. ತಾನಿರುವಾಗ ಆಕೆ ಇರಲು ಸಾಧ್ಯವಿಲ್ಲದಿದ್ದರೂ ತನ್ನ ಮನೆಯಲ್ಲಿ ತಾನಿಲ್ಲದಿದ್ದಾಗಲಾದರೂ ಒಂದು ರಾತ್ರೆ ಇರಲಿ. ತನ್ನ ಮಂಚದ ಮೇಲೆ ಮಲಗಿ ನಿದ್ರಿಸಲಿ. ಆಕೆಯ ಚೆಲುವಿನ ಚಾರುಚಂದ್ರಿಕೆ ತನ್ನ ಶಯ್ಯಾಗೃಹದಲ್ಲಿ ತುಂಬಲಿ, ಎಂಬ ಬಯಕೆಯಿಂದ.

" ಇಲ್ಯಾಕಪ್ಪ ಇರ್ತ್ತಾಳೆ, ಮನೆಬಿಟ್ಟು ?" ಎಂದು ಇಂದಿರಮ್ಮ ಆಕ್ಷೇಪವೆತ್ತಿದರು.

"ಅವಳ ಗಂಡ ಇವತ್ತಿನ ರೈಲಿಗೆ ಮದ್ರಾಸಿಗೆ ಹೋಗಿದ್ದಾನಂತೆ. ಇಲ್ಲಿರದೆ ಯೇನು ?"

"ಏನೋಪ್ಪ, ನೋಡೋಣ. ಯಾವುದಕ್ಕೂ ಅವಳು ಬರಲಿ" ಅಂದರು.

ಪ್ಯಾಕು ಮಾಡುವಾಗ ಗಂಟಲೊಳಗೆ ಹಾಡತೊಡಗಿದನು. ಪ್ರಯಾಣದ ನಿರೀಕ್ಷೆಯಿಂದ ಆತನ ಮನಸ್ಸು ಹರ್ಷಮಯವಾಗಿತ್ತು. ಕಾರಿನಲ್ಲಿ ಹೋಗೋದೆಂದರೆ ಅವನಿಗೆ ಪಂಬಿಯಷ್ಟೇ ಕುತೂಹಲ. ಆದರೆ ಕಾರು ಕಾರಿನಂತಿರಬೇಕು. ಅದರ ಸಾರಥಿಗೆ ಪೆಟ್ರೋಲು, ಟಾಯರು ಬ್ರೇಕುಗಳ ಚಿಂತೆಯಿರಬಾರದು. ತನ್ನ ಹಾಗೂ ತನ್ನನ್ನು ನಂಬಿ ಹಿಂದೆಕುಳಿತಿದ್ದವರ ಜೀವದಾಸೆ ಇದ್ದರೆ ಪರವಾಯಿಲ್ಲ, ಅದೂ ವಿಪರೀತವಾಗಬಾರದು. ಆದರೆ ದಾರಿಯಲ್ಲಿ ಅಡ್ಡಡ್ಡವಾಗಿ ಓಡಾಡುವ ಕೋಳಿ ಹಂದಿ ನಾಯಿಗಳ ಕುಲಕೋಟಿ ಉದ್ಧಾರಮಾಡುವ ಹವ್ಯಾಸವಿರಬಾರದು. ಕಾರು ವಾಯುವಿಮಾನದಂತಿರಬೇಕು, ವೇಗದಲ್ಲಿ. ಕಾರ್ಮ್ಮೋಡದಂತಿರಬೇಕು, ಗಾಂಭೀರ್ಯದಲ್ಲಿ. ವಿಲಾಸ

ಮುಂದಿರದಂತಿರಬೇಕು, ವೈಭವದಲ್ಲಿ. ಸದ್ದಿಲ್ಲದೆ ಅಲುಗಾಡದೆ ದಾರಿಯನ್ನು ನುಂಗಿಕೊಂಡು ಹೋಗತಕ್ಕ ನೆಲತಿಮಿಂಗಿಲದಂತಿರಬೇಕು. ಹಾಗಿದ್ದರೇನೇ ಕಾರು. ಇಲ್ಲದೇ ಹೋದರೆ ಹತ್ತು ಪಾಲಿಗೆ ಬಸ್ಸೇ ವಾಸಿ. ಅದರಲ್ಲಿರೋ ಇಪ್ಪತ್ತೆರಡು ಮಂದಿ ಇಪ್ಪತ್ತೆರಡು ತರಹ. ಬಸ್ಸಿನ ಸಾರಥಿಗಂತೂ ತನ್ನ ಮನೆಮಂದಿಯ ಯೋಚನೆಯೇ ಇರುವುದಿಲ್ಲ. ಅಂದಮೇಲೆ ಬಸ್ಸಿನ ಬುಡಕ್ಕೆ ಬಿಡಾರ ಹುಡುಕಿ ಬರುವ ಬಂಧುಗಳ ಮೇಲೆ ಪ್ರೀತಿ ಎಲ್ಲಿಂದ? ಬ್ರೇಕು ಪರೀಕ್ಷೆಗಾಗಿ ಅಡ್ಡ ನಿಲ್ಲುವ ಕುಂಟರು, ಕೆಪ್ಪರು, ಮುದುಕರು, ಎಮ್ಮೆ ಕೋಣಗಳು ಇವುಗಳ ಹತ್ರ ಆತನ ಕುಶಲ ಪ್ರಶ್ನೆಗಳ ಸ್ವಾರಸ್ಯ ಬೇರೆ. ಸರಿಯೆ. ಆದರೆ ಡಿಪ್ಯೂಟಿಯವರ ಸಾರಥಿ ಎಂಥವನೊ!

ಅಷ್ಟರಲ್ಲಿ ಹೊರಗೊಂದು ಜಟಕಬಂದು ನಿಂತು ಊಹೆಯೂ ಸಂಗೀತವೂ ಏಕಕಾಲದಲ್ಲಿ ನಿಂತುಬಿಟ್ಟಿತು. ಮಾಲತಿ ಇರಬೇಕು, ಮತ್ಯಾರು, ಆದರೆ ಶಾರದಮ್ಮನ ಸ್ವರ ಮಾತ್ರ ಕೇಳಿಸಿತು. ಹೋಗಿನೋಡಲು ಕಾಲೇ ಬರಲಿಲ್ಲ. ಎದೆ ಬಡಿದುಕೊಳ್ಳುತ್ತಿತ್ತು. ಇಂದಿರಮ್ಮನೂ ಶಾರದಮ್ಮನೂ ಮಾತನಾಡುತ್ತಿರುವುದನ್ನು ತನ್ನ ಕೋಣೆಯ ಹೊಸಲಬಳಿ ನಿಂತು ಕೇಳಿದನು. ಮಾಲತಿ, ಮದ್ರಾಸಿಗೆ ಹೋದಳು? ಅಹುದು. ಫಕ್ಕನೆ ಮನಸ್ಸಾಯಿತು, ಗಂಡನ ಜತೆಗೆ ಹೋಗಬೇಕೂಂತ. ಹೋಗಿಬಿಟ್ಟಳು. ಯಾರಿಗೂ ಗೊತ್ತಿರಲಿಲ್ಲ. ಪೆಟ್ಟಿಗೆ ಕಟ್ಟಿದ್ದೇ ಗೊತ್ತು. ಸೋಮವಾರ ಇಬ್ಬರೂ ಬರುತ್ತಾರೆ. ಆಶ್ಚರ್ಯ! ಪರಮಾಶ್ಚರ್ಯ! ಅಲ್ಲಾ, ಒಂದು ಮಾತಾದರೂ ಹೇಳಿಹೋಗಬಹುದಿತ್ತು. ಆದರೆ ಯಾವಾಗ, ಅವಕಾಶವೆಲ್ಲಿ? ಗೋಪಿನಾಥನಿಗೆ ಆ ದಿನದ ಗೋಪುರದ ಕಲಶವೇ ಕಳಚಿಬಿದ್ದು ಚೂರುಚೂರಾದಂತಾಯಿತು. ಇನ್ನೊಂದು ಗಳಿಗೆಯಲ್ಲಿ ಹೊರಟೇತೀರಬೇಕು.

ಆದರೆ ಆತನಿಗೆ ಮನೆಬಿಟ್ಟು ಹೊರಡುವಾಗಿದ್ದ ಎದೆಸಂಕಟ ಕಾರಿನಲ್ಲಿ ಕುಳಿತಮೇಲೆ ಬಹಳ ಸಮಯ ಇರಲಿಲ್ಲ. ಮೊದಲೇ ಉಬ್ಬಾಳಾಗಿದ್ದ ಡ್ರೈವರನಿಗೆ ತಾನು ಹೊರಟ ಕೆಲಸದ ಹಿರಿಮೆಯನ್ನೂ ತರಾತುರಿಯನ್ನೂ ತಿಳಿಸಿ ಹುರಿದುಂಬಿಸಿದ್ದರಿಂದ ಆತ ಹೊಸ ಕಾರನ್ನು ಹಾರಿಸಿದ, ಹೆಮ್ಮೆಯಿಂದ. ಅದು ನೀರಿನಮೇಲೆ ಹಕ್ಕಿ ಚಿಮ್ಮಿದಂತೆ ಚಲಿಸುವಾಗ ಮುಖದ ಮೇಲೆ ರುಮುರುಮು ಬೀಸುತ್ತಿದ್ದ ಗಾಳಿಯೊಂದಿಗೆ ವೇಗದ ಅಮಲು

ತಲೆಗೇರಿತು. ಗೋಪಿನಾಥನಿಗೆ ಹಗಲುಗನಸುಗಳು ಸಾಲುಸಾಲಾಗಿ ತೇಲಿ ಬಂದು ತೇಲಿ ಹೋದವು.

ಮೂಡಬಿದ್ರೆ, ಕಾರ್ಕಳ, ಉಡುಪಿ. ಭಾನುವಾರ ಕುಂದಾಪುರ. ರಾತ್ರೆ ಮರಳಿ ಮಂಗಳೂರು. ಸೋಮವಾರ ಬೆಳಿಗ್ಗೆ ಪುತ್ತೂರು. ಅಲ್ಲಿಂದ ಕಾಸರಗೋಡು. ಸಂಜೆ ಮರಳಿ ಮಂಗಳೂರು. ಹೋದಲ್ಲೆಲ್ಲ ಸಹಕಾರ ಸಂಘಗಳ ಆಫೀಸುಗಳಲ್ಲೊ, ಮಂಡಿಗಳಲ್ಲೋ ತಂಗಿದನು. ಸಭೆ ಕೂಡಿಸಿದನು ಲೆಕ್ಕಪತ್ರ ತರಿಸಿದನು. ಎಡೆಬಿಡದೆ ದೆವ್ವ ಹಿಡಿದವನಂತೆ ದುಡಿದನು. ಸೋಮವಾರ ಸಂಜೆ ಮಂಗಳೂರಿಗೆ ತಲಪುವಾಗ ಜಿಲ್ಲೆಯ ಆಹಾರದ ವಿಚಾರ ಆತಗೆ ಗೊತ್ತಿಲ್ಲದ ವಿಷಯವೇ ಇರಲಿಲ್ಲವೆನ್ನಬಹುದು.

ಅಂದು ಸಾಯಂಕಾಲ ಮದ್ರಾಸಿನಿಂದ ಮೈಲುಗಾಡಿ ಬರುವ ವೇಳೆಗೆ ಮಂಗಳೂರಿನ ಸ್ಟೇಶನ್ ಪ್ಲಾಟುಫಾರ್ಮಿನಲ್ಲಿ ವಿಶೇಷ ಗಲಿಬಿಲಿ. ರೈಲು ಬರುವ ಒಂದು ಗಂಟೆಗೆ ಮುಂಚಿತವಾಗಿಯೇ ಹಾಜರಾಗಿದ್ದ ಸರಕಾರಿ ಅಧಿಕಾರಿಗಳ ದಲಾಯಿತರು, ದಫೇದಾರರು ಹಲವರು ದವಾಲೆ ಹಾಕಿಕೊಂಡು ಠೀವಿಯಿಂದ ಸ್ಟೇಶನು ತುಂಬ ಓಡಾಡುತ್ತ ರೈಲ್ವೆ ಇಲಾಖೆಯ ಕೀಳು ನೌಕರರ ಎದುರಿಗೆ ಮೆರೆಯುತ್ತಿದ್ದರು. ಇನ್ನು ಕೆಲವರು ಹೊರಗಡೆ ಜಗಲಿಯ ಮೇಲೆ ತಂಡ ತಂಡವಾಗಿ ಕುಕ್ಕರಿಸಿ ತಮ್ಮ ಧಣಿಗಳ ಕಾರುಗಳ ಆಗಮನವನ್ನು ನಿರೀಕ್ಷಿಸುತ್ತ ಒಂದೇ ಒಂದು ಕಾಗೆಯನ್ನಾಗಲಿ ನಾಯಿಯನ್ನಾಗಲಿ ಹತ್ತಿರ ಬರಲು ಬಿಡುತ್ತಿರಲಿಲ್ಲ. ಸಮಯ ಸಮೀಪಿಸಿದ ಹಾಗೆಲ್ಲ ಒಬ್ಬೊಬ್ಬರೇ ಜಿಲ್ಲಾಧಿಕಾರಿಗಳು ಚಿತ್ತೈಸಿದರು. ಕಮಿಶನರು ಪತ್ನಿಸಮೇತರಾಗಿ ಬರುತ್ತಾರೆಂತ ವರ್ತಮಾನವಿದ್ದುದರಿಂದ ದೊಡ್ಡದೊಡ್ಡವರೆಲ್ಲ ಸಪತ್ನಿಯರಾಗಿಯೇ ಬಂದಿದ್ದರು. ಕಲಾಬತು ಅಂಚಿನ ರಾಜನೀಲಿ ರೇಶ್ಮೆ ಸೀರೆಯನ್ನುಟ್ಟು ಸುಶೀಲಮ್ಮನೂ ಬಂದಿದ್ದರು. ಬಂಡಿ ಬರುವುದಕ್ಕೆ ಒಂದು ನಿಮಿಷಕ್ಕೆ ಮೊದಲು ಜಿಲ್ಲಾ ಕಲ್ಲೆಕ್ಟರೂ ಅವರ ದೊರೆಸಾನಿಯೂ ಬಂದರು. ಒಂದು ತಾಸಿನ ಮುಂಚೆ ನಿರ್ಜನ-ನಿರ್ಜೀವವಾಗಿದ್ದ ಪ್ಲಾಟುಫಾರ್ಮು ಸ್ವಲ್ಪ ಸಮಯದೊಳಗೆ ಪುರ ಪ್ರಮುಖರ ಪ್ರದರ್ಶನ ಕೇಂದ್ರವಾಗಿಬಿಟ್ಟಿತು.

ಜಿಲ್ಲಾ ಕಲ್ಲೆಕ್ಟರು, ಅವರ ಪರ್ಸನಲ್ ಅಸ್ಸಿಸ್ಟೆಂಟರು, ಅಸಿಸ್ಟೆಂಟು ಕಲ್ಲೆಕ್ಟರು, ಡಿಪ್ಯುಟಿರಿಜಿಸ್ಟ್ರಾರು, ಸಬ್ ಡಿಪ್ಯೂಟಿರಿಜಿಸ್ಟ್ರಾರು ಹಲವರು.

ತಹಸಿಲ್ದಾರರೂ ಅವರ ಗಣಗಳೂ, ಸಹಕಾರಿ ಸೆಂಟ್ರಲ್ ಸ್ಟೋರ್ಸಿನ ಅಧ್ಯಕ್ಷರು. ಸಪ್ಲ್ಯೈ ಆಫೀಸರು, ಇವರೇ ಮೊದಲಾದ ಉನ್ನತಾಧಿಕಾರಿಗಳೂ ಅವರ ಕೈಕೆಳಗಿನವರೂ ಅಲ್ಲಿವೆ ಬೆಡೆರೋಲಿನಷ್ಟು ಗಾತ್ರದ ವಜ್ರದ ಗುಂಡಿಗಳಿಂದ ರೇಷ್ಮೆಜಿಬ್ಬದ ಹೊದಿಕೆಯಿದ್ದ ಡೊಳ್ಳು ಹೊಟ್ಟೆಯ ವರ್ತಕಸಂಘದ ಅಧ್ಯಕ್ಷರೂ, ಆರಿಂಚು ಎತ್ತರದ ಗಾಂಧಿಟೋಪಿಯ ಕಾಂಗ್ರೆಸು ಮುಖಂಡರೂ ಲುಂಗಿಯ ಮೇಲೆ ಮೊಳಕಾಲುದ್ದ ಜಿಬ್ಬಹಾಕಿ ಅದರ ಮೇಲೆ ನಶ್ಯ ಬಣ್ಣದ ವೆಸ್ಟುಕೋಟು ತೊಟ್ಟಿದ್ದ ಕಮ್ಯುನಿಷ್ಟ ಕಾಮ್ರೇಡರೂ, ವರ್ಷಕ್ಕೆ ಸುಮಾರು ಇಪ್ಪತ್ತು ಸಹಸ್ರ ರೂಪಾಯಿ ಕಂದಾಯ ತೆರುವ ಹಿರಿಮೆಯಿಂದ ಕತ್ತು ಜಗ್ಗಿಹೋದ ಭೂಮಾಲಿಕರ ಪ್ರೆಸಿಡೆಂಟರು ಅಪ್ಪಾಭಟ್ಟರೂ ನೆರೆದಿದ್ದರು. ಅಪ್ಪಾಭಟ್ಟರು ಇಂಥ ಸಂಭ್ರಮಗಳಿಗಾಗಿಯೇ ಮೀಸಲಾಗಿ ಹೊಲಿಸಿದ್ದ ಕರಿ ಅಲ್ಪಾಕ ಕೋಟನ್ನು ಹಾಕಿ, ಅದರ ಮೇಲೆ ಜರಿತಾರಿನ ರೇಷ್ಮೆ ಶಾಲನ್ನು ಕೊರಳಿನ ಇಬ್ಬದಿಯಲ್ಲೂ ದರ್ಜಿಯ ಲಾಡಿಯಂತೆ ಇಳಿಬಿಟ್ಟು ಕಲಾಬತಿನ ರುಮಾಲನ್ನು ಸುತ್ತಿಕೊಂಡಿದ್ದರು. ಜತೆಗೆ ಬಂದಿದ್ದ ಅವರ ಹೆಂಡತಿ ಸಮಯೋಚಿತವಾಗಿ ಭಾರಿಸೀರೆಯನ್ನುಟ್ಟು ಅರೆನೆರೆತ ಕೂದಲನ್ನು ತಲೆ ಹಿಂದುಗಡೆ ಬಿಗುವಾಗಿ ತುರುಬುಹಾಕಿ ಅದರ ಮೇಲೆ ಅಂಗೈಯಷ್ಟು ದೊಡ್ಡ ಚಿನ್ನದ ಗುಲಾಬಿ ಹೂವನ್ನು ಕುಕ್ಕಿಕೊಂಡಿದ್ದರು. ಅವರು ತಮ್ಮ ಹಳ್ಳಿಯಿಂದ ಬಂದುದು ಮತ್ಯಾವುದಕ್ಕೂ ಅಲ್ಲ. ಕಮಿಶನರ ದೊರೆಸಾನಿಯನ್ನು ಕಂಡು ನಾಲ್ಕು ಮಾತನಾಡಿಬಿಡಬೇಕೆಂಬ ಒಂದೇ ಚಪಲಕ್ಕಾಗಿ. ಒಂದೆರಡು ದೊರೆಗಳನ್ನು ಎಲ್ಲೋ ನೋಡಿದ್ದು ನೆನಪಿತ್ತು. ಆದರೆ ದೊರೆಸಾನಿಗಳನ್ನು ನೋಡಿರಲಿಲ್ಲ. ಸೇರುಕಟ್ಟೆಳೆ ಚಿನ್ನಾಭರಣಗಳಿಂದಲಂಕೃತರಾಗಿ ವೃದ್ಧ ವರಲಕ್ಷ್ಮಿಯಂತಿದ್ದರು

ಈ ದಿಬ್ಬಣಿಗರ ಗಡಿಬಿಡಿಯಲ್ಲಿ ರೈಲುಬರುವ ಸ್ವಲ್ಪ ಮುಂಚೆ ಸ್ಟೇಶನಿನ ಒಳಹೊಕ್ಕ ಗೋಪಿನಾಥನನ್ನು ಯಾರೂ ಗಮನಿಸಲಿಲ್ಲ. ಆತನಿಗೂ ಅಷ್ಟೇ ಬೇಕಾದ್ದು. ತಮಾಷೆ ನೋಡಲು ಬರುವವರಂತೆ ಒಂದು ಧೋತ್ರ, ಅದರ ಮೇಲೊಂದು ಜಿಬ್ಬವನ್ನಷ್ಟೇ ಹಾಕಿಕೊಂಡಿದ್ದನು. ಬಂದವನು ಹಿಗಿನ್ ಬಾತೆಮ್ಸಿನ ಪುಸ್ತಕ ಮಾರುವವನೊಂದಿಗೆ ಮಾತನಾಡುತ್ತ ನಗುತ್ತ ನಿಂತಿದ್ದನು.

ಬಿರುಗಾಳಿ ಅಂಟಿಕೊಂಡು ಬಂದ ದನಕರುಗಳಂತೆ ರೇಲ್ವೆ ನೌಕರರು ಚೆಲ್ಲಾಪಿಲ್ಲಿಯಾಗಿ ಅತ್ತಿತ್ತ ಓಡಲಾರಂಭಿಸಿದರು. ಬಹುದೂರದಿಂದ 'ಕೋ' ಅಂತ ಕೀಚುಸ್ವರ ಕೂಗಿತು, ಕಣ್ಣುಮುಚ್ಚಾಲೆ ಆಡುವ ಮಕ್ಕಳಂತೆ. ಮರುಕ್ಷಣ ರೈಲು ಕಾಣಬಂತು. ಹೊಗೆ ಕಾರುತ್ತ, ಗರ್ಜಿಸುತ್ತ, ನೆಲನಡುಗಿಸುತ್ತ ನೋಡುತ್ತಿದ್ದ ಹಾಗೇ ಬಂದೇಬಿಟ್ಟಿತು, ಮಹಾ ಕಾರ್ಕೋಟಕದಾತೆ. ಸ್ಟೇಶನಿನಲ್ಲಿ ನಿಲ್ಲುವದಿಲ್ಲವೋ ಎನ್ನುವಷ್ಟು ರಭಸದಿಂದ ಬಂತು. ಕಟಕಟ, ತಟಪಟ ಅಂತ ಹಲವುಗಾಡಿಗಳು ಮಿಂಚಿಹೋದವು. ಫಕ್ಕನೆ ಪ್ಲಾಟುಫಾರ್ಮಿಗೆ ಅಡ್ಡನಾಗಿ ಉದ್ದಕ್ಕೂ ನಿಂತುಬಿಟ್ಟಿತು. ಸಾಲುಸಾಲಾಗಿ ನಿಂತಿದ್ದ ಸ್ವಾಗತಕೂಟದವರು ಒಂದನೇ ತರಗತಿಯ ಗಾಡಿಯಿದ್ದಲ್ಲಿಗೆ ಹೋಗಿ ಮುತ್ತಿದರು. ಕಲ್ಲೆಕ್ಟರ ಹೆಂಡತಿ ವಿನಹ ಮಿಕ್ಕ ಹೆಂಗಸರೆಲ್ಲ ಲೇಡೀಸ್ ವೈಟಿಂಗ್ ರೂಮಿನಲ್ಲಿದ್ದರು. ಗೋಪಿನಾಥ ನಿಂತಲ್ಲೇ ಎದುರು ಒಂದು ಫರ್ಸ್ಟ್‌ಕ್ಲಾಸ್ ಗಾಡಿಯಿಂದ ಬಾಗಿಲವನ್ನು ತೆರೆದು ಮಾಲತಿ ಕೆಳಗೆ ಹಾರಿದಳು. ಆಕೆ ಬೆನ್ನಿಗೆ ನಗುತ್ತಿದ್ದ ಕಮಿಶರ ಹೆಂಡತಿಯೂ ಇದ್ದರು. ಪಕ್ಕದ ಕಂಪಾರ್ಟ್ಮೆಂಟಿನಿಂದ ಕಮಿಶನರೂ ಅವರ ನಂತರ ರಾಘವೇಂದ್ರರಾಯರೂ ಹೊರಗೆ ಬಂದರು. ಅಲ್ಲಿ ಸಭೆಸೇರಿದ್ದವರ ಪರಿಚಯ ಮಾಡಿಸಿಕೊಡುವ ಕೆಲಸ ರಾಘವೇಂದ್ರರಾಯರು ನಿರ್ವಹಿಸಿದರು. ಕಲ್ಲೆಕ್ಟರ ಹೆಂಡತಿ ಕಮಿಶನರ ಹೆಂಡತಿ ಹತ್ರ ಮಾತನಾಡುತ್ತ ಅವರ ಸಂದರ್ಶನಕ್ಕಾಗಿ ಹಲವು ಮಹಿಳೆಯರು ವೈಟಿಂಗ್ ರೂಮಿನಲ್ಲಿ ಕಾದಿರುವರೆಂತ ಹೇಳಿದೊಡನೆ ಅವರು 'ಮಾಲ್ಲತಿ' ಅಂತ ಮಾಲತಿಯನ್ನು ಕರೆದು ಆಕೆ ಜತೆಯಲ್ಲಿ ವೈಟಿಂಗ ರೂಮಿಗೆ ಹೋದರು.

ಕಲ್ಲೆಕ್ಟರ ದೊರೆಸಾನಿಯ ನಂತ್ರ ಲೇಡಿ ಕಮಿಶನವರ ಪರಿಚಯದ ಮುಜರ್ಾದೆ ತನಗೇನೇ ಸಲ್ಲತಕ್ಕದ್ದೆಂತ ಹೆಮ್ಮೆಪಟ್ಟು ಸುಶೀಲಮ್ಮ ಮುಂದೊತ್ತಿ ಬಂದರು. ಆದರೆ ಮಾಲತಿ ಅವರನ್ನು ನೋಡದ ಹಾಗೆ ನಟಿಸಿ ಮಿಕ್ಕವರೆಲ್ಲರ ಪರಿಚಯ ಮಾಡಿಸಿದ ನಂತ್ರವೇ ಅವರಿಗೆ ಆಗಂತುಕರ ಕೈಕುಲುಕಿಸುವ ಭಾಗ್ಯ ಒದಗಿಸಿಕೊಟ್ಟರು. ಅಪ್ಪಾಭಟ್ಟರ ಹೆಂಡತಿಯನ್ನು ನೋಡಿ ಕಮಿಶನರರ ಹೆಂಡತಿಗೆ ತುಂಬ ಸಂತೋಷವಾಯಿತು.

"Tell the old lady I am delighted to see her" ಅಂದರು ಮಾಲತಿಗೆ. ಮಾಲತಿ ಈ ಸಂಭಾವನೆಯನ್ನು ಒಪ್ಪಿಸಿದಳು. ಈ

ಉತ್ತೇಜನದಿಂದ ಭಟ್ಟರ ಹೆಂಡತಿಗೆ ಕೇಳಬೇಕೆಂದಿದ್ದ ಪ್ರಶ್ನೆಗಳ ಪಟ್ಟಿಯನ್ನು ಹೊರತೆಗೆಯುವ ಧೈರ್ಯ ಬಂತು. "ಇವಳಿಗೆ ವಯಸ್ಸೆಷ್ಟು?" ಎಂದು ಕಣ್ಸನ್ನೆ ಮಾಡುತ್ತ ಮಾಲತಿ ಹತ್ರ ಕೇಳಿದರು. ಮಾಲತಿ ಕಿಂಚಿತ್ತಾದರೂ ಚಮಕಿತಳಾಗದೆ. "ನೀವಿಲ್ಲಿ ಎಷ್ಟು ದಿನ ಇದ್ದೀರೀಂತ ಕೇಳ್ತಾರೆ" ಅಂದಳು.

"Oh! only a coupl of days. I'm afraid", ಅಂದರು ಕಮೀಶನರ ಹೆಂಡತಿ.

"ಮೂವತ್ತೆರಡು ವರ್ಷ" ಅಂತ ಭಟ್ಟರ ಹೆಂಡತಿಗೆ ದಾಟಿಸಿದಳು.

"ಮಕ್ಕಳೆಷ್ಟಂತೆ?"

"ಇನ್ನೆರಡು ದಿನಗಳಾದ್ರೂ ಇದ್ರೆ ಚೆನ್ನಾಗಿತ್ತೂಂತಾರೆ."

"I should have loved to. But we have our Program cut out."

"ಎರಡು ಗಂಡು, ಒಂದು ಹೆಣ್ಣು. ಇಬ್ಬರು ವಿಲಾಯತಿಯಲ್ಲಿ, ಕೊನೆಯವಳು ಮದ್ರಾಸಿನಲ್ಲಿ."

"ಅವಳ ಗಂಡಗೆ ಪ್ರಾಯ, ಸಂಬಳ? ಇವಳು ಎರಡನೆಯ ಸಂಬಂಧವೊ? ವಿಲಾಯತಿಯ ಹೆಂಗಸರು ಮುಟ್ಟಾದರೆ ಹೊರಗೆ ಕೂತುಕೊಳ್ಳುತ್ತಾರೋ ಇಲ್ಲವೋ?" ಇಂಥ ಸವಾಲುಗಳನ್ನು ರೂಪಾಂತರಗೊಳಿಸಿ ಕೇಳಿ, ಬಂದ ಜವಾಬುಗಳನ್ನು ಬದಲಿಸಿ ಹೇಳುತ್ತಿದ್ದ ಮಾಲತಿಗೆ ಪ್ರಾಣಕ್ಕೆ ಬಂತು. ಆದರೂ ಸ್ವಲ್ಪವೂ ಹಿಂದೆಗೆಯದೆ ಚಮತ್ಕಾರದಿಂದ ನಿಭಾಯಿಸಿದಳು. ಬೆರಗಾಗಿ ನೋಡುತ್ತಿದ್ದ ಮಿಕ್ಕ ಮಾನಿನಿಯರ ಮಾನವನ್ನು ಕಾಪಾಡಿದಳು.

ಈ ಪ್ರಹಸನ ಮುಗಿದ ಮೇಲೆ ಕಮಿಶನರರ ಹೆಂಡತಿ ಭಟ್ಟರ ಹೆಂಡತಿಯ ಕಡೆಗೆ ಕೈ ನೀಡಿದರು. ಆದರೆ ಅವರು ಹಿಂಜರಿದು ಕೈ ಜೋಡಿಸಿ ನಮಸ್ಕರಿಸಿದರು. "ಯಾವ ಮೈಲಿಗೆಯೋ ಏನೋ! ನಾನವಳನ್ನು ಮುಟ್ಟೋದಿಲ್ಲಾಂತ ಹೇಳಿಬಿಡು" ಅಂತ ಮಾಲತಿಗೆ ಹೇಳಿದರು.

"ನಮ್ಮ ದೇಶ ಪದ್ಧತಿಯಂತೆ ವಂದಿಸುತ್ತಿದ್ದಾರೆ" ಅಂದಳು ಮಾಲತಿ. ಅದಕ್ಕೆ ಕಮಿಶನರರ ಹೆಂಡತಿ ನಗುತ್ತ ತಾನೂ ಪರಿಷ್ಕಾರವಾಗಿ ಕೈಜೋಡಿಸಿ ನಮಸ್ಕರಿಸಿ ಎಲ್ಲರಿಗೂ ವಂದಿಸಿ ಹೊರಗೆ ಹೋದರು.

ತನ್ನಷ್ಟಕ್ಕೆ ತಾನು ಸಿಲುಗಡೆಯಲ್ಲಿ ಅಡ್ಡಾಡುತ್ತಿದ್ದ ಅಧಿಕಾರಿಗಳ ಅಟ್ಟಹಾಸವನ್ನು ನೋಡುತ್ತಿದ್ದ ಗೋಪಿನಾಥನಿಗೆ ಮಾಲತಿಯು ಕೇವಲ

ಅಪರಿಚಿತರೊಂದಿಗೆ ಬೆರೆತು ಅವರ ಬೆಡಗಾಟಕ್ಕೆ ತಾನೂ ಹಿಗ್ಗಿ ಹಾರುವುದು ಆಶ್ಚರ್ಯಕರವಾಗಿತ್ತು. ಈ ಮಾಟಗಾರ್ತಿಗೆ ಯಾವ ವೇಷ ಹಾಕಿದರೂ ಒಪ್ಪುತ್ತ ದಲ್ಲ! ಈ ಜನಮೆಚ್ಚಿನ ಮರಳು ಈಕೆಯ ಹುಟುಗುಣವಾಗಿರಬಹುದೇ ? ಅಥವಾ ಪ್ರಸಂಗಕ್ಕೆ ತಕ್ಕ ಹಾಕಿಕೊಂಡ ಬಣ್ಣವೇ? ಅಥವಾ ಗಂಡನ ಸಂಸರ್ಗ ದೋಷವೆ ? ರಾಘವೇಂದ್ರರಾಯರಿಗಂತೂ ಇತ್ತಲಾಗಿನ ಅಕ್ಕಲೇ ಇರಲಿಲ್ಲ. ಅದನ್ನು ನೋಡುತ್ತ ಗೋಪಿನಾಥನಿಗೆ ಇದೇನು ಹುಲಿಕುಣಿತ! ಕವಿಶನ ರರ ಬಾಲಹಿಡಿದು ಹೀಗೂ ಒದ್ದಾಡಬೇಕೇ ? ಮಹಾರಾಯ ! ಡೌಲು ದೇವೇಂದ್ರಂದು, ಬುದ್ಧಿ ದಫೇದಾರಂದು, ಎಂದನಿಸಿತು

ಸ್ವಪ್ರತಿಷ್ಠಾಪ್ರಚಾರವೀರರ ನಡುವೆ ಇಂಗ್ಲೀಷು ಮಾತನಾಡುತ್ತ ಸಲಿಗೆ ಯಿಂದ ನಗುತ್ತ ಒಡನಾಡುತ್ತಿದ್ದ ಮಾಲತಿಯ ಗುರುತವೇ ಸಿಕ್ಕಲಿಲ್ಲ. ಗೋಪಿ ನಾಥ ಯೋಚನೆ ಮಾಡಿದಷ್ಟೂ ವಿಷಯ ಕಲ್ಲುಗಟ್ಟಿತು. ಒಬ್ಬ ಮಾನವಜೀವಿ ಯ ಒಳಪರಿಚಯ ಸಂಪೂರ್ಣವಾಗಿ ಇನ್ನೊಬ್ಬನಿಗೆ ಆಗಲು ಸಾಧ್ಯವೆ? ಅದ ರಲ್ಲೂ ಹೆಣ್ಣು ಜೀವದ? ಮೂರೇ ಮೂರು ದಿನಗಳ ಹಿಂದೆ ಹಿಂಡನ್ನಗಲಿ ಕಂಗೆಟ್ಟ ಹರಿಣಿಯಂತೆ ತನ್ನ ತಕ್ಕೆಯಲ್ಲಿ ಬಿದ್ದಿದ್ದ ಮುಗ್ಧೆ. ಬಣ್ಣದ ಬೀಸಣಿ ಕೆಯನ್ನು ಬಿಚ್ಚಿ ನಲಿವ ನವಿಲಿನಂತಿರುವ ಈ ವಿದಗ್ಧೆ ಇಬ್ಬರೂ ಒಂದೇ ವ್ಯಕ್ತಿಯೆಂದರೆ ? ನಂಬಲಾಗದು. ಮೂರು ದಿನಗಳ ವಿರಹದಾನಂತರ ಒಮ್ಮೆ ನೋಡಿಯಾದರೂ ಮನಸ್ಸನ್ನು ಕುಣಿಸಬೇಕೆಂದು ಬಂದವನಿಗೆ ನೋಡಿಯೂ ನೋಡದಂತಾಯಿತು. ಅದುವರೆಗೆ ಅತಿ ಸ್ವಾರಸ್ಯವಾಗಿದ್ದ ಸನ್ನಿವೇಶ ವಿರಸವಾಗಿಬಿಟ್ಟಿತು. ತನ್ನ ಪ್ರಾಣ ಹಿಂಡುವ ಯಾತನೆ ಆಕೆಗೆ ಲವಲೇಶವಾದರೂ ಇಲ್ಲವೆ ಹಾಗಾದರೆ? ಅಥವಾ ಪ್ರೇಮವೆಂದರೆ ಒಂದು ಕ್ಷಣ ಮನೋವಿಕಾರಗೊಳಿಸಿ ಮಾಯವಾಗುವ ಕ್ಷುಲ್ಲಕ ಅನುಭವವೆಂತ ಆಕೆ ಭಾವಿಸಿರಬಹುದೆ? ಪ್ರಾಯಶಃ ಹೆಂಗಸರಿಗೆ ಈ ನಮ್ಮ ಹೃದ್ರೋಗ ಅಂಟಿಕೊಳ್ಳುವುದಿಲ್ಲ. ಈ ಯಾಚನೆ, ಈ ಯಾತ್ರೆ, ಆರಾಧನೆ, ನಿವೇದನೆ ಎಲ್ಲವೂ ನಮಗೇ ಮೀಸಲು. ಅವರಿಗೆ ನಾವು ಸಮರ್ಪಿಸಿದ್ದನ್ನು ಸ್ವೀಕರಿ ಸುವ ಅರ್ಹತೆ ಬೇಕಲ್ಲ? ನಮ್ಮ ಹುಚ್ಚಿನಿಂದಾಗಿ ನಾವು ಅವರನ್ನೆತ್ತಿ ಎತ್ತ ರದ ಪೀಠಕ್ಕೇರಿಸಿದರೆ ಕೈಬಿಟ್ಟ ಕ್ಷಣ ತಲೆಸುತ್ತಿ ಕೆಳಗೆ ಬೀಳುವುದು ನಿಶ್ಚಯ. ಪರಮ ಪ್ರೇಮಸಿದ್ಧಿ ಅವರ ಹಣೆಯಲ್ಲಿ ಬರೆದಿಲ್ಲ. ಇದ್ದುದನ್ನೆಲ್ಲ ಹೆಣ್ಣಿಗೆ

ಕೊಟ್ಟವನು ಕೆಟ್ಟ. ಹೆಣ್ಣಿಗೆ ಯಾವುದನ್ನು ಕೊಟ್ಟರೂ ಸರಿ, ಆತ್ಮಶ್ರೀಯನ್ನು ಮಾತ್ರ ಕೊಡಬಾರದು. ಅದು ಪರಮಾತ್ಮನಿಗೇನೇ ಸಲ್ಲತಕ್ಕ ಸೇವೆ. ಪುರುಷನಿಗೆ ಪರಮಾತ್ಮನೊಬ್ಬನೇ ಪ್ರಭು.

ಹೆಂಗಸಿಗೇನು ಬೇಕು? ನಿರಾಯಾಸವಾಗಿ, ನೆಮ್ಮದಿಯಾಗಿ, ಸುರಕ್ಷಿತವಾಗಿ ಇರಗೊಡುವ ಸೌಮ್ಯ ಮಮತೆ ಅಂಥ ಒಲವಿನಲ್ಲಿ ಚಲನವಿಲ್ಲ ಬೇಕಿಲ್ಲ, ಅಪಾಯವಿಲ್ಲ. ಆದ್ದರಿಂದಲೇ ಆಕೆ ಯಾರೊಂದಿಗೂ ಸಂಸಾರ ಮಾಡಬಲ್ಲಳು. ನಿತ್ಯ ಉಪಯೋಗಕ್ಕೆ ನಿತ್ಯ ಉತ್ಸವಕ್ಕೆ ಬೇಕಾದ್ದು ಒದಗಿಸಿಕೊಟ್ಟರೆ ಸಾಕು, ತನು ಮನಗಳನ್ನು ದಾನಮಾಡುತ್ತಾಳೆ. ಇದೇ ನಾವು ಕುರುಡರಾಗಿ ಆತ್ಮೀಯತೆಯೆಂದು ತಿಳಿದು ಮೋಸ ಹೋಗುವುದು.

ಹೆಂಗಸೇನು ಮಾಡಿಯಾಳು? ಆಕೆಯ ದೇಹರಚನೆಯೇ ಹಾಗೆ. ಅರಗಿನ ಮನೆ. ನಿತ್ಯ ನೋಟಕ್ಕೆ ಚೆಂದ. ನಿತ್ಯವಾಸಕ್ಕೆ ಅನುಕೂಲ. ಆದರೆ ಪ್ರಬುದ್ಧ ಪ್ರೇಮಜ್ಯೋತಿಯನ್ನಿಟ್ಟರೆ ಸುಟ್ಟು ಭಸ್ಮ. ಯಾವಬಗೆಯ ಆವೇಶವನ್ನೂ ಉದ್ದೇಶವನ್ನೂ ತಡೆಯಲಾರದ ಪ್ರವೃತ್ತಿ. ಕಾಮಾಗ್ನಿ ಕೈತಪ್ಪಿತೆಂದರೆ ಕರಗಿ ಹೋಗುವುದು. ಅದೇ ಅಬಲತೆ. ಅಸಹಾಯಕತೆ. ಒಂದಲ್ಲ ಒಂದುದಿನ ಇಂಥ ಬೆಂಕಿಯಲ್ಲಿ ಉರಿದು ಹೋಗುವುದೇ ಆಕೆಯ ನಾಶ, ಮುಕ್ತಿ. ಶೋಚನೀಯವಾದ ವಿಷಯವೇನೆಂದರೆ ಬಹುಮಂದಿ ಹೆಂಗಸರಿಗೆ ಈ ಜೀವನ್ಮುಕ್ತಿಯೊಂದಿದೆಯೆಂಬುದೇ ಗೊತ್ತಿಲ್ಲ. ಅಂಗಾಂಗಗಳು ಸವೆದು ನಿರ್ಜೀವವಾಗುವವರೆಗೂ ಅನಂಗನ್ಯಾರೆಂಬುದನ್ನರಿಯದ ಅಂಗನೆಯರೇ ಅಲ್ಪಸಂಖ್ಯಾತರು. ನಿಜ, ಆದರೆ ಮಾಲತಿ?

ಅಷ್ಟರಲ್ಲಿ ಆತನಿದ್ದಲ್ಲಿಗೆ ಡಿಪ್ಯೂಟಿ ರಿಜಿಸ್ಟ್ರಾರವರು ದುಡುದುಡು ಓಡಿಬಂದರು. "ಗೋಪಿನಾಥರಾವ್ ನಿಮ್ಮನ್ನಾಗಲೇ ನೋಡಿದೆ. ನೀವು ಎದುರು ಬೀಳದೆ ಇದ್ದುದೇ ಅನುಕೂಲವಾಯಿತು. ಇಂದು ರಾತ್ರಿಯೇ ಎಂಟು ಗಂಟೆಗೆ ನಿಮ್ಮ ಇಂಟರವ್ಯೂ ನಿರ್ಣಯವಾಗಿದೆ, ಅವರ ಬಂಗ್ಲೇಲಿ. ಈ ವಿಷಯ ನನಗೆ ಮಾತ್ರ ಗೊತ್ತು. ಕಲ್ಲೆಕ್ಟ್ರಿಗೂ ಗೊತ್ತಿಲ್ಲ. ಮುಂದಿನ ಕೆಲಸ ನಿಮ್ಮ ಕೈಲಿ; ಏನು?" ಅನ್ನುತ್ತ ಆತನ ಕೈ ಹಿಡಿದು ಕುಲುಕಿಸಿ ದುಡುದುಡು ಹೋಗಿಬಿಟ್ಟರು. ಅಷ್ಟರಲ್ಲಿ ಕಮಿಶನರರ ದಿಬ್ಬಣವೆಲ್ಲ ಹೊರಗೆ ಸರಿದು ಪ್ಲಾಟುಫಾರ್ಮು ಬರಿದಾಗುತ್ತ ಬಂದಿತ್ತು. ಗೋಪಿನಾಥ ನಿಧಾನವಾಗಿ

ಹೊರಗೆ ಹೋದನು. ಅಧಿಕಾರಿಗಳ ಪರಿವಾರವೂ ಕಾರುಗಳೂ ಹೋಗಿಬಿಟ್ಟು ವರ್ತಕ ಸಂಘದ ಅಧ್ಯಕ್ಷರದು, ಕಾಂಗ್ರೆಸ್ ಮುಖಂಡರದು, ಎರಡೇ ಕಾರುಗಳಿದ್ದುವು. ದೂರದಲ್ಲಿ ಒಂದು ಬಿಡಿ ಜಟಕವೂ ಇತ್ತು. ಸ್ಟೇಶನಿನ ಮುಖಮಂಟಪದ ಒಂದೆಡೆ ಎರಡು ಸೂಟು ಕೇಸುಗಳು. ಒಂದು ಹೋಲ್ಡಾಲು ಇವುಗಳನ್ನು ಕಾದುಕೊಂಡು ಕೈಯಲ್ಲಿ ಪತ್ರಿಕೆಗಳ ಕಟ್ಟೊಂದನ್ನು ಹಿಡಿದು ಕೊಂಡು ಮಾಲತಿಯೊಬ್ಬಳೇ ನಿಂತಿದ್ದಳು. ಖಿನ್ನ ಮನಸ್ಕಳಾಗಿ. ಗೋಪಿನಾಥನು ಆಕೆಯನ್ನು ಮಾತನಾಡಿಸುವುದರೊಳಗಾಗಿ ನಿಂತಿದ್ದ ಒಂದು ಕಾರಿನ ಮರೆಯಿಂದ ರಾಘವೇಂದ್ರರಾಯರು ಧಾವಿಸಿ ಬಂದು ಆತನನ್ನು ಕಂಡು,

"ಲೋ, ಗೋಪಿನಾಥ? ಬರುವಾಗ ಲೇಟಾಯಿತೇ ?" ಎಂದರು. ಆಚೆಗೆ ನೋಡುತ್ತಿದ್ದ ಮಾಲತಿ ತಬ್ಬಿಬ್ಬಾಗಿ ತಿರುಗಿ ನೋಡಿದಳು.

"ಆಗಲೇ ಬಂದಿದ್ದೆ. ಬುಕ್‌ಸ್ಟಾಲ್ ಪಕ್ಕದಲ್ಲಿದ್ದೆ.

"ಅಲ್ಲಾಂದ್ರೆ ನನಗೆ ಹೇಳಬಾರದಿತ್ತೇನೊ? ಕಮಿಶನರಿಗೆ ಇಂಟ್ರೊಡ್ಯೂಸ್ ಮಾಡಿಸುತ್ತಿದ್ದೆನಲ್ಲಾ ?"

"ಪರವಾಯಿಲ್ಲ. ಈ ಪೋಲಿಡ್ರೆಸ್ಸು ನೋಡಿ ಏನು ತಿಳಕೋತಿದ್ರೊ !"

"ತುಂಬಾಯೋಗ್ಯರು. ಅವರ ಮಿಸೆಸ್ಸೂ ಹಾಗೇನೇ. ಮಾಲತಿಗೆ ಗೊತ್ತು- ಅಲ್ವೇನೇ" ಎಂದು ಹಿಗ್ಗುತ್ತ ಹೆಂಡತಿಯನ್ನು ನೋಡಿದರು. ಆಕೆ ಸುಮ್ಮ ಗಿದ್ದಳು. ಆಕೆಯ ಮುಖ ಭಾವರಹಿತವಾಗಿತ್ತು.

"ಈಗ ನೀನು ಮನೆಗೆ ತಾನೇ ಹೋಗೋದು ? ಅಥವಾ ಬೇರೆಲ್ಲಿಗಾದರೂ ತಿರುಗಾಟಕ್ಕೆ—"

"ಇಲ್ಲ. ನನಗೇನೂ ಕೆಲಸವಿಲ್ಲ. ಏನಾಗಬೇಕು, ಹೇಳು."

"ಒಂದು ಕೆಲಸಮಾಡು. ಮಾಲತಿ ಒಬ್ಬಳೇ ಆಗಿದ್ದಾಳೆ. ಸಾಮಾನು ಬೇರೆ ಇದೆ. ನನಗೀಗ ಜರೂರು ಕೆಲಸವಿದೆ. ಬರೋದಕ್ಕಾಗೋದಿಲ್ಲ. ನೀನವ ಳನ್ನ ಮನೆಗೆ ತಲುಪಿಸಿಬಿಟ್ಟು ಹೋಗು."

"ಬೇಡ ಅವರಿಗ್ಯಾಕೆ ತೊಂದರೆ ? ಜಟಕಾಮಾಡಿಕೊಂಡು ಹೋಗೋದಕ್ಕೆ ಬರೋದಿಲ್ವೆ ನನಗೆ ?" ಅಂದಳು ಮಾಲತಿ, ಅಸಮಾಧಾನದಿಂದ.

"ಛೇ ! ಛೇ ! ಹಾಗಂದ್ರೇನೇ ? ಒಬ್ಬಳೇ ಹೋಗಬಾರದು. ಅಲ್ವೇನೋ, ಗೋಪಿನಾಥ ? ಪ್ರಯಾಣದಿಂದ ದಣಿವು ಬೇರೆ. ಛೇ ! ಆಗಬಹುದೇನೋ ?

ಥ್ಯಾಂಕ್ಸ್. ಅಮ್ಮಗೆ ಹೇಳಿಬಿಡೇ, ಏನೊ ಅರ್ಜೆಂಟಿದೆ, ಕೊಂಚ ತಡವಾಗ ಬಹುದೂಂತ" ಅಂದುಬಿಟ್ಟು ಮಾಲತಿ ಬಾಯಿಹೊಡೆದು, ಬೇರೆ ಯಾವ ಮಾತಿಗೂ ಎಡೆಗೊಡದೆ, ಗೋಪಿನಾಥನಿಗೆ ಅಪ್ಪಣೆಮಾಡಿ ಹೋಗಿಬಿಟ್ಟರು. ಒಂದು ಕಾರಿನೊಳಗೆ ನುಗ್ಗಿ ಬಾಗಲು ಹಾಕಿಕೊಂಡರು, ಧಡಕ್ಕನೆ. ಮಾಲತಿಯೂ ಗೋಪಿನಾಥನೂ ನೋಡುತ್ತಿದ್ದಂತೆ ಎರಡು ಕಾರುಗಳೂ ಸರಸರನೆ ಸಾಗಿ ಅದೃಶ್ಯವಾದುವು

ಗೋಪಿನಾಥನಿಗೆ ಮಾಲತಿಯನ್ನು ನೋಡಿ ಕಿರುಕುಳ ಎಬ್ಬಿಸಬೇಕೆಂದನ್ನಿಸಿತು. ಸೂಟುಕೇಸುಗಳೆರಡನ್ನೂ ಎರಡು ಕೈಗಳಲ್ಲಿ ಹಿಡಿದಿತ್ತಿದನು. ಮಾಲತಿ ಎದುರಿಗೆ ನಿಂತು

"ಆ ಹೋಲ್ಡಾಲನ್ನೆತ್ತಿ ನನ್ನ ತಲೆಮೇಲಿಟ್ಟುಬಿಡು" ಅಂದನು.

ಮಾಲತಿ ಹರಿತವಾದ ನೋಟದಿಂದ ಆತನನ್ನು ತಿವಿದು "ಕೆಳಗಿಡಿ ಸೂಟುಕೇಸು" ಅಂತ ಬುಸುಗುಟ್ಟಿದಳು ಆಕೆಯ ಮುಖ ಬಿಸಿಬಿಸಿಯಾಗಿತ್ತು. ಸರಕ್ಕನೆ ತಿರುಗಿನಿಂತು ಜಟಕದವನನ್ನು ಕೂಗಿ ಕರೆದಳು. ಸಾಮಾನುಗಳನ್ನು ಜಟಕದೊಳಗೆ ಇಡುವಂತೆ ಹೇಳಿದಳು. ಜಟಕದವನು ಗಾಡಿಯನ್ನು ತಂದು ಮೊದಲು ಅವರಿಬ್ಬರು ಹತ್ತಿ ಕುಳಿತುಕೊಳ್ಳುವಂತೆ ಸೂಚಿಸಿದನು.

"ನಾನೊಬ್ಬಳೇ ಬರೋದು. ಹೋಲ್ಡಾಲು ಹಾಕೊಳಗೆ" ಅಂದಳು ಮಾಲತಿ.

"ಅವರು ಹೇಳಿದಂತೆ ಮಾಡೋ. ಪೆಚ್ಚು ಮೋರೆ ಹಾಕ್ಕೊಂಡು ಏನು ನೋಡ್ತೀ ?" ಎಂದು ಗೋಪಿನಾಥನೂ ನೆರವಾದ.

"ನೀವು ಮತ್ತೆ ? ನಡದೇ ಬರುತ್ತೀರಾ ?" ಎಂದು ಜಟಕಾದವನು ಸಹಾನುಭೂತಿಯಿಂದ ಕೇಳಿದನು.

"ನಡೀಬೇಕ್ಯಾಕೆ ? ನಿನ್ನ ಜತೆಯಲ್ಲಿ ಕೂತುಕೋತೇನೆ" ಎಂದನು. ಸಾಮಾನುಗಳನ್ನು ಒಂದೊಂದಾಗಿ ಹೊತ್ತು ಗಾಡಿಯೊಳಗಿಡಹತ್ತಿರುವಾಗ ಗೋಪಿನಾಥ ಮಾಲತಿ ಕಡೆಗೂ ಮಾಲತಿ ಗೋಪಿನಾಥನ ಕಡೆಗೂ ಏಕ ಕಾಲದಲ್ಲಿ ಮುಖತಿರುಗಿಸಿದರು. ಅವರ ಕಣ್ಣುಗಳು ಸಂಧಿಸಿದವು.

"ನನ್ನ ಮನೆದಾರಿ ನನಗೆ ಗೊತ್ತಿದೆ."

"ಯಾರು ಇಲ್ಲಾಂದ್ರು ?"

“ ನೀವು ಜತೆಗೆ ಬರಬೇಕಾಗಿಲ್ಲ.”

“ ನಾನಾಗಿ ಬರುತ್ತಿದ್ದಿಲ್ಲ. ಆದ್ರೆ ರಾಘವೇಂದ್ರರಾಯರ ಹುಕುಂ ಜಾರಿ ಮಾಡಲೇಬೇಕಲ್ಲ.”

“ ನೀವು ಕೋರ್ಟ್ಗೆ ಪೇದೇಂತಕಾಣುತ್ತೆ, ಹುಕುಂ ಜಾರಿ ಮಾಡೋದಕ್ಕೆ.”

“ ಪೇದೆಯಲ್ಲ, ಕುದುರೆ ಕಾಸ್ತಾರ.”

ಮಾಲತಿ ಅವನ ಮುಖನೋಡುತ್ತ ಕಿಸಕ್ಕನೆ ನಕ್ಕು, “ ಇಷ್ಟು ಸಾಮಾನು ಹೇರಿಕೊಂಡು ಇಬ್ಬರು ಹೇಗೆ ಕೂತುಕೊಳ್ಳೋದು ?” ಆ ಪ್ರಶ್ನೆಗೆ ಜಟಕದವನೇ ಉತ್ತರ ಕೊಟ್ಟನು. ಇನ್ನಷ್ಟು ತುಂಬಿಸಿ ನಾಲ್ಕು ಮಂದಿ ಸುಖವಾಗಿ ಕುಳಿತುಕೊಳ್ಳುವ ಗಾಡಿ ತನ್ನದು, ಎಂದನು.

“ ಇವನೊಬ್ಬ, ಶನಿ. ಎಲ್ಲಿ ಗಂಟುಬಿದ್ದನೋ !” ಅಂದುಕೊಳ್ಳುತ್ತ ಮಾಲತಿ ಗಾಡಿಹತ್ತಿದಳು ಆಕೆಯ ಬೆನ್ನಿಗೆ ಬಾಗಲು ಹಾಕುತ್ತಿದ್ದ ಗೋಪಿ ನಾಥನನ್ನು ನೋಡಿ ಗಾಡಿಯವನು,

“ ನೀವೂ ಸೇರಿಕೊಳ್ಳಿ ಸ್ವಾಮಿ. ಬೇಕಾದಷ್ಟು ಜಾಗಾ ಇದೆ ” ಎಂದನು. ಮಾಲತಿ ಒಳಗೆ ಹೋಗಿದ್ದರೂ ಕುಳಿತುಕೊಳ್ಳದೆ ತಲೆಬಾಗಿ ನಿಂತುಕೊಂಡೇ ಇದ್ದಳು, ಗೋಪಿನಾಥನನ್ನು ನಿರೀಕ್ಷಿಸುತ್ತ.

“ ಎದುರಿಗ ನಿನ್ನ ಜತೇಲಿ ಕೂತುಕೋತೇನೆ.”

“ ಇಲ್ಲ ಸ್ವಾಮಿ, ಕುದುರೆಗೆ ಜಾಸ್ತಿ ತ್ರಾಸವಾಗುತ್ತದೆ, ಅಮ್ಮಾವ್ರು ಕಾದಿದ್ದಾರೆ, ಒಳಗೆ ಕೂತುಕೊಳ್ಳಿ” ಅಂದನು ಜಟಕವಾಲ.

“ ಆಗಲಿ, ಮತ್ತೇನ್ಮಾಡೋದು ” ಅನ್ನುತ್ತ ಹತ್ತಿ ಕುಳಿತನು. ಗಾಡಿಯವನು ಬಾಗಿಲು ಹಾಕಿ ಒಳಗಿಡಲು ಬಾಕಿಯಿದ್ದ ಹೋಲ್ಡಾಲನ್ನು ಕಿಟಕಿ ಸಂದಿನಿಂದ ತೂರಿದನು. ಅದನ್ನು ಮಾಲತಿ ತಗೊಂಡು ಮಗ್ಗುಲಲ್ಲಿ ನಿಲ್ಲಿಸಿ ಕೊಂಡಳು.

ಸ್ವಲ್ಪ ಸಮಯ ಇಬ್ಬರೂ ಮಾತೆತ್ತದೆ ಒಬ್ಬರನ್ನೊಬ್ಬರು ನೋಡಬಾರದೆಂಬ ಹಟದಿಂದ ಕಿಟಕಿಯ ಹೊರಗೆ ನೋಡುತ್ತ ಅಲಕ್ಷ್ಯವನ್ನು ನಟಿಸಿದರು. ಮಾತು ಬೇಡವಾಗಿತ್ತು. ಮಾತೇಕೆ, ಯಾವುದೂ ಬೇಡವಾಗಿತ್ತು, ಆ ಗಳಿಗೆಯಲ್ಲಿ. ಇಬ್ಬರ ಎದೆಯೂ ಬತ್ತಿ ಹೋಗಿ ಮಾತಿನ ವರತೆ ಇಂಗಿ ಹೋಗಿತ್ತು. ಅನ್ಯೋನ್ಯ ಭಾವನೆಗಳ ಬದಲು ಅಸಮಂಜಸವಾದ ಚಿಂತನೆಗಳ ಉದ್ಗಾರ

ತಲೆತುಂಬ ಮುತ್ತಿದ್ದವು. ಹೊರಗೆ ಸಂಜೆಯನ್ನಗಲಲು ಮನಸ್ಸಿಲ್ಲದ ಸೂರ್ಯನ ಕೆಂಗಿರಣಗಳು ಶುಭ್ರವಾಗಿದ್ದರೂ ಗಾಡಿಯೊಳಗೆ ಮಸಕು-ಮಸಕಾಗಿತ್ತು. ಇಬ್ಬರ ಸ್ಮೃತಿದಿಗಂತದಲ್ಲೂ ಅನ್ಯಭಾವನೆಗಳ ನಡುವೆ ಹಿಂದಿನ ನೆನಹುಗಳು ಮಿಂಚಿ ಮಿಂಚಿ ಮಾಯವಾಗುತ್ತಿದ್ದವು. ನೆಮ್ಮದಿಯಾಗಿ ಕುಳಿತುಕೊಳ್ಳಲು ಕೂಡ ಸಾಕಷ್ಟು ಜಾಗವಿಲ್ಲದೆ ಕಾಲುಗಳು ಚಡಪಡಿಸುತ್ತಿದ್ದವು. ಕುದುರೆಯ ಗೊರಸುಗಳು ಡಾಮರು ರಸ್ತೆಯ ಮೇಲೆ ಒಂದೇ ಸಮನೆ ತಾಳ ಹಾಕುತ್ತಿದ್ದುವು. ಚಾಟಿಯ ಏಟಿಗೆ ಕುದುರೆ ಫಕ್ಕನೆ ಹಿಂದೊತ್ತಲು ಸೀಟಿನ ಮೇಲಿದ್ದ ಹೊಲ್ಡಾಲು ಮಾಲತಿಯ ಕೈತಪ್ಪಿ ಕೆಳಗೆ ಗೋಪಿನಾಥನ ಕಾಲುಗಳ ಮೇಲೆ ಬಿತ್ತು. ಆತ ಅದನ್ನೆತ್ತಿ ತನ್ನ ಪಕ್ಕದಲ್ಲಿ ಸೀಟಿನ ಮೇಲಿಟ್ಟು ತನ್ನ ತೋಳಿನಿಂದ ತಬ್ಬಿಕೊಂಡನು.

“ಅದನ್ಯಾತಕ್ಕೆ ಅಪ್ಪಿಕೋತೀರಿ ; ಕೆಳಗಿಡಬಾರದೆ ?” ಎಂದು ಮಾಲತಿ ಕೇಳಿದಳು, ಬೇಸರದಿಂದ.

“ಮತ್ತ್ಯಾವುದನ್ನ ಅಪ್ಪಿ ಕೊಳ್ಳಲಿ ?” ಮಾಲತಿಯ ತುಟಿಗಳನ್ನು ಬಿರಿದು ಹೊರಚೆಲ್ಲಲು ಯತ್ನಿಸುತ್ತಿದ್ದ ಎದೆಯೊತ್ತಡ ನಗುವೋ ಕೋಪವೋ ಎಂಬುದು ಗೋಪಿನಾಥನಿಗೆ ವ್ಯಕ್ತವಾಗಲಿಲ್ಲ. ಆಕೆ ಒಂದು ಕ್ಷಣ ಸುಮ್ಮಗಿದ್ದು ನಂತರ ಜಟಕವಾಲನನ್ನು ಕರೆದು ಹೊಲ್ಡಾಲನ್ನು ಆತನ ಪಕ್ಕದಲ್ಲಿಟ್ಟುಕೊಳ್ಳುವಂತೆ ಹೇಳಿದಳು. “ಹಾಗಾದ್ರೆ ಅಮ್ಮಾವ್ರು ಹಿಂದಿನ ಸೀಟಿನಲ್ಲೇ ಕೂತುಕೊಳ್ಳಬೇಕು” ಎಂದನು, ಆತ. ಗೋಪಿನಾಥನಿಗೆ ತಡೆಯಲಾರದ ನಗು ಉಕ್ಕಿ ಬಂತು.

“ನಿಮ್ಮ ಕಾಯಂ ಆಸಾಮಿ ಕಾಣುತ್ತೆ ಈತ ?”

“ಇಲ್ಲ. ಇನ್ನು ಮಾಡಿಕೋತೇನೆ.”

“ಯಾತಕ್ಕೆ ಬತ್ತ್ರಕ್ಕೆ ತಗೊಳ್ಳಿ” ಅನ್ನುತ್ತ ಮುಖ ತಿರುಗಿಸಿ ಕುಳಿತಳು. ಆದರೆ ಈ ಪ್ರಕರಣದಿಂದ ಆಕೆಯ ಮನಸ್ಸಿನ ಬಿಗಿತವು ಸಡಲಿತು. ಕಾದ ಧಾತುಗಳು ತಣ್ಣಗಾದವು. ಗೋಪಿನಾಥನಿಗೆ ವಿಮುಖಳಾಗಿ ಕುಳಿತಿದ್ದರೂ ಆತ ಯಾವಾಗ ಹೆಸರೆತ್ತಿ ಕರೆಯುವನು. ಮಾತನಾಡಿಸುವನು. ನಗಿಸುವನು ಅಂತ ಒಳಗೊಳಗೆ ಹೋಗರೆಯುತ್ತಿದ್ದಳು. ಹೀಗೆ ಕುಳಿತಿರುವಾಗ

ಹಠಾತ್ತಾಗಿ ಮನಸ್ಸಿಗೊಂದು ಅನುಮಾನವಾಗಿ ತಿರುಗಿನೋಡಿದಳು. ಆತ ಯಾವುದೋ ಒಂದು ನೋವಿನಿಂದ ಪೀಡಿತನಾಗಿದ್ದಂತೆ ತೋರಿದನು.

"ಏನಾಯಿತು ?" ಎಂದು ಆತುರದಿಂದ ಕೇಳಿದಳು. ಗೋಪಿನಾಥನು ತಲೆಯಾಡಿಸಿ, ಹಲ್ಲು ಕಚ್ಚಿಕೊಂಡು ಸುಮ್ಮನಾಗಿದ್ದ. "ಮತ್ಯಾತಕ್ಕೆ ಹಾಗೆ ಮಾಡ್ತೀರಿ ? ಹೇಳಬಾರದೆ ನನ್ನ ಹತ್ರ ?" ಎಂದು ಬೇಡಿದಳು.

ಆತ ತನ್ನ ಕಣ್ಣುಗಳಿಂದ ಆಕೆಯ ನೋಟವನ್ನು ಹಿಡಿದು ನಿಲ್ಲಿಸಿ ದೀನ ಸ್ವರದಿಂದ,

"ಮಾಲತಿ, ನಿನಗೆ ರೂಪವಿರಬಾರದಿತ್ತು. ಅಥವಾ ಮದುವೆಯಾಗಿರ ಬಾರದಿತ್ತು. ಅಷ್ಟೆ !" ಎಂದನ್ನುತ್ತ ನಗಲು ಯತ್ನಿಸಿ ನರಳಿದನು. ತಲೆ ತಗ್ಗಿಸಿ ಖಿನ್ನನಾಗಿ ಕುಳಿತನು. ಆಗ ಹೋಲ್ಡಾಲಿನ ಮೇಲಿದ್ದ ಆತನ ಹಸ್ತದ ಮೇಲೆ ಹೂವೊಂದು ಉದುರಿದಂತೆ ಮಾಲತಿಯ ಕೈ ಬಿತ್ತು. ಹಾಗೆ ಕೈ ಕೈ ಜೋಡಿಸಿ ತಮ್ಮೊಳಗಿನ ಸುಪ್ತಸಂಗೀತದ ಮೊರೆಯನ್ನೇ ಲಾಲಿಸುತ್ತ, ಹೊರ ಗಡೆ ಹಗಲು ತನ್ನ ಕೊನೆಯ ನಿಮಿಷಗಳ ಎಣಿಕೆ ಹಾಕುವುದನ್ನು ನೋಡುತ್ತ ಗಾಡಿಯೊಂದಿಗೆ ಕುಲುಕುತ್ತ ಓಲಾಡುತ್ತ ಸಾಗಿದರು.

## ೨೨

ಮರುದಿನ ಬೆಳಿಗ್ಗೆ ಮಾಲತಿ ತನ್ನ ಬಟ್ಟೆಗಳನ್ನ ಒತ್ತರೆ ಮಾಡುತ್ತಿರು ವಾಗ ಸುಮಿತ್ರೆ ಸವಾರಿ ಬಂತು.

"ಇದೇನೇ ಸಂತೆ ? ಮದ್ರಾಸಿನಿಂದೇನಾದರೂ ತಂದಿದ್ದಿಯೇನೇ ?"

"ಏನೂ ಇಲ್ಲ. ತಗೊಂಡು ಹೋದ್ದನ್ನ ಒತ್ತರೆ ಮಾಡುತ್ತಿದ್ದೇನಷ್ಟೆ, ಕೂತುಕೊ."

ಸುಮಿತ್ರೆ ಒಂದು ಕುರ್ಚಿಯಲ್ಲಿ ಕುಳಿತು ಮಾಲತಿಯನ್ನು ಆಪಾದಮಸ್ತಕ ನೋಡಿ,

"ಮದ್ರಾಸಿಗೆ ಹೋಗಿ ಸುತ್ತಾಗಿ ಬಿಟ್ಟಿದ್ದಿ" ಅಂದಳು.

"ಸುತ್ತುಗಿಸ್ತು ಒಂದೂ ಇಲ್ಲ. ನನ್ನ ದೃಷ್ಟಿದೋಷವಿರಬೇಕು"

"ದೃಷ್ಟಿದೋಷವೆಂದಿಯೇನು ?" ಅನ್ನುತ್ತ ಸುಮಿತ್ರೆ ಗಾಬರಿಯಿಂದಲೂ ಆಶ್ಚರ್ಯದಿಂದಲೂ ಚಕಿತಳಾದಳು.

"ಅಥವಾ ಒಂದು ಸುತ್ತು ಕಡಿಮೆಯಾಗಿರಬೇಕು."

"ಹೌದೂಂದ್ರೆ! ಮಾಲತಿ, ಡಾಕ್ಟ್ರು ಹೇಳಿದ ಮಾತೇ ಹೇಳ್ತಿದ್ದೀಯಲ್ಲಾ ನೀನು !"

"ಯಾವ ಡಾಕ್ಟ್ರು ?"

"ಅಯ್ಯೋ, ಮಂಕೆ ! ಡಾಕ್ಟ್ರೂಂದ್ರೆ ಒಬ್ಬರೇ; ಈ ಲೋಕದಲ್ಲಿ ನೀನೀಗ ಯಾತಕ್ಕೆ ಬಂದೇಂತ ತಿಳಕೊಂಡಿ ? ನೀನು ಹೇಳಿದೆ, ಅವರ ಹತ್ರ ಮಾಲ ತೀನ ನೋಡಿಕೊಂಡು ಬರ್ತೀನೆ; ಮದ್ರಾಸಿನಿಂನ ಬಂದಿದ್ದಾಳೆ. ಅವಳೂ ಗೋಪಿನಾಥರಾಯರೂ ಮದ್ರಾಸಿನಿಂದ ಒಂದವರು ಗಾಡೀಲಿ ಬರೋದನ್ನ ನೋಡಿದೆ; ಅಂತ ಛೆ! ಸುಳ್ಳು! ಗೋಪಿನಾಥರಾಯರು ಮದ್ರಾಸಿಗೆ ಹೋಗಲೇ ಇಲ್ಲ, ಅಂದುಬಿಟ್ರು. ನಾನು ಕಣ್ಣಾರೆ ಕಂಡಿದ್ದು ಸುಳ್ಳೇ, ಅಂತ ಜಗಳಾಡಿದೆ. ಅಲ್ಲಾ, ನಿನ್ನೆ ನಾಲ್ಕು ಗಂಟೆ ಹೊತ್ತಿಗೆ ನೋಡಿದ್ದೇನೆ, ಗೋಪಿನಾಥರಾಯರ ಗುರುತ ನನಗಿಲ್ವೇ ? ನಿನ್ನ ಕಣ್ಣು ಸರಿಯಿಲ್ಲಾಂತ ರೇಗಿದರು. ನಿಮಗೊಂದು ಸುತ್ತು ಸಡಲಿದೇಂತ ಎಗರಿದೆ. ಹೀಗೆ ನನಗೂ ಅವರಿಗೂ ಸ್ವಲ್ಪ ಹೊತ್ತು ಅನರ್ಥವಾಗಿ ಕೊನೆಗೆ ನಿನ್ನನ್ನೇ ಕೇಳಿಕೊಂಡು ಬಿಟ್ಟು ಇತ್ಯರ್ಥಿಸಿಕೊಳ್ಳೋದು ಉತ್ತಮಾಂತ ಕಂಡು, ಹೋಗಿಬಾಂತ ಕಳುಹಿಸಿಕೊಟ್ರು"

"ಅವರೂ ಬಂದಿದ್ರೆ ಚೆನ್ನಾಗಿತ್ತು."

"ಬನ್ನೀಂದೆ. ಯಾರ ಮಾತು ಸತ್ಯಾಂತ ನೋಡಿಬಿಡೋಣ, ಬನ್ನೀಂದೆ. ಬರೊಲ್ಲಾಂದ್ರು. ಹೋಗಲಿಬಿಡು. ಈಗ ಏನು, ಹೇಳು. ನನ್ನ ಕಣ್ಣು ಸರಿ ಯಿಲ್ವೇ ಅಥವಾ ಅವರ ತಲೆ ಸರಿ ಇಲ್ವೇ ?"

"ಅದೇನೋ ನಿಮಗೇ ಗೊತ್ತು. ಡಾಕ್ಟ್ರನ್ನ ನೋಡಿ ನೋಡಿ ನಿನಗೆ ದೃಷ್ಟಿದೋಷ ಬಂದಿದ್ದರೂ ಇರಬಹುದು. ನಿನ್ನ ಮಾತು ಕೇಳಿ ಕೇಳಿ ಅವ ರಿಗೆ ತಲೆ ಕೆಟ್ಟು ಹೋಗಿರಲೂಬಹುದು. ನನಗೆ ಹೇಗೆ ಗೊತ್ತಾಗಬೇಕು ?"

"ತಮಾಷೆ ಹಾಗಿರಲಿ ನೀನೂ ಗೋಪಿನಾಥರಾಯರೂ ಮದ್ರಾಸಿನಿಂದ ಜತೇಲಿ ಬಂದುದು ನಿಜವಷ್ಟೆ ?"

"ಅವರು ಮದ್ರಾಸಿಗೆ ಹೋಗಲೇ ಇಲ್ಲ."

"ಇಲ್ಲ? ಹಾಗಾದರೆ ನೀವಿಬ್ಬರು ಒಂದೇ ಜಟಕದಲ್ಲಿ ಹೋಗುತ್ತಿದ್ದು ದನ್ನ ನಾನು ನೋಡಿದ್ದು ಸುಳ್ಳೇ ?"

“ ಅದಿರಬಹುದು. ”

“ ಅಂದ್ರೆ ? ಜಟಕದೊಳಗೆ ಹೋಲ್ದಾಲೊಂದಿತ್ತಲ್ಲ ? ”

“ ಹೌದು. ನೀನು ರೇಲ್ವೆ ಸ್ಟೇಶನಿನಿಂದ ಮನೆಗೆ ಬರುತ್ತಿದ್ದೆ. ”

“ ಅವರು ? ”

ಮಾಲತಿ ನಡೆದ ವಿಷಯವನ್ನು ಸಂಕ್ಷೇಪವಾಗಿ ಹೇಳಿ ತಿಳಿಸಿದಳು. ಆಮೇಲೆ,

“ ನೀನೆಲ್ಲಿ ನೋಡಿದೆ ? ” ಎಂದು ಆತುರಪಟ್ಟು ಕೇಳಿದಳು.

“ ನಾನೂ ಇನ್ನೊಬ್ಬಳೂ ಬಾವುಟ ಗುಡ್ಡದಿಂದ ಇಳಿದು ಬರುವಾಗ ನಿಮ್ಮ ಗಾಡಿ ಟ್ರೈನಿಂಗ್ ಶಾಲೆ ಬಳಿ ಹೋಗ್ತಿತ್ತು. ನಿನ್ನ ನೋಡಿ ಕೈಬೀಸಿದೆ. ಆದರೆ ನೀನ್ಯಾವ ಸ್ವಪ್ನದಲ್ಲಿ ಮುಳುಗಿದ್ದೀಯೋ ಏನೋ, ನೋಡಲೇಇಲ್ಲ. ನನ್ನ ಜತೇಲಿದ್ದವಳು ಕೇಳಿದಳು, ಯಾತಕ್ಕೆ ಹೀಗೆ ಕೈಯಾಡಿಸಿದಿ ಅಂತ. ವ್ಯಾಯಾಮಕ್ಕಾಗಿ ಪ್ರತಿಸಂಜೆಯೂ ಮಾಡ್ತಿದ್ದೇನೆ. ಅಂದೆ.

ಈ ಮಹಾರಾಯಿತಿ ನಾವು ಕೈ ಕೈ ಹಿಡಿದುಕೊಂಡದ್ದನ್ನ ನೋಡಿರ ಬಹುದೆ ಎಂದು ಮಾಲತಿಗೆ ಯೋಚನೆಹತ್ತಿತು.

“ ಗೋಪಿನಾಥರಾಯರಿಗೂ ನಾನು ಕಾಣಿಸಲಿಲ್ಲ. ಅವರ ದೃಷ್ಟಿ ಎಲ್ಲೋ ನೆಟ್ಟಿತ್ತು; ಸ್ವರ್ಗದಾಚೆ ನೀನು ಪುಣ್ಯಾತ್ಮಳು, ಮಾಲತಿ ” ಎಂದು ಸುಮಿತ್ರೆಯ ಮಾತು ನಿರ್ದಾಕ್ಷಿಣ್ಯವಾಗಿ ಮುಂದರಿಯಿತು.

ಮಾಲತಿಗೆ ತನ್ನ ಒಲವಿನ ಕತೆಯನ್ನು ಕೆಳದಿಯ ಬಾಯಿಂದ ಕೇಳಿದಷ್ಟು ಹಿತವಾಗಿತ್ತು. ಆದರೆ ಅದು ಎಲ್ಲಾದರೂ ಸಲಿಗೆಯಿಂದ ಅಪಹಾಸ್ಯಕ್ಕೀಡಾದೀತೆಂಬ ಭಯವೂ ಇತ್ತು.

“ ನನ್ನ ಪುಣ್ಯಕ್ಕೇನು ಕಡಿಮೆ ಹೇಳು ” ಎಂದು ವ್ಯಂಗ್ಯವಾಗಿ ಉತ್ತರ ಕೊಟ್ಟಳು.

“ ಹಾಗನ್ನಬೇಡ, ಮಾಲತಿ. ನೀನಿಡುವ ಹೆಜ್ಜೆ ಹೆಜ್ಜೆಗೂ ಹೂವೇರಿಸಿ ಪೂಜಿಸುತ್ತಿರುವವರಿದ್ದರೆ ಸಾಲದೆ? ಹೆಂಣಾಗಿ ಹುಟ್ಟಿದ್ದಕ್ಕೆ ಇನ್ನೇನು ಬೇಕು ಹೇಳು. ” ಎಂದು ಸುಮಿತ್ರೆ ತುಸು ಕೋಪಿಸಿಕೊಂಡವಳಂತೆ ಕೇಳಿದಳು.

“ ಅನುಭವಿಸಿದವರಿಗೇ ಗೊತ್ತು. ನಾನು ಹೇಗೆ ಹೇಳಲಿ, ” ಸುಮಿತ್ರೆ ಕೆಣಕಿದರೂ ಮಾಲತಿ ಗಮನಿಸಲಿಲ್ಲ. ಆ ತನಕ ತನ್ನ ಉಡುಪುಗಳನ್ನು

ಪೀಠುವಿನೊಳಗೆ ಒತ್ತರೆಯಾಗಿಡುತ್ತ ಮಧ್ಯೆಮಧ್ಯೆ ಮಾತನಾಡುತ್ತಿದ್ದಳು. ಕೋಣೆಯಲ್ಲಾ ಹರವಿದ್ದ ಒಟ್ಟಿಗಳನ್ನು ತಕ್ಕಮಟ್ಟಿಗೆ ವಾರಣ ಮಾಡಿದ ಮೇಲೆ ತಾನೂ ಒಂದು ಕುರ್ಚಿ ಎಳದುಕೊಂಡು ಸುವಿತ್ರೆಗೆ ಎದುರಾಗಿ ಕುಳಿತಳು. ಮಾಲತಿ ಕುಳಿತದ್ದೇ ತಡ ಸುವಿತ್ರೆ ಜಗ್ಗನೆ ಎದ್ದಳು.

"ಇದೇನೇ, ಇದು ? ಕೋಪವೆ ?" ಎಂದು ಮಾಲತಿ ಆಶ್ಚರ್ಯದಿಂದ ಕೇಳಿದಳು.

"ದೋಷವಲ್ಲದೆ ಮತ್ತೇನು ? ನನ್ನ ಪತ್ರವೂ ನೀನೀ ಸುಳ್ಳು, ಕಪಟ, ಮುಚ್ಚುಮರೆ ಮಾಡಿದರೆ ?"

"ಇಲ್ಲ, ಕೂತುಕೋ. ಕೇಳಬೇಕಾದ್ದನ್ನೆಲ್ಲ ಕೇಳಬಿಡು." ಎಂದು ನಗುತ್ತ ಸುಮಿತ್ರೆಯು ಪ್ರಶ್ನ ಪ್ರಯೋಗಕ್ಕೆ ಅನುವಾದಳು.

"ಹಾಗೆ ಬಾ. ಆದರೆ ಶಾರದಮ್ಮ—— ?"

"ಇಲ್ಲ. ಅವರು ಸ್ನಾನಕ್ಕೆ ಹೋಗಿರಬೇಕು. ಇನ್ನೊಂದು ಗಂಟೆ ಬರುವ ಹಾಗಿಲ್ಲ."

"ಹಾಗಾದರೆ ಸರಿ. ವಕೀಲರಂತೂ ನೀನಿದ್ದ ಪಟಾರಕ್ಕೇನೇ ಮುಖ ಹಾಕೋದಿಲ್ಲ. ಈಗ ನಿಮ್ಮಿಬ್ಬರ ಪ್ರಣಯ ಪ್ರಸಂಗ ಎಷ್ಟು ಬೆಳೆದಿದೆ. ಅದು ಮೊದಲು ಹೇಳು."

ಮಾಲತಿಯ ಮುಖ ಕೆಂಪೇರಿ, ತುಟಿಗಳು ಬಿಗಿತದಲ್ಲೇ ಅರಳಿದವು. ಆದರೆ ಅವಳು ಬಾಯಿ ಬಿಡಲಿಲ್ಲ.

"ಬಲು ಜಾಣೆ ನೀನು. ಇದಕ್ಕಾದರೂ ಜವಾಬು ಕೊಡು. ಈಗ ನೀನು ಹಿಡಿದ ಹಾದಿಯಲ್ಲೇ ಮುಂದುವರಿಯುವದಕ್ಕೆ ಮನಸ್ಸಿಲ್ಲವೋ ಅಥವಾ ಧೈರ್ಯವಿಲ್ಲವೋ,"

"ನೀನಾಗಿದ್ರೆ ಏನು ಮಾಡುತ್ತಿದ್ದಿ ?"

"ಮನಸ್ಸಿದ್ರೆ ಧೈರ್ಯ ತಾನಾಗಿ ಬರುತ್ತೆ."

"ಆದರೆ Men are deceivers ever, ಅಂತ ಕೇಳಲಿಲ್ವೇ ?"

"ಇಲ್ಲ, ಕೇಳಲಿಲ್ಲ, ಕೇಳಬೇಕೆಂತಲೂ ಇಲ್ಲ; ಮೊದಲೇ ಗೊತ್ತು. ಆದರೆ ಗೋಪಿನಾಥರಾಯರು ಅಂಥವರಲ್ಲ."

“ ಒಂದೆರಡು ಪ್ರಶ್ನೆಗೆ ನೀನೂ ಜವಾಬು ಕೊಡಬೇಕಾದೀತು. ಅಂತನಿ-ಸುತ್ತೆ ” ಅಂದಳು ಮಾಲತಿ, ನಗುತ್ತ.

ಸುಮಿತ್ರೆ ಮುಖ ಗಂಟುಹಾಕಿಕೊಂಡು ತಲೀಯಾಡಿಸಿ, “ ಆ ಭಯಬಿಟ್ಟು ಬಿಡು. ನಾನು ಅವರಿಗೆ ಮನಸ್ಸೋತಿಲ್ಲ, ನಿನ್ನ ಹಾಗೆ. ಆದರೂ ಅವರು ಪರಾ ಜನರಲ್ಲ – ಅಂತ ಖಂಡಿತವಾಗಿ ಹೇಳಬಲ್ಲೆ. ಸಾಮಾನ್ಯವಾಗಿ ಗಂಡಸರು ಸ್ವಾರ್ಥಪಶುಗಳು, ನಿಜ. ಜಂಭದ ಕೋಳಿಗಳು. ತಾವು ಕೂಗದೆ ಲೋಕ ಬೆಳಗಾಗೋದಿಲ್ಲಾಂತ ತಿಳಕೊಂಡ ದುರಹಂಕಾರದ ಮುದ್ದೆಗಳು. ಆದರೆ ಗೋಪಿನಾಥರಾಯರಂಥವರು ನಾಲ್ಕಾರು ಮಂದಿ ಇದ್ದಾರೆ; ಮಣ್ಣಿನ ರಾಶೀಲಿ ಚಿನ್ನದ ರೇಖೆಗಳಿದ್ದ ಹಾಗೆ. ”

“ ಅಂತಹವರಿರೋದ್ರಿಂದಲೇ ಪ್ರಾಯಶಃ ನಮ್ಮ ಜಾತಿಗೆ ಈ ಹುಡುಕಾಟ, ಪ್ರಾಣಸಂಕಟ. ಅಲ್ಲದೆ ಕೆಲವರು ಕಂಣಿಗೆ ಜನಾಂತ ಕಂಡರೂ ಕೈಗೆ ಬಂದಮೇಲೆ ಕಲ್ಲಾಗಿ ಬಿಡುತ್ತಾರೆ. ಈ ಒಗಟಿಗೆ ಉತ್ತರ ಸಿಗೋದರೊಳಗೆ ಗಂಟಿಯಾಗಿ ಬಿಡುತ್ತದೆ. ”

“ ಗಂಟಿಯಾಗೋದರೊಳಗೆ ಸಿಕ್ಕಿದ್ದನ್ನ ಗಿಟ್ಟಿಸಿಕೋ ಬೇಕು, ಮಾಲತಿ ಬಂದಾಗ ಬಾಚಿಕೋ ಬೇಕು. ಭಂಗಾರಕ್ಕಿಂತ ಗಿಲಿಟಿನ ಸಾಮಾನೇ ಜಾಸ್ತಿ ಆದರೆ ಅಚ್ಚವಸ್ತು ಕೈಗೆ ಸಿಕ್ಕಿದಾಗ ಹೆದರಿ ಕಂಣು ಮುಚ್ಚಿಕೋ ಬಾರದಷ್ಟೆ.”

“ ಅಂದ್ರೇನು ಸುಮಿತ್ರೆ ? ಅಗ್ನಿಸಾಕ್ಷಿಯಾಗಿ ಕೈ ಹಿಡಿದ ಗಂಡ, ಮದುವೆಯಾದ ಮನೆ, ಕಟ್ಟಿಸಿಕೊಂಡ ಮಾಂಗಲ್ಯ, ಎಲ್ಲಾ ಬಿಟ್ಟು ಬಿಡೂಂತಿಯಾ?”

ಮಾತಿನ ತಾನದಲ್ಲಿ ವಸ್ತುವಿವೇಚನೆಯ ವೈಖರಿಯಲ್ಲಿ ತೇಲುತ್ತ ಇಬ್ಬರೂ ತಮ್ಮ ನಿತ್ಯ ವ್ಯಕ್ತಿತ್ವವನ್ನು ಮರೆತಿದ್ದರು. ಸುಮಿತ್ರೆ ಇಷ್ಟು ಘನವಾಗಿ ಸ್ವಾರಸ್ಯವಾಗಿ ಮಾತನಾಡಿದ್ದು ಮಾಲತಿ ಎಂದೂ ನೋಡಿರಲಿಲ್ಲ.

“ ದೇವರು ಕೊಟ್ಟ ದೇಹ, ರಕ್ತ ಸಾಕ್ಷಿಯಾದ ಅನುರಾಗ ಇದಕ್ಕೂ ಹೆಚ್ಚಿನದೆ ನಿನ್ನ ಕರಿಮಣಿಮಾಲೆ ? ಮದುವೆಯಾದ ತಕ್ಷಣವೇ ದೇಹ ಜೀವ ಎರಡೂ ಗಂಡಗೆ ಮಾರಿ ಹೋಗಿವೆಯೆಂಬರ್ಥವೇ ? ಆದೆಂದಿಗೂ ಸಲ್ಲದು. ನಮ್ಮ ಮೇಲಿನ, ನಮ್ಮ ಮನೋವಾಣಿಯು ಅಂತಾರಲ್ಲ, ಆ ಸರ್ವಾಧಿಕಾರ ನಮ್ಮ ಕೈಯಲ್ಲೇ ಇರಬೇಕು. ”

ಮಾಲತಿಗೆ ನಗುಬಂತು. " All rights reserved. " ಅಪ್ಪಣೆ ಪಡೆದರೆ ಫಿಲ್ಮ್ ರೈಟ್ಸ್. ಟಾಕೀ ರೈಟ್ಸ್ ಕೊಡೋಣಾಗುತ್ತೆ, ಅಲ್ವೇ ?"

ಸುಮಿತ್ರೆ ನಗಲಿಲ್ಲ. " ಅಷ್ಟೇ ಏಕೆ ? Stage rights, bedroom rights. ಎಲ್ಲಾ ಪಡಕೊಳ್ಳಬಹುದು. " ಅಂದಳು.

" ಹಾಗಾದರೆ ಮದುವೇಂತ ಯಾತಕ್ಕೆ ಮಾಡಿಕೊಳ್ಳಬೇಕು. ಕತೃವು ಎಲ್ಲಾ ಹಕ್ಕುಗಳನ್ನು ಕಾಪಾಡಿಟ್ಟು ಕೊಳ್ಳುವದೇನೋ ಸರಿಯೆ. ಆದರೆ ನಮ್ಮ ಮೇಲಿನ ಸರ್ವಾಧಿಕಾರ ನಮಗೆಲ್ಲಿ ಬಂತು ?"

" ನಮ್ಮ ಕತ್ತಿಗೆ ತಾಳಿ ಕಟ್ಟಿದವರಿಗೆ ಬರೋದಿಲ್ಲವಷ್ಟೆ ! "

" ಏನೋ ಯಾರಿಗೆ ಗೊತ್ತು ?"

" ಮಾಲತಿ, ನಿನ್ನ ಹಾಗಿದ್ದರೆ ನಾನೆಂದೋ ಈ ಗೂಡಿನಿಂದ ಹಾರಿ ಹೋಗ್ತಿದ್ದೆ."

"ಆದರೆ ರೆಕ್ಕೆಗೆ ರೆಕ್ಕೆ ಜತೆಗೂಡಿ ಹಾರುವವರಿಲ್ಲದಿದ್ರೆ? ಸರ್ವನಾಶ ! ಪ್ರೇಮಕ್ಕೆ ನಾವು ಕೊಡುವಷ್ಟು ಬೆಲೆ, ಪ್ರಾಮುಖ್ಯತೆ ಗಂಡಸರು ಕೊಡುವ ದಿಲ್ಲವೆಂತ ನನ್ನ ಭಾವನೆ " ಎಂದಳು ಮಾಲತಿ ಧ್ಯಾನಿಸುತ್ತ.

" ಬೇಕಾಗಿಲ್ಲ, ಮಾಲತಿ. ಇಬ್ಬರದೂ ಒಂದೇ ಪಂಥವಾದ್ರೆ ಏನುಗತಿ ! ನಿನಗಾಗಿ ಅವರು, ಅವರಿಗಾಗಿ ನೀನು, ಹೀಗೆ ಇಬ್ಬರೂ ಪರಸ್ಪರ ಜೀವದಾನ ಮಾಡಿದರೆ, ಕೊಡುವವರ್‍ಯಾರು ? ಕೊಳ್ಳುವವರ್‍ಯಾರು ? ಅದೂ ಅಲ್ಲದೆ ಸರ್ವ ಪರಿತ್ಯಾಗ ಮಾಡತಕ್ಕ ಗಂಡಸು ಎಷ್ಟೆಂದರೂ ಅಷ್ಟೇ. ನನಗಂತೂ ಅಂತಹ ವರ ಮೇಲೆ ಹೆಚ್ಚಿನ ಅಭಿಮಾನವಿಲ್ಲ.

" ಗಂಡಸರು ಹೇಗಿರಬೇಕು ಮತ್ತೆ ?"

" ಗಂಡುಗಲಿಗಳಾಗಿರಬೇಕು."

" ನೀನೊಬ್ಬಳು ಅಡವಿ ಹುಡಗಿ, ಸುಮಿತ್ರೆ. ನಿನಗೆ ದಿನಾ ಬೆನ್ನ ಮೇಲೆ ನಾಲ್ಕು ಬಾರಿಸುತ್ತಿರಬೇಕು. ಬಿಟ್ಟು ಹೋಗುವಾಗ ಬಾಗಿಲು ಹಾಕ್ಕೊಂಡು ಬೀಗ ಮುದ್ರೆಮಾಡಿ ಹೋಗಬೇಕು. ಹೇಳ್ತೆನೆ ಡಾಕ್ಟ್ರ ಹತ್ರ."

" ಅಯ್ಯೋ ! ನೀನೇ ತೊಂದ್ರೆಪಟ್ಟುಕೋ ಬೇಡ. ಆ ಭಾಗದಲ್ಲಿ ಅವ ರೇನೂ ಬಾಕಿ ಮಾಡಿಲ್ಲ. ಹಾಗಲ್ಲದಿದ್ರೆ ಗಂಡಸರು ಪ್ರೀತಿ ತೋರಿಸೋ ಬಗೆ ಹೇಗೆ ? ನಿನಗೆ ಬಹುಶಃ ಹೆಗಲ ಮೇಲೇರಿಸಿಕೊಂಡು ಉತ್ಸವ ಮೂರ್ತಿ ಯಂತೆ ಮೆರೆಸಬೇಕೋ ಏನೋ."

" ಬೇಕಿಲ್ಲ. ಹಗಲಿಗೆ ಹಗಲು ತಾಗಿ ನಡೆದರೆ ಸಾಕು.

" ಎಲ್ಲಿಗೋ !"

" ಕಂಡಷ್ಟು ದೂರ."

" ನಿನಗೆ ಹಿಡಿದಿದೆ, ಹುಚ್ಚು."

" ನಿನಗೆ ಹಿಡಿದಿದೆ ಹುಚ್ಚು. ಹಿಂದಿನ ಕಾಲದವರಿಗೆ ಇಂತಹ ಸಮಸ್ಯೆಗಳು ಇರಲಿಲ್ಲವೇನೇ ?"

" ಗಂಡಮಿಂಡರ—"

" ಶ್ಶ್ "

" ಹೆದರಿಕೆಯೇನು ? Call a spade a spade ತಾನೆ ?"

" ಪ್ರಾಚೀನ ಸತಿಯರೆಲ್ಲರೂ ಪತಿವ್ರತೆಯಾಗಿದ್ದರೋ ಏನೋ!" ಅನ್ನುತ್ತ ಬೇಕೆಂತಲೇ ತನ್ನ ಸಖಿಯನ್ನು ಚುಚ್ಚಿದಳು.

" ಥು ! ಪತಿಯನ್ನ ಅನುಸರಿಸುವುದು ಒಂದು ಮಹಾವ್ರತವೆಂದು ಮಾಡಿದ್ದು ಯಾಕೆಂತೀ ? ಆ ಕಾಲದ ಸಂತೇಲಿ ಆ ವಸ್ತು ಸಿಗೋದೇ ಪ್ರಯಾಸವಾಗಿತ್ತು. ಮಿಸೆಸ್ ಶ್ರೀರಾಮಚಂದ್ರನಿಗೂ ಅದೊಂದು ಸಮಸ್ಯೆಯಾಗಿದ್ದಿರಬೇಕು. ಪಾಪ ! ಆಕೆ ಮೊದಲೇ, ಕಾಡಿಗೆ ಹೊರಡುವ ಮೊದಲೇ. ಅಗ್ನಿಪ್ರವೇಶ ಮಾಡಿದ್ರೆ ಚೆನ್ನಾಗಿತ್ತು. ರಾಮನೆಂದರೆ, ಬಹುಶಃ ಗಂಡಸರಿಗೆ ಆದರ್ಶ ಪುರುಷನಾಗಿರಬೇಕು, ಅಷ್ಟೇ ?"

" ನನಗೂ ಆತ ಸೀತೆಗೆ ತಕ್ಕವನಲ್ಲವೆಂದೇ ತೋರುತ್ತೇ."

ರಾಮಚಂದ್ರನಿಗೆ ಇನ್ನೊಂದು ಹೆಸರು ರಾಘವೇಂದ್ರ ನಾಮರೂಪಕ್ಕೂ ಗುಣಲಕ್ಷಣಕ್ಕೂ ನಿಗೂಢ ಸಂಭಂಧವಿದೆ. ಇನ್ನಿವಳ ರಾಮಾಯಣ ಯಾವ ದಾರಿ ಹಿಡಿದು ಸಾಗುತ್ತದೋ, ಇವಳಿಗೆ ಯಾವ ಚಿತೆ ತಯಾರಾಗಿದೆಯೋ ಎಂಬ ಯೋಚನೆಯಿಂದ ಸುಮಿತ್ರೆ ಕ್ಷಣಕಾಲ ಮೂಕಳಾದಳು.

" ನಿನಗೇನು ಅನಿಸುತ್ತೆ, ಸುಮಿತ್ರೆ ?"

" ಅಲ್ಲಾ, ರೂಪ ಗುಣ ಪರಾಕ್ರಮಗಳಲ್ಲಿ ರಾವಣನೇನೂ ಕಡಿಮೆಯಲ್ಲ. ಹೀಗಿರುವಾಗ ಸೀತೆ ಅವನೊಡನೆ ಸುಖವಾಗಿರಬಹುದಾಗಿತ್ತಲ್ಲಾಂತ ಚಿಂತಿಸುತ್ತಿದ್ದೆ."

" ಆದರೆ ಆತಗೆ ನಯ-ವಿನಯಗಳಿರಬೂ ಇರಲಿಲ್ಲವಲ್ಲ."

" ಯಾರು ಹೇಳೋದು ? ಅದೆಲ್ಲ ಬರೆ Propaganda; ಮತ್ಸರದ ಮಾತು ಹತ್ತು ತಲೆಯಿದ್ದದ್ದರಿಂದಲೋ ಏನೋ. ಸೀತೆಗೆ ಬೇಡವಾದ್ದು. ಒಂದನ್ನ ಮುದ್ದಿಸಿದರೆ ಉಳಿದ ಒಂಬತ್ತಕ್ಕಾಗದು. ಏನು ಮಾಡ್ತ್ಯಾಳು, ಪಾಪ ! " ಸುಮಿತ್ರೆ ಮನಸ್ಸಿನಲ್ಲೇ ಹತ್ತುಮುಖಗಳಿಗೆ ಏಕಕಾಲದಲ್ಲಿ ಚುಂಬಿಸುವ ಸಾಹಸದಲ್ಲಿದ್ದಳು.

" ಇನ್ನೊಂದು ವಿಚಾರ. ಆತ ಅವಳನ್ನ ವಂಚಿಸಬಾರದಾಗಿತ್ತು. ಅವಳ ಹುಡುಗಾಟದ ಚಪಲದಿಂದಲೇ ಅವಳನ್ನ ಮೋಸಗೊಳಿಸಿ ಹೊತ್ತುಕೊಂಡು ಹೋಗಿ ಸೆರೆಯಲ್ಲಿಡಬಾರದಿತ್ತು."

" ಆತನೂ ಗಂಡಸೇ. ಹುಟ್ಟುಗುಣ ಎಲ್ಲಿ ಹೋದೀತು ?"

" ಸಾಲದ್ದಕ್ಕೆ ಹೊಟ್ಟೆ ಮುಗುಚುವಂತಹ ಕುರೂಪಿಗಳಾದ ರಾಕ್ಷಸಿಯರನ್ನ ಕಾವಲಿಗಿಟ್ಟು ಆಗಾಗ ಬಂದು ಅವಳೆದುರು ಹೆಡೆಯಾಡಿಸುತ್ತಿದ್ದ. ಅವಳ ಮೆಚ್ಚುಗೆ ಸೆಳೆದುಕೊಳ್ಳುವ ಹವ್ಯಾಸಕ್ಕೆ ಹೋಗಿ ಅವಳ ಅಭಿಮಾನವನ್ನೂ ಕಳಕೊಂಡ, ಪಾಪಿ ! "

ಈ ರೀತಿ ಗೆಳತಿಯರಿಬ್ಬರು ಹಳೆಕತೆಗೆ ಹೊಸ ಕಳೆಯನ್ನೂ ಹಳೆ ಸಮಸ್ಯೆಗೆ ಹೊಸ ಪರಿಹಾರವನ್ನೂ ಕಲ್ಪಿಸಿಕೊಳ್ಳುತ್ತಿರುವಾಗ ಶಾರದಮ್ಮ ಬಂದರು. ಅವರ ಗಂಭೀರ ಪ್ರಸನ್ನತೆಯೆದುರು ಇವರಿಗೆ ತಮ್ಮ ಮಾತುಕತೆಗಳು ತುಚ್ಛವಾಗಿ ತೋರಿದುವು.

" ನೀವು ಅಲ್ಲೇ ನಿಂತುಕೊಂಡಿದ್ರೆ ನಮಗೂ ನಿಲ್ಲಬೇಕಾಗುತ್ತೆ. ಬನ್ನಿ; ಕೂತುಕೊಳ್ಳಿ " ಎಂದಳು ಸುಮಿತ್ರೆ.

" ಇಲ್ಲ. ನನಗೀಕ್ಷಣ ಹೋಗಬೇಕು. ಮನೇಲೆಲ್ಲಾ ಕ್ಷೇಮವೆ ? ನಿಮ್ಮಜ್ಜಿ ಏನು ಮಾಡ್ತಿದ್ದಾರೆ ?"

" ನಮ್ಮಜ್ಜಿಗೇನು ಕಡಿಮೆ ಹೇಳಿ. ಮುದ್ದಿನ ಮೊಮ್ಮಗ ಇದ್ದಾರೆ; ಸೇವೆ ಮಾಡ್ಸಿಕೋತಾರೆ. ಅವರಿಗಿರೋದು ಒಂದೇ ಯೋಚನೆ: ಹೊರಟು ಹೋಗುವಾಗ ಜತೇಗೆ ಡಾಕ್ಟ್ರು ಬರೋಹಾಗಿಲ್ಲವಲ್ಲಾಂತ " ಅಂದಳು ಜುಗುಪ್ಸೆಯಿಂದ.

" ಇನ್ನೊಂದು ಹತ್ತು ವರ್ಷ ಬದುಕಲಿ, ಪಾಪ " ಅನ್ನುತ್ತ ಶಾರದಮ್ಮ ನಕ್ಕರು. ಅಜ್ಜಿ ಹೆಸರೆತ್ತಿದರೆ ಸುಮಿತ್ರೆಗೆ ಆಗೋದಿಲ್ಲವೆಂತ ಅವರಿಗೆ ಗೊತ್ತು.

ಡಾಕ್ಟರು ವಾಸುದೇವ ಪೈಗಳು ಅಜ್ಜಿಗೆ ಅತಿ ಪ್ರೀತಿಯ ಮೊಮ್ಮಗ. ಅವರ ಮರಿಮಕ್ಕಳ ಸಂಖ್ಯೆ ಇಪ್ಪತ್ತೈದಕ್ಕೆ ಮೀರಿದ್ದರೂ ತನ್ನ ಪ್ರೀತಿಯ ಮೊಮ್ಮಗನಿಗೆ ಮಕ್ಕಳಾಗದೆ ಇದ್ದುದು ಅವರಿಗೆ ಅರ್ಥವಾಗದ ಒಗಟಾಗಿತ್ತು. ಪ್ರಕೃತಿಗೆ ವಿರುದ್ಧವಾದ ಈ ಪರಿಸ್ಥಿತಿಗೆ ಮಾಯಾವಿನಿ, ಯಕ್ಷಿಣಿ, ಮಹಾಕಾಳಿ ಸುಮಿತ್ರೆಯೇ ಕಾರಣಳೆಂತ ನಿರ್ಧಾರ ಮಾಡಿದ್ದರು. ಸುಮಿತ್ರೆಗೆ ಎರಡು ಸಲ ಗರ್ಭನಷ್ಟವಾದ ವಿಷಯ ಅವರಿಗೆ ಯಾರೂ ತಿಳಿಸಿರಲಿಲ್ಲ.

"ಬದುಕಲಿ, ಬದುಕಲಿ ಹತ್ತೇಕೆ ಇಪ್ಪತ್ತು ವರ್ಷ ಬದುಕಲಿ. ಡಾಕ್ಟ್ರು ಹೇಳ್ತಿದ್ರು ಮೊನ್ನೆ ದಿನ: ಅವರು ಸಾಯೋ ಬದಲು ಇದೇ ರೀತಿ ಮುರುಟಿ ಕೊಂಡು ಹೋಗ್ತಾ ಇದ್ದರೆ ಕೊನೆಗೆ ಒಂದು ಬೆಳ್ಳಿ ಸಂಪುಷ್ಟ ಮಾಡಿಸಿ ಅದ ರಲ್ಲಿಟ್ಟುಬಿಟ್ಟು ಸಾಲಿಗ್ರಾಮದಂತೆ ಪೂಜೆಮಾಡ್ತಾರಂತೆ."

"ಡಾಕ್ಟ್ರಾದರೂ ಏನು ತಾನೆ ಮಾಡಿಯಾರಮ್ಮಾ. ಇವಳೊಂದು ಕೊರಳು ಪಟ್ಟೆ; ಆ ಮುದುಕಿಯೊಂದು ಮೂಗಿನ ದಾರ ಇದ್ದ ಹಾಗೆ ಇದ್ದಾರೆ" ಅನ್ನುತ್ತ ಮಾಲತಿ ಕನಿಕರ ಪಟ್ಟಳು.

'ನೀನೂ ಹೀಗನ್ನಬಹುದೆ?' ಎಂಬಂತೆ ಮಾಲತಿಯನ್ನು ನೋಡುತ್ತ ಸುಮಿತ್ರೆ ಬೇಸರವನ್ನು ನಟಿಸಿದಳು. ಶಾರದಮ್ಮ ಒಳಗೆ ಬಂದವರೇಲೆ ತಲೆಗೆ ತೈಲ ಇಡುತ್ತೇನೆಂತ ಸೊಸೆಗೆ ನೆನಪು ಹೇಳಿಬಿಟ್ಟು ಹೋದರು.

"ಮಾಲತಿ, ನೀನೀ ದಿನ ಗೋಪಿನಾಥರಾಯರಲ್ಲಿಗೆ ಹೋಗೋದಿಲ್ಲವೆ?" ಎಂದು ಕೇಳುತ್ತ ಸುಮಿತ್ರೆ ಎದ್ದುನಿಂತಳು.

"ನನಗೆ ಗೊತ್ತಿಲ್ಲ." ಅನ್ನುತ್ತ ಮಾಲತಿ ಮುಖ ತಿರುಗಿಸಿದಳು. ಸುಮಿತ್ರೆ ಅವಳ ಗಲ್ಲ ಹಿಡಿದು ತಿರುಗಿಸಿ ಕಣ್ಣಿಗೆ ಕಣ್ಣಿಟ್ಟು, "ಹೋಗಿ ಬಂದವಳು ನಮ್ಮನೇಗೆ ಬಾ" ಎಂದು ತಾಕೀತು ಮಾಡಿ ಹೊರಟು ಹೋದಳು.

## ೨೩

ಆಹಾರ ಕಮಿಶನರಲ್ಲಿಗೆ ಗೋಪಿನಾಥನು ಹೋದ ನಿಯೋಗವು ತೀರಾ ಫಲಕಾರಿಯಾಗುವಂತಿತ್ತು. ಅವನೂ ಅವನ ಅನುಯಾಯಿಗಳೂ ನಿರೀಕ್ಷಿಸಿದ್ದಕ್ಕಿಂತಲೂ ಹೆಚ್ಚಿನ ಕಾರ್ಯಸಿದ್ಧಿಯಾಗುವ ಸಂಭವವಿತ್ತು. ಎರಡು ಗಂಟೆ ಸಮಯ ಕಮಿಶನರರಿಗೂ ಗೋಪಿನಾಥನಿಗೂ ಕೂಲಂಕಷ ಚರ್ಚೆ ನಡೆಯಿತು. ಸರಕಾರದ ಮೇಲಧಿಕಾರಿಗಳು ಹಲವರ ಅಸಡ್ಡೆ, ಅಜಾಗರೂಕತೆ,

ಲಂಚಖೋರತನ; ವರ್ತಕರನೇಕರ ಕಟುಕತನ, ಕಪಟ, ಲೋಭ, ಅವರ ಕಳ್ಳಸಂತೆಗೆ ಪರಜನರಿಂದಲೂ ಸರಕಾರದಿಂದಲೂ ಒದಗುವ ಒಳಸಂಚಿನ ಬೆಂಬಲ; ಕಾಂಗ್ರೆಸ್ಸಿನ ರಾಜಕೀಯ ವೇಷದಿಂದ ಪುರಜನರನ್ನು ವರ್ತಕರು ವಂಚಿಸುವ ವಿಧಾನ; ಜಿಲ್ಲೆಗೆ ಈ ಹಿತಶತ್ರುಗಳಿಂದುಂಟಾದ ದುರ್ಭಿಕ್ಷೆ; ಯಾವುದನ್ನೂ ಮರೆಮಾಚದೆ, ಸಂಕೋಚಪಡದೆ, ದಾಕ್ಷಿಣ್ಯವಿಲ್ಲದೆ ಅಂಕೆ-ಸಂಖ್ಯೆ ವಸ್ತುಸ್ಥಿತಿಗಳನ್ನು ಸವಿಸ್ತಾರವಾಗಿ ಗೋಪಿನಾಥನು ವಿಶದೀಕರಿಸಿದನು. ಕಮಿಶನರು ಮೊದಮೊದಲು ಈತ ಯಾವುದೋ ಒಂದು ಸಮಿತಿಯ ಪರವಾಗಿ ಬಂದಿರಬೇಕು; ತನ್ನ ಪಕ್ಷವನ್ನು ಪ್ರತಿಪಾದಿಸುತ್ತಿದ್ದಾನೆ; ಮರ್ಯಾದೆಯಿಂದ ಮೆತ್ತಗೆ ಮಾತನಾಡಿ ಕಳುಹಿಸಿಕೊಟ್ಟರಾಯಿತು ಎಂದು ತಿಳಿದಿದ್ದರು. ಆದರೆ ಒಂದೊಂದಾಗಿ ಗಣನೀಯ ವಿಚಾರಗಳನ್ನು ಕೇಳುತ್ತ ಆರಾಮವಾಗಿ ಕುಳಿತಿದ್ದವರು ಎದ್ದು ಕುಳಿತರು. ಕೊಠಡಿಯ ಬಾಗಿಲು ಮುಚ್ಚಿಕೊಂಡರು. ಪ್ಯಾಪ್ ಸೇದಬಹುದಷ್ಟೆ, ಎಂದು ಹೇಳುತ್ತ ತಂಬಾಕಿನ ನಳಿಕೆಯನ್ನು ಹೊತ್ತಿಸಿದರು. ಸರಕಾರವನ್ನು ದೂಷಿಸಿದಾಗ ರೇಗಿದರು, ಎಗರಿಬಿದ್ದರು. ಅವರು ರೋಷಾವೇಶವನ್ನು ತಾಳಿದಾಗೆಲ್ಲಾ ಗೋಪಿನಾಥನು ಇನ್ನಷ್ಟು ನಮ್ರತೆಯಿಂದಲೂ ಆತುರದಿಂದಲೂ ನಿರ್ಭೀತಿಯಿಂದಲೂ ಕಲ್ಲು ಮನಸ್ಸು ಕೂಡ ಕರಗುವ ರೀತಿ ಊರ ಜನರ ದಾರುಣ ಪರಿಸ್ಥಿತಿಯನ್ನು ನಿರೂಪಿಸಿದನು. ಕ್ರಮೇಣ ಒಂದೊಂದಾಗಿ ವಿಷಯಗಳು ಕಮಿಶನರರ ಮನಸ್ಸಿಗಿಳಿದು ನಾಟಿದುವು. ಅವರಿಗೆ ಆಶ್ಚರ್ಯವಾಯಿತು; ವ್ಯಥೆಯಾಯಿತು. ಗೋಪಿನಾಥ ಮುಗಿಸಿ ಹೊರಟಾಗ ಅವರು ಮನಃಪೂರ್ವಕವಾಗಿ ಕೃತಜ್ಞತೆ ಗೌರವಗಳಿಂದ ಆತನನ್ನು ಅಭಿನಂದಿಸಿ, ಅವನ ಶ್ರೇಯಸ್ಕರವಾದ ಕಾರ್ಯಕ್ಕೆ ತಮ್ಮ ಪರಿಪೂರ್ಣ ಬೆಂಬಲವನ್ನು ವಾಗ್ದಾನ ಮಾಡಿ, ಶಾಂತಿ ಸುಭಿಕ್ಷೆ ನೆಲಸುವಂತೆ ತಾವು ಕೈಕೊಂಡ ಯತ್ನದಲ್ಲಿ ನೆರವಾಗಬೇಕೆಂದು ಆತನಲ್ಲಿ ಹೇಳಿ, ಕೊನೆಗೆ "ನೀವೂ ನನ್ನಂತೆ ತಂಬಾಕು ಸೇವಕನಾಗಬೇಕು. ದೇವರು ದಯಪಾಲಿಸಿದ ಅತ್ಯುತ್ತಮ ವಸ್ತುಗಳಲ್ಲಿ ತಂಬಾಕಿಗೆ ಪ್ರಥಮ ಸ್ಥಾನವಿದೆ" ಎನ್ನುತ್ತ ನಕ್ಕು ಬೀಳ್ಕೊಟ್ಟರು.

ತಾನು ಶುರು ಮಾಡಿದ ಕೆಲಸವು ಇಷ್ಟೊಂದು ಸುಗಮವಾಗಿ ಸಾಗಬಹುದೆಂದು ಗೋಪಿನಾಥನು ಕನಸಿನಲ್ಲೂ ನಿರೀಕ್ಷಿಸಿರಲಿಲ್ಲ. ಗ್ರಾಮದ

ಶ್ಯಾನುಭೋಗರಿಂದ ಪ್ರಾರಂಭವಾಗಿ ಜಿಲ್ಲಾ ಕಲೆಕ್ಟರವರ ವರೆಗೂ ಅಧಿಕಾರಿಗಳುಎಬ್ಬಿಸಿದ ಧೂಳಿನಿಂದ ಮುಚ್ಚಲ್ಪಟ್ಟ ಕಮಿಶನರರ ಕಣ್ಣುಗಳನ್ನು ತೆರೆದು ತೊಳೆದು ಜನತಾ ಕಾರುಣ್ಯವನ್ನು ತುಂಬಿಸಿ ಅವರ ಸಹಾನುಭೂತಿಯನ್ನು ಗಳಿಸುವಷ್ಟು ಕಾರ್ಯದಕ್ಷತೆ ತನ್ನಲ್ಲಿದೆಯೆಂದು ಆತ ತಿಳಿದಿರಲಿಲ್ಲ. ತಿಳಿಯಲು ಸಂದರ್ಭ ಒದಗಿರಲಿಲ್ಲ. ಶಕ್ತಿಮೀರಿ ದುಡಿಯುವ ಅಗತ್ಯವೇನು? ಯಾರಿಗಾಗಿ? ಏಕಾಂಗಿಯಾದ ಗಂಡಸಿನ ಒಣ ಜೀವನದಲ್ಲಿ ಕಾರ್ಯಕುತೂಹಲವೆಲ್ಲಿಂದ? ಕೈಗೆ ಬಂದುದನ್ನು ಶಿಸ್ತಿನಿಂದ ಪರಿಷ್ಕಾರವಾಗಿ ನಿರ್ವಹಿಸುತ್ತಿದ್ದನೇನೋ ನಿಜ. ಆದರೆ ಅದರಿಂದ ಬಿಡುಗಡೆಯೂ ಇತ್ತು, ಬಂಧನವೂ ಇತ್ತು. ಬದುಕಿನಲ್ಲಿ ಬೇಸರದಿಂದ ಬಿಡುಗಡೆ; ಮಾಡದೆ ಗತ್ಯಂತರವಿಲ್ಲದ್ದರಿಂದ ಬಂಧನ. ಕಾರ್ಯನಿರತನಾಗಿದ್ದಾಗ್ಯೂ ಉಲ್ಲಾಸಿತನಾಗಿರಲಿಲ್ಲ. ಪ್ರಯತ್ನದ ಫಲಿತಾಂಶದಲ್ಲಿ ಉತ್ಸಾಹವಿರಲಿಲ್ಲ. ಕೈಕೊಳ್ಳುವುದಕ್ಕಾಗಲಿ ಬಿಟ್ಟುಬಿಡುವುದಕ್ಕಾಗಲಿ ಸ್ವತಂತ್ರನಾಗಿರಲಿಲ್ಲ. ಕೈತುಂಬ ಕೆಲಸವಿಲ್ಲದಿದ್ದರೆ ತಲೆತುಂಬ ದುರ್ವ್ಯಸನಗಳು ಬಿಡಾರ ಮಾಡುತ್ತವೆಂಬ ಭಯದಿಂದ ಎಡೆಬಿಡದೆ ದುಡಿಯುತ್ತಿದ್ದನು, ಅಷ್ಟೆ. ಸೇವಾತತ್ಪರತೆಯೇ ಒಂದು ಮಹಾವ್ರತವೆಂದು ತಿಳಿದು ಅದರ ಪಾಲನೆಗಾಗಿ ವೃಥಾ ದೇಹ ದಂಡಿಸುವಂಥವನಾಗಿರಲಿಲ್ಲ. ಸುಖಸಾಧನಕ್ಕಲ್ಲದ ಕೆಲಸ ನಿರರ್ಥಕವೆಂದೇ ಆತನ ಮನೋಧರ್ಮವಾಗಿತ್ತು. ಬಹುಮಟ್ಟಿಗೆ, ಪರೋಪಕಾರದಿಂದ ಪುಣ್ಯಪಡೆಯುವ ಮುನ್ನ, ಆಯುಸ್ಸು ದೇಹವನ್ನು ಹೀರಿ ಬೆಂಡುಮಾಡುವ ಮುನ್ನ, ಸ್ಮಶಾನವೈರಾಗ್ಯ ಸಮೀಪಿಸುವ ಮುನ್ನ, ಜೀವನದ ಸುಖವೇನೇನಿದೆಯೋ ಅದನ್ನೆಲ್ಲಾ ಒಂದು ಸಲ ಸವಿಯಬೇಕೆಂದೇ ಆತನ ಮಹದಾಕಾಂಕ್ಷೆಯಾಗಿತ್ತು. ಆದರೆ ಮೂಸರಿನಾಸೆಗೆ ಕೈಕೆಸರು ಮಾಡಿಕೊಳ್ಳಲು ಸರ್ವಥಾ ಸಮ್ಮತವಿರಲಿಲ್ಲ. ಆತನ ಹೃದಯ ತಳದಲ್ಲಿ ಮನಮೆಚ್ಚಿನ ಚೆಲುವೆಯೊಬ್ಬಳನ್ನೊಲಿಸಿ ಅವಳ ಒಲುಮೆಯ ಒಡನಾಟದಿಂದ ಜನ್ಮವನ್ನು ಸಫಲಗೊಳಿಸಬೇಕೆಂಬ ಆಸೆಯೊಂದು ಚಿರಶ್ರುತಿಯನ್ನು ಮೀಟುತ್ತಲೇ ಇತ್ತು.

ಈ ಆರ್ತನಾದ ಮಾಲತಿಯ ಕಿವಿಗೆ ಕೇಳಿಸಿರಬೇಕು. ಅವಳ ಕರ್ಮಾಂತರದಲ್ಲಿ ಮಾಗಿದ ಹೆಣ್ತನವು ಯುಗಯುಗಗಳಲ್ಲಿ ಪುಟಗೊಂಡ ಆತನ ಗಂಡುತನದ ಮೊರೆಗೆ ಮಾರ್ದನಿಗೂಡಿಸಿತು. ತಳ ತಿಳಿಯದ ಆತನ

ಎದೆಯೊಳಗೆ ಅವಳು ಧುಮುಕಿ ಹಿಂದಿನ ಜನ್ಮಗಳಲ್ಲಿ ಅವಳದೇ ಆಗಿದ್ದ ಕೊರಳ ಹಾರದ ಮುತ್ತು ರತ್ನಗಳನ್ನು ಹೊರತಂದಳು. ಆತನ ಬಾಳುವೆಯನ್ನು ಬೆಳಗಿಸಿದಳು. ಅಂದು ಜಟಕದಲ್ಲಿ ಅವಳು ತನ್ನ ಕೈಯನ್ನು ಆತನ ಕೈಯೊಳಗಿಟ್ಟಾಗ ಗೋಪಿನಾಥಗೆ ಹೋದ ಜೀವ ಬಂದಂತಾಗಿತ್ತು. ಅವಳು ಜಟಕದಿಂದ ಇಳಿದು ಹೋದ ಮೇಲೂ ಈ ಪುನರ್ಜನ್ಮದ ನವೋಲ್ಲಾಸ ತುಳುಕುತ್ತಿತ್ತು. ಮನೆಯಿಂದ ಕಮಿಶನರಲ್ಲಿಗೆ ನಡೆದೇ ಹೋಗಿದ್ದನು. ನಡೆಯುವುದರಲ್ಲೇ ಒಂದು ಹೊಸ ಸಂತೋಷವಿತ್ತು. ಮಾಲತಿ ಮುಟ್ಟಿದ ಮೈಗೆ ಹೊಸ ಶಕ್ತಿ ಬಂದಂತಿತ್ತು. ಇದೆಲ್ಲವೂ ಮಾಲತಿಗಾಗಿ, ಎಲ್ಲವೂ ಮಾಲತಿಯಿಂದ ಎಂದು ತನ್ನಷ್ಟಕ್ಕೇ ಹೆಜ್ಜೆ ಹೆಜ್ಜೆಗೂ ಹಿಗ್ಗುತ್ತ ಹೋಗಿದ್ದನು.

ಮರುದಿನ ಬೆಳಗ್ಗೆ ಸವಿಕನಸಿನ ಸುಪ್ಪತ್ತಿಗೆಯಿಂದ ಎದ್ದಮೇಲೂ ನಿನ್ನೆ ದಿನದ ಯಾವುದೋ ಒಂದು ವಿಜಯೋತ್ಸವದ ಕೋಲಾಹಲವು ಇನ್ನೂ ಕೇಳಿಸುತ್ತಿದ್ದಂತೆ ಮನಸ್ಸು ಮಿಡಿಯುತ್ತಿತ್ತು. ಗಾಡಿಯಲ್ಲಿ ಇರುತ್ತಿರುವಾಗ ಮಾಲತಿ ಶಾರದಮ್ಮನನ್ನೂ ಪಂಬಿಯನ್ನೂ ವಿಚಾರಿಸಿದ್ದಳು. ಅವಳು ಇಂದು ಅವರನ್ನು ನೋಡಿ ಹೋಗಲು ಬಂದರೂ ಬರಬಹುದು. ಮಧ್ಯಾಹ್ನದ ಮೇಲೆ ಬಂದರೆ ಚೆನ್ನಾಗಿತ್ತು, ಅಂದುಕೊಳ್ಳುತ್ತ ತನ್ನ ನಿತ್ಯ ಕೆಲಸಗಳನ್ನು ನಿರ್ವಹಿಸಿದನು. ಆಕೆ ತನ್ನವಳೆಂಬ ದೃಢನಂಬಿಕೆಯುಂಟಾದ ಮೇಲೆ ನಿರುದ್ಯೋಗಿಯಾಗಿ ಒಬ್ಬನೇ ಇರಲು ಅಂಜುತ್ತಿದ್ದವನು ಏಕಾಂತದ ಸ್ವತಂತ್ರವನ್ನೂ ವಿರಾಮದ ಸುಖವನ್ನೂ ಬಯಸಿದನು. ಆದರೆ ಒಂದೆಡೆ ಮನಸ್ಸು ಏಕಾಕಿಯಾಗಿರಲೆಳಸಿದರೂ ಇನ್ನೊಂದೆಡೆ ಸುತ್ತಮುತ್ತಲಿನವರೆಲ್ಲರೂ ಅತಿಹತ್ತಿರದವರು ತುಂಬ ಬೇಕಾದವರು ಎಂಬ ಬಂಧುತ್ವವನ್ನು ಹಾರೈಸುತ್ತಿತ್ತು. ಮನೆಮಂದಿಯಲ್ಲಿ ಹೆಚ್ಚಿನ ಪ್ರೀತಿ ವಿಶ್ವಾಸ, ಸರಿಸಮಾನರಲ್ಲಿ ಹೊಸ ಆದರ ಕೆಳಮಟ್ಟಿನವರಲ್ಲಿ ಹೊಸ ಕನಿಕರ ಪಶ್ಚಾತ್ತಾಪ, ಇವೆಲ್ಲವೂ ಎಲ್ಲಿಂದಲೋ ಬಂದು ತನ್ನ ರಕ್ತಕ್ಕೆ ಸೇರಿ ಅಪೂರ್ಣ ಚೇತನವನ್ನು ಪರಿಪೂರ್ಣ ಮಾಡಿದಂತೆ ಗೋಪಿನಾಥಗೆ ಜಾಗ್ರತಿಯುಂಟಾಯಿತು. ಈ ಎಚ್ಚರಿಕೆಯೊಂದಿಗೆ ಇರಬೇಕು. ಇದ್ದು ಸುಖಪಡಬೇಕು ಎಂಬ ಸಂಕಲ್ಪ; ಎಂತಹ ದುರಂತ ಕಷ್ಟಗಳು ಬಂದೊದಗಿದರೂ ದಾಟಿ ಬಿಡಬಹುದೆಂಬ ಸ್ವಾವಲಂಬನದ ಧೈರ್ಯ; ಅಲ್ಪ ಚಿಂತೆ, ಅಲ್ಪ ಮಾತು, ಅಲ್ಪ ಕೆಲಸ ಯಾವುದಕ್ಕೂ ಎಂದೂ

ತುತ್ತಾಗಬಾರದೆಂಬ ಉನ್ನತಾಶಯಗಳೂ ಬೆರೆತುಕೊಂಡವು. ಆತನ ನೈಸರ್ಗಿಕ ಸುಗುಣ ಸುಲಕ್ಷಣಗಳೆಲ್ಲವೂ ಪ್ರವರ್ಧಮಾನವಾಗಿ ಆತನ ಹಣೆಯ ಮೇಲೆ ಉಜ್ವಲ ಆತ್ಮಾಭಿಮಾನದ ಆನಂದ ಉದಯಿಸಿತು.

ಗೋಪಿನಾಥನ ಬದುಕಿನ ಕೈಗನ್ನಡಿ ಒಡೆದು ಚೂರು ಚೂರಾಗಿತ್ತು. ಸಂಬಿಯೊಂದು ಉಳಿದುಕೊಂಡಿತ್ತು. ಅವಳೂ ದೊಡ್ಡವಳಾಗಿ ಮದುವೆಯಾಗಿ ಗಂಡನ ಉಡಿಯಲ್ಲಡಗಿದರೆ ತನಗೂ ಮಾನವತೆಗೂ ಇರುವ ಒಂದು ತಂತು ಕೂಡಾ ಕಡಿದು ಹೋಗಿ ನಿರ್ಗತಿಕನಾಗುವುದಿದೆಯೆಂದು ಒಂದೊಂದು ವೇಳೆ ಭಯ ಪಡುತ್ತಿದ್ದನು. ಆದರೆ ಈಗ ಆ ಭಯ, ಆ ದುಃಖ ದೂರವಾಯಿತು. ಮಾಲತಿಯು ಜಗವೆಲ್ಲ ಪ್ರಿಯಬಂಧುಮಯವೆಂತ ತೋರಿಸಿ ಕೊಟ್ಟಳು. ಅವಳ ಸಿರಿಚಂದ್ರಿಕೆಯಲ್ಲಿ ಅವನ ಬದುಕಿನ ಹಾಳುಬಾವಿಗೂ ಒಂದು ಕಲಾಕೃತಿಯ ಸೊಬಗು ಬಂತು. ಈ ಸೊಬಗನ್ನು ನೋಡಿ ದೇವರು ಇನ್ನೂ ತನ್ನ ಕೈಬಿಟ್ಟಿಲ್ಲವೆಂತ ಆತಗೆ ಧೈರ್ಯವಾಯಿತು. ಆತಗೂ ಮಾನವವರ್ಗಕ್ಕೂ ಇದ್ದ ಋಣಾನುಬಂಧವು ಸುಖದಾಯಕವಾಯಿತು. ಮಾಲತಿ ಭೂಮಂಡಲಕ್ಕೇನೇ ಆದಿಯಿಂದ ಅಂತ್ಯದ ವರೆಗೂ ಒಂದು ಬಲೆಯ ಉಯ್ಯಾಲೆಯನ್ನು ಕಟ್ಟಿ ಆದರಲ್ಲಿ ತನ್ನೊಡನೆ ವಿರಮಿಸಿ ತೂಗಾಡಿದಂತೆ ಈ ನವ ಬಂಧುತ್ವದ ಸ್ಪಂದನದಲ್ಲಿ ಒಂದು ಬಗೆಯ ಲಯ ಬದ್ಧತೆಯಿತ್ತು. ಹಾಡಿನ ಧಾಟಿ ಯಾವುದೆಂದು ಇನ್ನೂ ಸ್ಪಷ್ಟವಾಗದಿದ್ದರೂ ಅದರ ಛಂದಸ್ಸಿಗೆ ಹುಚ್ಚಾಗಿ ಆತನ ಪ್ರತಿಯೊಂದು ರಕ್ತಕಣವೂ ತಾಳಹಾಕುತ್ತಿತ್ತು.

ಆದರೆ ಈ ತನುಮನದ ಹಬ್ಬದಲ್ಲಿ ಮನಸಾರೆ ಓಲಾಡುವಷ್ಟು ಪುರಸತ್ತು ಅಂದು ಗೋಪಿನಾಥಗೆ ಒದಗಲಿಲ್ಲ. ಕಳೆದ ಮೂರು ದಿನಗಳಿಂದಲೂ ಬಾಕಿ ಬಿದ್ದ ಕಚೇರಿ ಕೆಲಸ, ಬ್ಯಾಂಕಿನ ಕೆಲಸ, ಸಾಲದ್ದಕ್ಕೆ ಆಹಾರ ನಿಯೋಗದ ದೆಸೆಯಿಂದ ಬರುವವರು ಹೋಗುವವರು, ಹೀಗಾಗಿ ಒಂದು ಕ್ಷಣವೂ ವಿಶ್ರಮಿಸಿಕೊಳ್ಳಲು ಅವಕಾಶ ಸಿಗಲಿಲ್ಲ. ಸಹಕಾರ ಇಲಾಖೆಯ ಅಧಿಕಾರಿಗಳೂ ಅಧಿಕಾರಿಗಳಲ್ಲದ ಮೇಧಾವಿಗಳೂ ಆಹಾರ ಸಮಿತಿಯವರೂ ಬಂದು ಆತನ ಕಾರ್ಯಪಟುತ್ವವನ್ನು ಹೊಗಳಿ, ಇಲ್ಲವೆ ಸಾಹುಕಾರರ ಹಣ ಹೊರಗಿಟ್ಟಿತೆಂದು ಹಿಗ್ಗಿ. ಅಥವಾ ಸರಕಾರದ ಸೊಕ್ಕು ಮುರಿಯಿತೆಂದು ಹೆಮ್ಮೆ ಪಟ್ಟು ನಾನಾ ವಿಧವಾಗಿ ಆವನ ಸಮಯ ಹಾಳು ಮಾಡಿದರು.

ಕಾಂಜೀರಿಯ ಹೋಟಿಲಿನಲ್ಲಿ ಕಾಫಿ ಕುಡಿಯುವ ಹೊತ್ತಿಗೆ ಕೃಷ್ಣಯ್ಯ ಗೋಪಿನಾಥನನ್ನ ಒಂದೆಡೆಗೆ ಎಳೆದುಕೊಂಡು ಹೋಗಿ, "ನೀನು ನಿನ್ನೆ ಸಾಯಂಕಾಲ ರಾಘವೇಂದ್ರರಾಯರ ಹೆಂಡತಿಯೊಡನೆ ಜಟ್ಕಾದಲ್ಲಿ ಹೋಗ್ತಿದ್ದಿಯಲ್ಲಾ, ನಿನ್ನ ದೂರಾಲೋಚನೆ ಏನು ?" ಎಂದು ತಾನು ಸೇದುತ್ತಿದ್ದ ಚುಟ್ಟದ ಹೊಗೆಯನ್ನು ಪ್ರಶ್ನಿಸಿದಂತೆ ಎಲ್ಲೆಲ್ಲೋ ನೋಡುತ್ತ ಕೇಳಿದರು.

"ಹೋಗಬಾರದಿತ್ತೇನು ?" ಎಂದು ಗೋಪಿನಾಥ ಅವರ ದೃಷ್ಟಿಯನ್ನು ಹಿಡಿಯಲು ಯತ್ನಿಸಿದನು.

"ನೀನು ಹೀಗೆಯೇ ಮಾಡಬೇಕು. ಹಾಗೆಯೇ ಮಾಡಬೇಕೂಂತ ಹೇಳೋದಕ್ಕೆ ನನಗೆಲ್ಲಿಯ ಅರ್ಹತೆ ? ಸುಮ್ಮಗೆ ಕೇಳಿದೆ. ಇಷ್ಟವಿಲ್ಲದಿದ್ರೆ ಹೇಳಬೇಡ.

ಅವರ ಸುರುವಿನ ಪ್ರಶ್ನೆ ಗೋಪಿನಾಥನಿಗೆ ಕಣ್ಣಿಗೆ ಕೈಹಾಕಿದಂತಾಗಿತ್ತು. ಆದರೆ ಈ ವಿನೀತ ಭಾವವನ್ನು ನೋಡಿ ಸ್ವಲ್ಪ ಉಪಶಮನವಾಯಿತು. ತಾನು ಅವರ ಮೇಲೆ ಅಸಮಾಧಾನಪಡಬಾರದಿತ್ತೆಂದು ಅನುಕಂಪವುಂಟಾಯಿತು. ಅವರ ಅಂತರ್ಯದಲ್ಲಿ ಕಲ್ಮಷವಿಲ್ಲವೆಂತ ಗೊತ್ತು.

"ರಾಘವೇಂದ್ರರಾಯರ ಹೆಂಡತಿ ನನಗೇನೂ ದೂರವಲ್ಲ" ಎಂದು ತಡವರಿಸಿದನು.

"ಕೇವಲ ಹತ್ತಿರದ ಸಂಬಂಧ, ಅಲ್ವೇ ?"

ಗೋಪಿನಾಥ ಏನೂ ಹೇಳಲಾರದೆ ಸುಮ್ಮನಿದ್ದ.

"ಎಷ್ಟು ಹತ್ತಿರ ಗೋಪಿನಾಥ ?" ಎಂದು ನಗುತ್ತ ತಿರುಗಿ ಮುಖ ನೋಡಿದರು. ಆ ಗಳಿಗೆಯಲ್ಲಿ ಇದ್ದುದೆಲ್ಲವನ್ನೂ ಮುಚ್ಚುಮರೆಯಿಲ್ಲದೆ ಹೇಳಿಬಿಡೋಣವೆನಿಸಿತು, ಗೋಪಿನಾಥನಿಗೆ. ಆದರೆ ಮರುಕ್ಷಣ ಬೇಡವೆನಿಸಿ,

"ಇಲ್ಲೇತಕ್ಕೆ ಆ ವಿಚಾರ, ಈ ಸಂದಿ–ಗೊಂದಲದಲ್ಲಿ ?" ಎಂದನು.

"ನಿಜ. ಇನ್ನೇನು ಕೆಲಸವಿದೆ ನಿನಗೆ ?".

"ಸಬ್ ಕೋರ್ಟಿನಲ್ಲಿ ಒಂದು ಅಪೀಲಿದೆ."

"ಸರಿ; ನನಗೂ ಡಿಸ್ಟ್ರಿಕ್ಟ್ ಕೋರ್ಟಿನಲ್ಲಿ ಒಂದು ಮಿಸಲೇನಿಯಸ್ ಅರ್ಜಿಯಿದೆ. ಆಮೇಲೆ ಜತೇಗೆ ಬರುತ್ತೇನೆ. ಆಗಬಹುದೇ ?"

"ಬೇಡಾಂದ್ರೆ ಬಿಡುವವನೇ ನೀನು ?"

ನಾಲ್ಕೂವರೆ ಗಂಟೆಯ ನಂತರ ಇಬ್ಬರೂ ಗೋಪಿನಾಥನ ಮನೆಗೆ ಬಂದು ಸೇರಿದರು. ಕೃಷ್ಣಯ್ಯಗೆ ಅವರು ಕಚೇರಿಯಲ್ಲಿ ಪ್ರಸ್ತಾವಿಸಿದ ವಿಚಾರ ತೀರ ಮರೆತು ಹೋದಂತಿತ್ತು. ಆದರೆ ಗೋಪಿನಾಥನ ಹೃದಯಕೋಶ ಅಳುಕು-ಹಿಗ್ಗುಗಳ ನಡುವೆ ಬಿದ್ದೇಳುತ್ತಿತ್ತು. ಅವಿವಾಹಿತ ಯುವತಿಯೊಬ್ಬಳು ತನ್ನ ಚೊಚ್ಚಲು ಕೂಸನ್ನು ತೋರಿಸಲು ಅಚ್ಚು ಮೆಚ್ಚಿನ ಗೆಳತಿಯನ್ನು ನಾಚುತ್ತ ನಗ್ಗುತ್ತ ಕರೆತಂದಂತೆ ಆತ ಕೃಷ್ಣಯ್ಯನನ್ನು ಕರೆತಂದನು. ಅವರನ್ನು ಹಾಲಿನಲ್ಲಿ ಬಿಟ್ಟು, ತನ್ನ ಕೊಠಡಿಗೆ ಹೋಗಿ ವೃತ್ತಿವೇಷ ಕಳಚಿ ಬರೀ ಒಂದು ಲುಂಗಿ, ಬನೀನು, ಹೆಗಲ ಮೇಲೊಂದು ಬನೀನು ಹಾಕಿಕೊಂಡು ಬಂದನು. ಕೃಷ್ಣಯ್ಯ ರುಮಾಲು ಕೋಟುಗಳನ್ನು ತೆಗೆದು ಮೇಜಿನ ಮೇಲೆಸೆದು ಒಂದು ಸೋಫದಲ್ಲಿ ತನ್ನ ದೇಹವನ್ನಿಳಿಸಿ ಕಾಲುಗಳನ್ನು ಮತ್ತೊಂದರ ಬೆನ್ನ ಮೇಲೇರಿಸಿ ಕೈಲೊಂದು ಗೇಣುದ್ದದ ಚುಟ್ಟವನ್ನು ಆಕ್ಕರೆಯಿಂದ ಆಡಿಸುತ್ತ ಕುಳಿತಿದ್ದರು. ಗೋಪಿನಾಥನನ್ನು ಕಂಡೊಡನೆ,

"ಎಲ್ಲಿಯೋ ಬೆಂಕಿ ಪೊಟ್ಣ ?" ಎಂದರು.

ಆತ ಸ್ತಬ್ಧನಾಗಿ ನಿರಾಶೆಯಿಂದ "ಮಹಾರಾಯ, ನಿನ್ಮುಂದೆ ಎರಡರಲ್ಲೊಂದು ಮಾತು : ಚುಟ್ಟ ಸೇದುವುದನ್ನೇ ಬಿಟ್ಟುಬಿಡು; ಇಲ್ಲವೆ ನಿನ್ನ ಬೆಂಕಿಪೊಟ್ಣ ನೀನೇ ಒದಗಿಸಿಕೋ" ಎಂದು ಜರೆದನು.

"ಇಲ್ಲಾನ್ನಬಾರದೆ ? ಒಂದು ಪುಟ್ಟ ಬೆಂಕಿಪೊಟ್ಣಕ್ಕೂ ಗತಿಯಿಲ್ಲಾನ್ನಬಾರದೆ ? ಹಳೇ ಕ್ಲಾಸು ಮೇಟ್ಟು ಪರೋಪಕಾರ ಮಾಡೋದಕ್ಕೆ ಒಂದು ಸುಸಂದರ್ಭ ಮಾಡಿಕೊಡುತ್ತಿದ್ದಾನೇಂತ ಸಂತೋಷಪಡಬಾರದೆ ? ಹೋಗಿ ತಾರೋ. ಯಾಕಿಷ್ಟು ಭದ್ರಮುಷ್ಟಿಯೋ ನಿನ್ನದು ?" ಎಂದು ಆಸಹ್ಯದಿಂದ ವಿಷಾದಿಸಿದರು. ಗೋಪಿನಾಥ ತಂದುಕೊಟ್ಟ ಮೇಲೆ ಬೆಂಕಿಹಚ್ಚಿ ನಾಲ್ಕಾರು ಸಲ ಬುಸು ಬುಸು ಹೊಗೆಬಿಟ್ಟು,

"ಇನ್ನು ನೋಡೋಣ, ನಿನ್ನ ಬೆಕ್ಕನ್ನ ಹೊರಗೆ ಬಿಡು" ಅಂದರು ಅಟ್ಟವನ್ನು ನೋಡುತ್ತ.

ಗೋಪಿನಾಥನಿಗೆ ಮಾತಿಗೆ ಸಿಗದ ಆದ್ಯಂತ ಕಾಣದ ತನ್ನ ಅಭೂತಪೂರ್ವ ಅನುಭವವನ್ನು ಎಲ್ಲಿ ಪ್ರಾರಂಭಿಸೋಣ, ಎಲ್ಲಿ ಮುಗಿಸೋಣ, ಯಾವುದನ್ನು ಹೇಳೋಣ, ಯಾವುದನ್ನು ಬಿಡೋಣವೆಂದು ತಿಳಿಯಲಿಲ್ಲ.

ಒಂದು ಕ್ಷಣ ಭಾವನೆಗಳೆಲ್ಲ ಹಿಂಡುಹಿಂಡಾಗಿ ದಂಡೆತ್ತಿ ಬರುತ್ತಿದ್ದುವು. ಮತ್ತೊಂದು ಕ್ಷಣ ಚಲ್ಲಾಪಿಲ್ಲಿಯಾಗಿ ಚದರಿ ಹೋಗುತ್ತಿದ್ದುವು. ಹಾಗೆಂತ ಸುಮ್ಮಗಿದ್ದುಬಿಡೋಣವೆಂದರೆ ಕೃಷ್ಣಯ್ಯ ಆಗಲೇ ಅಡ್ಡ ವಿಚಾರಣೆಗೆ ಉಪಕ್ರಮಿಸಿದ್ದರು ಮಾತ್ರವಲ್ಲ, ಗಂಟಲಲ್ಲಿ ತುಂಬಿ ತುಳುಕುತ್ತಿದ್ದ ಸುಖದ ಹಿಗ್ಗನ್ನು ಸಾಧ್ಯವಾದಷ್ಟು ಹಿತನಾದವನೊಡನೆ ಹಂಚಿಕೊಂಡರೆ ಅಷ್ಟರ ಮಟ್ಟಿಗಾದರೂ ಮನಸ್ಸು ಹಗುರವಾಗಬಹುದೆಂಬ ಹಾರೈಕೆ. ಈ ರೀತಿಯ ಭಾವಾಂದೋಲನದಿಂದ ಆತ ಕೆಲವು ಕ್ಷಣ ಮೌನಸ್ಥನಾಗಿದ್ದುದನ್ನು ನೋಡಿ ಕೃಷ್ಣಯ್ಯ,

"ಏನೋ ಗೋಪಿ, ನಿನ್ನ ಬಾಯಿಬೀಗ ಖುಲಾಯಿಸೋದಕ್ಕೆ ಹುಕುಂ ಜೇರಿ ತರಬೇಕಿತ್ತೇನೋ ಕೋರ್ಟಿನಿಂದ ?" ಎಂದು ಚುಚ್ಚಿದರು.

"ಬಾಯಿ ಬಿಟ್ಟರೂ ಮಾತು ಬರದು; ನಾನೇನ್ಮಾಡಲಿ ?"

"ಹಾಡಿ ಹೇಳು."

"ಅದೇ ಸುಲಭಾಂತ ತೋರುತ್ತೆ. ಮಾತಿಗೆ ಮೀರಿದ್ದನ್ನ ಗೀತದಲ್ಲಿ ಹೇಳೋದೇ ವಾಸಿ. ರತಿಪತಿಪ್ರಿಯಾಂತ ಒಂದು ರಾಗವಿದೆ. ಆದರೆ—"

"ಆದರೇನು ? ಈ ಹಾಲಿನಲ್ಲಿ ಬೇಡಾಂತೀಯಾ ನಿನ್ನ ಸಂಗೀತ ? ನಡಿ, ನಿನ್ನ ರೂಮಿಗೆ ಹೋಗೋಣ" ಅನ್ನುತ್ತ ತನ್ನ ಕಾಲುಗಳನ್ನು ಕೆಳಕ್ಕಿಳಿಸಿ ಕೃಷ್ಣಯ್ಯ ಸಿದ್ಧರಾದರು. ಅಷ್ಟರಲ್ಲಿ ಒಳಗಿಂದ ಪಂಬಿ ಓಡಿಬಂದು ತಂದೆಯ ಕೈ ಜಗ್ಗಿಸಿ, "ದೊಡ್ಡಮ್ಮ ಹೇಯಿದಾಯೆ, ಬಯಬೇಕಂತೆ, ಈ ಚಣ" ಅಂದಳು.

ಕೃಷ್ಣಯ್ಯ ತಲೆಯಾಡಿಸುತ್ತ, "ಹೋಗಪ್ಪ ಹೋಗು. ಈ ಚಂಡಿ ಬಿಡೋಹಾಗಿಲ್ಲ" ಅಂದರು.

"ಚಂಡಿ ನೀನೆ !" ಅನ್ನುತ್ತ ಪಂಬಿ ತನ್ನ ಕಡೆಗಣ್ಣ ನೋಟದಿಂದ ಅವರನ್ನು ತಿವಿದು ಕೊಂದುಹಾಕಿ ತಂದೆಯನ್ನು ಬಿಡಿಸಿಕೊಂಡು ಹೋದಳು. ಕೃಷ್ಣಯ್ಯ ಚೇತರಿಸಿಕೊಂಡು, "ಕಾಫಿಗೀಪಿ ಬೇಡಾಂತ ಹೇಳಿಬಿಡೋ ಗೋಪಿ" ಎಂದು ಕೂಗಿ ಹೇಳಿದರು.

ಒಳಗಿಂದ ಬಂದಮೇಲೆ ತನ್ನ ಶಯ್ಯಾಗೃಹದ ಹೃದಯಂಗಮವಾದ ವಾತಾವರಣದಲ್ಲಿ ಗೋಪಿನಾಥ ತನ್ನ ಮತ್ತು ಮಾಲತಿಯ ಕತೆಯನ್ನು

ಹೇಳಿದನು. ಸಾಧ್ಯವಾದಷ್ಟು ಆಂತರಿಕ ಉದ್ವೇಗವನ್ನು ಅದುಮಿ, ಯಾವನೋ ಮೂರನೆಯವನ ವೃತ್ತಾಂತವನ್ನು ನಿರೂಪಿಸಿದಂತೆ ನಿರಾಶಕ್ತಿ ಆತ್ಮಕಥೆಯನ್ನರುಹಿದನು. ಆದರೆ ತನುಮನದ ತೊರೆ ವಸಂತರಾಣಿಯ ವೈರ ವಣಿಗೆಯಂತೆ ಸಂಭ್ರಮಿಸುತ್ತಿದ್ದುದರಿಂದ ನಿರ್ಲಿಪ್ತತೆಯನ್ನು ನಟಿಸುವುದು ಸುಲಭವಾಗಲಿಲ್ಲ. ಆಗಾಗ ವಿರಮಿಸಿಕೊಳ್ಳುತ್ತಿದ್ದನು. ಒಂದೆರಡು ಸಲ ಎದೆಯುಬ್ಬಿ, ಗಂಟಲು ಬಿಗಿದು ಬಂದು, ಕಣ್ಣೀರು ತುಂಬಿ ಕತೆ ನಿಲ್ಲಿಸಬೇಕಾಯಿತು.

" Traffic Jam ? " ಎಂದು ಕೇಳಿದರು ಕೃಷ್ಣಯ್ಯ.

ಚುಟ್ಟವನ್ನು ಸೇದುತ್ತ ಮೇಲ್ಮುಖರಾಗಿ ಕುಳಿತಿದ್ದರೂ ಅವರಿಗೆ ಮನಗಾಣದ ವಿಷಯ ಯಾವುದೂ ಇರಲಿಲ್ಲ. ತನ್ನ ಆಪ್ತನ ಮುಗ್ಧತೆಯನ್ನು ಕಂಡು ಅವರ ಮನಸ್ಸು ಕರಗಿತು. ತಾಳ್ಮೆಯಿಂದ ಆದರದಿಂದ ಕತೆಯೆಲ್ಲವನ್ನೂ ಕೇಳಿ ಕೊನೆಗೆ,

" ಮಕ್ಕಳಿಬ್ಬರು ಕಣ್ಣುಮುಚ್ಚಾಲೆ ಆಡ್ತಾ ಆಡ್ತಾ ಮನೆಯಿಂದ ಬಲು ದೂರ ನಡು ಅಡವಿಯಲ್ಲಿ ಕಾಣೆಯಾದ್ದು ಕೇಳಿ ಗೊತ್ತೇ ?" ಎಂದು ತನಗೆ ತಾನೇ ಪ್ರಶ್ನೆ ಹಾಕುವಂತೆ ನುಡಿದರು.

" ಗೊತ್ತು. ಅವರನ್ನ ಶ್ರೀಕೃಷ್ಣ ಪರಮಾತ್ಮ ಮುದುಕನ ವೇಷ ಹಾಕ್ಕೊಂಡು ಬಂದು ಮನೆಗೆ ತಂದು ಬಿಟ್ಟನಲ್ವೇ ?" ಎಂದನು ನಗುತ್ತ.

" ತಮಾಷೇಂತ ತಿಳಕೋಬೇಡ ಗೋಪಿ. ನೀವಿಬ್ರೂ ಮತಿಗೆಟ್ಟ ಮಕ್ಕಳು. ನಾನೇನು ನಿಮ್ಮ ತಾತನೋ, ಅಲ್ಲಾ ಹೆಡ್ ಮೇಸ್ಟ್ರೋಂತ ನೀನು ಕೇಳಬಹುದು—"

"ಇಲ್ಲ; ಕೇಳೋದಿಲ್ಲ. ಕೇಳಬಹುದಾದ ಸವಾಲಿಗೆಲ್ಲ ಜವಾಬುಗಳನ್ನೆ ಸಿದ್ಧ ಮಾಡಿಕೊಂಡೇ ಬಂದಿದ್ದೀಂತ ಗೊತ್ತು. ಹೇಳೋದನ್ನೆಲ್ಲಾ ಹೇಳಿಬಿಡು."

" ಹಾಗೇನೂ ಇಲ್ಲ. ಆದರೆ ಈ ವಿಚಾರದಲ್ಲಿ ನಿನಗೆ ಕೋಪಬಂದರೂ ಪರವಾಯಿಲ್ಲ, ನೋವಾದರೂ ಪರವಾಯಿಲ್ಲ, ಮನಸ್ಸು ಬಿಚ್ಚಿ ಮಾತಾಡಿ ಬಿಡಬೇಕೂಂತ ಬಂದಿದ್ದೇನೆ, ಆಡಿಬಿಡ್ತೇನೆ. ನನಗೆ ಹುಚ್ಚು ಅಂದ್ರೂ ಅನ್ನು. ಆದ್ರೆ ನನ್ನ ಅಂತಃಕರಣ ಶುದ್ಧಿಯಲ್ಲಿ ಮಾತ್ರ ಪೂರ್ಣ ವಿಶ್ವಾಸವಿರಲಿ" ಎಂದು ಘನವಾಗಿ ಹೇಳಿದರು.

ಗೋಪಿನಾಥನಿಗೆ ಸ್ವಲ್ಪ ಆಶ್ಚರ್ಯವಾಯಿತು. ಒಳಗೊಳಗೆ ಸ್ವಲ್ಪ ಹೆವರಿಕೆಯೂ ಆಯಿತು. ಅಣಕ ಅಪಹಾಸಗಳಲ್ಲಿ ನಿಸ್ಸೀಮರಾದ ಕೃಷ್ಣಯ್ಯ ಇಷ್ಟು ಅಧಿಕೃತವಾಣಿಯಿಂದ, ಇಷ್ಟು ಸಣ್ಣ ಸ್ವರದಿಂದ ಮಾತನಾಡಿದ್ದು ಆತ ಅವರೆಗೂ ಕೇಳಿರಲಿಲ್ಲ.

"ನಿನಗೆ ಯಾವ ಬಗೆಯ ಭರವಸೆ ಕೊಡಲಿ, ಹೇಳು."

"ಬೇಕಾಗಿಲ್ಲ. ಮಾಲತಿಬಾಯಿಯವರ ವಿಷಯದಲ್ಲಿ ನಿನಗೆ ಮೊದಲಿಂದಲೇ, ಅಂದ್ರೆ ಅವರೊಡನೆ ಲಗ್ನ ಸಂಬಂಧ ತಪ್ಪಿದಂದಿನಿಂದಲೇ, ಒಂದು ತರದ ಪ್ರೀತಿಯಿತ್ತಲ್ಲವೇ ? ಹೃದಯದಲ್ಲಿ ಒಂದು ಸ್ಥಾನವಿತ್ತಲ್ಲವೆ ?"

"ಇತ್ತು. ಆದರೆ ಆ ಎಳೆಹಂಬಲವನ್ನು ಒಡೆದು ಹೋದ ಆಟದ ಸಾಮಾನುಗಳ ಬುಟ್ಟಿಯೊಳಗೆ ತುರುಕಿದೆ."

"ಹೌದು. ಅಂತಹ ಒಡಕು ಗೊಂಬೆಗಳು ಪ್ರತಿಯೊಬ್ಬರ ಉಗ್ರಾಣದಲ್ಲೂ ಇವೆ. ಇತ್ತೀಚೆಗೆ ಮೂರು ವರುಷಗಳಿಂದ ಈ ಎದೆಹುಣ್ಣು ಮೈಯೆಲ್ಲಾ ಹರಡಿದೆ, ಅಲ್ವೇ ?"

"ಯಾವುದೋ ಒಂದು ಘನರೋಗದ ಕುರಿತು ಹೇಳ್ತಾ ಇದ್ದ ಹಾಗಿದೆಯಲ್ಲಾ !"

"ಕಾಮದ ಹಾವಳಿ ಅಗ್ನಿಸರ್ಪದಂತೆ ಒಂದು ಮಹಾವ್ಯಾಧಿಯಿಲ್ಲದೆ ಮತ್ತೇನು ? ನೀನಿದಕ್ಕೆ ತುತ್ತಾಗೋದೇನೋ ಸರಿಯೆ. ಆದರೆ ಮಾಲತಿ ಬಾಯಿ ? ಮದುವೆಮದ್ದು ಮಾಡಿಸಿಕೊಂಡ ಮೇಲೂ ಈ ರೋಗ ಯಾಕೆ ಅಂಟಿಕೊಂಡಿತೋ ಗೊತ್ತಾಗೋದಿಲ್ಲ. ಇನ್ನು ಮುಂದಿನ ಆಲೋಚನೆ ಯೇನು ನಿಮ್ಮಿಬ್ಬರದು ? ಅನರ್ಥದ ಅಂಚಿನ ವರೆಗೆ ಬಂದಿದ್ದೀರಲ್ಲಾ, ಕೈಕೈ ಹಿಡಕೊಂಡು ಕಣ್ಮುಚ್ಚಿಕೊಂಡು."

"ಮುಂದಿನ ಆಲೋಚನೆ ಎಲ್ಬಂತು ?"

"ಬಂದೇತೀರಬೇಕಲ್ಲ, ಗೋಪಿ. ಇದೆಲ್ಲಿಗೆ ಕೊನೆಮುಟ್ಟೀತಂತ ಯೋಚ್ನೆ ಮಾಡಬೇಡವೆ ? ನಿನ್ನದು ಒಂದು ರೀತಿಯೇ ಬೇರೆ. ಹೆಂಡತೀನ ಕಳಕೊಂಡವ, ನಡುವಯಸ್ಸಿನ ರಸಿಕ. ನಾಳೆ ನೀನು ಮಂಗಳೂರಿನ ನವಮೋಹನಾಂಗಿಯರಿಗೆಲ್ಲ ಸುಸ್ವಾಗತ ಅಂತ ಬೋರ್ಡು ತೂಗಹಾಕಿ ಹಲ್ಲುಕಿರೀತಾ ಹೆಬ್ಬಾಗಿಲಲ್ಲಿ ಕೂತರೂ ಯಾರೂ ಏನೂ ಅನ್ನುವಹಾಗಿಲ್ಲ. ಮಾತ್ರವಲ್ಲ,

ನಿನ್ನ ಗಂಡುಸತನಕ್ಕೆ ಅದೊಂದು ಅಲಂಕಾರವೆಂತ ಜನರು ನಿನ್ನ ಬೆನ್ನುತಟ್ಟಿ 'ಶಹಭಾಸ್' ಅನ್ನಲೂ ಬಹುದು. ಆದರೆ ಮಾಲತೀಬಾಯಿಯ ವಿಚಾರವೇ ಬೇರೆ. ಅವರು ರಾಘವೇಂದ್ರರಾಯರ ಗೃಹಲಕ್ಷ್ಮಿ. ಅವರ ಕಣ್ಮಣಿಯಾಗಿರಲೂ ಬಹುದು. ಮೂರನೆಯವರಿಗೆ ಗೊತ್ತಾಗೋದಿಲ್ಲ. ಅವರ ಈ ಜನ್ಮದ ಆಯ್ಕೆ ಆಗಿಬಿಟ್ಟಿದೆ. ಹಿಡಿದ ಕೈ ಕೊಳೆಯಾದರೂ ಬಿಡುವಂತಿಲ್ಲ. ಹಿಡಿದ ದಾರಿ ಕಲ್ಲು–ಮುಳ್ಳುಮಯವಾದರೂ ಅಡ್ಡಹಾದಿಗೆ ಹೋಗುವಂತಿಲ್ಲ. ನಿನಗಾದರೂ ಸಮಾಜ ಹಾಕಿಕೊಟ್ಟ ಗೆರೆ ಅದೃಷ್ಟ ಅಳಿಸಿಬಿಟ್ಟಿದೆ. ಆದರೆ ಮಾಲತಿಬಾಯಿಗೆ ಕಟ್ಟಿದ ತಾಳಿ ಹಾಗೆಯೇ ಇದೆ. ಅದನ್ನ ಕಳಚಲಿಕ್ಕೆ ಯಮನೇ ಬರಬೇಕಷ್ಟೆ." ಎಂದು ನಿರರ್ಗಳವಾಗಿ ನುಡಿಯುತ್ತಿದ್ದವರು ಫಕ್ಕನೆ ಏನೋ ನೆನಪಾದವರಂತೆ ಚಕಿತರಾಗಿ,

"ಗೋಪಿ, ಏನು ಗ್ರಹಚಾರವೋ ಇದು. ನೀನು ಹೇಳಿದಹಾಗೆ ಭಾಷಣ ಮಾಡ್ತಾ ಇದ್ದೇನಲ್ಲ!" ಎಂದು ಗಾಬರಿಪಟ್ಟರು.

"ಭಾಷಣ ಮಾಡಿದರೆ ಪರವಾಯಿಲ್ಲ. ಆದರೆ ನೀನು ತಂಗಳನ್ನ ತುರುಕ್ತಾ ಇದ್ದೀಯಲ್ಲಾ ನನ್ನ ಬಾಯಿಗೆ. ಈ ಹಳಸು ದಾಂಪತ್ಯಧರ್ಮ, ಸಮಾಜದ ವಿಧಿ, ಕರ್ತವ್ಯದ ಕೋಳವೆಂಬ ಪ್ರಾರಬ್ಧ ವಿಲಾಪಗಳನ್ನು ಬಿಟ್ಟು ಬದುಕಿನಲ್ಲಿ ಬೇರೆ ಯಾವ ಸ್ವರ ಸಂಚಾರಕ್ಕೂ ಎಡೆಯಿಲ್ಲವೆ? ಸಾಮಾನ್ಯ ನಡವಳಿಕೆಗೆ ಬೇಕಾಗುವ ವ್ಯವಹಾರ ನಿರ್ಬಂಧಗಳನ್ನು ಮೀರುವ ಉನ್ನತ ಜೀವನ ಪ್ರವೃತ್ತಿಯೊಂದಿದೆ, ಹತ್ತು ಸಾವಿರಕ್ಕೊಂದು, ಎಂದು ಒಪ್ಪಿಕೊಳ್ಳುತ್ತೀಯಲ್ಲ? ಗುಡಿಸಲುಗಳ ಸಾಲಿನಲ್ಲಿ ಗಗನಚುಂಬಿಯಂತೆ? ಅಂದಮೇಲೆ ಗುಡಿಸಲು ಕಟ್ಟುವ ಮೇಸ್ತ್ರಿಯ ಆಯಅಳತೆಗಳು ಅರಮನೆಯ ನಿರ್ಮಾಪಕನಿಗೆ ನಿರರ್ಥಕವಲ್ಲವೆ? ನೀನು ಹೇಳಿದ ಅದೃಷ್ಟ ಬಂಧನದಿಂದ ಬಿಡಿಸಬಲ್ಲ ಯಮನನ್ನೇ ಸೋಲಿಸಿದ ಸಾಧ್ವೀಮಣಿ ಒಬ್ಬಳಿದ್ದಳಷ್ಟೆ. ಅಂತಹ ಸರ್ವಶಕ್ತವಾದ ಪ್ರೇಮ ಯಾವಾಗ ಹುಟ್ಟುತ್ತದೋ ಆಗಲೇ ನಿಜವಾದ ಜನ್ಮ. ಯಾರ ಸ್ಪರ್ಶನದಿಂದ ಚಿಗುರುತ್ತದೋ ಅವಳೇ ಜಗನ್ಮಾತೆ. ಎಲ್ಲಿ ಹೂ ಬಿಡುತ್ತದೋ ಅದೇ ಪುಣ್ಯಕ್ಷೇತ್ರ. ನನಗೂ ಮಾಲತಿಗೂ ಸಂಭವಿಸಿದ್ದು ಇದೇ ಆವಿರ್ಭಾವ. ಅದೊಂದು ನಿಸರ್ಗದೇವಿಯ ಆಮಂತ್ರಣ, ಅನ್ನು. ಬಾಳುವೆಯ ಸಾರ್ಥಕತೆ; ಪರಿಪೂರ್ಣತೆಯ ಸಾಕ್ಷಾತ್ಕಾರ.

"My God! ನಿಮ್ಮಿಬ್ಬರಿಗೂ ಹುಚ್ಚು ತಲೆಗಡರಿದೆ. ನೀನು ಯಾವ ಬಣ್ಣದ ಮಾತಿನಲ್ಲಿ ಹೇಳಿದರೂ ಸರಿಯೆ. ಸಮಾಜದ ಒರಳಲ್ಲಿ ಕೂತರೆ ಒನಕೆಪೆಟ್ಟು ಎಂದಿಗೂ ತಪ್ಪದು. ನೀನು ಪ್ರಸ್ತಾಪಿಸುವ ಆತ್ಮಬಾಂಧವ್ಯ ಅಲ್ಲೇ ಸರಿ. ದೇವರ ಚಿತ್ತಕ್ಕೆ ಹೇಗೆ ತೋರುವುದೋ ನಾನರಿಯೆ. ಆದರೆ ಸುತ್ತುಮುತ್ತಲಿನ ಹತ್ತು ಜನರ ದೃಷ್ಟಿಗೆ ಅದೊಂದು ಅಕ್ಷಮ್ಯ ಅಪರಾಧವೇ ಸರಿ. ಎರಡು ಕಾರಣಗಳಿವೆ; ಒಂದನೇದು : ಅಸೂಯೆ. ಎರಡನೇದು : ಅಸಹನೆ. ಸಾಮಾನ್ಯರಿಗೆ, ನನ್ನಂಥವರಿಗೆ, ಗೊಡ್ಡುಸಾರು ಸೀರು ಮಜ್ಜಿಗೆಯುವರಿಗೆ ನಿನ್ನಂಥವರನ್ನ ಕಂಡರೆ ಆಗೋದಿಲ್ಲ; ಹೊಟ್ಟೆಯುರಿ. ನೆಲಬಿಟ್ಟು ನಡಿಯೋವರನ್ನ, ಉದ್ದುದ್ದ ಮಾತಾಡೋವರನ್ನ ನೋಡಿದರೆ ಸಹಿಸೋದಿಲ್ಲ; ಅರ್ಥವಾಗೋದಿಲ್ಲ. ಹೊಸತೇನೂ ಅಲ್ಲಾನ್ನು. ಜನಮೇಜಯರಾಯನ ಕಾಲದಿಂದಲೂ ಇದ್ದದ್ದೇ. ಈಗಿನ ಪ್ರಜಾಪ್ರಭುತ್ವದ ರೀತಿನೀತಿಯಿಂದ ಕಡಿಮೆಯಾದ ಹಾಗೇನೂ ತೋರೋದಿಲ್ಲ. ಸ್ವಲ್ಪ ಜಾಸ್ತಿ ಅಂದ್ರೂ ಅನ್ನಬಹುದು; ಈ ಹೊಟ್ಟೆಕಿಚ್ಚು, ಈ ಮೊಂಡತನ, ಸಮಾಜಕಟ್ಟಿನ ಮೂಲ ತತ್ವವೂ ಅದೇ; ಮತ್ತೇನು ? ಆಸಾಮಿಗಳ ಪಾಲಿಗೆ ಯಾವ ಯಾವ ಪಂಜರ ದೊರಕಿದೆಯೋ ಅಷ್ಟರಲ್ಲೇ ತೃಪ್ತರಾಗಿ, ಅದರೊಳಗೇನೇ ನಿದ್ರೆ, ಆಹಾರ ಇತ್ಯಾದಿಗಳನ್ನ ಪೂರಯಿಸಿಕೊಳ್ಳಬೇಕು. ಇನ್ನಿಷ್ಟು ಬೇಕೂಂತ ಕೈನೀಡೋದಾಗಲಿ, ನಾಲಿಗೆ ಚಾಚೋದಾಗಲಿ ಸರ್ವಥಾ ಕೂಡದು. ಆದ್ರಿಂದ್ಲೇ ನೋಡು, ತಿಳಿದವರು ಹೇಳೋದು : ಭಿಕ್ಷೆ ಬೇಡಬಾರದು, ಕಳವು ಮಾಡಬಾರದು, ಹಿಂಸೆ ಮಾಡಬಾರದೂಂತ. ದೇವರು ಕೊಟ್ಟದ್ದು ಸಾಲದು ಅನ್ನೋದೇ ಮಹಾಪಾಪ. ಆದ್ರಿಂದ ಭರ್ತಿಗೆ ಇನ್ನೊಬ್ಬರ ವಸ್ತು ಒಡವೆಗಳನ್ನ ಅಪೇಕ್ಷಿಸೋದು ಭಿಕ್ಷಾಟನ ಇಲ್ಲವೆ ಕಳ್ಳತನ ಇಲ್ಲವೆ ಹಿಂಸೆ. ಇದ್ದಿದ್ದನ್ನ ಹೇಗೆ ವಿನಿಯೋಗಿಸಿದರೂ ಪರವಾಯಿಲ್ಲ. ಇಲ್ಲದ್ದನ್ನ ಮಾತ್ರ ಬಯಸಕೂಡದು" ಅಂದರು ಯೋಚನಾಪರರಾಗಿ, ನಡುನಡುವೆ ಚುಟ್ಟ ಸೇದುತ್ತ, ಕಿಟಕಿಯ ದಾರವಂದದ ಮೇಲೇರಿಸಿಟ್ಟಿದ್ದ ಕಾಲುಗಳನ್ನು ಅಲುಗಾಡಿಸುತ್ತ.

ಗೋಪಿನಾಥ ಸುಮ್ಮಗಿದ್ದುದರಿಂದ ಫಕ್ಕನೆ ಅವನೆಡೆಗೆ ಮುಖ ತಿರುಗಿಸಿ "ಜೋರಿನಿಂದ ದವಡೆಗೆರಡು ಏರಿಸಿಬಿಡೋಣಾಂತ ತೋರುತ್ತೇನು ?" ಎಂದು ಕೇಳಿದರು.

"It is not cricket" ಕೃಷ್ಣಯ್ಯ.

"Cricket?"

"ಅಲ್ವೇ? ಮುಟ್ಟಿದರೆ ಬೀಳುವಂಥ ಮೂರು stumps ಮುಂದೆ ನಿಂತು ಆಡಬೇಕು. ಗೆರೆಯೊಳಗಿರಬೇಕು. ಮೊಳವುದ್ದ ಕಟ್ಟಿಗೆ ಕೋಲಿಂದ Bodyline bowling ಬೇರೆ ತಪ್ಪಿಸಿಕೋಬೇಕು. ಇದು ನ್ಯಾಯವೇ? ಆದಿರಲಿ, ಈಗ ನಮ್ಮಿಬ್ರ ಸಂಘಟನೆಯಲ್ಲಿ ಭಿಕ್ಷೆಯಾಗಲಿ, ಕಳವಾಗಲಿ, ಹಿಂಸೆಯಾಗಲಿ ಎಲ್ಬಂತು?"

"ಅಯ್ಯೋ ಪೆದ್ದು, ಇಲ್ನೋಡು. ರಾಘವೇಂದ್ರರಾಯರಿಗೆ ತಿಳಿಯದೇನೇ ನೀನು ಅವರ ಹೆಂಡತಿಯ ಮನಸನ್ನೋ ಅಥವಾ ಇನ್ನೊಂದನ್ನೋ ಅಪಹಾರ ಮಾಡಿದರೆ ಅದು ಕಳವಲ್ಲವೇ? ಅವರ ಅನುಮತಿಯಿದ್ದರೆ ಅದೊಂದು ಬಗೆಯ ಭಿಕ್ಷಾಟನೆಯಲ್ಲವೆ? ಅವರ ಅನುಮತಿ, ತಿಳುವಳಿಕೆ ಎರಡೂ ಇಲ್ಲದೆ ಬಲವಂತದಿಂದ ವಶಪಡಿಸಿಕೊಂಡರೆ ಅದು ಹಿಂಸೆಯಂತ ಬೇರೆ ಹೇಳಬೇಕಾಗಿಲ್ಲವಷ್ಟೆ? ಇನ್ನೊಂದು ವಿಚಾರ ಗೋಪಿ, ಮಾಲತಿ ಬಾಯಿಗೆ ಮಕ್ಕಳಿದ್ದಿದ್ದರೆ ಹೀಗಾಗುತ್ತಿತ್ತೋ ಇಲ್ಲವೋ. ಮಕ್ಕಳಿಲ್ಲದ ಹೆಂಗಸರ ಸ್ವಭಾವ ಚಂಚಲ. ಮಾಲತಿಬಾಯಿ ನಿನ್ನಿಂದ ಬೇರೆ ಯಾವುದನ್ನೂ ಬಯಸದಿರಬಹುದು."

"ಆದ್ರಿಂದ?" ಗೋಪಿನಾಥಗೆ ಚಿಂತೆ ಹೆಚ್ಚುತ್ತಾ ಬಂತು.

"ಆದ್ರಿಂದ ಬಿಡುಗಡೆ ಕಷ್ಟವಿಲ್ಲ. ಬೇಡಿದ ವರವನ್ನು ದಾನಮಾಡು."

"ಆಮೇಲೆ?"

"ಆಮೇಲೇನು, ಮರೆತುಬಿಡು."

"ಅಷ್ಟು ಸುಲಭವೆ?"

"ಸುಲಭ ಮಾಡಿಕೋಬೇಕು. ನೀನೊಂದು ನಿಮಿತ್ತವೆಂತ ತಿಳಿಯಬೇಕು; ಕರ್ತನೆಂದು ಭಾವಿಸಬಾರದು; ತಂದೆಯೆಂಬ ಅಭಿಮಾನಕ್ಕೆ ಸ್ಥಳ ಕೊಡಬಾರದು. ಅಲ್ಲದೆ ಹೋದರೆ ನೋಡು. ನಿನ್ನ ಭವಿಷ್ಯವನ್ನೆಲ್ಲಾ, ನಿನ್ನ ಸರ್ವಸ್ವವನ್ನೆಲ್ಲಾ ಒಂದು ಹೆಣ್ಣಿಗಾಗಿ ಒತ್ತೆ ಇಡಬೇಕಾದೀತು. ಸಿದ್ಧವಿದ್ದೀಯಾ?"

"ಒತ್ತೆ ಇಡೋದಲ್ಲ, ಪರಿತ್ಯಾಗ ಮಾಡೋದು, ಸಮರ್ಪಿಸೋದು. ಸಿದ್ಧನಿದ್ದೇನೆ" ಎಂದು ಬಿಗುವಾಗಿ ವ್ಯಥಿತನಾಗಿ ಹೇಳಿದನು.

ಕೃಷ್ಣಯ್ಯ ಕೊಂಚ ಹೊತ್ತು ಆತನನ್ನು ದಿಟ್ಟಿಸಿ, "ನೀನು ಅದಕ್ಕೂ ಹಿಂಜರಿಯದಿರಬಹುದು. ಆದರೆ ಅಷ್ಟೊಂದು ಅತಿಸಾಹಸಕ್ಕೆ ತೊಡಗುವುದು

ತರವಲ್ಲ. ಮಾನವಬಾಂಧವ್ಯ ಬಹುಬೇಗ ವಿಷಮಿಸಿಕೊಳ್ಳುತ್ತದೆ. ಇಂದು ಜೆಲ್ಲದಂತಿರುವ ಬಂಧುಗಳು ನಾಳೆ ಬೇವಿನಂಥ ಅನಿಷ್ಟರಾಗಬಹುದು. ರಕ್ತ ಬಿಸಿಯಾಗಿರುವಾಗ ಕೊಣಿಕೆಗಳು ಕಾದು ಕರಗಿ ಅತಿಸುಲಭವಾಗಿ ಒಂದ ಕ್ಕೊಂದು ಸೇರಿ ಸರಪಣಿಯಾಗಿ ಬಿಡಬಹುದು. ಒಂದು ವ್ಯಕ್ತಿಯ ಸಂಬಂಧ ಇಡೀ ಜಗತ್ತಿನ ವಿರಾಟ್ ರೂಪವಾಗಿ ಕಾಣಬಹುದು. ಒಂದು ದಿನ ಸುಖ ಒಂದು ಯುಗದ ಆನಂದಸಾಗರವಾಗಿ ತೋರಬಹುದು. ಆದರೆ ಈ ಭ್ರಮೆ ಬಹುಕಾಲ ಉಳಿಯದು. ಇದರಿಂದ ದೂರವಿದ್ದಷ್ಟು ಕ್ಷೇಮ. ಮತ್ತೊಂದು ಗೋಪಿ, ಸರ್ವಾರ್ಪಣೆಮಾಡಿ ದಾಸಾನುದಾಸನಾಗತಕ್ಕಂಥ ವ್ಯಕ್ತಿಯಾಗಲಿ ವಸ್ತುವಾಗಲಿ ಇಹದಲ್ಲಿ ಇಲ್ಲವೇ ಇಲ್ಲವೆನ್ನಬಹುದು" ಅನ್ನುತ್ತ ಚುಟ್ಟದ ತುದಿಯಲ್ಲಿ ಒಂದಂಗುಲದಷ್ಟು ಎತ್ತರವಿದ್ದ ಬೂದಿಯನ್ನು ಕಿರಿಬೆರಳಿನಿಂದ ಕೆಡವಿ ತಿರುಗಿ ಬಾಯಿಗೆ ತುರುಕಿಕೊಂಡರು.

"ಕೃಷ್ಣಯ್ಯ, ನಿನ್ನ ಹುಟ್ಟಿದ ಹಬ್ಬಕ್ಕೆ ದೇವರು ಕೊಟ್ಟ ಬಾಗಿನದಲ್ಲಿ ಪ್ರೇಮಫಲ ಒಂದನ್ನು ಮರೆತಿರಬೇಕು. ನಿನಗೊಂದು ರಾಧೆ ಗಂಟುಬಿದ್ದಿದ್ರೆ ನಿನ್ನ ಭಾಷೆಯೇ ಬದಲಾಗುತ್ತಿತ್ತು. ಈ ಒಣ ವೇದಾಂತವೆಲ್ಲ ಬೋಳು ಗುಡ್ಡೆ ಹತ್ತುತ್ತಿತ್ತು."

"ಅಯ್ಯೋ ಬೇಡವಪ್ಪ! ನನಗೆ ನಮ್ಮನೆ ರುಕ್ಮಿಣಿಯೇ ಸಾಕು. ಈ ಚುಟ್ಟವನ್ನ ಉಂಟುಮಾಡಿದವ ಹಾಳಾಗಿ ಹೋಗ್ಲಿಂತ ದಿನಾಲೂ ಶಾಪ ಕೊಡ್ತಾ ಇದ್ರೂ ಅಷ್ಟಕ್ಕೇ ಮುಗಿಸುತ್ತಾಳೆ, ಪಾಪ, ಇನ್ನು ಯಮುನಾ ತೀರದ ದಿಂಡೆ ಬಂದು ಚುಟ್ಟವನ್ನ ಕಿತ್ತೆಸೆದು ಕೈತೊಳಕೊಂಡು ಕೊಳ ಲೊಂದನ್ನು ನನ್ನ ಬಾಯಿಗೆ ತುರುಕಿದರೆ ಏನು ತಾನೆ ಮಾಡೋದು? ನನ್ನದು ಕವಿಜೀವನವಲ್ಲ. ನಿಜ. ನನ್ನಾಕೆ ಕವನಸುಂದರಿಯಲ್ಲ ನಾನು ಅಲ್ಪಸಂತುಷ್ಟಿ. ನಿನ್ನ ಹಾಗಲ್ಲ. ನೀನು ಬರಬರುತ್ತಾ ಆನೆ ಮೇಲೆ ಆನೆ ಹೇರಿಸಿ ಗೋಪುರದ ಮೇಲೆ ಗೋಪುರ ಕಟ್ಟಿಕೊಳ್ಳುತ್ತೀ. ಕಾಲುಬುಡದ ಹೊಂಡ ಹೆಜ್ಜೆಹೆಜ್ಜೆಗೆ ಆಳವಾಗ್ತಾ ಬರೋದನ್ನ ಗಮನಿಸೋದಿಲ್ಲ. ಬಿದ್ರೆ ದೇವರೇ ಗತಿ! ಎಲ್ಲಿ ಸೀಲೋ ಈ ತುಂಡನ್ನ," ಅನ್ನುತ್ತ ಕೈಯಲ್ಲುಳಿದ ಒಂದುವರೆ ಇಂಚಿನ ಚುಟ್ಟದ ತುಂಡನ್ನು ಕಿಟಕಿಯ ಹೊರಗೆ ಬೀಸಾಡಿದರು.

ಗೋಪಿನಾಥಗೆ ಆರಂಭದಲ್ಲಿದ್ದ ಭಯ ಸಂಶಯಗಳು ದೂರವಾಗಿ ಆತ್ಮ ವಿಶ್ವಾಸ ತುಂಬುತ್ತ ಬಂತು.

“ ಒಟ್ನಲ್ಲಿ ನಿನ್ನ ಜಗತ್ತಿಗೆ ಗಾಳಿ, ಬೆಳಕು, ಸಾಹಸ, ಸುಖ, ಸೌಂದರ್ಯ ಬಿಟ್ಟು ಮಿಕ್ಕ ಭಾಗ್ಯಕ್ಕೇನೂ ಕಡಿಮೆಯಿಲ್ಲ; ಅಲ್ವೇ? ನೀವು ಹಿಂದುಗಳು ಅಲ್ಪಾಯುಸ್ಕರಾಗಿ ಜೋಬದ್ರಗಳಾಗಿರೋದಕ್ಕೆ ನಿನ್ನ ತತ್ವವೇ ಮುಖ್ಯ ಕಾರಣ ” ಎಂದು ಜಿಹಾಸೆಪಟ್ಟನು.

“ ಒಂದು ಹೆಣ್ಣಿಗಾಗಿ ನಿದ್ರಾಹಾರಗಳನ್ನು ಬಿಡೋದು, ಹಣ ಕಾಸು ಕಳ ಕೊಳ್ಳೋದು ಸಮಯಶಕ್ತಿ ನಾಶಮಾಡಿಕೊಳ್ಳೋದು, ಇದೆಲ್ಲಾ ಶುದ್ಧ ಹೇಡಿತನ” ಎಂದು ಕೃಷ್ಣಯ್ಯ ಮುಂದರಿಸಿದರು, ಗೋಪಿನಾಥ ನಡುವೆ ಖಂಡಿಸಿ ಮಾತಾಡಿದ್ದನ್ನು ನಿರ್ಲಕ್ಷಿಸಿ.

“ ಆದರೆ ಆ ಹೆಂಣಿನ ಸಾನ್ನಿಧ್ಯ, ಸ್ನೇಹ, ನೋಟ, ಒಡನಾಟಗಳಿಂದ ನೀನು ಹೇಳುವ ನಿದ್ರೆ, ಆಹಾರ, ಹಣಕಾಸು, ಶಕ್ತಿ, ಸಮಯಗಳೆಲ್ಲದರ ರುಚಿ ಮತ್ತು ಬೆಲೆ ಮುಮ್ಮಡಿ ಜಾಸ್ತಿಯಾಗುವುದಾದರೆ ? ”

“ ಬರೇ ಕಲ್ಪನೆ ಗೋಪಿ, ಬರೇ ಕಲ್ಪನೆ. ಮುಗ್ಧ ಮನಸ್ಸಿನ ವಿಭ್ರಮೆ. ಒಂದು ವೇಳೆ ಅಂಥ ಸೌಭಾಗ್ಯ ಸುಂದರಿ ಸಿಕ್ಕರೂ ಅದೂ ಒಂದು ಪಜೀತಿಯೇ. ಗೃಹಸ್ಥಾಶ್ರಮದಲ್ಲೇ ವಿಶ್ರಮಿಸುತ್ತ ಕಣ್ಣು ಮುಚ್ಕೋದಾದರೆ ಸರಿ; ಹೆಣ್ಣು, ಹೊನ್ನು ಇದಷ್ಟು ಅನುಕೂಲವೆ. ಯಾತಕ್ಕೋ ನಗ್ತಾ ಇದ್ದೀ ? ”

“ ನೀನು ದೊಡ್ಡ ಕೀಲಾಡಿ ಕಣೋ. ಸತ್ಯ ಹೇಳು, ನಿನಗೀ ಭಾಗದ ಅನುಭವವೆಷ್ಟಿದೆ ” ಎಂದು ಗೋಪಿನಾಥ ಕುತೂಹಲದಿಂದ ಕೇಳಿದನು.

ಕೃಷ್ಣಯ್ಯ ಒಂದು ಕಂಣು ಮಿಟುಕಿಸಿ, “ ನನಗೀಭಾಗದ ವಿದ್ಯಾಭ್ಯಾಸ ವೆಲ್ಲ ಮದುವೆಗೆ ಮೊದಲೇ ಮುಗಿದಿದೆ. ಈಗ ಆದರ್ಶ ಸಂಸಾರಿಗನಾಗಿದ್ದೇನೆ. ಅಷ್ಟೇ ಅಲ್ಲ, ನಿನ್ನಂಥ ಪತಿತರಿಗೆ ತತ್ವೋಪದೇಶ ಮಾಡ್ತಿದ್ದೇನೆ. ನೋಡು, ಇಷ್ಟೊಂದು ದೀರ, ಗೋಪಿ; ಸ್ತ್ರೀ ಸಹವಾಸದಿಂದ ನಿತ್ಯ ಜೀವನದ ಯಾವ ವ್ಯಾಪಾರಕ್ಕೂ ಕೊರತೆ ಬರಬಾರದು. ಅದರ ನೆನಪು ನಿರೀಕ್ಷಣೆಗಳ ಹವ ಣಿಕೆ ಹಾರೈಕೆಯಿಂದ ಮನಶ್ಶಾಂತಿ ಕೆಡಬಾರದು. ಒದಗಿ ಬಂದ ಕರ್ತವ್ಯ ಕ್ಕೆಷ್ಟೋ ಅಷ್ಟೇ ಒಪ್ಪಿಸಿಬಿಟ್ಟು ಮುಗಿಸಿ ಮರೆತುಬಿಡಬೇಕು. ಅದರಲ್ಲಿ ಆಸಕ್ತಿ ನೆಟ್ಟುಕೊಳ್ಳಲು ಬಿಡಬಾರದು. ಹೆಣ್ಣಿಗೆ ಮನಸೋತ ಗಂಡಸು ಅಕಾಲ ಮೃತ್ಯುವಿಗೆ ತುತ್ತಾದಂತೆಯೇ ಸರಿ. ಅವನ ಸ್ವತಂತ್ರ, ಸಾಹಸ, ಸಂಸ್ಕೃತಿ ಎಲ್ಲವಕ್ಕೂ ಪೂರ್ಣವಿರಾಮ—ಸಮಾಪ್ತಿ. ”

" ಅಂದ್ರೆ ನೀನು ಚಿತ್ರಿಸುವ ಸಂಸಾರದಲ್ಲಿ ಹೆಂಗಸಿಗೆ ತನ್ನದೇ ಆದ ಸ್ಥಾನ ಮಾನ ಯಾವುದೂ ಇರಲಾರದು. ಆಕೆಗೆ ಸ್ವಂತ ಬುದ್ಧಿ, ಗುಣ, ಆಶಯಗಳಾವುವೂ ಇರಬಾರದು. ಆಕೆ ಗಂಡನ ಯಾವ ಜೀವನವೃತ್ತಿಯಲ್ಲೂ ಸಹಭಾಗಿಯಾಗಲು ಶಕ್ತಳಿರಬಾರದು–ಒಂದನ್ನು ಬಿಟ್ಟು. ಅದಕ್ಕೆ ಗಂಡಗೆ ಬೇಕಾದಾಗ ಮೈಯೊಡ್ಡಬೇಕು; ತನಗೆ ಬೇಕಿರಲಿ, ಬೇಡದಿರಲಿ. ಬಳಿಕ ಮೂಲೆ ಹಿಡಿದು ಕುಳಿತಿರಬೇಕು; ಇನ್ನೊಂದು ಕರೆಬರುವತನಕ ಅಲ್ವೇ ? ಇದಕ್ಕಿಂತ ವೇಶ್ಯಾಜೀವನ ಎಷ್ಟೋ ಮೇಲು" ಎಂದುಕೊಂಡು ಬಿರುಸಾಗಿಯೇ ನುಡಿದನು.

" ಜಪಾನಿನ 'ಗೆಯಿಶಾ' ಹುಡುಗಿಯರ ವಿಚಾರ ಗೊತ್ತೇ ? ಯೊಶಿವಾರದ ವೇಶ್ಯೆಯರಲ್ಲ, 'ಗೆಯಿಶಾ ?'

" ಗೊತ್ತು. ಸ್ವಲ್ಪ ಸುಧಾರಿಸಿಕೊಂಡ ನಾಜೂಕಾದ ಸೂಳೆಯರೇ ಅವರು. "

" ಬಹಳಮಟ್ಟಿಗೆ ಅವರ ಹಾಗಿರಬೇಕು ಹೆಂಗಸರು. ಇನ್ನೊಂದು ಸಂಗ್ತಿ. ಬೀದಿಯಲ್ಲಿ ಹಾದುಹೋಗುವ ಒಬ್ಬಳು ರೂಪವತಿಯನ್ನು ಕಂಡರೆ ನಿನಗೆ ಸಂತೋಷವಾಗುತ್ತೋ ಇಲ್ಲವೋ ? "

" ಆಗುತ್ತೆ."

" ಆ ಆಕರ್ಷಣದ ಮರ್ಮವೇನು ? ಹೇಳು."

" ಮನಸ್ಸನ್ನು ಸೆಳೆದುಹಿಡಿಯುವ ಪ್ರತಿಯೊಂದು ವಿಧದ ಸೌಂದರ್ಯದಲ್ಲೂ ಒಂದು ದೈವತ್ವವಿದೆ; ಆದಿಶಕ್ತಿಯ ಅಂಶವಿದೆ."

" ಅಷ್ಟೇ ಅಲ್ಲ. ನಗಬೇಡ. ಆ ಸುಂದರಿಯ ಮೈಸಿರಿ ಕಣ್ಣಿಗೆ ಕಟ್ಟಿದಂತಾದರೂ ಆಕೆಯ ಮನಸಿರಿ ನಿನ್ನ ಮಟ್ಟಿಗೆ ಶೂನ್ಯವಾದ್ದರಿಂದಲೇ ನಿನಗಷ್ಟು ಸಂತೋಷಕ್ಕೆ ಕಾರಣ. ನೀನಾಕೆಯನ್ನು ಮನಸ್ಸಿನಲ್ಲೇ ಹಾಸಿಗೆಗೆ ಒಯ್ದಾಗ ಆಕೆಯ ವ್ಯಕ್ತಿತ್ವದ ಮೋಹಕ್ಕಾಗಿ ಅಲ್ಲವಷ್ಟೇ ? ಆಕೆಯೊಡನೆ ನಿನ್ನ ವ್ಯವಹಾರಿಕ, ರಾಜಕೀಯ, ಸಾಂಸ್ಕೃತಿಕ ಸಮಸ್ಯೆಗಳನ್ನು ತರ್ಕಿಸುವುದಕ್ಕಲ್ಲವಷ್ಟೆ ? ಆಕೆಯ ಬಾಹ್ಯ ಲಾವಣ್ಯದ ಪ್ರತಿರೂಪವಾಗಿ, ಪರಿಪೂರಕವಾಗಿ ಆಕೆಗೆ ಗುಪ್ತ ಲಾವಣ್ಯವೂ ಇರಬಹುದೆಂಬ ನಿರೀಕ್ಷೆಯಿಂದಲ್ಲವೆ ? ನೀನು ಹೇಳಿದ ಬುದ್ಧಿ, ಗುಣಾತಿಶಯ, ಇವಾವುದೂ ಅಲ್ಲ, ಆ ಸಂತೋಷದ ಮೂಲ. ಆಕೆಯ ವ್ಯಕ್ತಿ

ಪರಿಚಯವಾಯಿತೆಂದರೆ ಒಂದಲ್ಲ ಒಂದು ಬಗೆಯ ಅತೃಪ್ತಿ ಇದ್ದೇ ಇರುತ್ತೆ. ಸಂತೋಷ ಕಮರುತ್ತೆ."

ಗೋಪಿನಾಥಗೆ ವಿಸ್ಮಯವಾಯಿತು. ಅಸಮಾಧಾನವಾಯಿತು. ಕಿವಿ ಕಚ್ಚಿದಂತಾಯಿತು. "ಅಲ್ಲಾ ಕೃಷ್ಣಯ್ಯ, ನೀನೇನೋಂತ ನೆನಸಿದ್ದೆ— ನಿನ್ನ ಗೋತ್ರ ಯಾವುದು ? ವಾತ್ಸ್ಯಾಯನ ಗೋತ್ರ ಅಂತ ಒಂದಿದೆಯೋ ?"

"ಗೊಡ್ಡು ವೈದಿಕ ಮುಂಡೇದೂಂತ ತಿಳಕೊಂಡಿದ್ದೀಯಲ್ವೇ ? ರಾಯರ ಕುಲದ ಅಹಂಕಾರ ನಿನ್ನೂ ಬಿಟ್ಟಿಲ್ಲ" ಅನ್ನುತ್ತ ನಕ್ಕರು.

"ಹೌದೂಂದ್ರೆ ! ನಿನ್ನದೇ ಒಂದು ಕಾಮಸೂತ್ರ ತಯಾರಾಗಿದೆಯಲ್ಲಾ! ಆದರೆ ನೀನಾಗ ನನ್ನ ಮುಂದಿಟ್ಟರೋ ಸಿದ್ಧಾಂತ ಮಾತ್ರ ಯಾವ ಗೃಹಸ್ಥ ನಿಗೂ ಹೇಳಿಸಿದ್ದಲ್ಲ. ಅದರಲ್ಲಿ ವಿಜ್ಞಾನದ ಸೂಕ್ಷ್ಮತೆಯೂ ಇಲ್ಲ; ವೇದಾಂತದ ವಿರಕ್ತಿಯೂ ಇಲ್ಲ, ಕಲೋಪಾಸನೆಯ ವೈಶಾಲ್ಯವೂ ಇಲ್ಲ. ಅದೊಂದು ವಿಟಸಾರ್ವಭೌಮನ ಕೈಪಿಡಿಯಂತಿದೆ. ಅದರ ಪ್ರಕಾರ ಸ್ತ್ರೀ ಸತ್ವಪರೀಕ್ಷೆಗೆ ಕಾಮದಂಡದ ಅಳತೆವಿನಹ ಬೇರೊಂದು ಪ್ರಮಾಣವಿದ್ದ ಹಾಗೆ ಕಾಣುವುದಿಲ್ಲ. ಏನು ಪ್ರಮಾದ, ಕೃಷ್ಣಯ್ಯ ! ಹೀಗೂ ಉಂಟೆ ? ಮೊನ್ನಿನ ಯುದ್ಧದಲ್ಲಿ ಹಿಟ್ಲರು ಗೆದ್ದಿದ್ದರೆ ನೀನು ಅವನ ಕೈಕೆಳಗೆ ಶಾಸನಕಾರ ನಾಗಿ ಸೇರಲು ಯೋಗ್ಯವಾಗುತ್ತಿದ್ದಿ. ಆದರೆ—ಸುಮ್ಮಗೆ ಲೇವಡಿ ಮಾಡ್ತಿ ದ್ದೀಯೋ ಏನೋ ?" ಎಂದು ಸಂಶಯಪಟ್ಟನು.

ಕೃಷ್ಣಯ್ಯ ತಲೆಯಾಡಿಸುತ್ತ ಖಿನ್ನಮನಸ್ಕರಾಗಿ ಎದ್ದುನಿಂತರು. "ಪುರಾಣ ಹೇಳೋ ಭಾಗ ನನ್ನದು ವ್ಯಾಖ್ಯಾನ ಮಾಡೋ ಭಾಗ ನಿನ್ನದು. ನಾನೀಗ ಹೋಗಲೇ ?" ಅನ್ನುತ್ತ ಗೋಪಿನಾಥನ ಹೆಗಲಮೇಲೆ ಕೈಯಿಟ್ಟು ಕೇಳಿ ದರು. ತಾನು ಎಷ್ಟು ಪ್ರಯತ್ನಪಟ್ಟರೂ ಆತನನ್ನು ಪ್ರಣಯ ಪರವಶತೆ ಯಿಂದ ಪಾರುಮಾಡಲು ಕೈಲಾಗದೇ ಹೋಯಿತಲ್ಲವೆಂತ ಕಳವಳಪಡುತ್ತಿ ದ್ದರು. ಗೋಪಿನಾಥನು ಉತ್ತರಹೇಳುವುದರೊಳಗೆ "ಪಪ್ಪಾ, ಪಪ್ಪಾ, ಪಪ್ಪಾ" ಅಂತ ಕಿರಚುತ್ತ ಪಂಬಿ ಓಡಿ ಬಂದಳು.

"ಏನಮ್ಮ ಇಷ್ಟು ಅವಾಂತರ ? ದೊಡ್ಡಮ್ಮ ಬಯ್ಯಬೇಕೂಂತ ಹೇಯಿ ದ್ದಾಯಾ ?" ಎಂದು ಅವಳ ಕೊಚ್ಚ ಭಾಷೆಯಲ್ಲೇ ಕೃಷ್ಣಯ್ಯ ಕೇಳಿದರು. ಆದರೆ ಪಂಬಿಗೆ ಅವರ ಮೇಲಿನ ತಿರಸ್ಕಾರ ಎಳ್ಳಷ್ಟೂ ಕಡಿಮೆಯಾಗಿರ

ಲಿಲ್ಲವ್ರೋ ಏನೋ, ಅವರನ್ನು ನೋಡಿಯೂ ನೋಡದ ಹಾಗೆ ಮಾಡಿ ತನ್ನ ಮುದ್ದು ಮೂತಿಯನ್ನು ಮೇಲಕ್ಕೆತ್ತಿಕೊಂಡು "ಪಪ್ಪ, ಅತ್ತೆ ಬಂದಿದ್ದಾಳೆ" ಎಂದು ಕಣ್ಣು ಕೆರಳಿಸಿಕೊಂಡು ಹೇಳಿದಳು. ಗೋಪಿನಾಥನ ಎದೆ ಜಗ್ಗನೆ ಹಾರಿ ಗಂಟಲಲ್ಲಿ ಸಿಕ್ಕಿಕೊಂಡಿತು.

"ಯಾರಪ್ಪ ?" ಎಂದು ಏಗುತ್ತ ಕೇಳಿದಳು.

"ಅತ್ತೆ ? ಮದಾಶಿಂದ ?" ಗೊತ್ತಿಲ್ಲವೆ, ಎಂಬಂತೆ ಹೇಳಿದಳು.

"ನಾನೀಕ್ಷಣ ಬಂದೇನ್ನು, ಹೋಗು" ಎಂದು ಬೆನ್ನು ತಡವಿ ಕಳುಹಿಸಿದನು

ಮಾಲತಿ ಬಂದಳು ಎಂಬ ಸವಿನುಡಿ ಆತನ ಕಿವಿಗೆ ಬೀಳುತ್ತಲೇ ಆತನ ಅರಿವು ಎಚ್ಚರಿಕೆ ಸಮುಚ್ಚಾಯ ಚೈತನ್ಯವೆಲ್ಲ ಆಕೆಯಿದ್ದೆಡೆಗೆ ಹಾರಿ ಹೋದ್ದರಿಂದ ತನ್ನ ಬಳಿಯಲ್ಲಿ ಮುಗುಳು ನಗುತ್ತ ನಿಂತಿದ್ದ ಗೆಳೆಯನನ್ನು ಇದಿರಿಸಲು ಫಕ್ಕನೆ ಸಾಧ್ಯವಾಗಲಿಲ್ಲ.

"ಯಾರೋ ಗೋಪಿ, ಅತ್ತೇಂದ್ರೆ ?" ಎಂದು ಏನೂ ತಿಳಿಯದವರಂತೆ ಕೃಷ್ಣಯ್ಯ ಕೇಳಿದರು.

"ನನಗೇನು ಗೊತ್ತು? ಹೋಗಿ ನೋಡಬೇಕಷ್ಟೆ" ಅನ್ನುತ್ತ ಆತನಕ ಇರದ ನವ ಕೊಂಡಿಯುಕ್ತವಾದ ಮುಖವನ್ನು ತಿರುಗಿಸಿ ನಕ್ಕನು.

"ಓಹೋ, ಹಾಗೇನು? ಇಲ್ನೋಡು" ಅನ್ನುತ್ತ ಆತನ ಭುಜಗಳನ್ನು ಹಿಡಿದು ತನ್ನ ಕಡೆಗೆ ತಿರುಗಿಸಿಕೊಂಡು, "ಇಲ್ನೋಡಯ್ಯ, ಪುಣ್ಯಾತ್ಮ! ನಾನಿಲ್ಲಿರೋದು ಸರಿಯಲ್ಲ, ಹೋಗ್ತೇನೆ. ಒಂದು ವಿಷಯ ಮಾತ್ರ ನೆನಪಿನಲ್ಲಿರಲಿ. ನಮ್ಮ ಇಂದಿನ ಮಾತುಕತೆಯನ್ನ ಮಾಲತಿಬಾಯಿಯವರಿಗೆ ಸರ್ವಥಾ ತಿಳಿಸಕೂಡದು, ಏನು ? ಮರಿಯಬಾರದು ? ಸರಿ. ನಮಸ್ತೇ. ನಿನ್ನೋಡಿದರೆ ಹೊಟ್ಟೆಕಿಚ್ಚಾಗುತ್ತೆ. ಹೋಗಿಬರಲೇ" ಅನ್ನುತ್ತ ತೆಗೆದು ಕೈಯಲ್ಲಿಟ್ಟುಕೊಂಡಿದ್ದ ಚುಟ್ಟವನ್ನು ಪುನಃ ಬಾಯಿಗಿಟ್ಟುಕೊಂಡು ಹೊರಟು ಹೋದರು.

## ೨೪

ಕೃಷ್ಣಯ್ಯ ಹೋದಮೇಲೂ ಗೋಪಿನಾಥನಿಗೆ ಒಂದು ಗಳಿಗೆ ಅಲ್ಲೇ ಮಂಚದ ಮೇಲೆ ಕುಳಿತು ಸುಧಾರಿಸಿಕೊಳ್ಳಬೇಕಾಗಿ ಬಂತು. ಇದ್ದಕ್ಕಿದ್ದ

ಹಾಗೆ ಬಂದುಬಿಟ್ಟಳಲ್ಲ, ಈಗೇನು ಮಾಡಲಿ ? ಎದೆಯೊಳಗಿನ ಕೋಲಾಹಲ ವನ್ನು ಹೇಗೆ ಅಡಗಿಸಲಿ ? ಅಮ್ಮಗೆ ಗುಟ್ಟು ಗೊತ್ತಾಗದಂತೆ ಮಾಲತಿಯನ್ನು ಹೇಗೆ ಸಂಬೋಧಿಸಲಿ ? ಕಣ್ಣೆತ್ತಿ ನೋಡಲಿ ? ಅಲಕ್ಷ್ಯವನ್ನು ನಟಿಸಲಿ ? ಎಂದು ತವಕಪಟ್ಟನು. ಥಟ್ಟನೆ ಕಣ್ಣುಚುಚ್ಚುವ ಪ್ರಕಾಶದಿಂದ ತಡವರಿಸಿ ದಂತೆ ಕಂಗೆಟ್ಟನು. ಸಾಧಾರಣ ಎಂಥ ಅಪೂರ್ವ ಸನ್ನಿವೇಶದಲ್ಲೂ ಮುಖ ಕೆಡದೆ ಮನಸ್ಸನ್ನು ತನ್ನ ಅಧೀನದಲ್ಲಿಟ್ಟುಕೊಳ್ಳಬಲ್ಲವನು ಈ ಅನಿರೀಕ್ಷಿತ ಸ್ಮರಶರಗಳ ಆಘಾತಕ್ಕೆ ದಿಗ್ಭ್ರಾಂತನಾದನು, ಸಹಾಯ ಶೂನ್ಯನಾದನು, ದುರ್ಬಲನಾದನು. ಕೋಟೆಯ ಕಾವಲುಗಾರರನ್ನು ಕೊಂದು ಒಳನುಗ್ಗಿ ಪುಂಡಾಟವಾಡಿದ ವೀರರಾಣಿಯಂತೆ ಮಾಲತಿಯು ಆತನ ಹೃದಯದುರ್ಗ ವನ್ನು ಆಕ್ರಮಿಸಿ ತಾಂಡವವಾಡಿದಳು. ಆದರೆ ಹೀಗೆ ಹೆಚ್ಚು ಹೊತ್ತು ಬಿದ್ದಿ ದ್ದರೆ ಮಾಲತಿಯ 'ಸೊಸೆ' ಮತ್ತೆ ಬರಬಹುದು ಎಂಬ ಗಾಬರಿಯಿಂದ ಚೇತರಿಸಿಕೊಳ್ಳುವಾಗ ಅವರಿಬ್ಬರ ಇಂಪಾದ ಸ್ವರವು ಸಮೀಪಿಸುತ್ತಿದ್ದುದನ್ನು ಕೇಳಿ ಬೇಗನೆ ಒಂದು ಬಿಳಿ ಜುಬ್ಬವನ್ನು ಹಾಕಿಕೊಂಡು ಡ್ರೆಸ್ಸಿಂಗ ಮೇಜಿನ ಕನ್ನಡಿಯ ಮುಂದೆ ಮುಂದಲೆಯನ್ನು ಬ್ರಶ್ಶಿನಿಂದ ತಿದ್ದಿಕೊಂಡು ಇಂದಿ ರಮ್ಮನ ಕೋಣೆ ಕಡೆಗೆ ಹೋದನು. ಅಷ್ಟರಲ್ಲಿ ಅಲ್ಲಿಂದ ಬರುತ್ತಿದ್ದ ಪಂಬಿ ಎದುರಿಗೆ ಸಿಕ್ಕಿದಳು. ಒಂದು ಬಿಸ್ಕೀಟಿನ ಡಬ್ಬವನ್ನೂ, ಒಂದು ಪೌಡರಿನ ಕರಡಿಗೆಯನ್ನೂ, ಒಂದು ಹತ್ತಿ ತುಂಬಿದ ಚಿಂದಿ ಹುಲಿಯನ್ನೂ ಏಕ ಕಾಲ ದಲ್ಲಿ ಎದೆಗಪ್ಪಿಕೊಂಡು ಬರುವ ಪೇಚಿನಲ್ಲಿದ್ದಳು. ಅವಳ ಹಿಂದೆ ಬಾಗಿ, ಅವಳ ಪುಟ್ಟ ಕೈಗಳ ಕೆಳಗೆ ತನ್ನ ಕೈಗಳನ್ನು ಹಿಡಿದು ನಿಧಾನವಾಗಿ ನಡೆ ಯುವಂತೆ ಎಚ್ಚರಿಸುತ್ತ ಮಾಲತಿ ಬರುತ್ತಿದ್ದಳು.

"ಓಹೋಹೋ ! ಎಲ್ಲಿಂದ ಇದೆಲ್ಲಾ ?" ಅನ್ನುತ್ತ ಗೋಪಿನಾಥ ಮಗು ವಿನ ಕೈಯಿಂದ ಬಿಸ್ಕೀಟಿನ ಡಬ್ಬವನ್ನು ಬಿಡಿಸಿಕೊಳ್ಳಲು ಬಗ್ಗಿದನು. ಆತ ಆಲಿಂಗಿಸುವವರಂತೆ ಕೈಮಾಡಿ ಬಗ್ಗಿದುದನ್ನು ನೋಡಿ ಮಾಲತಿ ಛಕ್ಕನೆ ಮಗುವನ್ನು ಬಿಟ್ಟು ನೆಟ್ಟಗಾದಳು. ತನ್ನ ಗಾಬರಿ ನಿಷ್ಕಾರಣವಾದ್ದೆಂತ ತಿಳಿದು ನಾಚಿದಳು. ತನ್ನ ಕೈಗಳೆರಡು ಹತ್ತು ಕೈಗಳಾದಂತೆ ತೋರಿತು. ಕೂಡಲೆ ಬಗ್ಗಿ ಮಗುವಿನ ಮುಷ್ಟಿಯಿಂದ ಪೌಡರು ಕರಡಿಗೆಯನ್ನು ಕಿತ್ತುಕೊಂಡು, "ಹುಲಿ ಒಂದನ್ನೇ ಹಿಡಕೊಂಡು ಆಡು" ಅಂದಳು.

ಗೋಪಿನಾಥನು ಬಿಸ್ಕೀಟು ಡಬ್ಬದ ಪರಿಶೀಲನದಲ್ಲಿ ಮಗ್ನನಾಗಿದ್ದಂತೆ ಮಾಡಿದರೂ ತನ್ನ ಪ್ರಿಯೆಯ ಮುಖದಲ್ಲಿ ಮಿಂಚಿಹೋದ ಸಂಕ್ಷೋಭೆಯು ಆತನ ಕಣ್ಣು ತಪ್ಪಲಿಲ್ಲ. ಆಕೆಯ ಲಜ್ಜಾಮಯವಾದ ಮುಖವನ್ನು ನೋಡಿ ಆತನ ಮೈಗೆ ಪುಳಕದ ಓಕುಳಿ ಚೆಲ್ಲಿದಂತಾಯಿತು. ಆಗ ಖಚಿತವಾಯಿತು: ತನಗೆ ಇಹದ ಸುಖ ಯಾರನ್ನವಲಂಬಿಸಿದೆ ಎಂಬದು. ಯಾರಿಂದ ಬಾಳು ಬೆಳಗಬೇಕು, ಎಂಬುದು.

ಆಗ ಅಡುಗೆಮನೆಯಿಂದ ಇಂದಿರಮ್ಮ ಬಂದರು. ಅವರು ಬರುವಾಗಲೂ ಗೋಪಿನಾಥನು ಡಬ್ಬದ ಪರೀಕ್ಷೆಯಲ್ಲೇ ನಿರತನಾಗಿದ್ದನು. ಮಾಲತಿ ಪೌಡರನ್ನು ಸ್ವಲ್ಪ ಅಂಗೈಗೆ ಹಾಕಿಕೊಂಡು ಮೂಸುತ್ತಿದ್ದಳು. ಪಂಬಿ ತನ್ನ ಕೈಯಿಂದ ಒಬ್ಬೊಬ್ಬರು ಒಂದೊಂದು ವಸ್ತುವನ್ನು ಕಸುಕೊಂಡ ಕಾರಣವೇನೆಂದು ತಿಳಿಯದೆ ಬೆರಗಾಗಿ ಮುಖವನ್ನು ಮೇಲೆತ್ತಿ ಒಮ್ಮೆ ತಂದೆ ಕಡೆಗೂ ಒಮ್ಮೆ 'ಅತ್ತೆ' ಕಡೆಗೂ ತನ್ನ ತಿಳಿಕಣ್ಣುಗಳನ್ನು ಉರುಳಿಸುತ್ತಿದ್ದಳು. ಇಂದಿರಮ್ಮ ಬಂದುದರಿಂದ ಸಂಭಾಷಣೆ ಶುರುವಾಯಿತು.

"ಹಂಟ್ಲೀ ಪಾಮರ್ಸ್! ಎಲ್ಲಿಂದ ತಲಾಶಿಮಾಡಿದಿಯಪ್ಪ!" ಎಂದು ಗೋಪಿನಾಥ ಒಂದು ಪ್ರಶ್ನೆ ಎಸೆದನು.

"ಮದಾಶಿಂದ, ಅತ್ತೆ ತಂದಿದು" ಅಂದಳು ಪಂಬಿ, ಒಡನೆ.

"ಇದು?" ಎಂದು ಹುಲಿಗೆ ಕೈನೀಡಿದನು.

"ಹುಯಿ, ಹೆಬ್ಬುಯಿ. ಅತ್ತೆ ಮದಾಶಿಂದ ತಂದಿದು; ನಂಗೇಂತ" ಎಂದು ಹೆಮ್ಮೆಯಿಂದ ನುಡಿಯುತ್ತ ತೋರಿಸಿದಳು.

"ಆಮೇಲೆ, ಅದೇನು ನೋಡೋಣ, ಮೂರನೇದು?" ಅನ್ನುತ್ತ ಮಾಲತಿಯ ಕಡೆಗೆ ಕೈಚಾಚಿದನು. ಆಕೆ ಪೌಡರು ಕರಡಿಗೆಯನ್ನು ಆತನ ಕೈಲಿಟ್ಟಳು. ಅದನ್ನು ನೋಡುತ್ತ 'ಕ್ಯುಟಿಕುರಾ!' ಎಂದು ಹುಬ್ಬುಗಳನ್ನು ಹಾರಿಸಿದನು. "ಹಂಟ್ಲೀ ಪಾಮರ್ಸ್ ಬಿಸ್ಕಟು, ಕ್ಯುಟಿಕುರಾ ಪೌಡರು, ಇವೆರಡನ್ನು ನೋಡದೆ ವರ್ಷ ಮೂರಾಯಿತು! ಮದ್ರಾಸಿನಲ್ಲಿ ಸಿಗುತ್ತೇನು?"

"ಸಿಕ್ಕದೆ ಹೇಗೆ ತರೋದು?" ಎಂದು ಮರು ಪ್ರಶ್ನೆ ಮಾಡುತ್ತ ಮಾಲತಿ ನಕ್ಕಳು.

" ಏನಿದು ಗೋಪಿ, ಎಂಥ ಪ್ರಶ್ನೆ ನಿನ್ನದು ?" ಎಂದು ಇಂದಿರಮ್ಮ ಹಾಸ್ಯ ಮಾಡಿದರು.

" ಏನ್ಮಾಡೋದಮ್ಮ, ಹಿಂದುಮುಂದು ನೋಡದೇ ಮಾತನಾಡಿ ಯಮ ಧರ್ಮರಾಯನೇ ಸೋಲಿಲ್ವೇ, ಹೆಂಗಸಿಗೆ ? "

" ಸೋಲು ಒಪ್ಪಿಕೊಳ್ಳೋ ಗುಣ ಗಂಡಸರಿಗೆ ಸ್ವಲ್ಪ ಕಡಮೆ, ಅಲ್ವೇ ನಮ್ಮ ?" ಅನ್ನುತ್ತ ಮಾಲತಿ ಇಂದಿರಮ್ಮನನ್ನೂ ತನ್ನ ಪಕ್ಷಕ್ಕೆ ಸೇರಿಸಿ ಕೊಂಡಳು. ಅವರು ಮುಗುಳ್ನಗುತ್ತ ಸುಮ್ಮಗಿದ್ದರು. " ಇಲ್ಲದೆ ಹೋದರೆ ನೋಡಿ, ಸೋತರೂ ಯಮದೇವರನ್ಯಾತಕ್ಕೆ ನಾಲಗೆ ಎಳಕೋಬೇಕು ? " ಎಂದು ಕೇಳಿದಳು.

" ಇಲ್ಲಪ್ಪ ! ಆ ಮಹಾರಾಯನ್ನ ಇಷ್ಟು ಬೇಗನೆ ಕರೆಸಿಕೊಳ್ಳುವ ಆಲೋ ಚನೆ ನನಗಿಲ್ಲ. ಮೂಗು ಮೇಲಾದವರೂ ಅಡೀಗೆ ಬೀಳ್ತಾರೇಂತ ದೃಷ್ಟಾಂತ ಕ್ಕಾಗಿ ಹೇಳಿದೆ, ಅಷ್ಟೆ" ಎಂದನು. ಆತನ ಮಾತುಗಾರಿಕೆಗೆ ಮೆಚ್ಚಿ ಮಾಲ ತಿಯ ಕಣ್ಣುಗಳು ಹೊಳೆಯುತ್ತಿದ್ದವು.

ಇಂದಿರಮ್ಮ ಈ ಮಾತಿನ ಸರಪಳಿ ಬೆಳೆಯಲಿಕ್ಕೆ ಬಿಡಲಿಲ್ಲ.

" ಗೋಪಿ, ಸಾಕುಮಾಡು ನೋಡೋಣ. ನೀವಿಬ್ರೂ ಬ್ರಹ್ಮನ ಬಿಡಾರ ಬಿಟ್ಟು ಬಂದು ಬಹಳ ಕಾಲವಾಗಲಿಲ್ಲ. ನಿಮಗ್ಯಾತಕ್ಕೀಗ ಯಮನ ಸುದ್ದಿ ? ಮಾಲತಿ ಒಂದಿಷ್ಟು ಕಾಫೀ ಕುಡೀಲಿ. ನಿನಗೂ ತರ್ತೇನೆ, ಇಲ್ಲೇ ಕೂತಿರಿ " ಅಂದರು.

" ನಾನೇ ಅಲ್ಲಿಗೆ ಬರ್ತೇನೆ " ಅನ್ನುತ್ತ ಅವರ ಹಿಂದೆ ಮಾಲತಿಯೂ ಹೊರಟಳು.

"ನಾನಿಲ್ಲೇ ಇರ್ತೇನಮ್ಮ, ತಂದುಬಿಡು" ಎಂದನು, ಬೇಕೆಂತಲೇ ಮಾಲತಿ ಯನ್ನು ನೋಡುತ್ತ.

" ಹಾಗಾದರೆ ಮಾಲತಿ, ಇಬ್ರಿಗೂ ಇಲ್ಲೇ ತಂದು ಕೊಡುತ್ತೇನೆ. ನೀನೊಬ್ಬಳು ಯಾಕೆ ಬರೋದು, ಆ ಕೊಂಪೆಗೆ ?" ಎಂದು ಇಂದಿರಮ್ಮ ಸೂಚಿಸಿದ್ದಕ್ಕೆ ಮಾಲತಿ,

" ಕೊಂಪೆ, ನಿಮ್ಮಡಿಗೇ ಮನೆ ? ನಮ್ಮ ಭೀಮಾಚಾರ್ರ ಅಡಿಗೆ ಮನೇಗೆ ಏನಂತೀರೋ ! ಅಮ್ಮ ಇರೋದಿಂದ್ರ ತಕ್ಕಮಟ್ಟಿಗೆ ಇದೆ."

ಇಂದಿರಮ್ಮ ಹೋದಮೇಲೆ ಗೋಪಿನಾಥ ಬಂದು ಸೋಫದ ಬಳಿ ಒಂದು ಕೈಮೇಜನ್ನು ಎಳೆಕೊಂಡು ಕಾಫಿಯ ದಾರಿಯನ್ನೇ ನೋಡುತ್ತ ಕುಳಿತನು. ಆ ಸೋಫದಲ್ಲಿ ಮಾಲತಿಗೂ ಜಾಗವಿತ್ತು , ಮೈಗೆ ಮೈ ತಾಗಿಸದೆ ಕುಳಿತುಕೊಳ್ಳುವಷ್ಟು. ಆದರೆ ಆಕೆ ಆಗಲೇ ಕಣ್ಮರೆಯಾಗಿದ್ದ ಪಂಬಿಯನ್ನು ಹುಡುಕುವ ನೆಪದಿಂದ ಆಟದ ಕೋಣೆಗೆ ಹೋಗಿಬಿಟ್ಟಳು. ಇಂದಿರಮ್ಮ ಕಾಫಿ ತಂದು ಕೈಮೇಜಿನ ಮೇಲಿಟ್ಟು ಕರೆದಾಗ ಮಾತ್ರ ಬರಲೇಬೇಕಾಯಿತು. ಆದರೂ ಸಂಕೋಚಪರಿಹಾರಕ್ಕಾಗಿ ಪಂಬಿಯನ್ನೂ ಕೈ ಹಿಡಿದು ಕರೆತಂದಳು. ಇಂದಿರಮ್ಮಗೂ ಕುಳಿತುಕೊಳ್ಳುವಂತೆ ವಿನಂತಿಮಾಡಿದಳು. ಗೋಪಿನಾಥಗೆ ಮಾತನಾಡುವ ಇಷ್ಟವಿರಲಿಲ್ಲ. ಮಾಲತಿಯು ಕಳೆದ ವಾರದ ಪ್ರಣಯ ಪ್ರಸಂಗಗಳನ್ನು ತೀರಾ ಮರೆತಂತೆ ಇದ್ದುದನ್ನು ನೋಡಿ ಆತಗೆ ಅಸಮಾಧಾನವಾಗಿತ್ತು. ನಿಜವಾಗಿಯೂ ನೆನಪಿಲ್ಲದೆ ಇರಬಹುದೆ? ಅಥವಾ ಅಷ್ಟೊಂದು ನಟನಾಚಾತುರ್ಯವು ಅವಳಲ್ಲಿರಬಹುದೆ? ಎಂದು ಆಶ್ಚರ್ಯಪಡುತ್ತಿದ್ದನು. ಆಗ ಪಂಬಿ ಹುಲಿ, ಬಿಸ್ಕಿಟಿಗಾಗಿ " ಗುಯ್,ಗುಯ್ " ಗರ್ಜಿಸುತ್ತದೆಂತ ಹೇಳುತ್ತ ತಂದೆಯ ತೊಡೆಯ ಮೇಲೇರಿಕೊಂಡುದು ಆತಗೆ ಅನುಕೂಲವೇ ಆಗಿತ್ತು. ಡಬ್ಬವನ್ನು ತೆರೆದು ಎರಡು ಬಿಸ್ಕಿಟನ್ನು ಹುಲಿಗೊಪ್ಪಿಸಿ, ಮಗಳ ಅಪ್ಪಣೆ ಪಡೆದು ಕೆಲವನ್ನು ಕಾಫಿಯೊಂದಿಗೆ ತಿನ್ನಲು ತೆಗೆದಿಟ್ಟು ಡಬ್ಬವನ್ನು ಮುಚ್ಚಿಕೊಟ್ಟು ಮಗಳನ್ನು ಕಳುಹಿಸಿದನು. ಮಾಲತಿಯೂ ಇಂದಿರಮ್ಮನೂ ಮದ್ರಾಸಿನಲ್ಲಿ ಮಿಲಿಟರಿಯವರ ಮತ್ತು ಅವರ ಲಾರಿಗಳಿಂದ ನಡೆಯುತ್ತಿದ್ದ ಅನಾಹುತಗಳ ಕುರಿತು ಮಾತನಾಡಿದರು. ಒಂದು ಹತ್ತು ನಿಮಿಷಗಳ ಮೇಲೆ ಇಂದಿರಮ್ಮ ಎದ್ದು ಹೋಗಿ ಗೋಪಿನಾಥ ಮಾಲತಿಯರಿಬ್ಬರೇ ಉಳಿದರು.

ಆದರೆ ಇಬ್ಬರೂ ಮಾತೆತ್ತಲಿಲ್ಲ. ಗೋಪಿನಾಥ ನಾಲಿಗೆ ಹಿಡಿದು ಕೂತರೆ ಮಾಲತಿ ಹಲ್ಲುಕಚ್ಚಿ ಕೂತಳು. ಆತ ಪೂರ್ವಕ್ಕೆ ನೋಡಿದರೆ. ಆಕೆ ಪಶ್ಚಿಮಕ್ಕೆ ನೋಡಿದಳು. ಆತ ಹುಬ್ಬು ಗಂಟುಹಾಕಿದರೆ, ಆಕೆ ತುಟಿ ಬಿಗಿದಳು. ಆತನ ಕೊರಳು ಉಬ್ಬಿದುದನ್ನು ನೋಡಿ , ಆಕೆ "ಏನು ದರ್ಪ ! ಬೇಕಾದರೆ ಅವನೇ ಮಾತಾಡಲಿ " ಅಂತಂದುಕೊಂಡಳು. ಆಕೆಯು ಮುದುರಿದ ಮೈಯನ್ನು ಕಂಡು ಆತ " ಏನು ಕಪಟ ! ಅವಳೇ ಮೊದಲು ಉಸಿರೆತ್ತಲಿ "

ಎಂದು ಮೌನ ತಾಳಿದನು. ಹೀಗೆ ನಲ್ಲ-ನಲ್ಲೆಯರು ಕತ್ತಿನ ತನಕ ತುಂಬಿಕ್ಕ ಲಲ್ಲೆಮಾತುಗಳನ್ನು ನುಂಗಿಕೊಂಡು ಉಪವಾಸವಿದ್ದರು. ಗಂಡುಹೆಣ್ಣಿ ಗಿರುವ ನಿಸರ್ಗವಿರೋಧದಿಂದ ಪರಸ್ಪರ ಆಕರ್ಷಣೆ ಹೇಗೆ ಹೂಬಿಟ್ಟಿತ್ತೋ ಹಾಗೆಯೇ ಅದರೊಳಗೆ ಪರಸ್ಪರ ವೈಷಮ್ಯದ ಬೀಜವೂ ಅಡಕವಾಗಿತ್ತು. ಇಬ್ಬರೂ ತಮ್ಮ ಮೂಢ ಮನಸ್ಸು ಹೆಣೆದ ಭೇದಬುದ್ಧಿಯ ಬಲೆಯಲ್ಲಿ ಸಿಲು ಕಿದ್ದರು. ಮೇಲೆ ಸಿಡುಕು ನೋಡದ ನಡುಕ; ಕೆಳಗೆ ಬೆಂದ ಭೂಮಿಯ ಮಿಡಿತ. ಇವೆರಡು ತಮ್ಮನ್ನು ತೊಯ್ದು ಜಿರಸಿ ಕರಗಿಸುವ ಮಳೆಗಾಗಿ ಕಾಯುತ್ತಿರಲು ಇವುಗಳ ಪರಿತಾಪವನ್ನು ನೋಡಿ ದಿನಕರನು ನಗುತ್ತ ಪ್ರತ್ಯಕ್ಷನಾದಂತೆ ಸರಸ ಸಂಭಾಷಣೆಗಾಗಿ ಹಾತೊರೆಯುತ್ತಿದ್ದ ಇವರಿಬ್ಬರ ನಡುವೆ ಪಂಬಿ ಪೌಡರು ಎಲ್ಲಿದೆಯೆಂದುಕೊಳ್ಳುತ್ತ ಓಡಿಬಂದಳು. ಮಾಲತಿಗೆ ದರ್ಪ, ನಟನೆ, ಮೌನ ಎಲ್ಲವೂ ಸ್ವಭಾವವಿರುದ್ಧವಾಗಿತ್ತು. ಕ್ಷಣಕ್ಷಣಕ್ಕೂ ಆಕೆಯ ಸಹನಾಶಕ್ತಿಯು ಕ್ಷೀಣವಾಗುತ್ತಲಿತ್ತು. “ನಾನೇತಕ್ಕೆ ಇಲ್ಲಿಗೆ ಬಂದೆ, ಬರಬಾರದಿತ್ತು. ನಾನೀ ಮನೆಗೆ ಹೊಂದಿದವಳಲ್ಲ. ನನಗಿಲ್ಲಿ ಯಾವ ಸ್ಥಾನವೂ ಇಲ್ಲ. ಒಲವಿನ ನೆರಳಿಗಾಗಿ ಅಂಗಲಾಚಿಕೊಂಡು ಜಾಲಿಮರದಡಿಗೆ ಬಂದಂತಾಗಿದೆಯಲ್ಲಾ ! ಇಲ್ಲೂ ಬಿಸಿಲೆ, ಇಲ್ಲೂ ಬಾಯಾರಿಕೆಯೆ ! ಇಲ್ಲೂ ಹೀಗಾದರೆ ನಾನೆಲ್ಲಿಗೆ ಹೋಗಲಿ? ಅಯ್ಯೋ!” ಎಂದು ಕಳವಳಿಸು ತ್ತಿದ್ದಳು.

ಪಂಬಿ ಬಂದುದು ಒಂದು ನೆಪವಾಗಿ ಜಗ್ಗನೆ ಎದ್ದು “ನಾನು ಕೊಡ್ತೇನೆ” ಅನ್ನುತ್ತ ನಡುಮೇಜಿನ ಮೇಲಿದ್ದ ಕ್ಯುಟಿಕುರಾ ಕರಡಿಗೆ ಯನ್ನು ತೆಗೆದು ಕೊಟ್ಟಳು. ಅದೇ ಕೆಲಸಕ್ಕಾಗಿ ಎದ್ದುನಿಂತ ಗೋಪಿನಾಥನು ತನ್ನಿಂದ ವಂಚಿತವಾಗಿ ಮಾಲತಿ ಮೇಲೆಬಿದ್ದು ಮಾಡಿದ್ದನ್ನು ನೋಡಿ ಸೋಫದ ಬಳಿಯೇ ನಿಂತುಬಿಟ್ಟಿದ್ದನು. ಇದನ್ನೆಲ್ಲ ಸೂಕ್ಷ್ಮವಾಗಿ ಗಮನಿ ಸುತ್ತಿದ್ದ ಪಂಬಿಗೆ ಮಾಲತಿ ಮೇಲೆ ಕೋಪ ಬಂತು. ಕರಡಿಗೆಯನ್ನು ಆಕೆಯ ಕೈಯಿಂದ ಕಿತ್ತುಕೊಂಡು ಗಂಟು ಮೂತಿ ಮಾಡಿ, ‘ಮುಚ್ಚಿಯು ತೆಕ್ಕೊಡು’ ಅನ್ನುತ್ತ ಕರಡಿಗೆಯನ್ನು ತಂದೆ ಕಡೆಗೆ ಚಾಚಿದಳು.

“ಮುಚ್ಚಲು ನಾನು ತೆಗೆದು ಕೊಡಲೆ?” ಎಂದು ಆತುರದಿಂದ ಮಾಲತಿ ಕೇಳಿದಳು.

" ಬೇಡ " ಪಂಬಿ ಕರಡಿಗೆಯನ್ನು ಬೆನ್ನ ಹಿಂದೆ ಅಡಗಿಸಿಟ್ಟಳು. ಗೋಪಿನಾಥಗೆ ಕಿಸಕ್ಕನೆ ನಗು ಬಂತು.

" ನಾನಲ್ವೇ ತಂದಿದ್ದು; ಮದ್ರಾಸಿಂದ. "

" ಅಯ್ಯ. "

" ನನ್ಮೇಲೆ ಸಿಟ್ಟೇ ? "

ಉತ್ತರವಿಲ್ಲ. ಗಲ್ಲಗಳೆರಡು ಬಾತಿದ್ದುವು. ತುಟಿಮೂಲೆಗಳು ಜೋಲು ಬಿದ್ದಿದ್ದುವು.

" ಇಲ್ಲಮ್ಮ, ಪಪ್ಪಗೆ ಬರಲಾರದು. ನಾನೇ ತೆಗೆದುಕೊಡ್ತೇನೆ, ತಾ " ಅನ್ನುತ್ತ ಕೈನೀಡಿ ಬೇಡಿದಳು.

" ತಯದಿಯ್ಯಾ "

" ನಾನು ಬೇಡವೆ, ನಿನಗೆ ? "

" ಬಾದವೇ ಬಾದ. "

" ನಾನು ಹೋಗಲೆ ಹಾಗಾದರೆ ? "

" ಹೋಗು, ಬಂದಿದಾಕೆ ? "

" ನಿನ್ನ ನೋಡೋದಕ್ಕೆ ನಿನ್ನ ಮುದ್ದು ಮಾಡೋದಕ್ಕೆ. "

" ನಿನ್ನ ಮುದ್ದು ಬಾದ. ನನ್ನಮ್ನ ನೀನಯ್ಯ ಹೋಗು. ಹೋಗು. ಹೋಗು ! " ಎಂದು ಪಂಬಿ ಉನ್ಮತ್ತಳಾಗಿ ಚೀರಿದಳು. ಗೋಪಿನಾಥನಿಗೆ ಎಲ್ಲೋ ಸಿಡಿಲು ಬಡಿದಂತಾಯಿತು. ಎಲ್ಲಿ ಯಾರಿಗೆ ಬಡಿಯಿತೋ, ತಿಳಿಯಲಿಲ್ಲ. ಮೈ ನಡುಗಿತು. ಮಾಲತಿಯನ್ನು ನೋಡಲು ಆಕೆ ಹಣೆ ಸಿಡಿದು ಹೋದಂತೆ ಅಂಗೈಯಿಂದ ಒತ್ತಿಕೊಂಡಿದ್ದಳು. ಆತಗೆ ಫಕ್ಕನೆ ತಲೆ ಬಿಸಿಯಾಗಿ 'ಪಂಬಿ!' ಎಂದು ಕಠೋರ ಸ್ವರದಿಂದ ಕೂಗಿದನು. ತಂದೆಯ ಬಾಯಿಂದ ಬಿರುಸು ಮಾತುಗಳನ್ನೇ ಕೇಳರಿಯದ ಮಗುವಿಗೆ ಚಾಟಿಯಿಂದ ಹೊಡೆದಂತಾಗಿ ತುಟಿಗಳು ಮೆಲ್ಲಮೆಲ್ಲಗೆ ಬಿಲ್ಲಿನಂತೆ ಬಗ್ಗಿದುವು. ಮುಖ ಕೆಂಪೇರಿತು. ಕಣ್ಣುಗಳಲ್ಲಿ ನೀರು ತುಂಬಿತು. ಗೊಳೋಂತ ಅತ್ತುಬಿಟ್ಟಳು. ಮಾಲತಿಯು ತನ್ನ ಅಶ್ರುಧಾರೆಯನ್ನಡಗಿಸಲು ಹೊರಗಿನ ಹಜಾರಕ್ಕೆ ಓಡಿದಳು. ಗೋಪಿನಾಥ ಅವಳನ್ನು ಹಿಂಬಾಲಿಸಿ ಹೋಗಿ, ಬೆನ್ನು ತಡವಿ " ಮಾಲತಿ, ಮಾಲತಿ. ನನ್ನ ಕೋಣೆಗೆ ಹೋಗು. ಪಂಬೀನ ಸಮಾಧಾನಮಾಡಿ ಒಳಗೆ ಕೊಟ್ಟು

ಬರ್ತೇನೆ, ಹೋಗು. ನನ್ನ ಚಿನ್ನ, ಹೋಗು." ಎಂದು ಆರ್ತ ಸ್ವರದಿಂದ ಉಸುರಿದನು. ಮಾಲತಿಯು ಸೆರಗಿನಿಂದ ಕಣ್ಣೊರಸಿಕೊಳ್ಳುತ್ತ ಹೋದ ಮೇಲೆ ಆತ ಮಗುವನ್ನೆತ್ತಿಕೊಂಡು ಇಂದಿರಮ್ಮನಿದ್ದಲ್ಲಿಗೆ ಹೋದನು.

ಮಾಲತಿಯ ದುಃಖದ ಇಬ್ಬನಿ ಬಹುಬೇಗ ಆರಿತು. ಒಂದೆರಡು ನಿಮಿಷಗಳನಂತರ ಗೋಪಿನಾಥ ತವಕದಿಂದ ಬಂದು ನೋಡಲು ಆಕೆಯ ಕಣ್ಣುಗಳು ತೊಳೆದು ಶುಭ್ರವಾಗಿದ್ದವು. ಮುಖ ಸ್ವಲ್ಪ ಬಾಡಿದ್ದರೂ ಗೆಲವು ಒಳಗಿಂದ ಹೊಮ್ಮುತ್ತಿತ್ತು. ಆಕೆ ಎದ್ದು ನಿಂತುದನ್ನು ಕಂಡು ಗೋಪಿನಾಥ ತಪ್ಪು ಭಾವನೆಯಿಂದ ಗಾಬರಿಪಟ್ಟು "ಆಗಲೇ ಹೊರಟಿಯೇನು?" ಎಂದು ಕೇಳಿದನು. ಮಾಲತಿ ಕೈಲಾದಷ್ಟು ಚಿತ್ರ ಹಿಂಸೆ ಮಾಡಬೇಕೆಂತ, "ಹೌದು, ಇದ್ದೇನು ಮಾಡೋದು?" ಎಂದಳು.

"ಬಂದು ಕಾಲುಗಂಟೆಯೂ ಆಗಲಿಲ್ಲ."

"ಬೇಗವೇನು, ತಡವೇನು? ಎಷ್ಟೆಲ್ಲ ನಡೆದುಹೋಯಿತು."

"ಮಾಲತಿ, ಮಗುವಿನ ಹುಚ್ಚುಮಾತಿಗೆ ನೀನೀರೀತಿ ನೊಂದುಕೊಳ್ಳಬಹುದೆ?"

"ಮಗುವಾದರೇನು, ಕಣ್ಣಿಗೆ ಕೈ ಹಾಕಿದರೆ ನೋವಾಗುವುದಿಲ್ಲವೆ?"

"ಆದರೆ ಬೇಕುಬೇಕೆಂತ ಮಾಡಿದ್ದೇ?"

"ಅಲ್ಲ. ಆದ್ದರಿಂದಲೇ ಮಗುವಿನ ಮೇಲೆ ನನಗೆ ಸಿಟ್ಟಿಲ್ಲ."

"ನನ್ನ ಮೇಲೆ, ಅಲ್ವೇ?"

"ನಿಮ್ಮನೇಗೆ ಬಂದು ನಿಮ್ಮ ಮೇಲೆ ಸಿಟ್ಟುಗೊಂಡರೆ ಹೇಗೆ? ಅವರವರ ಮನೇಲಿ ಅವರವರು ಮಾಡಿದ್ದೆಲ್ಲ ಚೆಂದ. ಅವರ ದರ್ಪ, ಕೋಪವೆಲ್ಲ ಅವರ ಅಧಿಕಾರಕ್ಕೊಪ್ಪುವ ಅಲಂಕಾರ" ಅನ್ನುವಾಗ ಮಾಲತಿಯ ಕಣ್ಣುಗಳಿಂದ ಕಿಡಿಗಳು ಚಿಮ್ಮುತ್ತಿದ್ದುವು. ಕೋಪದಿಂದಲೋ ತುಂಟತನದಿಂದಲೋ ಗೋಪಿನಾಥನಿಗೆ ಗೊತ್ತಾಗಲಿಲ್ಲ. ಆತ ತನ್ನೊಳಗೆ ತಾನೇ ನಕ್ಕು ಸುಮ್ಮನಿದ್ದ. ಆಕೆಯ ಮುಖದ ಕಾಂತಿ ಮರುಳು ಮಾಡುವಂತಿತ್ತು. ಎವೆಯಿಕ್ಕದೆ ಆಕೆಯನ್ನು ನೋಡುತ್ತಿದ್ದ ಹಾಗೆ ಅವನೆದೆ ಹಾರಲನುವಾದ ಹುಂಜದಂತೆ ಗರಿಗೆದರಿಕೊಂಡಿತು. ಮಾಲತಿ ಆತನ ಕಣ್ಣಿಗೆ ಕಣ್ಣಿಟ್ಟು,

“ನಾನು ಹೋಗ್ತೇನೆ, ಸ್ವಲ್ಪ ದಾರಿಬಿಟ್ಟು ನಿಂತರೆ ಉಪಕಾರವಿತ್ತು” ಎಂದು ಆತ ಅಡ್ಡಲಾಗಿ ನಿಂತುದನ್ನು ಸೂಚಿಸಿದಳು. ಆತ ಕದಲಲಿಲ್ಲ. ಮತ್ತೆ ತಿರುಗಿ ಹೇಳಿದಳು, ಹಟಮಾರಿತನದಿಂದ ಗೋಪಿನಾಥ ಒಂದು ಹೆಜ್ಜೆ ಸರಿದನು. ಮಾಲತಿ ಸ್ವಲ್ಪ ಮುಂದುವರಿದು ಆತನನ್ನು ಸಮೀಪಿಸಿ ಮೈಸೋಕದೆ ದಾಟಿಹೋಗುವಷ್ಟು ಎಡೆಯಿಲ್ಲದ್ದರಿಂದ ನಿಂತುಬಿಟ್ಟಳು. ಕಿಟಕಿಯು ಹೊರ ಗಿಂದ ನುಸುಳಿದ ಕಿರುಗಾಳಿಗೆ ಆಕೆಯ ಮೈಗಂಪಿನ ಪರಿಮಳ ಆತನ ಮೂಗಿಗೆ ನಾಟಿತು. ಅವಳ ಛಲದ ಕಾವಿಗೆ ಆತನ ತಾಳ್ಮೆ ಕರಗಿತು. ಅವಳ ಧಿಕ್ಕಾರದ ಹೊಡೆತಕ್ಕೆ ಆತನ ಸಂಯಮದ ಕಟ್ಟೆ ಕಡಿಯಿತು. ಹಸಿದ ಹುಲಿಯಂತೆ ಆಕೆಯ ಕೈಹಿಡಿದೆಳೆದು ಬಿಗಿದಪ್ಪಿದನು. ಕೆನ್ನೆ, ಗಲ್ಲ, ತುಟಿಗಳ ಮೇಲೆ ಉರಿಮುತ್ತುಗಳ ಮಳೆಗರೆದನು. ಒಂದು ಕ್ಷಣ ಆತನ ತೆಕ್ಕೆಯಲ್ಲಿ ಮಾಲತಿ ಕಟ್ಟಿಗೆಯ ಗೊಂಬೆಯಂತೆ ಮರಗಟ್ಟಿದಳು. ತೋಳ್ಸೆರೆಯಿಂದ ತಪ್ಪಿಸಿ ಕೊಳ್ಳಲು ತೂರಾಡಿದಳು, ನುಗ್ಗಾಡಿದಳು, ನರಳಿದಳು. ಸಾಧ್ಯವಾಗದೆ ಸೋತು ನಡುಗಿ ಸಡಲಿದಳು. ತೇದ ಚಂದನದಂತಾದಳು. ತನ್ನ ನಳಿತೋಳು ಗಳಿಂದ ಆತನ ಕತ್ತನ್ನು ಬಿಗಿದು ಚುಂಬನಕ್ಕೆ ಚುಂಬನ, ಆಲಿಂಗನಕ್ಕೆ ಆಲಿಂಗನಕೊಟ್ಟಳು.

ಒಂದಲ್ಲ ಒಂದು ದಿನ ಹೀಗಾಗಿಯೇ ಆಗುತ್ತದೆಂತ ಮಾಲತಿ ಊಹಿ ಸಿದ್ದಳು; ಹೆದರಿದ್ದಳು. ಆದರೆ ಈಗ ಆ ಅನುಮಾನ, ಸಂಕೋಚ, ಹೆದರಿಕೆ ಯಾವುದೂ ಇರಲಿಲ್ಲ. ಪ್ರಾಣಪ್ರಿಯನ ಆಲಿಂಗನದ ಆಶ್ರಯದಲ್ಲಿ ಅನುಮಾನ ವೆಲ್ಲಿಂದ? ಪ್ರೇಮಗರ್ಭವನ್ನು ತಾಳಿದ ತರುಣಿಗೆ ಸಂಕೋಚವೆಲ್ಲಿ? ಎರಡು ಜೀವಗಳು ಕೂಡಿದ ಅಮರಗಳಿಗೆಯಲ್ಲಿ ಸಂಗಮಸ್ನಾನ ಮಾಡಿದವಳಿಗೆ ಹೆದ ರಿಕೆಯೆಲ್ಲಿ? ಒಬ್ಬರನ್ನೊಬ್ಬರು ಬಿಡಲಾರದೆ ಪರಸ್ಪರ ನಾನಾಮೃತವನ್ನು ಸವಿಯುತ್ತ ಅರೆಗಣ್ಣಿನಿಂದ ನೋಡುತ್ತ ಬಿಸುಸುಯ್ಯುತ್ತ ಒಬ್ಬರಲ್ಲೊಬ್ಬರು ಮೈಮರೆತರು.

ಈ ‘ಮೂರ್ಛೆ’ಯಿಂದ ಎಚ್ಚತ್ತು ಅವಸರದಿಂದ ಅಗಲಿ ದೂರ ದೂರ ಹೋಗಿ ಕುಳಿತರು.

“ಹಾಲಿಗೆ ಹೋಗೋಣವೆ? ಈ ಕೋಣೆಯ ಗಾಳಿಯಲ್ಲಿ ಒಂದಮಲಿದೆ” ಎಂದು ಸೂಚಿಸಿದಳು ಮಾಲತಿ.

" ಹೆಂಣು ಕುಡುಕರ ಬೀಡೇ ಹಾಗೆ."

" ಏನೆಲ್ಲ ಕುಡೀತೀರೋ, ಯಾರಿಗೆ ಗೊತ್ತು ? ಹೊರಗೆ ಹೋಗೋಣ. ಯಾರಾದರೂ ಬಂದುಬಿಟ್ಟರೆ ?"

" ಸದ್ಯ ಇಲ್ಲಿಗೆ ಯಾರೂ ಬರುವಂತಿಲ್ಲ."

" ನಿಮ್ಮಮ್ಮ ? "

" ಇಲ್ಲ. ಅವಳು ಪಂಬಿಗೇನೋ ತಿಂಡಿ ಮಾಡ್ತಿದ್ದಾಳೆ. ಮಾಲತಿ ಇವೊತ್ತು ನಿನ್ನ ನಟನೆ ನೋಡಿ ನಾನು ತೀರ ಮೋಸಹೋಗಿದ್ದೆ. "

" ನಟನೆ ? "

" ಹೌದು. ಬಂದಾಗಿನಿಂದ ಒಂದು ಸಲವೂ ನನ್ನ ಕಣ್ಣೆತ್ತಿ ನೋಡಲಿಲ್ಲ. ಹಿಂದಿನ ನೆನಪೆಲ್ಲ ಅಳಿಸಿ ಹೋದಂತೆ ಮಾಡಿದೆಯಲ್ಲ ? "

ಮಾಲತಿಗೆ ನಗು ಬಂತು. " ಏನು ಹುಡುಗಾಟ ನಿಮ್ಮದು ? ನಿಮ್ಮಮ್ಮನ ಎದುರಿಗೂ, ಮಗುವಿರುವಾಗಲೂ ನಮ್ಮ ಹುಚ್ಚು ಹೊರಗೆ ಹಾಕಬೇಕೆಂತಲೇ ನಿಮ್ಮ ಯೋಚ್ನೆ ? "

" ಹಾಗಲ್ಲ ಮಾಲತಿ.

" ಮುಖದ ಮುದ್ದಿಗಷ್ಟು ಮಂದಸ್ಮಿತ ಸಾಕು.
ಸಾಕು ಗಾಳಿಯ ಸುಳಿಯು ಬೆಂಪವಗೆ "

ಅಂತ ಓದಲಿಲ್ಲವೇ ? "

" ಈಗ ತಿಳಿಯಿತು. ಕಾಫಿ ಕುಡೀತಿರುವಾಗ ನೀವು ಉರಿಮೋರೆ ಮಾಡಿಕೊಂಡು ಕೂತಿದ್ದು ಯಾತಕ್ಕೇಂತ. ಎಷ್ಟು ಬೇಗ ಸಿಟ್ಟು ಬರುತ್ತೆ ನಿಮಗೆ, ಗಂಡಸರಿಗೆ ! ಅದೇ ಬೇಂದ್ರೆಯವರು ಹೇಳ್ತಾರೆ, " ಗಾಣಿಗ ಸಿಟ್ಟಾಗಿ ಒಣ ರೊಟ್ಟಿ ತಿಂದಂತೆ " ಅಂತ; ಓದಲಿಲ್ಲವೇ? "

ಗೋಪಿನಾಥ ತುಂಬ ನಕ್ಕ. ಮಾಲತಿ ಎದ್ದು ಡ್ರೆಸ್ಸಿಂಗ್ ಮೇಜಿನ ಬಳಿಗೆ ಹೋಗಿ ಎದೆ ಮೇಲಿನ ಸೀರೆ ನಿರಿಗಳನ್ನು ಸರಿಪಡಿಸಿಕೊಂಡು, ಬೆವರಿಗೆ ಕೆದರಿದ್ದ ಕುಂಕುಮವನ್ನು ತಿದ್ದಿಕೊಂಡಳು. ಆಗ ಆಕೆಯ ಚೆಲುವನ್ನು ಕಣ್ಣಿನಿಂದ ಹೀರಿಕೊಳ್ಳುತ್ತಿದ್ದ ಗೋಪಿನಾಥನಿಗೆ ಆಕೆಯ ಕೊರಳು ಕಲೆಯ ನಿಲಯದಂತೆಯೂ, ಆಕೆಯ ನಡುವು ಬೆಡಗಿನ ಬೀಡಿನಂತೆಯೂ ತೋರಿತು. ದೂರವಿರಲಾರದೆ ಪಕ್ಕನೆ ಎದ್ದು ಹೋಗಿ ಹಿಂದಿನಿಂದ ಆಕೆಯ ರಟ್ಟೆಗಳನ್ನು ಹಿಡಿದು ಅವುಚಿದನು. ಆಕೆ ಆತನ ಮೇಲೊರಗಿ ತನ್ನ ಕೈಗಳಿಂದ ಆತನ

ಕೈಗಳನ್ನು ಮುಚ್ಚಿ ಕನ್ನಡಿಯಲ್ಲಿ ಆತನ ಮುಖವನ್ನು ದಿಟ್ಟಿಸುತ್ತ "ಏನೀಗ ನಿಮ್ಮಾಲೋಚನೆ?" ಎಂದು ಕೇಳಿದಳು.

"ನೀನಿಲ್ಲಿ ಇದ್ದುಬಿಡು, ಮಾಲತಿ."

"ನಾಳೆ? ನಾನೆಲ್ಲಿಗೆ ಹೋಗಲಿ? ಯಾರ ಮನೆಗೆ?"

ಉತ್ತರ ಕೊಡಲಾರದೆ ಗೋಪಿನಾಥನು ತನ್ನ ಹಣೆಯನ್ನು ಆಕೆಯ ಹೆಗಲ ಮೇಲಿಟ್ಟು, ಕಣ್ಮುಚ್ಚಿದನು. ಮಾಲತಿ ಆತನ ಕೆದರಿದ ಬೈತಲೆಯನ್ನು ತಿದ್ದುತ್ತ, "ಮುದ್ದು, ಹೀಗಾಗಬೇಕಿತ್ತೆ ನಮ್ಮ ಪಾಡು? ನಿಮ್ಮನ್ನ ಸುರು ನೋಡಿದ್ದು ನಮ್ಮನೇಲಿ; ಐದು ವರ್ಷಗಳ ಹಿಂದೆ. ನಾನು ಗೃಹಪ್ರವೇಶಕ್ಕೆ ಬಂದಿದ್ದಾಗ. ಯಾರೋ ನಿಮ್ಮನ್ನ ತೋರಿಸಿಕೊಟ್ಟು, ಹೇಳಿದರು ನನಗೆ: ಗೋತ್ರ ಬೇರೆಯಾಗಿದ್ದರೆ ನಾನು ನಿಮ್ಮನೇಗೆ ಸೇರಬೇಕಿತ್ತೂಂತ. ಆಗಲೇ ನನ್ನ ಗೂಡಿನಿಂದ ಹಾರಿಹೋಯಿತು, ನನ್ನ ಗಿಣಿ. ಆದರೆ ಆಗ, ಆ ಹಿರಿಯರ ಹಬ್ಬದಲ್ಲಿ ನನಗೆ ಗೊತ್ತಾಗಲಿಲ್ಲ; ನನ್ನ ಪ್ರಾಣನಷ್ಟ. ಕಳೆದವಾರ ಸಿನೇಮದಲ್ಲಿ ಗುರುತಿಸಿದೆ. ನಿಮ್ಮ ಮುಂಗೈ ಮೇಲಿತ್ತು, ನನ್ನ ಪ್ರಾಣಪಕ್ಷಿ. ಅಯ್ಯೋ! ಏನು ಮಾಡ್ತಿದ್ದೀರಿ? ಕೊರಳು ಹಿಸುಕಿ ಕೊಲ್ಲುತ್ತೀರಾ?" ಅನ್ನುತ್ತ ತನ್ನ ಕತ್ತನ್ನು ಆವರಿಸಿದ್ದ ಆತನ ಕೈಬೆರಳುಗಳನ್ನು ಸಡಲಿಸಿದಳು.

"ಇಲ್ಲ ಚಿನ್ನ. ನನ್ನ ಭವಿಷ್ಯ ನಿನ್ನ ಕೊರಳ ಕಂಭದ ಮೇಲೆ ನಿಂತಿದೆ. ಅದ್ದರಿಂದ ಹಿಡಿದು ಆಧರಿಸಿಕೊಂಡೆ, ಅಷ್ಟೆ. ನಿನ್ನ ನೋಯಿಸೋದಕ್ಕಿಂತ ಎಷ್ಟೋ ಸುಲಭವಾಗಿ ಕೊಂದು ಬಿಡಬಲ್ಲೆ. ಗೊತ್ತಿದೆಯೆ?"

"ಹಾಗಾದರೆ ಮುಗಿಸಿಬಿಡಿ, ಇವತ್ತೇ."

"ಅದಕ್ಕಾಗಿಯೇ ಇಲ್ಲೇ ಇದ್ದುಬಿಡು ಅಂದೆ."

"ನನಗೆ ದೇಹವೊಂದೆಡೆ ಜೀವ ಇನ್ನೊಂದೆಡೆ. ಹೀಗಾಗಿದೆ ನನ್ನ ಹಣೆ ಬರಹ. ಎಲ್ಲಿಗಾದರೂ ಹೋಗಿಬಿಡೋಣ, ದೇಶಾಂತರ, ನಾವಿಬ್ರೆ."

"ಎರಡು ಏರೋಪ್ಲೇನುಗಳು ಜತೆಗೂಡಿ, ಅತಿ ಎತ್ತರದಲ್ಲಿ, ಐವತ್ತು ಸಾವಿರ ಅಡಿ ಎತ್ತರದಲ್ಲಿ, ಸಮವೇಗ ಸಖ್ಯದಲ್ಲಿ, ನಕ್ಷತ್ರಗಳನ್ನೆಣಿಕೆ ಹಾಕುತ್ತ ಹಾರುತ್ತಿರುವುದನ್ನ ನೀನು ನೋಡಿರುವೆಯಾ, ಎಂದಾದರೂ?"

ಮಾಲತಿ ತಲೆಯನ್ನು ಹಿಂದಕ್ಕೆ ಜಗ್ಗಿಸಿ ಗೋಪಿನಾಥನ ಮುಖ ನೋಡುತ್ತ "ಇಲ್ಲ ನೋಡಿಲ್ಲ. ನೀವು?" ಅಂದಳು.

"ನಾನೂ ನೋಡಿಲ್ಲ."

ಇಬ್ಬರೂ ನಕ್ಕರು. ಮಾಲತಿಯ ಹಣೆಯನ್ನು ಮುದ್ದಿಸಿ "ಆರೀತಿ ಹಾರಿ ಹೋಗೋಣವೆಂತನಿಸಿತು" ಅಂದನು.

"ಆದರೆ ಒಂದು ಸಂಗತಿ ಮರೆತುಬಿಟ್ರಿ. ವಿಮಾನಗಳು ಎಷ್ಟು ಎತ್ತರದಲ್ಲಿ, ಎಷ್ಟು ವೇಗದಲ್ಲಿ ಹಾರಿದರೂ ಅವುಗಳನ್ನು ನಡೆಸುವ ರೇಡಿಯೋ ಸೂತ್ರಗಳು ನೆಲದಮೇಲೆ ತಾನೆ ಇರೋದು? ಅಲ್ಲದೆ ವಾಯು ಸಂಚಾರವೆಷ್ಟು ಮಾಡಬಹುದು? ಕೆಳಗೆ ಇಳಿಯಲೇಬೇಕಲ್ಲ."

"ಆದ್ದರಿಂದ?"

"ಆದ್ದರಿಂದ ನನ್ನ ಜತೇಗೆ ಬನ್ನಿ. ನಡದೇ ಹೋಗೋಣ. ಕೈಗೆ ಕೈಸಿಕ್ಕಿಸಿಕೊಂಡು ಜತೇಗೆ ಹೆಜ್ಜೆ ಹಾಕ್ತಾ ಕಾಲ್ನಡೇಲೇ ಹೋಗೋಣ. ನಡದು, ನಡದು, ಕಾಲುಸೋತು ಬೀಳುವ ತನಕ. ಆ ಮೇಲೆ ಯಾರೂ ಇಲ್ಲದಲ್ಲಿ, ಹತ್ತಿರದ ಯಾವುದಾದರೊಂದು ಚರಂಡಿಯಲ್ಲಿ ಒಬ್ಬರನ್ನೊಬ್ಬರು ತಬ್ಬಿಕೊಂಡು ನಮ್ಮ ಜೀವನಯಾತ್ರೆಯನ್ನು ಮುಗಿಸೋಣ. ನೀವೂ ನಾನೂ; ಗೋಪಿ ಮಾಲತಿ, ಮಾಲತಿ ಗೋಪಿ, ಆಗಬೆ?" ಅನ್ನುತ್ತ ಕನ್ನಡಿಯೊಡನೆ ಮಾತನಾಡಿ ತೃಪ್ತಿಯಾಗದೆ ತನ್ನ ಹೃದಯಾರನ ಬಾಹುಬಂಧನದೊಳಗೆ ತಿರುಗಿ ಹಸಿದ ಕಣ್ಣುಗಳಿಂದ ಬೆಸಗೊಂಡಳು. ಗೋಪಿನಾಥ ಏನುತ್ತರ ಕೊಡುತ್ತಿದ್ದನೋ ಹೊರಗೆ ಕಾಲುಸಪ್ಪಳದ ಸದ್ದು ಕೇಳಿಸಿತು. ಮಾಲತಿ ಮಿಂಚಿನ ವೇಗದಿಂದ ಆತನ ತುಟಿಗಳ ಮೇಲೊಂದು ಮುತ್ತೊತ್ತಿ, ತಕ್ಕೆಯಿಂದ ತಪ್ಪಿಸಿಕೊಂಡು ಅದೃಶ್ಯಳಾದಳು. ಆತ ಬೆರಗಾಗಿ ಹಾಲಿಗೂ, ಹಜಾರಿಗೂ ಹೋಗಿ ನೋಡಲು ಯಾರೂ ಇರಲಿಲ್ಲ. ಆಶ್ಚರ್ಯಪಡುತ್ತ ಅಡುಗೆ ಮನೆಗೆ ಹೋಗಲು ಅಲ್ಲಿ ಪಂಬಿಯನ್ನು ತೊಡೆಯಮೇಲೆ ಕೂರಿಸಿ ಇಂದಿರಮ್ಮನಂತೆ ನೆಲದ ಮೇಲೆ ಅರಳು ಹರವಿಕೊಂಡು ಭತ್ತ ಆರಿಸುತ್ತಿದ್ದಳು.

ತಂದೆ ಬಂದುದನ್ನು ಕಂಡು ಮಗು ಎದ್ದು ಬಂದು "ಪಪ್ಪ, ಅತ್ತೆ ನಂಗೆ ಬೇಕು" ಅಂದಳು.

"ನಿಂಗೆ ಬೇಕೆ? ಹಾಗಾದರೆ ಇಲ್ಲೇ ನಿನ್ನೊಟ್ಟಿಗೆ ಇರೋದಕ್ಕೆ ಹೇಳು." ಈ ಮಾತು ಹೇಳಿಬಿಟ್ಟು ಒಡನೆ ಪಶ್ಚಾತ್ತಾಪ ಪಟ್ಟನು. ಆಡಿದ ಮಾತು ಹಿಂತೆಗೆಯುವಂತಿಲ್ಲ. ತಪ್ಪಿ ನುಡಿದುದನ್ನು ತಿದ್ದುವಂತಿಲ್ಲ. ಇಂದಿರಮ್ಮ ಕಣ್ಣೆತ್ತಿ ಒಂದುಕ್ಷಣ ಆತನನ್ನು ನೋಡಿ ತಲೆ ತಗ್ಗಿಸಿದಳು. ಪಂಬಿ ಸಂತೋಷಾತಿಶಯದಿಂದ ಮಾಲತಿಯನ್ನು ಬಿಗಿದಪ್ಪಿ ಆಕೆಯ ಗಲ್ಲಕ್ಕೆ ತನ್ನ ಗಲ್ಲವನ್ನು

ಹಬ್ಬಿ "ಆಯಿತು, ಆಯಿತು, ಇಯ್ಯೋ ಇಯು, ಪಪ್ಪ ಹೋಯಿದಾಯೆ" ಎಂದು ಬೇಡಿದಳು. ಮಾಲತಿ ಅವಳನ್ನು ತೊಡೆಯ ಮೇಲೆಳೆದು ಕೂರಿಸಿ ಮುಂದಟ್ಟಾಗುವಂತೆ ಹೇಳಿದಳು.

"ಇಲ್ನೋಡು, ಇವತ್ತು ನಾನು ಮನೆಗೆ ಹೋಗ್ತೀನೆ."

"ಆಯ ಮನೆ?"

"ನನ್ನ ಮನೆ. ಹೋಗಿ ನಾಡಿದು ಬರ್ತೀನೆ, ನಿನ್ನ ಹುಟ್ಟಿದ ಹಬ್ಬಕ್ಕೆ. ಪಾಯಸ ಮಾಡಿಸು. ಬರ್ತೀನೆ. ಈಗ ಹೋಗಬೇಕು; ಕತ್ತಲಾಗುತ್ತ ಬಂತು. ಆ ಮೇಲೆ ಒಬ್ಬಳಿಗೇ ಹೋಗೋದಕ್ಕೆ ಹೆದರಿಕೆ ಆಗುತ್ತೆ."

"ಹೆದ್ದಿಕೇಗೆ ನಾನು ಬತ್ತೀನೆ" ಎಂದು ಎದೆತಟ್ಟಿ ಧೈರ್ಯ ಹೇಳಿದಳು. ಎಲ್ಲರಿಗೂ ನಗುಬಂತು. ಮಾಲತಿ ಹೊರಟಳು, ಸೀರೆ ಕೊಡವಿಕೊಂಡು. ಗೋಪಿನಾಥನಿಗೆ ಅಲ್ಲಿ ಆಕೆಯನ್ನಗಲಲು ಇಷ್ಟವಿಲ್ಲದೆ ತನ್ನ ಕೋಣೆಗೆ ಹೋಗಿ ಕಾದನು. ಮಾಲತಿ ಅಲ್ಲಿಗೆ ಬಂದು ಹೊಸಲ ಹೊರಗೆ ನಿಂತು,

"ಹೋಗಿಬರಲೆ?" ಎಂದಳು.

"ಇನ್ಯಾವಾಗ ಬರೋದು?"

"ಇನ್ನು ಬರೋದಿಲ್ಲ."

"ಹೋಗಬೇಡ."

"ಛೀ!"

"ಸ್ವಲ್ಪ ನಿಲ್ಲು." ಅನ್ನುತ್ತ ಆಕೆಯ ಕೈಹಿಡಿದು ಕೋಣೆಯೊಳಗೆ ಎಳೆದನು. ಆತಗೆ ಆಕೆಯನ್ನು ಕಳುಹಿಸಿಕೊಡುವುದಕ್ಕೆ ಮನಸ್ಸು ಬಾರದು. ಆಕೆಗೆ ಆತನನ್ನು ಬಿಟ್ಟು ಹೋಗಲು ಕಾಲುಬಾರದು. ಹತ್ತುಸಲ ಹೊರಟಳು. ಹತ್ತುಸಲ ನಿಂತಳು. ಕೊನೆಗೆ ನಂತರದ ಭಾನುವಾರ ಪಂಬಿಯ ಹುಟ್ಟಿದ ಹಬ್ಬದ ದಿನ ಬಂದೇ ಬರುತ್ತೀನೆಂತ ಮಾತುಕೊಟ್ಟು ಹೋದಳು.

೨೫

ಅಂದಿನ ರಾತ್ರಿ ಊಟ ಇಂದಿರಮ್ಮನಿಗೆ ರುಚಿಸಲಿಲ್ಲ. ತಿಂದ ಶಾಸ್ತ್ರಮಾಡಿ ಅಡುಗೆ ಮನೆಯ ಕೆಲಸ ಮುಗಿಸಿಕೊಂಡು, ಬಾಗಿಲು ಹಾಕಿಕೊಂಡು, ದೀಪ ತೆಗೆದು ಗೋಪಿನಾಥನಿಗೆ ಕುಡಿಯಲು ಹಾಲು ತಗೊಂಡು ಆತನ ಕೋಣೆಗೆ ಹೋದರು. ಅಲ್ಲಿ ಕತ್ತಲಾಗಿತ್ತು. ದೀಪ ಹಾಕಿ ಹಾಲನ್ನು

ಮೇಜಿನ ಮೇಲೆ ಮುಚ್ಚಿಟ್ಟು ಬಂದು ಹೊರಗೆ ಜಗಲಿಗೆ ಹೋಗಿ 'ಗೋಪಿ' ಅಂತ ಮೆತ್ತಗೆ ಕೂಗಿದರು. ಹೂದೋಟದಲ್ಲಿ ಅಲೆದಾಡುತ್ತಿದ್ದವನು 'ಏನಮ್ಮ' ಅನ್ನುತ್ತ ಮೆಟ್ಟಲು ಹತ್ತಿ ಮೇಲೆ ಬಂದನು. "ಒಳಗೆ ಬಾ. ಮಾತನಾಡುವ ಅಗತ್ಯವಿದೆ." ಅಂತ ಹೇಳಬೇಕೆಂದು ಬಂದವರು "ಹಾಲು ಕೋಣೆಯಲ್ಲಿಟ್ಟಿದ್ದೇನೆ, ಕುಡಿದುಬಿಡು" ಅಂದರು. ಗೋಪಿನಾಥನಿಗೆ ಅನುಮಾನವಾಯಿತೋ ಏನೋ, "ಅಷ್ಟಕ್ಕೇ ಬಂದಿಯೇನಮ್ಮ, ನನ್ನ ಹುಡುಕಿಕೊಂಡು?" ಎಂದು ಕೇಳಿದ. "ಅಷ್ಟೇ. ಒಳಗೆಲ್ಲಿಯೂ ಕಾಣಲಿಲ್ಲ" ಅಂದರು. ಅಷ್ಟರಲ್ಲಿ ಪಂಬಿ ಕೂಗಿದ್ದನ್ನ ಕೇಳಿ ಒಳಗೆ ಹೋಗಿಬಿಟ್ಟರು. ಗೋಪಿನಾಥ ಯಥಾಪ್ರಕಾರ ತನ್ನ ಮನಸ್ಸಿನ ಮಡದಿಯೊಂದಿಗೆ ಕತ್ತಲಲ್ಲಿ ಶತಪಥ ಹಾಕಲಾರಂಭಿಸಿದ.

ತನ್ನ ಮಗನಿಗೂ ಮಾಲತಿಗೂ ಇದ್ದ ಸಲಿಗೆಯ ನಿಜಾರ್ಥ ಅವರಿಗೆ ಚೆನ್ನಾಗಿ ಗೊತ್ತು. ಆದರೆ ಅದು ಅಷ್ಟು ಶೀಘ್ರದಲ್ಲಿ ಪರಿಣತಿಯನ್ನು ಹೊಂದುವುದೆಂದು ಊಹಿಸಿರಲಿಲ್ಲ. ಆ ಭಾಗದಲ್ಲಿ ತಾನು ನಿರಪರಾಧಿಯೆನ್ನಲು ಬರುವದಿಲ್ಲ. ಅವರಲ್ಲಿ ಮೊದಲೇ ಪರಸ್ಪರಾನುರಾಗದ ಬೀಜವಿತ್ತು. ಅದು ಮೊಳೆತು ಬೆಳೆಯುವಂತೆ ತಾನೇ ನೀರೆರೆದೆ. ಅವರಿಬ್ಬರ ಸುಖದಲ್ಲಿ ತಾನೂ ಮಿಂದೆ. ಅವರು ಏಕಾಂತದಲ್ಲಿರುವಂತೆ ತಾನು ನೆರವಾದೆ. ಇನ್ನು ಮುಂದೆಯೂ ಇದೇ ರೀತಿ ನೋಡಿ ನೋಡಿ ಸುಮ್ಮಗಿದ್ದರೆ? ಅವರ ಹುಚ್ಚಾಟ ಎಲ್ಲಿಗೆ ಮುಟ್ಟುತ್ತದೋ ಎಂದು ಪದೇ ಪದೇ ವಿಷಾದಿಸುತ್ತಿದ್ದರು. ನಡೆದ ನಾಟಕ ನಡೆಯಿತು. ಇನ್ನುಳಿದ ಅಂಕಗಳು ದುರಂತವಾಗದಿದ್ದರೆ ಸಾಕು. ಸದ್ಯ, ಅಂತೆಂದುಕೊಂಡರು. ಗೋಪಿಯನ್ನು ಕರೆದು ಎಚ್ಚರಿಸಿಬಿಡುತ್ತೇನೆ. ತನ್ನ ಭಾಗದ ಕರ್ತವ್ಯ ಸಲ್ಲಿಸಿಬಿಡುತ್ತೇನೆ. ತನಗೆಷ್ಟು ಸಂಕಟವಾದರೂ ಪರವಾಯಿಲ್ಲ. ಆತಗೆಷ್ಟು ಕಷ್ಟವಾದರೂ ಯತ್ನವಿಲ್ಲ, ಎಂದು ಮನಸ್ಸು ಗಂಟುಕಟ್ಟಿ ಅಡುಗೆಮನೆಯಿಂದ ಹೊರಟುಬಂದವರ ನಿರ್ಧಾರ ಪ್ರೇಮ ಸಮಾಧಿಯಿಂದೆದ್ದು ಬಂದಂತಿದ್ದ ಮಗನ ಮುಖ ನೋಡಿದೊಡನೆ ನೀರಾಗಿ ಹೋಯಿತು. ಆತ ತೇದು ತುಂಬಿದ ಗಂಧದ ಗಿಣಲಿಗೆ ತಾನೇತಕ್ಕೆ ಸೆಗಣಿ ನೀರು ಬೆರೆಸಲಿ? ಬೇಡ ಸುಖಿಸಲಿ, ಸುಖಬಂದಾಗ. ಅದೇನಾದರೂ ಕರೆದರೆ ಬರೋದಿಲ್ಲ. ಕೊಳ್ಳಲು ಸಿಗೋದಿಲ್ಲ. ತಾನಾಗಿ

ಬಂದರೂ ದುಃಖದಂತೆ ದಂಡೆತ್ತಿ ಬರೋದಿಲ್ಲ. ಬಹಳ ಕಾಲ ಉಳಿಯೋದಿಲ್ಲ. ಹೆಬ್ಬಾಗಿಲಿಂದ ಸಡಗರದಿಂದ ಬರುವುದೂ ಉಂಟು. ಕತ್ತಲಲ್ಲಿ ಕದ್ದು ಬರುವುದೂ ಉಂಟು. ಹೀಗೆ ಬರಬೇಕು, ಇಷ್ಟೇ ಬರಬೇಕು ಅನ್ನಲು ತನ ಗೆಲ್ಲಿಯ ಯೋಗ್ಯತೆ? ಮಾಲತಿಯ ತಂದೆ ಶ್ಯಾಮರಾಯರು ಸೂಚನೆ ಕೊಟ್ಟಂತೆ ತಾನು ಛಲಹಿಡಿದು ಸಾಧಿಸಿದ್ದರೆ ಗೋಪಿ ಕತೆಯೇ ಬೇರೆಯಾಗು ತ್ತಿತ್ತು. ಅದೃಷ್ಟ ಆಳಾಗಿ ಬಂದಾಗ ಬೇಡವೆಂದುದೇ ತಪ್ಪು. ಈಗ ಹಿಂಬಾಗಿ ಲಿಂದ ನುಗ್ಗಿ ಅಂಕೆಯಿಲ್ಲದ ಆಡಳಿತ ಮಾಡುತ್ತಿದೆ. ಈ ಹುಡುಗನ ಬದುಕು ಹೆಣ್ಣಿನ ಬಾಳುವೆಯಂತಾಗಿದೆ; ಕಣ್ಣೀರಿನ ಕಾಲುವೆ. ಆ ಹುಡುಗಿ ರಜನಿ ರಾತ್ರಿ ಪಾಲಾದಮೇಲಂತೂ ಈತಗೆ ಒಂಟಿತನದ ಉಪ್ಪುನೀರನ್ನು ಕುಡಿದು ಕುಡಿದು ಗಂಟಲು ಹುಣ್ಣಾಗಿರಬೇಕು. ಅಯ್ಯೋ ಗೋಪಿ! ತೋರಿಸಿ ಕೊಳ್ಳೋದಿಲ್ಲ, ನಿಜ. ಚಾಚೂ ಅನ್ನೋದಿಲ್ಲ. ನಗ್ನಗ್ತಾ ಇರ್ತಾನೆ, ಒಂದು ಮುದ್ದು ಕೂಸು ಇರೋದ್ರಿಂದ. ಆದರೂ ಮೊದಲಿನಂತಿಲ್ಲ. ಲಲಿತ ಕಲೆಗಳಲ್ಲಿ ಆಸಕ್ತಿ ಕಡಮೆಯಾಗಿ ಬಿಟ್ಟಿದೆ. ಬಹುಶ ಸಹಭಾಗಿನಿಯಿಲ್ಲದ ಕಲಾಜೀವನ ಅತಿಥಿ ಇಲ್ಲದ ಔತಣದೂಟವೆಂತ ಆ ಹವ್ಯಾಸವನ್ನು ದೂರಮಾಡಿರಬೇಕು ಅಂತ ಪಶ್ಚಾತ್ತಾಪ ಪಡುತ್ತಿದ್ದಳು.

ಆತನ ಗ್ರಹಚಾರ ಹಾಳು. "ಹಣಕ್ಕಾಗಿ ರೈತನ ಹೆಣ್ಣನ್ನು ಕೊಂದೆ; ಕೂಸಿಗಾಗಿ ಕೈಹಿಡಿದ ಹುಡುಗಿಯನ್ನು ಕೊಂದೆ" ಎಂದನ್ನುತ್ತಿದ್ದ. ಈಗ ಸುಖಕ್ಕಾಗಿ ಮಾಲತಿಯನ್ನು ಆಹುತಿ ಕೊಟ್ಟರೆ? ಹಾಗೆಂದಿಗೂ ಆಗಬಾರದು. ಆಗಲಾರದು. ಹೆಣ್ಣುಜನ್ಮವನ್ನು ಕೈಯಾರೆ ಕೆಡಿಸುವ ಕಿರಾತನಲ್ಲ, ಗೋಪಿ. ಇದುವರೆಗೆ ಯಾರೊಬ್ಬಳಿಗೂ ಒರಟು ಮಾತನಾಡಿದವನಲ್ಲ. ಮಾನ ಕೊಟ್ಟವರನ್ನು ಕೂಡಾ ಮನ್ನಣೆ ಮಾಡುವಂಥವ. ಇತರರ ಹಿತಕ್ಕಾಗಿ ತನ್ನ ಸ್ವಂತ ಚಿಂತನೆಯನ್ನೇ ಮರೆಯುತಕ್ಕವ. ಅಂಥವ ಮಾಲತಿಯನ್ನು ದುರ್ಮಾರ್ಗಕ್ಕೆಳೆಯುವನೇ? ಎಂದಿಗೂ ಇಲ್ಲ. ಅದರಲ್ಲೂ ಮಾಲತಿಯಂಥ ಹುಡುಗಿಯನ್ನ? ಆಕೆ ಎಲ್ಲರಂತಲ್ಲ. ಅವರಿಬ್ಬನ್ನು ದೇವರು ಒಂದೇ ಲೇಖನಿ ಯಿಂದ ಚಿತ್ರಿಸಿ ಒಂದೇ ಉಸಿರಿಂದ ಜೀವಕಳೆಕೊಟ್ಟು ಕಳುಹಿಸಿದಂತಿದೆ. ಮಾತ್ರ ಹರಸಿ ಕಳುಹಿಸಲು ಮರೆತಿರಬೇಕು. ಅದು ಅವರ ಅದೃಷ್ಟ. ಪಾಪ. ಆಕೆಯ ಒಳಗಿನ ಒಳ್ಳೆತನದ ಕಾಂತಿಯಿಂದಾಗಿ ಕೈತೊಳೆದು ಮುಟ್ಟಬೇಕು

ಅಂತನ್ನಿಸುತ್ತದೆ. ಆದರೆ ಅಂಥ ಚಿನ್ನದಂಥ ಹುಡುಗಿಯನ್ನ ಗೋಪಿ ಎಷ್ಟು ಕಾಲ ದೂರವಿಡಬಹುದು? ಆಕೆಗಾದರೂ ಬುದ್ಧಿ ಬೇಡವೆ? ಓದಿದವಳು. ಹತ್ತೂರು ತಿರುಗಿದವಳು. ಹತ್ತು ಮಂದಿಯ ಬಳಕೆಯಿದ್ದವಳು; ತಿಳಿದ ವಳು. ಹೀಗೂ ಹುಚ್ಚಾಗಿದ್ದಾಳಲ್ಲ; ಆಕೆಗೇನು ಕಡಿಮೆಯಾಗಿದೆ, ಮನೆ ಯಲ್ಲಿ? ಬೇಕಾದ್ದಿದೆ. ಹಾಲೋ, ಮೊಸರೋ, ಬಟ್ಟೆಯೋ, ಬಂಗಾರವೋ ಯಾವುದಕ್ಕೂ ಕೊರತೆಯಿಲ್ಲ. ಮಕ್ಕಳಿಲ್ಲ, ನಿಜ ಆದರೆ ಇನ್ನೂ ಎಳೆ ವಯಸ್ಸು. ಆಗಬಾರದೂಂತಿಲ್ಲ. ಏನೋ, ಯಾರಿಗೆ ಗೊತ್ತು. ಒಳಗಿನ ಗುಟ್ಟು ಶಿವನೇ ಬಲ್ಲ. ನಮ್ಮ ಮಕ್ಕಳ ಗುಟ್ಟು ನಮಗೆ ಗೊತ್ತಾದರೆ ತಾನೆ? ಏನೇ ಇರಲಿ, ಈ ಸ್ನೇಹ ವಿಷಮಿಸದಂತೆ ನೋಡಿಕೊಳ್ಳುವ ಭಾರ ನನ್ನದು. ದುಃಖದ ಹೊರೆ ಹೊತ್ತು ಬೆನ್ನು ಬಗ್ಗಿದರೂ ಕಣ್ಣೇನೂ ಮಂದವಾಗಿಲ್ಲ ವಪ್ಟೇ ಇನ್ನೂ, ಎಂದೀರೀತಿ ಯೋಚನೆ ಮಾಡುತ್ತ ಇಂದಿರಮ್ಮ ಪಂಬಿಯ ಬೆನ್ನು ನೇವರಿಸುತ್ತ ನಿದ್ದೆ ಮಾಡಿಸುತ್ತಿದ್ದರು.

ಮರುದಿನ ಗೋಪಿನಾಥ ಬಗೆಬಗೆಯ ಕೆಲಸಗಳಲ್ಲಿ ಮುಳುಗಿದ್ದನು. ಸಂಜೆ ಆರು ಗಂಟೆ ಹೊತ್ತಿಗೆ ಸ್ವಲ್ಪ ವಿಶ್ರಾಂತಿಗಾಗಿ ಕ್ಲಬ್ಬಿಗೆ ಹೋದನು. ವಾಡಿಕೆಯಂತೆ ನಡೆದೇ ಹೋದನು. ಹೋಗುವಾಗ ದಾರಿಯುದ್ದಕ್ಕೂ ಮಾಲತಿದೇ ನೆನಸು. ಆಕೆ ಹಂಪನಕಟ್ಟೆ ಕಡೆಗೆ ಬಂದಿದ್ದರೆ, ಅಥವಾ ವಿಹಾ ರಕ್ಕೆ ಬಾವುಟಗುಡ್ಡಕ್ಕೆಂತ ಬಂದಿದ್ದರೆ, ಕಾಣಸಿಗಬಹುದೆಂಬ ಹಂಬಲ.

ಕ್ಲಬ್ಬಿನಲ್ಲಿ ಎಂದಿನಂತೆ ನಿಬಿಡ ಸಮೂಹ. ವಿಶ್ರಾಂತಿಗಾಗಿ ಉಗ್ರ ಪರಿ ಶ್ರಮ. ಮನಶ್ಶಾಂತಿಗಾಗಿ ಕೋಲಾಹಲ. 'ಪೋಲಿ' ವಂಗಡದ ಬಯಲಲ್ಲಿ ಮಾತ್ರ ನಿಶ್ಶಬ್ದವಾಗಿತ್ತು. ನರಸಿಂಹ ಕಮ್ತಿಯರು, ಕೃಷ್ಣಯ್ಯ ಇಬ್ಬರೇ ಇದ್ದರು. ಕೃಷ್ಣಯ್ಯ 'ಪೇಷನ್ಸ್' ಆಡುತ್ತಿದ್ದರು. ಕಮ್ತಿಯರು ಸಚಿತ್ರ ಮಾಸಿಕ ಪತ್ರಿಕೆಯ ಹಾಳೆಯೊಂದರಲ್ಲಿದ್ದ ಸಿನೆಮಾ ತಾರೆಯೊಬ್ಬಳ ನಿತಂಬ ವನ್ನು ನೋಡಿ ನೋಡಿ ಸಾಕಾಗದೆ ಹಾಳೆಯನ್ನು ತಿರುವಿ ಅದರಾಚೆ ಏನಿದೆ ಯೆಂದು ಇಣಿಕಿ ನೋಡುತ್ತಿದ್ದರು. ಗೋಪಿನಾಥನನ್ನು ಕಂಡು ಕೃಷ್ಣಯ್ಯ,

"ಒಳ್ಳೇ ಸಮಯಕ್ಕೆ ಬಂದಿ ಗೋಪಿ, ಕೂತುಕೋ. ನಾಳೆಯಿಂದ ಬಹುಶ ನಮ್ಮ ಕಂಪನಿಯ ಒಂದಿಸಮು ಖಾಲಿಯಾಗುತ್ತೆ" ಎಂದರು.

ಕಮ್ತಿಯರು ಕುತೂಹಲದಿಂದ ತಲೆಯೆತ್ತಿ ನೋಡಿದರು ಗೋಪಿನಾಥ ಕುಳಿತು,

"ಹಾಗಾದರೆ ಇಂದೇ ಅವರ ಲೆಕ್ಕಕ್ಕೆ ಕಾಫಿ ಕುಡಿದುಬಿಡೋಣ" ಅಂದನು.

"ಯಾರಂತ ಮಾಡಿದಿ? ಕಮ್ತೇರು, ಕಣಯ್ಯಾ. ಕಮ್ತೇರು ಮಿಲಿಟ್ರಿಗೆ ಸೇರ್ತಾರೆ."

"ಹೊಟ್ಟೆ ತುಂಬೋದು ಸುಲಭಾಂತಲೋ?"

"ಹೊಟ್ಟೆ ಯೋಚ್ನೆ ಚಿಕ್ಕಂದಿನಿಂದಲೂ ಅವರಿಗಿಲ್ಲವೇ ಇಲ್ಲ. ಅದು ತಾನಾಗಿ ತುಂಬಿಕೊಳ್ಳುತ್ತೆ. ಹೇಗಾದರೂ, ಎಲ್ಲಾದರೂ. ಅವರು ಯುದ್ಧ ಮುಖರಾದ್ದು ಅದಕ್ಕಲ್ಲ. ಅವರ ಕೈಲಿದೆ ನೋಡು, ಚಿತ್ರ. ಇಲ್ಕೊಡ್ರಿ, ಕಮ್ತೇರೆ. ಅದೇ ನೋಡು. ಅಂತಹ ನೂರಾರು ಮಂದಿ ಹುಡುಗಿಯರನ್ನ ಸೈನಿಕರ ಮನೋರಂಜನೆಗೆ ಕಳುಹಿಸುತ್ತಾರಂತೆ; ಬೆಂಗಳೂರಿಗೆ, ಮದ್ರಾಸಿಗೆಲ್ಲ. ಇದೊಂದು ಹೊಸ ಯುದ್ಧಸಾಮಗ್ರಿ. ಒಂದು ಕೈನೋಡೋಣಾಂತಿದ್ದಾರೆ, ಕಮ್ತೇರು."

ಇದನ್ನೆಲ್ಲ ಆತ್ಯಾಶ್ಚರ್ಯದಿಂದ ಕಿವಿಗೊಟ್ಟು ಕೇಳುತ್ತಿದ್ದ ಕಮ್ತಿಯರು, "ಹೌದೇನ್ರೀ? ಬೆಂಗಳೂರಿಗೂ ಬರ್ತಿರೇನ್ರೀ?" ಎಂದು ಕೇಳಿದರು. ಕೃಷ್ಣಯ್ಯ ಉತ್ತರ ಹೇಳುವಷ್ಟರಲ್ಲಿ ಸಂಜೀವರಾಯರು ಬಂದು ಗೋಪಿನಾಥನ ಬಳಿ ಕುಳಿತು,

"ನಾನು ಬಿಸಿ ಬಿಸಿ—"

ಅಷ್ಟು ಕೇಳಿದ್ದೇ ತಡ, ಕಮ್ತಿಯವರು ಜಗ್ಗನೆ ಎದ್ದು ಪಕ್ಕದ ಮೇಜಿಗೆ ಕೈ ಬಡಿದು,

"ರೈಟ್, ಹೋ; ನೀನೇ ಭೂಪತಿ. ಕೈಕೊಡು. ನನಗೂ ಹೇಳದ್ದೀಯೋ ಇಲ್ಲಪ್ರೋ?" ಎಂದು ಸಂತೋಷದಿಂದ ಅರಚುತ್ತ ಕೈನೀಡಿದರು. ಸಂಜೀವರಾಯರು ಹೇವರಿಸಿ, "ಥೂ! ಹಂದಿ ಮುಂಡೇದು! ಯಾವಾಗ ನೋಡಿದರೂ ತಿಂಡಿತೀರ್ಥದ್ದೇ ಜಪ! ತೆಗೆಯೋ ಕೈ." ಅನ್ನುತ್ತ ಮಿಕ್ಕವರ ಕಡೆಗೆ ತಿರುಗಿ "ನಾನು ಹೇಳ್ತಿದ್ದಿದ್ದು, ಬಿಸಿಬಿಸಿ ವರ್ತಮಾನವಿದೇಂತ. ಡಿಪ್ಯುಟಿ ರಿಜಿಸ್ಟ್ರಾರವರ ಆಫೀಸಿಂದ. ಕಾಫಿ ತಿಂಡಿ ವಿಚಾರವಲ್ಲ. ಕಮ್ತೀಗೆ ಹಾಗೂ

ಬಾಯಿಂದ ನೀರು ಸುರೀತಾಯಿದ್ರೆ ಮಹಿಳಾ ಸಭೆಗೆ ಹೋಗಿ ಹೊರಗೆ ನಿಂತು ನಾಲಿಗೆ ಚಾಚಿ ಬಾಲ ಅಲ್ಲಾಡಿಸ್ತಾ ಇರ್ಲಿ. ಫುಡ್ ಕಮಿಶನರ ಹೆಂಡ್ತಿಗೆ ಭಾರೀ ಟೀಪಾರ್ಟಿ ಇದೆಯಂತೆ" ಎಂದರು.

"ಗೋಪಿನಾಥರಾಯರೇ ಈ ವಿಚಾರ ನಿಮಗೆ ಸಂಬಂಧ ಪಟ್ಟದ್ದು. ಎಷ್ಟು ಸುಳ್ಳೋ, ಎಷ್ಟು ಸತ್ಯವೋ, ನೀವೇ ನೋಡಿಕೊಳ್ಳಿ. ನಾನು ಕೈಕೊಡು ಎಂದಾಗ ಈ ಪ್ರಾಣಿ ಶೇಕ್‌ಹ್ಯಾಂಡ್ ಮಾಡೋದಕ್ಕೇಂತ ಗ್ರಹಿಸಿದ, ಆತನ ಜಂಭಕ್ಕೆ. ಆದರೆ ತುಪ್ಪದ ತಿಂಡಿ ಯೇನಾದ್ರೂ ತಿಂದು ಬಂದಿದ್ರೆ ಅಂಗೈ ವಾಸನೆಯಿಂದ ಪತ್ತೆ ಮಾಡೋಣಾಂತ ನಾನು ಹೇಳಿದ್ದು. ಅದಕ್ಕೆ ತಿಂದಮೇಲೆ ಕೈ ತೊಳಕೊಳ್ಳೋ ಅಭ್ಯಾಸ ಇಲ್ಲವಷ್ಟೆ" ಅನ್ನುತ್ತ ಕವ್ವಿತ್ತಿ ಯರು ಜೋಲು ಮುಖಮಾಡಿಕೊಂಡು ತನ್ನ ಕುರ್ಚಿಯನ್ನು ಸೇರಿದರು.

"ಫುಡ್‌ಕಮಿಶನರು ಇವತ್ತು ಮಧ್ಯಾಹ್ನದಮೇಲೆ ಫ್ಯಾನಲ್ ಆರ್ಡರು ಪಾಸುಮಾಡಿದ್ದಾರಂತೆ ಇನ್ನೊಂದು ಆರ್ಡರು ಬರೋತನಕ ಆಹಾರ ಸಾಮಗ್ರಿಗಳ ಸಂಗ್ರಹಣ, ಹಂಚೋಣ—ಎಲ್ಲಾ ಸಹಕಾರ ಸಂಘದವರೇ ನಿಭಾಯಿಸಬೇಕು. ಸಾಹುಕಾರರಿಗೆ ಸರ್ವಥಾ ಕೊಡೋಣಾಗುವದಿಲ್ಲ, ಅಂತ. ಇದು ಖಾತ್ರಿ ವರ್ತಮಾನ" ಅನ್ನುತ್ತ ಸಂಜೀವರಾಯರು ಸಾರಿ ಪ್ರಕಟಿಸಿದರು. ಈ ಶುಭವಾರ್ತೆಯನ್ನು ಕೇಳಿ ಗೋಪಿನಾಥನಿಗೆ ತುಂಬ ಸಂತೋಷವಾಯಿತು. ಇದರೆಡೆ ಎಲ್ಲರಿಗೂ ಮುಂಚಿತವಾಗಿ ಸಂಜೀವರಾಯರಿಗೆ ಈ ವಿಷಯ ಗೊತ್ತಾದುದು ಹೇಗೆಂತ ಆಶ್ಚರ್ಯವೂ ತಲೆದೋರಿತು. ಕೃಷ್ಣಯ್ಯನನ್ನೂ ಅದೇ ಕುತೂಹಲ ಕಾಡುತ್ತಿತ್ತು. "ಊರಿಗಿಂತ ಮೊದಲು ನಿನಗೆ ಹೇಗೆ ಗೊತ್ತಾಯಿತು ಈ ಗುಟ್ಟು ?" ಎಂದು ಕೇಳಿದರು.

"ಗೊತ್ತಿಲ್ವೇ ನಿಮಗೆ ?" ಎಂದು ಕವ್ವಿತ್ತಿಯರು ನಡುವೆ ಬಂದರು. ಡಿಪ್ಯೂಟಿಯವರ ಆಫೀಸಿನಲ್ಲಿ ಮೂರು ಮಂದಿ ಟ್ಯಾಪಿಸ್ಟರಿದ್ದಾರೆ, ಇವರಿಗೆ ಬೇಕಾದವರು" ಅನ್ನುತ್ತ ಸಂಜೀವರಾಯರನ್ನು ಕಣ್ಸನ್ನೆಮಾಡಿ ಸೂಕ್ಷಿಸಿದರು.

"ಮೂರು ಮಂದಿನೂ ಇಟ್ಟುಕೊಂಡು ಹೇಗ್ರೀ ಆ ಡಿಪ್ಯೂಟಿಯವರು ಕೆಲಸ ಮಾಡ್ತಾರೆ?" ಎಂಬದಾಗಿ ಕೃಷ್ಣಯ್ಯ ತನ್ನ ಸಮಸ್ಯೆಯನ್ನು ಹೊರಗೆಡವಿದರು.

"ಇಬ್ಬರಿಗೆ ರಜಾಕೊಟ್ಟು ಕಳುಹಿಸಿದರಾಯಿತು" ಎಂಬ ಕಮ್ತಿಯರ ಸಲಹೆಯನ್ನು ಕೇಳಿ ಎಲ್ಲರೂ ನಕ್ಕರು.

ತಾನು ಕೃತಕೃತ್ಯನಾದುದರ ಸಲುವಾಗಿ ಡಾಕ್ಟರು ವಾಸುದೇವ ಪೈಗಳು ಬಂದರೆ ಮಾತ್ರ ಅಂದೇ ಸಂತೋಷಕೂಟವೊಂದನ್ನು ಮಾಡೋಣವೆಂತ ಗೋಪಿನಾಥ ತನ್ನೊಳಗೆ ನಿಶ್ಚಯಿಸಿಕೊಂಡಿದ್ದರೂ ಕಮ್ತಿಯವರು ಬಿಡಲಿಲ್ಲ. ಅಂಥ ಅಪೂರ್ವ ವಿಜಯೋತ್ಸವಕ್ಕೆ ಕ್ಲಬ್ಬಿನ ಹೋಟೆಲಿನಿಂದ ಸಾಲದು, "ಕೃಷ್ಣ ಭವನದಿಂದಲೇ" ತರಿಸಬೇಕೆಂತ ಹಟಮಾಡಿ, ಜವಾನನನ್ನು ಕೂಗಿ ಬರಮಾಡಿ ಸವಿವರವಾಗಿ ಆರ್ಡರು ಬರಕೊಟ್ಟು ಕಳುಹಿಸಿದರು.

"ವರ್ತಕ ಸಂಘ ಸೋತಿತೂಂತ ಕಮ್ತೇರಿಗೆ ಬೇಜಾರವೇನೂ ಇದ್ದ ಹಾಗೆ ಕಾಣೋದಿಲ್ಲ" ಎಂದು ಕೃಷ್ಣಯ್ಯ ಕಿರುಕುಳ ಎಬ್ಬಿಸಿದರು.

"ಅದೇನಿಲ್ಲ ಅವರಿಗೆ. ಸುಮ್ಮಗೆ ಹೇಳಬಾರದು. ಅವರದೊಂದು ದೊಡ್ಡ ಗುಣ. ಬ್ರೆಡ್ಡಿನ ಯಾವಬದಿಗೆ ಬೆಣ್ಣೆ ಹಚ್ಚಿದೇಂಬದು ನೋಡದೇನೇ ಗೊತ್ತು, ಅವರಿಗೆ. ಇವತ್ತಂತೂ ಇನ್ನೊಂದು ಕಾರಣವಿದೆ. ಒಂದು ವಿಲಕ್ಷಣವಾದ ಕೇಸು ಕಿಸೆಗೆ ಬಿದ್ದಿದೆ." ಎಂದರು ಸಂಜೀವರಾಯರು.

"ಅದೇನ್ರೀ ಕೇಸು ?" ಅಂತ ಗೋಪಿನಾಥ ಕೇಳಿದ.

"ಏನೋ ಒಂದು ಚಿಕ್ಕ ಕಳವಿನ ಕೇಸು. ಇಲ್ಲಿ ಕಾಳಮ್ಮನ ಗುಡಿಯಿದೆಯಲ್ಲ? ಮೊನ್ನೆ ಶುಕ್ರವಾರ ರಾತ್ರಿ ಬಾಗಲು ಹಾಕುವ ಮುಂಚೆ ಒಳಗೆ ಹೊಕ್ಕೊಂಡು ಅಡಗಿದ್ದು, ಕಾಣಿಕೆ ಡಬ್ಬ ಒಡೆದು, ದುಡ್ಡನ್ನೆಲ್ಲಾ ಬಾಚಿಕೊಂಡು ಮರುದಿನ ಬೆಳಿಗ್ಗೆ ಬಾಗಲು ತೆಗೆದಾಗ ಪರಾರಿಯಾದನೆಂತ ಪಿತೂರಿ" ಎಂದು ಸಂಕ್ಷೇಪವಾಗಿ ತಿಳಿಸಿದರು ಕಮ್ತಿಯರು.

"ಡಿಫೆನ್ಸೇನೋ ?' ಎಂದ ಗೋಪಿನಾಥ.

"ನೋಡಬೇಕಷ್ಟೆ. ಮಾಡಿದ್ದು ಹೌದು. ಆದ್ರೆ ಆಸಾಮಿಗೆ ತಾನ್ಮಾಡಿದ್ದು ತಪ್ಪೂಂತ ಗೊತ್ತೇ ಆಗೋದಿಲ್ಲವಲ್ಲ! ಏನು ಮಾಡಲಿ ?', ಎಂದು ಆಶಾವಿಹೀನರಾದರು.

"ಹೊಟ್ಟೇಗಿಲ್ದೇ ಕದ್ದನೋ ಏನೋ, ಪಾಪ" ಅಂತ ಗೋಪಿನಾಥ ಪಶ್ಚಾತ್ತಾಪಪಟ್ಟನು.

"ಹಾಗಲ್ಲ, ಆತನ ತರ್ಕ. ದೇವರ ಕಣ್ಣು ತಪ್ಪಿಸೋದಕ್ಕೆ ಸಾಧ್ಯವಿಲ್ಲಾಂದಮ್ಯಾಲೆ ದೇವರ ದುಡ್ಡು ಕದಿಯೋದಕ್ಕೂ ಇತರರ ದುಡ್ಡು ಕದಿ

ಯೋದಕ್ಕೂ ವ್ಯತ್ಯಾಸವೇನು? ಎರಡನೇದಾಗಿ ಕಾಳವ್ವಗೆ ಕಾಸಿಗೇನು ಥಾಡಿ? ಕದ್ದರೆ ಕಡಿಮೆಯಾಗೋದಿಲ್ಲ. ಅಲ್ಲದೆ, ಕಪ್ಪ ಕಾಣಿಕೆ ಬೇರೆ ಹಾಕಿ ಬ್ದಾನಂತೆ, ಕದ್ದ ದುಡ್ಡಿನಿಂದ." ಅಂದರು ಕವ್ವಿತ್ತಯರು.

"ಇಂಥ ಅಸ್ಸಲ್ ಗಿರಾಕಿಗಳು ನಿಮ್ಮನ್ನ ಬಿಟ್ಟು ಬೇರೆಲ್ಲಿಗೂ ಹೋಗೋ ದಿಲ್ಲೇನ್ರೀ?" ಎಂದು ಗೋಪಿನಾಥ ಕೇಳಿದ.

"ಏನೋ, ಪಾಪ! ನಾನು ಹಣದಾಸೆಗೆ ಕೆಲಸ ಮಾಡೋದಲ್ಲಾ, ಪರೋಪಕಾರಕ್ಕೇಂತ ತಿಳಿದು ಬರ್ತಾರೆ."

ಇವನಪ್ಪ ಇನ್ನೊಬ್ಬನಿದ್ದನಲ್ಲ, ಕಳೆದ ವರ್ಷ? ನೆರೆಮನೆಯವನ ಹೆಂಡ್ತೀನ ಅಪಹರಿಸಿ, ಬೇಕಾದ್ರೆ ಆಕೇನ ವಾರಕ್ಕೊಂದು ಸಲ ಗಂಡನ ಮನೇಗೆ ಕಳುಹಿಸಿಕೊಡ್ತೇನೆ, ಅದಕ್ಕಿಂತ ಹೆಚ್ಚಿನ ನೆರೆಹೊರ್ಕೆ ಎಲ್ಲಿದೆ ಲೋಕದಲ್ಲೀಂತ ಕೇಳಲಿಲ್ವೇ ನಿಮ್ಮ ಹತ್ರ?" ಎಂದು ಸಂಜೀವರಾಯರು ನೆನಪು ಮಾಡಿಕೊಟ್ಟರು.

ಈ ಕತೆ ಹೇಳಿ ಗೋಪಿನಾಥನಿಗೆ ಹಠಾತ್ತಾಗಿ ಎದೆ ಶೂಲೆಯೆದ್ದಿತು. ಆ ಕಥಾನಾಯಕನಿಗೂ ತನಗೂ ಇದ್ದ ಸಾಮ್ಯ ಆತನ ಮನಸ್ಸಿಗೆ ನಾಟಿತು. ಮೆಲ್ಲಮೆಲ್ಲನೆ ಒಳಗೆ ಕರುಳನ್ನು ಕೊರೆಯಲು ಪ್ರಾರಂಭಿಸಿತು. "ಈ ಹೋಲಿಕೆ ಹೊರಮಟ್ಟಿನದು, ಒಳಮಟ್ಟಿನದಲ್ಲ. ಆ ಅಧಮನ ತಾಮಸ ಪ್ರವೃತ್ತಿಗೂ ತನ್ನ ಸಾತ್ವಿಕಪ್ರವೃತ್ತಿಗೂ ಯಾವ ದೃಷ್ಟಿಯಲ್ಲೂ ಸರಿಸಮತೆ ಇರಲಾರದು. ಜನರ ಕಣ್ಣಿಗೆ ಈ ಎರಡು ಲಾಲಸೆಗಳೂ ಒಂದೇ ತೆರನಾದು ದೆಂದು ಕಾಣಬಹುದು; ಕಾಣಲಿ. ನಾನೊಪ್ಪಿಕೊಳ್ಳಲಾರೆ ಈ ಸಾದೃಶ್ಯ ವನ್ನು." ಎಂದು ಆ ವಿಷದ ಮುಳ್ಳನ್ನು ಕಿತ್ತೊಗೆಯಲು ಯತ್ನಿಸಿದನು.

'ಕೃಷ್ಣಭವನ'ದಿಂದ ಫಲಾಹಾರದ ಪಿಂಗಾಣಿ ಪರಿವಾರವೇ ಬಂದು ಬಿಟ್ಟಿತು. ಆನಂತರದ ಕಾಲುಗಂಟೆಯಲ್ಲಿ ತಟ್ಟೆ ಬಟ್ಟಲು ಚಮಚೆಗಳ ಶಬ್ದವೂ ಕವ್ವಿತ್ತಯರ ವಚನವೂ ಅಲ್ಲದೆ ಬೇರೇನೂ ಕೇಳಿಸುತ್ತಿದ್ದಿಲ್ಲ.

ಗೋಪಿನಾಥನಿಗೆ ಕ್ಲಬ್ಬಿಗೆ ಹೋಗುವಾಗ ಇದ್ದ ಮನೋಲ್ಲಾಸ ಅಲ್ಲಿಂದ ಮರಳಿ ಮನೆಗೆ ಬರುವಾಗ ಇರಲಿಲ್ಲ. 'ವನಸ್ಪತಿ' ಎಂಬ ಕೃತಕ ತುಪ್ಪದ ತಿಂಡಿ ತಿಂದುದರಿಂದಲೋ ಅಥವಾ ಪರಸ್ತ್ರೀ ಚೋರನ ಕಥೆ ಕೇಳಿದ ರಿಂದಲೋ ಆತಗೆ ಹೊಟ್ಟೆತೊಳೆಸುತ್ತಿತ್ತು. ಊಟಮಾಲಿಲ್ಲ. ಒಂದು

ಕೋಟ ನೀರು ಮಜ್ಜಿಗೆಗೆ ಉಪ್ಪು, ಶುಂಠಿ, ಲಿಂಬೆಹಣ್ಣು, ಹಿಂಗು ಹಾಕಿ ಬೆರಸಿಕೊಟ್ಟದ್ದನ್ನು ಕುಡಿದನು. ಸ್ವಲ್ಪ ವಾಸಿಯಾಯಿತು. ಮನಸ್ಸಿಗೂ ಗಾಳಿಬೆಳಕು ಸಂಚಾರವಾದಂತಾಗಿ ತಿಳಿಯಾಯಿತು, ಹಗುರವಾಯಿತು. ಪಂಬಿಯನ್ನು ತೊಡೆಯ ಮೇಲೆ ಕೂರಿಸಿಕೊಂಡು ರೇಡಿಯೋದಲ್ಲಿ ಸಂಗೀತವೇನಿದೆಯಂತ ಮೈಸೂರಿನ ಆಕಾಶವಾಣಿಯನ್ನು ಹಾಕಿ ಕೇಳಿದನು. ಯಾರದೋ ವೀಣೆಯಿತ್ತು. ತಕ್ಕಮಟ್ಟಿಗೆ ಚೆನ್ನಾಗಿಯೇ ಇತ್ತು. ಆದರೆ ಒಂದೆರಡು ನಿಮಿಷಗಳಲ್ಲೇ ಮುಗಿದುಬಿಟ್ಟು, ಇನ್ನಾರದೋ ಹರಟೆ ಪ್ರಾರಂಭವಾದ್ದರಿಂದ ಮದ್ರಾಸಿಗೆ ತಿರುಗಿಸಿದನು. ಫಕ್ಕನೆ ಒಂದು ಘನವಾದ ಕಚೇರಿಯೇ ಆತನ ಮೇಲೆ ಸುರಿದು ಬಿತ್ತು. ಧ್ವನಿಯನ್ನು ಸ್ವಲ್ಪ ತಗ್ಗಿಸಿದನು. ಗಾಯಕನು ಷಣ್ಮುಗಪ್ರಿಯರಾಗವನ್ನಾಲಾಪನೆ ಮಾಡುತ್ತಿದ್ದನು. ನಾದವು ಗಂಟಲೊಡೆದುಬರುತ್ತಿತ್ತು. ಎದೆಯೊಡೆದು ಬರುವಂತಿದ್ದರೆ ಉತ್ತಮವಿತ್ತು. ಆಲಾಪನೆ ಮುಗಿದು ಕೀರ್ತನೆ ಸುರುವಾಯಿತು. ವಿದ್ವತ್ತಿನ ಹೆಮ್ಮೆಯಿಂದ ಆರಂಭದಲ್ಲೇ ಕುಸ್ತಿಗೆ ತೊಡಗಿದನು. ಮುತ್ತಿನ ಮಣಿಗಳನ್ನು ಎಣಿಕೆಹಾಕುವಂತೆ ಸ್ವರವಿಸ್ತಾರ ಮಾಡುವುದರ ಬದಲು ಮುಷ್ಟಿ ಮುಷ್ಟಿ ಕಲ್ಲು ಹರಳುಗಳನ್ನು ಎರಚಿದನು. ಅದನ್ನಾದರೂ ಒಂದು ವೇಳೆ ಕೇಳಿ ಸುಮ್ಮಗಿರಬಹುದಿತ್ತು. ಆದರೆ ಮೃದಂಗದ ಜತೆಗೆ ಮೂರ್ಸಿಂಗದ ಮೂಗು ಮುರಿತ ಆರಂಭವಾದ ತಕ್ಷಣ ಗೋಪಿನಾಥನಿಗೆ ಸಹಿಸಲಾರದ ಅಸಹ್ಯವಾಗಿ ಗರ್ರಕ್ಕನೆ ದೆಹಲಿಗೆ ತಿರುಗಿಸಿ ಬಿಟ್ಟನು. ಅಲ್ಲಿಂದ ಯಾವಳೋ ಒಬ್ಬಳ ಉಲಿವು ಕೇಳಿಸಿತು. ಆಕೆಯ ರೋದನ. ನರಳಿದಂತೆ ಸಾರಂಗಿಯ ಮೊರೆ. ಇವರಿಬ್ಬರಿಗೂ ತಾತನಾಗುವವನೊಬ್ಬನು ಹಿಂದಿನಿಂದ ‘ ಖಟ್ಕ ಖಟ್ಕ’ ಅಂತ ಕೋಲೂರಿಕೊಂಡು ಬಂದಂತೆ ತಬಲೆಯ ಟೀಕಾ. ಗೋಪಿನಾಥಗೆ ಬೇಸರವಾಯಿತು. ಎಲ್ಲಿ ನೋಡಿದರೂ ಇದೇ ಅವಸ್ಥೆ. ನಾದನಿಷ್ಠುರತೆ; ಇಲ್ಲವೆ ನಿರಾಶೆ. ಸಂಗೀತಗಾರರೆಲ್ಲರೂ ಉದ್ದಾಮ ಪಂಡಿತರು. ಉಗ್ರನರಸಿಂಹ ಮೂರ್ತಿಗಳು ಇಲ್ಲವೆ ನೋವಿನಿಂದ ನರಳುವ ನಿರ್ಭಾಗ್ಯರು. ಗಾಳಿಯಂತೆ ಹಗುರವಾದ, ಆಕಾರದಂತೆ ವಿಶಾಲವಾದ, ಇವೆರಡನ್ನೂ ಬೆಳಗಿಸಿ ರೂಪಲಾಲಿತ್ಯವನ್ನು ಕೊಡುವ ಮನೋಜನಿತವಾದ ಸಂಗೀತ ಎಲ್ಲಿಯೂ ಇಲ್ಲವೆ ? ಎನ್ನುತ್ತ ಪಾಶ್ಚಾತ್ಯ ತಾಣಗಳನ್ನೊಂದೊಂದಾಗಿ ನೋಡಿ

ದನು. ಲಂಡನಿನಿಂದ ವಾದ್ಯಮೇಳವೊಂದು ಕಿವಿಗೆ ಬಿತ್ತು. ಅದನ್ನು ಕೇಳಿ ಪಂಬಿ ಕೈ ಚಪ್ಪಾಳೆ ಹೊಡೆದು ತೊಡೆಯ ಮೇಲೆ ಕುಳಿತಲ್ಲೇ ಕುದುರೆ ಸವಾರಿಗೆ ಸುರುಮಾಡಿದ್ದರಿಂದ ಕೇಳಿಬಿಡೋಣವೆಂತೆ ಅಲ್ಲೇ ಒರಗಿ ಕಣ್ಣು ಮುಚ್ಚಿದನು. ಸಾವಿರಾರು ಮೈಲುಗಳಾಚೆ ಹಲವಾರು ಮಂದಿ ಕೆಂಪು ಜನರು ವಿವಿಧ ವಾದ್ಯಗಳಿಂದ ಹೊರಚೆಲ್ಲಿದ ಸ್ವರಮೇಳನದ ಲಾಲನೆಯಿಂದ ಆತಗೆ ಅಪೂರ್ವ ನೆಮ್ಮದಿಯುಂಟಾಯಿತು. ಆತನ ಹೃದಯದ ಮೌನ ವಿಪ್ಲವಕ್ಕೆ ಆ ವಾದ್ಯವಲ್ಲರಿಯ ಸೋಗು ಬೇಕಿತ್ತು. ಅದೂ ಮುಗಿಯಿತು. ಕರಟ ಕೆರೆ ದಂತೆ ಶಬ್ದವಾಗಿ ನಿಂತುಬಿಟ್ಟಿತು. ಕಣ್ತೆರದು ಸ್ವಿಚ್ಚು ಕಳಚಿ ಮಗಳನ್ನು ನೋಡಲು ಅದಕ್ಕೆ ನಿದ್ರೆ ಬಂದಿತ್ತು. ಅದನ್ನೆತ್ತಿಕೊಂಡು ಮುದ್ದಿಸುತ್ತ ತನ್ನ ಕೋಣೆಗೆ ಹೋದನು. ಅಲ್ಲಿ ಹೋದ ತಕ್ಷಣ ಇದ್ದಕ್ಕಿದ್ದಹಾಗೆ ಮಾಲತಿ ಅತಿ ಹತ್ತಿರವಿದ್ದಂತೆ ಭಾವನೆಯಾಗಿ ಮೈ ನಿಮಿರಿತು. ಅವಳದೇ ಪರಿಮಳ. ಅದೇ ಮರೆಯಲಾಗದ ಮಧುರ ಸಾನ್ನಿಧ್ಯ. “ಯಾತಕ್ಕೆ ಕದ್ದು ಬಂದು ಅಡಗಿರಬಾರದು, ಕಾಳಿಕಾಮ್ಮನ ಗುಡಿಗೆ ಕಳ್ಳಹೊಕ್ಕಂತೆ ? ಆಕೆಗೆ ಇಲ್ಲೇ ಇದ್ದುಬಿಡು, ಹೋಗಬೇಡ ಅಂದಿದ್ದನು. ಒಲ್ಲೆಯೆನ್ನಲಿಲ್ಲ. ಇದ್ದಿದ್ದರೆ ! ಮುಂದಿನ ಯುಗಯುಗಾಂತರದ ಪ್ರವಾಸಗಳಲ್ಲೂ ವ್ಯಯವಾಗದಷ್ಟು ಸುಖವನ್ನು ಒಂದೇಯಾನುದಲ್ಲಿ ಆಕೆಗೆ ಉಡಿಮುಂಬಿ ಕಳುಹಿಸುತ್ತಿದ್ದೆ. ಹಾ ! ಮಾಲತಿ, ಮೈಬೆಂದು ಮೀಯಲು ಬಂದವರು ನದಿಯ ಆಚೆಯೀಚೆ ನಿಂತು ಮುಖ ಮುಖನೋಡುತ್ತ ನಿಟ್ಟುಸುರುಬಿಡುವಂತಾಯಿತಲ್ಲ, ನಮ್ಮ ಪಾಡು !” ಎಂದು ಕೊರಗಿದನು. ಮಗುವನ್ನು ಮಂಚದ ಮೇಲಿಳಿಸಿ ತಾನೂ ಮಲಗಿದನು. ಆದರೆ ನಿದ್ರೆಬರಲಿಲ್ಲ. ಬಿಸಿಯುಸಿರುಗಳು ಮೇಲೆ ಮೇಲೆ ಎದೆ ಬಿರಿದು ಬಂದುವು. ಯೋಚನೆಯ ತೆರೆಗಳು ಉರುಳುರುಳಿ ಹಣೆಯ ಮೇಲೆ ಬಡಿದುವು. ಆಗಾಗ ಕಾಮನ ಕಡಲಿಂದ ಬೀಸುತ್ತಿದ್ದ ಸುಡುಗಾಳಿಗೆ ಅಂಗಾಂಗಗಳೂ ನಡುಗುತ್ತಿದ್ದುವು. “ಒಂದೇ ಒಂದು ದಿನದ ಅವಧಿಯಲ್ಲಿ ಎಷ್ಟು ತೆರದ ಭಾವಭಂಗಿಗಳ ಮೆರವಣಿಗೆ ! ಈ ರಸಾನುಭವಗಳನ್ನು ಜೀವಿತದ ಹೆದ್ದಾರಿಯ ತೋರಣಗಳಂತೆ ಕಟ್ಟಿಡುವ ಉಪಾಯವೇನು ? ಅವು ಮುನ್ನಡೆದಂತೆ ಅವುಗಳ ಹೆಜ್ಜೆಗಳ ಗುರುತು ಮಾಸಿಹೋದರೇನು ಫಲ ? ಚಿರಕಾಲ ಉಳಿಯುವಂತೆ ಸ್ಮೃತಿಪಟವಲ್ಲಿ ಕೆತ್ತಲ್ಪಟ್ಟರೆ ರಾಗರಸಗಳ

ಬರಗಾಲ ಬಂದಾಗ ಒಂದು ವೇಳೆ ಅವುಗಳ ನೆನಸು ಕನಸುಗಳಲ್ಲಾದರೂ ರಚಿಸಬಹುದು. ಕಲಾಕೃತಿಗಳಂತೆ ಅವುಗಳನ್ನು ಚಿರಸ್ಥಾಯಿಯಾಗಿ ರೂಢಿಸಿ ಕೊಳ್ಳುವ ರಹಸ್ಯವೇನು ? ಅವುಗಳಿಗೂ ಒಂದು ಆಕಾರವಿರಬೇಕು, ಒಂದು ಜೀವಕಳೆಯಿರಬೇಕು. ಜೀವಕಳೆಯನ್ನು ತಾಳುವಂಥ ರೂಪಕಗಳಾಗಿರ ಬೇಕಾದರೆ ಅವು ಲಯಬದ್ಧವಾಗಿರಬೇಕು. ಅವುಗಳದ್ದೇ ಆದ ಒಂದು ಧಾಟಿ, ಒಂದು ತಾನ, ಒಂದು ವಿನ್ಯಾಸವಿರಬೇಕು. ಅವು ಜೀವನಯಾತ್ರೆಯಲ್ಲಿ ಮೈಲುಗಲ್ಲುಗಳಂತಿರಬೇಕು. ಸತ್ಯಶೋಧನೆಗೆ, ಇಲ್ಲವೆ ಕರ್ಮೋಪಾಸನೆಗೆ ಉತ್ತೇಜನಗಳಾಗಿರಬೇಕು. ಸನ್ನಿವೇಶಗಳು ಸತ್ವಪರೀಕ್ಷೆಗಾಗಿ ತಂದೊಡ್ಡುವ ಪ್ರಶ್ನೆಗಳಿಗೆ ರಸಿಕನು ಕಟ್ಟುವ ಉತ್ತರಗಳಾಗಿರಬೇಕು. ವಿಧಿವಿಲಾಸಕ್ಕೂ ಮಾನವ ಪ್ರಯತ್ನಕ್ಕೂ, ಹಣೆಬರಹಕ್ಕೂ ಕೈಬರಹಕ್ಕೂ ಇರುವ ನಿರಂತರ ಸ್ಪರ್ಧೆಯೇ ಈ ಅನುಭವಗಳ ಉತ್ಪತ್ತಿಗೆ ಕಾರಣ. ಎರಡು ವಿರುದ್ಧ ಶಕ್ತಿ ಗಳು ಯುದ್ಧ ಸಮ್ಮುಖವಾದಾಗ ಅವುಗಳ ಎಳೆದಾಟ ತೂರಾಟಗಳಿಂದುಂಟಾ ಗುವ ಆಂದೋಲನವೇ ಈ ಅನುಭವಗಳ ಪಾಲನೆ ಲಾಲನೆ.

“ಪಾಲನೆ ಲಾಲನೆ ಅಂದಮೇಲೆ ಶ್ರಮಕ್ಕೆ ತಕ್ಕ ವಿಶ್ರಾಂತಿ, ಸಾಹಸಕ್ಕೆ ಸಮಾನವಾದ ಸಹನೆ, ಉತ್ಸಾಹಕ್ಕೆ ಸರಿಯಾದ ಸಂಯಮ ಇದ್ದೇ ತೀರ ಬೇಕು. ಮಾನವನ ಸತ್ಪ್ರಯತ್ನ ಕಾರ್ಯಾವೇಶದಲ್ಲಿ ಒಡೆದು ಚೆಲ್ಲಿಹೋದರೆ ಅದೊಂದು ಅಪಾರ ನಷ್ಟ. ಒಂದು ವಿಧದ ಆತ್ಮಹತ್ಯೆ. ತಾಳ್ಮೆಯಿಂದ ತಿಳು ವಳಿಕೆಯಿಂದ ಸಾಹಸ ಫಲಕಾರಿಯಾದರೆ ಅದೊಂದು ಅಪೂರ್ವ ಲಾಭ; ಆತ್ಮವಿಕಸನ, ಕಾರ್ಯಪ್ರವರ್ತನೆಯಲ್ಲಿ ಆಗ್ರಹ ನಿಗ್ರಹಗಳೆರಡರ ವಿನ್ಯಾಸ ವಿರಬೇಕು. ಏರುಗಳೆಷ್ಟೋ ಅಷ್ಟೇ ತಗ್ಗುಗಳಿರಬೇಕು. ಭರತವೆಷ್ಟೊ ಇಳಿ ತವೂ ಅಷ್ಟೇ ಇರಬೇಕು. ತೆರೆಗಳ ತುರಾಯಿಗಳೊಂದಕ್ಕೂ ಒಂದೊಂದು ತಳಾದಿ ಇದ್ದೇ ಇರುತ್ತದೆ. ಬೆಟ್ಟವಿದ್ದಷ್ಟೆ ಬಯಲಿರುತ್ತದೆ. ಆರೋಹಣ ದಷ್ಟೇ ಅವರೋಹಣ. ಇದೇ ಜಗದ್ರಹಸ್ಯ. ಇದೇ ಪ್ರಕೃತಿಯ ನಿಯಮ. ಇದನ್ನರಿತರೆ ಪ್ರತಿಯೊಂದು ರಸನಿಮಿಷವನ್ನೂ ಆಪದ್ಧನ ವಾಗಿ ಕೂಡಿಟ್ಟುಕೊಳ್ಳಬಹುದು. ಅದೃಷ್ಟದ ಜಿಪುಣತನವನ್ನು ಅಲ್ಲ ಗಳೆಯಬಹುದು. ಜಗನ್ನಿಯಾಮಕನನ್ನು ಎದುರಾಡಿ ಗೆಲ್ಲಬಹುದು. ನಮ್ಮಲ್ಲಿ ನಾನಾ ವಿಕಾರಗಳನ್ನು ಕಲ್ಪಿಸಿ ಅಡ್ಡದಾರಿಗೆಳೆದು, ಸತ್ವವನ್ನು ಲೂಟಿಮಾಡಿ

ನಮ್ಮನ್ನು ಕೆಡಿಸಿಕೊಲ್ಲುವ ಷಡ್ವೈರಿಗಳನ್ನು ಪ್ರತಿಭಟಿಸಬಹುದು. ಪ್ರತಿಭಟಿಸಲೇಬೇಕು. ಅದೇ ಕಲಾಕೌತುಕದ ಆಮೋದ! ಅದೇ ಪುರುಷ ಪ್ರಯತ್ನದ ವಿಜಯಾನಂದ! ಅದೇ ಸ್ವಾತಂತ್ರ್ಯ! ಅದೇ ಸೌಂದರ್ಯ! ಅದೇ ಸತ್ಯ! ಮಾಲತಿ, ನನಗೂ ನಿನಗೂ ಇರುವ ಸಂಬಂಧ ಇದೇ! ತೊಟ್ಟಿಲು ತೂಗುತ್ತಿರುವಾಗ ತಾಯಿ ತೂಕಡಿಸುವಂತೆ ಸೃಷ್ಟಿ ಸೃಷ್ಟಗಳ ನಡುಸಮುದ್ರ ಪರಬ್ರಹ್ಮನು ನಿದ್ರಿಸುತ್ತಿರಬೇಕು. ಅಹುದು ಮಾಲತಿ, ಪ್ರಿಯೆ, ನಮ್ಮಿಬ್ಬರಿಗೂ ಅಮಲು ಕುಡಿಸಿ ಎದ್ದಮೇಲೆ ತಮಾಷೆ ನೋಡೋಣವೆಂತ ಸುಖವಾಗಿ ನಿದ್ರಿಸುತ್ತಿರಬೇಕು; ನಾದ ಸಮುದ್ರದ ಉಯ್ಯಾಲೆಯಲ್ಲಿ ತೂಗುತ್ತಿರಬೇಕು. ಸರಸ್ವತಿಯು ತೊಡೆಯಮೇಲೆ ತಲೆಯಿಟ್ಟು. ಇದೇ ಸಮಯ ಚಿನ್ನ, ನಾವು ಸೋಲಬಾರದು. ನಿನ್ನ ಸಹಾಯವೊಂದಿದ್ದರೆ ಸಾಕು, ಬ್ರಹ್ಮನನ್ನೂ ಗೆಲ್ಲಬಲ್ಲೆ! ವಿಜಯ ಕೇಸರಿಯಾಗಬಲ್ಲೆ! ನಮ್ಮ ಎದುರಾಳಿ ನಿದ್ರಿಸುತ್ತಿದ್ದಾನೆ, ಮಾಲತಿ—ಕಣ್ಮುಚ್ಚಿದ್ದಾನೆ—ಎಚ್ಚರಿಕೆ ತಪ್ಪಿದೆ—ಮಾಲತಿ—ಮಾಲತಿ—ಮಾ-ಲ-ತಿ!

ಈ ಪರಿ ಚಿಂತಾರಣ್ಯದಲ್ಲಿ ಅಲೆದಲೆದು ಆಯಾಸದಿಂದ ಗೋಪಿನಾಥನಿಗೆ ನಿದ್ರೆ ಬಂತು.

೨೬

ಅತ್ತ ಅದೇ ದಿನ ಬುಧವಾರ ಮೂರು ಗಂಟೆ ಹೊತ್ತಿಗೆ ಮಹಿಳಾ ಸಭೆಯ ಪೇದೆ ಮಾಲತಿಗೊಂದು ಪತ್ರವನ್ನು ತಲಪಿಸಿದನು. ಮಾಲತಿ ಆತನನ್ನು ನಿಲ್ಲ ಹೇಳಿ ಲಕೋಟೆಯನ್ನು ಒಡೆದು ಓದಲು ಅದು ಅಂದೇ ಸಂಜೆ ಆರು ಗಂಟೆಗೆ ಆಹಾರ ಕಮಿಶನರರ ಪತ್ನಿಯನ್ನು ಸತ್ಕರಿಸುವುದಕ್ಕಾಗಿ ಸಂಘದವರು ಏರ್ಪಡಿಸಿದ್ದ ಸಮಾರಂಭಕ್ಕೆ ಆಹ್ವಾನವಾಗಿತ್ತು. ಮಾಲತಿ ವಿಸ್ಮಿತಳಾಗಿ ವಿಳಾಸವನ್ನು ತಿರುಗಿ ಓದಿ ನೋಡಲು ತನಗಾಗಿಯೇ ಬಂದ ಕರೆಯೆಂದು ನಿಶ್ಚಯವಾಯಿತು. ಕಾಗದದಲ್ಲಿ "ಸದಸ್ಯರೆಲ್ಲರೂ ದಯೆಯಿಟ್ಟು ಬರಬೇಕೆಂದು ವಿನಂತಿ" ಇತ್ತು. ಬುಡದಲ್ಲಿ ಅಧ್ಯಕ್ಷ ಸುಶೀಲಮ್ಮನ ಹೆಸರಿತ್ತು. ಕಾಗದವನ್ನು ಹಿಡಕೊಂಡು ಹೊರಗೆ ಬಂದು ನೋಡಲು ಪೇದೆಯು ಕಾದು ನಿಂತಿದ್ದನು. ಉತ್ತರ ಬರೆದು ಕೊಡುತ್ತೇನೆ, ಸ್ವಲ್ಪ ನಿಲ್ಲು ಎಂದು ಹೇಳಿ ಒಳಗೆ ಹೋಗಿ ಉತ್ತರ ಬರೆದಳು. "ಈ ಆಮಂತ್ರಣ ಕೈ ತಪ್ಪಿನಿಂದ ನನಗೆ ಕಳುಹಿಸಿದ್ದಿರಬೇಕು. ವಾಪ್ಸು ಕಳುಹಿಸಿದ್ದೇನೆ" ಎಂಬಷ್ಟೆ ಬರೆದು ಕಳುಹಿದಳು.

ಐದುಗಂಟೆಯಾಗುವಷ್ಟರೊಳಗೆ ಅದೇ ಪೇದೆ ತಿರುಗಿ ಬಂದು ಸಲಾಂ ಹೊಡೆದು ಇನ್ನೊಂದು ಕವರನ್ನು ಕೊಟ್ಟನು. ಇದೇನು ಸ್ವಾರಸ್ಯವೆನ್ನುತ್ತ ಆತನನ್ನು ನಿಲ್ಲಹೇಳಿ ಹಾಲಿನ ಕುರ್ಚಿಯೊಂದರಲ್ಲಿ ಕುಳಿತು ಕಾಗದವನ್ನು ತೆಗೆದೋದಿದಳು. ರಾಘವೇಂದ್ರರಾಯರು ಕೋರ್ಟಿನಿಂದ ಬಂದು ಕಾಫಿ ಕುಡಿದವರು ಅಲ್ಲೇ ಪಕ್ಕದ ಕುರ್ಚಿಯಲ್ಲಿದ್ದರು. "ಏನೇ ಅದು, ನಗ್ತಾ ಇದ್ದೀ ?" ಎಂದು ಕೇಳಿದರು. "ನೀವೇ ಓದಿ; ನಾನೀಗ ಬಂದೆ" ಅನ್ನುತ್ತ ಕಾಗದವನ್ನು ಅವರ ಕೈಗೊಪ್ಪಿಸಿ ಹೊರಗೆ ಹೋದಳು. "ಜವಾಬಿಲ್ಲ. ನೀನು ಹೋಗಬಹುದು" ಅಂದಳು ಪೇದೆಗೆ. ಆತ ಕದಿಮ. ಮಾಲತಿಯಮ್ಮಗೆ ಎಂತ ಗೊತ್ತಾಗಿ ಮತ್ತೊಬ್ಬ ಪೇದೆಯಿಂದ ಕಾಗದ ಜಾರಿಸಿ ತಂದವನು. ತಲೇ ತುರಿಸುತ್ತ ನಿಂತ.

"ತಲೇ ತುಂಬ ಹೇನೋ ?" ಎಂದು ಕೇಳಿದಳು.

"ಇಲ್ಲಾ ತಾಯಿ. ಎರಡು ಸಲ ಬಂದೆ; ಸ್ಯಾಕಲ್ ಹಾಕ್ಕೊಂಡು."

"ಸ್ಯಾಕಲ್ ಬಾಡಿಗೆ ಕೊಡಲಿಲ್ವೇ ಅವರು ?"

"ನಾನೇ ಕೈಯಿಂದ ಕೊಟ್ಟೆ."

"ಆ ದಂಡ ನಾನ್ಯಾಕೆ ತೆರಬೇಕು ? ಇರು, ಬಂದೆ" ಅನ್ನುತ್ತ ಒಳಗೆ ಹೋಗಿ ಎಂಟಾಣೆ ಪಾವಲಿಯೊಂದನ್ನು ತಂದು ಅವನ ಕೈಗೆ ಹಾಕಿದಳು.

"ಅಮ್ಮ ಬರ್‍ತಾರೆ ಅನ್ನಲೆ ?" ಎಂದು ಕೇಳಿದ, ಸಂತೋಷಪಡುತ್ತ.

"ಎಷ್ಟು ಹರಟೆಯೋ ನಿನಗೆ. ತಲೆತುಂಬ ? ಬಂದ ಕೆಲಸ ಆಗಿಬಿಟ್ಟಿತ್ತು ತಾನೆ ? ಸರಿ, ನಡಿ" ಎಂದು ನಗುತ್ತ ಗದರಿಸಿ ಕಳುಹಿಸಿಬಿಟ್ಟಳು. ಒಳಗೆ ಬಂದು ಕುಳಿತಳು. ರಾಘವೇಂದ್ರರಾಯರು ಕೈಲಿದ್ದ ಕಾಗದವನ್ನು ಬಹುಮುಖ ದಿಂದ ಪರಿಶೀಲಿಸುತ್ತಿದ್ದರು. ಬಂದ ಆಹ್ವಾನವು ಸಂಘದ ಉಪನಿಬಂಧ ನೆಗಳಿಗನುಸಾರವಾದದ್ದೇ, ಕಾಗದದಲ್ಲಿರುವ ಪ್ರತ್ಯಕ್ಷಾರ್ಥವಲ್ಲದೆ ಗೂಢಾರ್ಥ ವೇನಾದರೂ ಅಡಗಿರಬಹುದೇ ? ಎಂಬ ಒಗಟುಗಳು ಅವರ ತಲೆಯೊಳಗೆ ಝೇಂಕರಿಸುತ್ತಿದ್ದುವು.

"ಇದಕ್ಕೆ ಮೊದಲೊಂದು ಕಾಗದ ಬಂದಿತ್ತೇನೇ, ಮಾಲತಿ ?"

"ಹೌದು. ಅಚ್ಚಾದ ಆಮಂತ್ರಣವೊಂದು ಬಂದಿತ್ತು."

"ಅದೆಲ್ಲಿದೆ ?"

"ವಾಪ್ಸು ಕಳುಹಿಸಿದೆ."

"ಯಾತಕ್ಕೆ?"

"ಅದರಲ್ಲಿ ನನ್ನ ಹೆಸರಿರಲಿಲ್ಲ. ಕವರಿನ ಮೇಲೆ ಮಾತ್ರ ನನ್ನ ವಿಳಾಸವಿತ್ತು. ಕೈತಪ್ಪಿನಿಂದ ನನಗೆ ಕಳುಹಿಸಿದರೋ ಏನೋಂತ ತಂದವನ ಕೈಲೇ ಕೊಟ್ಟು ಕಳುಹಿಸಿದೆ"

ತಪ್ಪು ಕೆಲಸ. ವಾಪ್ಸು ಕಳುಹಿಸಬಾರದಿತ್ತು. ಇಟ್ಕೋಬೇಕಿತ್ತು. ಅದನ್ನು ಕೈಲಿಟ್ಟುಕೊಳ್ಳದವರಿಗೆ ಪ್ರವೇಶವಿಲ್ಲ. ಇವತ್ತಿನದು ನಿತ್ಯಕಟ್ಟಳೆಯ ಸಭೆಯಲ್ಲ. ಜಡ್ಜರು, ಸಬ್‌ಜಡ್ಜರು, ಮುನ್ಸಿಫರು ಎಲ್ಲರೂ ಬರ್ತೇವೆಂತ ಒಪ್ಪಿಕೊಂಡಿದ್ದಾರೆ. ಅವರನ್ನ ಕರೆಯೋದಕ್ಕೆ ಸುಶೀಲಮ್ಮನೇ ಬಂದಿದ್ರು ಕಚೇರಿಗೆ; ಹೇಳಿದ್ರು ನನ್ನ ಹತ್ರ."

"ಎಂಥ ಭಾರೀ ಸಭೆಯಾದರೂ ನಾನು ಹೋಗೋದರಲ್ಲಿಲ್ಲವಲ್ಲ?" ಅಂದಳು. ಶುದ್ಧ ಸುಳ್ಳು. ಕಮಿಶನರರ ಪತ್ನಿ ಆಕೆಯನ್ನು ಕುರಿತಾಗಿ ವಿಚಾರಿಸಿದ್ದರಿಂದ ಆಕೆಯ ಸದಸ್ಯತನ ಪುನರುತ್ಥಾನವಾಗಿದೆಯೆಂತಲೂ, ಅಲ್ಲದೆ ಆಕೆಯನ್ನು ಅಭ್ಯಾಗತಳಂತೆ ಗೌರವಿಸಿ ಬರೆದಿದ್ದ ಎರಡನೇ ಕಾಗದವನ್ನು ಓದಿದೊಡನೆ ಹೋಗಬೇಕೆಂತ ನಿರ್ಧಾರಮಾಡಿದ್ದಳು. ಆದರೆ ಗಂಡನಿಗೆ ಅಧಿಕಾರದ ಆಡಂಬರದ ಮೇಲಿದ್ದ ವಿಶ್ವಾಸಾತಿಶಯದಿಂದ ಜಿಗುಪ್ಸೆ ಪಟ್ಟು ಬೇಕೆಂತಲೇ ವಿರೋಧವನ್ನು ನುಡಿದಳು.

"ಇಲ್ಲಾಂದ್ರೇನರ್ಥವೇ? ಇಂಥ ಅಪೂರ್ವ ಸಂದರ್ಭವನ್ನು ಕಳಕೊಂಡರೆ?" ಎನ್ನುತ್ತ ರಾಘವೇಂದ್ರರಾಯರು ಸ್ವರವೇರಿಸಿದರು. ಕಚೇರಿಯಲ್ಲಿ ಪ್ರತಿಪಾದಿಸುವವರಂತೆ ಮುಕ್ತಕಂಠದಿಂದ ಸಾರಿ ಹೇಳಿದರು. "ಲೇಡಿ ಕಮಿಶನರು ಮರಳಿ ಹೋಗುವುದರೊಳಗೆ ಒಂದು ಸಲವಾದರೂ ಕಾಣಬೇಕೆಂತ ನೀನೇ ಹೇಳ್ತಾಯಿದ್ದಿ. ಈಗ ಅವರಿಂದಲಾಗಿಯೇ ನಿನಗೊಂದು ಆಮಂತ್ರಣ ದೊರಕಿದೆ. ನೀನು ಹಾಗೆಲ್ಲ ಮಿಕ್ಕವರಂತೆ ಅಂಗಲಾಚಿಕೊಂಡು ಬರುವವಳಲ್ಲಾಂತ ತಿಳಿದೇ ತೆಗೆದ ಮೆಂಬರಿಕೆಯನ್ನು ತಿರುಗಿಕೊಟ್ಟು ಆಶ್ವಾಸನವನ್ನು ಬೇರೆ ನೀಡಿದ್ದಾರೆ. ನಿನ್ನ ಮೇಲಿನ ಅಭಿಮಾನವನ್ನ ಪುನರುದ್ಧಾರ ಮಾಡಿದ್ದಾರೆ. ಇದಕ್ಕಿಂತ ಹೆಚ್ಚಿನದೇನಾಗಬೇಕು? ನೀನೇ ಸ್ವಲ್ಪ ಯೋಚನೆ ಮಾಡಿ ಹೇಳು." ಅಷ್ಟರಲ್ಲಿ ಶಾರದಮ್ಮ ಬಂದು ಕುಳಿತರು. "ಬೇಡ,

ಅಮ್ಮನ ಹತ್ರ ಕೇಳೋಣ. ಇಲ್ನೋಡಮ್ಮ—" ಎಂದು ಪುನರಾವರ್ತನೆಗೆ ಆರಂಭಿಸುವುದರೊಳಗೆ ಮಾಲತಿ ಅಡ್ಡಬಂದು, "ನಿಲ್ಲಿ. ನಾನೇ ಹೇಳ್ತೀನೆ" ಎಂದು ನಡೆದ ಸಂಗತಿಯನ್ನು ತಿಳಿಸಿದಳು. "ದೊರೆಸಾನಿ ಅಂದದ್ದೂ ನಮ ಗರ್ಥವಾಗೋದಿಲ್ಲ. ನಾವಂದದ್ದು ಅವರಿಗರ್ಥವಾಗೋದಿಲ್ಲಾಂತ ಕಾಗದ ಬರೆದು ಕಳುಹಿಸಿದ್ದಾರೆ. ನಾನು ಹೋಗಬೇಕೇ, ಬೇಡವೇ, ಎಂಬದೇ ಈಗಿನ ಪ್ರಶ್ನೆ." ಅನ್ನುತ್ತ ಮಾತು ಮುಗಿಸಿದಳು.

"ಆದರೆ ಮಾಲತಿ, ನೀನೀಗ ಹೇಳೋದಕ್ಕೂ ನಿನ್ಮುಂದಿರುವ ಕಾಗದಕ್ಕೂ ತುಂಬ ವ್ಯತ್ಯಾಸವಿದೆ. ಯಥಾರ್ಥವನ್ನು ಹೇಳಲಿಲ್ಲ, ನೀನು. ಕೈಸರಕು ಕೂಡಿಸಿಕೊಂಡಿದ್ದಿ." ಎಂದು ರಾಘವೇಂದ್ರರಾಯರು ಆಕ್ಷೇಪಿಸಿದರು.

"ಏನಪ್ಪ, ನಿಮ್ಮದು ಚರ್ಚೆ ಯಾವಾಗಲೂ ಇದ್ದದ್ದೇ. ನೀನು ರಾಘು, ವಕೀಲನೆಂಬೋದನ್ನ ಮನೆಯಲ್ಲೂ ಮರೆಯೋದಿಲ್ಲ. ಈ ತನ್ಮಧ್ಯ ತೀರ್ಪು ಕೊಡೋ ಕೆಲಸ ನನಗೆ ಹಚ್ಚಿದರೆ ನಾನೇನು ತಾನೇ ಮಾಡಬೇಕು ?'' ಎಂದರು ಶಾರದಮ್ಮ ಯಾವ ಮನೋಭಾವವನ್ನೂ ಪ್ರಕಟಿಸದೆ.

ನಿಮ್ಮ ತೀರ್ಪಿನ ಮೇಲೆ ಅಪೀಲು ಇಲ್ಲದ್ರಿಂದಲೇ ನಿಮಗೀ ಅಧಿಕಾರ ಒಪ್ಸಿರೋದು. ಅಲ್ವೇ ?'' ಎನ್ನುತ್ತ ಮಾಲತಿ ಗಂಡನಿಗೆ ಪಿತೂರಿಕೊಟ್ಟಳು.

"ಹೌದೌದು. ಆದರೆ ಹೊತ್ತಾಗ್ತಾಬಂತಲ್ಲ. ನೀವೀರೀತಿ ಲೇವಡಿ ಮಾಡ್ತಾ ಇದ್ರೆ ಏನುಗತಿ ?" ಎಂದು ರಾಘವೇಂದ್ರರಾಯರು ತವಕಿಸಿದರು.

"ಪುಣ್ಯಕ್ಕೆ ನಿಮ್ಮ ಜಗಳ ನ್ಯಾಯ ಸಿವಿಲಿನಲ್ಲೇ ಮುಗಿದು ಹೋಗುತ್ತೆ. ಕ್ರಿಮಿನಲಿಗೆ ಇಟ್ಟುಕೊಳ್ಳೋದಿಲ್ಲ. ನೀನು ಹೋಗು ರಾಘು, ಹೊರಡು. ಮಾಲತಿಯೂ ಬರ್ತಾಳೆ" ಎಂದು ಶಾರದಮ್ಮ ತೀರ್ಮಾನಿಸಿದರು.

"ಹೌದೇನೇ, ಬರ್ತೀಯಾ ?'' ತನ್ನ ಸುದೆಸೆಯನ್ನು ತಾನೇ ನಂಬಲಾರದೆ ರಾಘವೇಂದ್ರರಾಯರು ಕೇಳಿದರು.

"ಅಮ್ಮನ ಹುಕುಂ ಜ್ಯಾರಿ ಮಾಡಲೇ ಬೇಕಲ್ಲ. ನೀವು ಡ್ರೆಸ್ ಮಾಡಿ" ಅಂದಳು ಮಾಲತಿ ನಗುತ್ತ.

"ಐದು ಮುಕ್ಕಾಲು ಗಂಟೆಗೆ ಕಾರು ಬರೋದಕ್ಕೆ ಹೇಳಿದ್ದೇನೆ, ತಯಾರಿರು" ಎಂದು ಆಜ್ಞಾಪಿಸಿ ಹೊರಟು ಹೋದರು.

ಟ್ವೀಡ್ ಸೂಟು ಹಾಕಿ ಸಿದ್ಧರಾಗಿ ಕಾರನ್ನು ನಿರೀಕ್ಷಿಸುತ್ತ ಹಾಲಿನಲ್ಲಿ ಕುಳಿತಿದ್ದ ರಾಘವೇಂದ್ರರಾಯರು ಮಾಲತಿ ಅಲಂಕೃತಳಾಗಿ ತನ್ನ ಕೋಣೆಯ

ಬಾಗಿಲು ತೆರೆದು ಬಂದುದನ್ನು ನೋಡಿ ಒಂದು ಗಳಿಗೆ ಚಕಿತರಾದರು. ತನ ಗರಿಯುದೇನೇ ಫಕ್ಕನೆ ಎದ್ದು ನಿಂತರು.

"ಕಾರು ಬರಬೇಕಷ್ಟೆ. ಟೈಮಿದೆ, ಕೂತುಕೋ" ಅನ್ನುತ್ತ ಮತ್ತೆ ಕುಳಿತರು, ತನ್ನ ತವಕದಿಂದ ನಾಚಿಕೊಂಡು. ಮಾಲತಿ ಅದನ್ನು ನೋಡಿ ಮುಗುಳು ನಗುತ್ತ–"ಬಂದೆ ಒಂದು ಗುಟುಕು ನೀರು ಕುಡಿದು ಬಂದೆ" ಎಂದು ನೆಪ ಹೇಳಿ ಅಡುಗೆ ಮನೆಗೆ ಹೋದರು. ರಾಘವೇಂದ್ರರಾಯರು ಆಕೆಯನ್ನು ಪ್ರಶಂಸನೀಯ ದೃಷ್ಟಿಯಿಂದ ಆದರಿಸಿದ್ದು ಅದೇ ಮೊದಲು ಅನ್ನಬಹುದು. ಆಕೆಗೂ ಆಶ್ಚರ್ಯವಾಗಿ ಅವರ ಬಳಿ ನೇರ ಹೋಗಿ ಕುಳಿತುಕೊಳ್ಳಲಾರದೆ ತಪ್ಪಿಸಿಕೊಂಡಳು. ಆಕೆ ತನ್ನ ದೇಹವನ್ನು ಸಿಂಗರಿಸಿಕೊಳ್ಳುವಾಗ ಮನಸ್ಸು ಗೋಪಿನಾಥನಲ್ಲಿತ್ತು. "ಅವರೂ ಆಹ್ವಾನಿತರಾಗಿರಬೇಕು. ಬಂದರೂ ಬರಬಹುದು. ಅವರಿಗೆ ಗೊತ್ತು ನಾನ್ಯಾವುದನ್ನುಡಬೇಕು, ಹೇಗೆ ಉಡಬೇಕು, ಎಂಬದು. ನನ್ನ Dore-grey ಸೀರೆಯನ್ನು ನೋಡಿ ಅವರು ಸಂತೋಷಪಡದಿರರು" ಅನ್ನುತ್ತ ಆ ಮುಸುಕು ಮಿಶ್ರ ನೀಲಿ ವೈಗೆ ಕಲಾಬತಿನ ರಾಸ್ತಾ ಇದ್ದ ಬೆನಾರೆಸ್ ಸೀರೆಯನ್ನುಟ್ಟು ಮೆದುಕಂದು ಬಣ್ಣದ ರೇಶ್ಮೆಯ ಬ್ಲೌಸು ತೊಟ್ಟು ದೊಡ್ಡ ದೊಡ್ಡ ಮುತ್ತುಗಳ ಹಾರವೊಂದನ್ನು ಮಾತ್ರ ಹಾಕಿಕೊಂಡಿದ್ದಳು.

ಮಹಿಳಾ ಸಮಾಜದ ಮಂದಿರದಲ್ಲಿ ನೆರೆದಿದ್ದ ಆಗಂತುಕರಲ್ಲಿ ಗೋಪಿನಾಥನು ಎಲ್ಲಿಯೂ ಕಾಣಿಸದುದರಿಂದ ಮಾಲತಿ ಹತಾಶಳಾದಳರೂ ಲೇಡಿ ಕಮಿಶನರು ಆಕೆಯನ್ನು ಎಲ್ಲರೆದುರಿಗೆ ಗೆಳತಿಯಂತೆ ಆದರದಿಂದ ಸ್ವಾಗತಿಸಿ ಸಲಿಗೆಯಿಂದ ಮಾತನಾಡುತ್ತ ನಗುತ್ತ ಇದ್ದಕಾರಣ ಆಕೆ ಹರ್ಷಿತಳಾಗಿಯೇ ಇದ್ದಳು. ಅಷ್ಟೇ ಅಲ್ಲ. ವಿನಯಸಂಪನ್ನನಾದ ಗೋಪಿನಾಥನು ಈ ಜನ ಮರುಳಿಗೆ ಎಂದಿಗೂ ಹಾರೈಸಿ ಬರತಕ್ಕವನಲ್ಲವೆಂತ ತಾನೇ ಸಮಾಧಾನ ತಂದುಕೊಂಡಳು.

ಉಪಹಾರದ ಸಂಭ್ರಮವನ್ನು ಹೇಳಿ ತೀರದು. ಕಂಠಪೂರ್ತಿ ತಿಂದವರೆದುರಿಗೂ ಮೇಜಿನ ಮೇಲೆ ರಾಶಿ ರಾಶಿ ತಿಂಡಿಗಳ ತಟ್ಟೆಗಳಿದ್ದವು. ಉಪಹಾರವಾದನಂತರ ಕೆಲವರು ಸದಸ್ಯೆಯರ 'ಜಲಸ' ಗಾನ ಮೇಳವಿತ್ತು. ಆನಂತರ ವನಿತಾವೃಂದದ ಆಟ ವಿಹಾರ ವಿನೋದಗಳನ್ನೂ, ಸಮಾಜ

ಸೇವೆಯ ಚಳುವಳಿಗಳನ್ನೂ ಸುಶೀಲಮ್ಮನವರು ವಿವರಿಸಿ ಪರಿಚಯ ಮಾಡಿಸಿದರು. ಇದೆಲ್ಲ ಉಪಚಾರ ಅಭಿವಂದನೆಗಳ ವಿಧಿಯಾದ ತರುವಾಯ ಲೇಡಿ ಕಮಿಶನರು ಎದ್ದುನಿಂತು ಚಿಕ್ಕದೊಂದು ಭಾಷಣ ಮಾಡಿದರು.

“ ಮಂಗಳೂರಿನ ಮಹಿಳೆಯರು ರೂಪವತಿಯರೆಂದು ಮೊದಲೇ ಕೇಳಿ ಗೊತ್ತು. ಎಷ್ಟು ಚೆಲುವೆಯರೋ ಅಷ್ಟೇ ಕಲಾಕುಶಲರೂ ವಿನೋದಪ್ರಿಯರೂ ಆಗಿರುವ ನಿಮ್ಮ ಪರಿಚಯ ಮಾಡಿಕೊಳ್ಳುವ ಸುಸಂಧಿ ಒದಗಿದ್ದು ತುಂಬ ಸಂತೋಷಕರ. ನನ್ನ ಪತಿ ಮತ್ತು ನಾನು ಈ ನಗರದಲ್ಲಿ ಹಾಗೂ ಸುಸಂಸ್ಕೃತರಾದ ಈ ನಗರವಾಸಿಗಳ ಮಧ್ಯೆದಲ್ಲಿ ಕಳೆದ ಕೆಲವುದಿನಗಳ ಸವಿನೆನಪು ನಮ್ಮಲ್ಲಿ ಚಿರಸ್ಮರಣೀಯವಾಗಿರುವುದರಲ್ಲಿ ಸಂಶಯವಿಲ್ಲ. ನಿಮ್ಮ ವಿದ್ಯಾಭಿಮಾನ, ನಿಮ್ಮ ಕಲಾಸಕ್ತತೆಯನ್ನು ನೋಡಿದರೆ ಯುದ್ಧಾನಂತರದ ಯೋಜನೆಯಲ್ಲಿ ಶಾಂತಿಯೂ ಸುಭಿಕ್ಷೆಯೂ ಚಿರಕಾಲ ನೆಲೆಸುವಂತೆ ನೀವು ಪಣತೊಟ್ಟು ಕೆಲಸಮಾಡುವಿರೆಂಬ ಭರವಸೆಯುಂಟಾಗುತ್ತದೆ. ಈ ಕೆಲಸ ಕೈಗೂಡಬೇಕಾದರೆ ಈ ವಿಶ್ವಸಂಸಾರದ ಪ್ರತಿಯೊಂದು ವ್ಯಕ್ತಿಯೂ ಸಹಕರಿಸಬೇಕು. ನಿಮ್ಮಲ್ಲಿ ಅನುಕೂಲಸ್ಥರು ಕೂಡ ಸೊಂಟಕಟ್ಟಿ ಮೈಮುರಿದು ದುಡಿಯಬೇಕಾಗಿ ಬರಬಹುದು, ಎಂದರೆ ತಪ್ಪಾಗದು. ಇಡೀ ಪ್ರಂಚದ ಆಹಾರ ಪರಿಸ್ಥಿತಿಯೇ ಅತಿ ಶೋಚನೀಯವಾಗಿದೆ. ಧನ ಧಾನ್ಯದ ಕಣಜಗಳೆನ್ನಿಸಿಕೊಂಡ ದೇಶಗಳಲ್ಲೂ ಕ್ಷಾಮದ ನೆರಳು ಮುಸುಕಿದೆ. ಇನ್ನು ಮುಂದಿನ ಹೋರಾಟದ ಪೂರ್ವಸಿದ್ಧತೆಯಾಗಿ ನೀವೀಗಲೇ ನಿಮ್ಮ ನಿತ್ಯ ರೀತಿ ನೀತಿಗಳನ್ನೂ ಅಭ್ಯಾಸ ಅಭಿರುಚಿಗಳನ್ನೂ ಬಹುಮಟ್ಟಿಗೆ ಮಾರ್ಪಡಿಸಿಕೊಳ್ಳಬೇಕಾದೀತು. ದಯೆಯಿಟ್ಟು ಅಪಾರ್ಥ ಕಲ್ಪಿಸಿಕೊಳ್ಳಬಾರದು. ಯುದ್ಧದಿಂದುಂಟಾದ ದುರಂತ ವಸ್ತುಸ್ಥಿತಿಯ ಅನುಭವ ನನಗಿದ್ದಷ್ಟು ನಿಮ್ಮಲ್ಲಿನೇಕರಿಗೆ ಇರಲಾರದು. ಆದ್ದರಿಂದ ಹೇಳಿದೆ—ತಯಾರಾಗಲು ನಾಳೆ ಅವಕಾಶವಿರದು. ಇಂದೇ ಉತ್ತಮ. ” ಎಂದರು.

ಈ ಭಾಷಣ ಆಗುತ್ತಿರುವಾಗಲೇ ಅವರ ಬಳಿ ಕುಳಿತಿದ್ದ ಮಾಲತಿಯ ಕಿವಿಯಲ್ಲಿ ಜಿಲ್ಲಾಕಲೆಕ್ಟರ ಹೆಂಡತಿ ಬಂದು ಕೊನೆಯ ವಂದನೋಕ್ತಿಗಳನ್ನು ನೀವೇ ಹೇಳಬೇಕು, ಮತ್ಯಾರಿಂದಲೂ ಸಾಧ್ಯವಾಗದು ಅಂತ ಹೇಳಿಬಿಟ್ಟು ಹೋಗಿದ್ದರು. ಇದೇನಪ್ಪ, ತಿರುಗಿಬಂತು ಗ್ರಹಚಾರ ! ಮೊದಲೊಂದು

ಬಾರಿ ಭಾಷಣಮಾಡಿ ಬಹಿಷ್ಕಾರ ಹಾಕಿಸಿಕೊಂಡೆ. ಈಗ ಹೋದ ಜಾತಿ ಬಂದ ಹಾಗಾಗಿದೆಯಷ್ಟೆ. ಬಾಯಿತೆರೆದರೆ ಏನೇನು ಹೊರಬೀಳುತ್ತದೋ ಏನೋ, ಎಂದು ಆಕೆ ಚಿಂತಿಸುತ್ತಿರುವಾಗಲೇ ಕೈ ಚಪ್ಪಾಳೆಯ ಸುರಿಮಳೆಗೆ ಲೇಡಿಕಮಿಶನರು ಭಾಷಣವನ್ನು ಪೂರೈಸಿ ಕುಳಿತರು. ನಿಃಶಬ್ದವಾಯಿತು. ಒಂದು ಕ್ಷಣಾರ್ಧ ಯಾರೂ ಉಸಿರೆತ್ತಲಿಲ್ಲ. ಎಲ್ಲರೂ ಮಾಲತಿಯನ್ನೇ ದಿಟ್ಟಿಸುತ್ತಿದ್ದರು. ಮಾಲತಿ ನಿರ್ವಾಹವಿಲ್ಲದೆ ಎದ್ದು ನಿಂತಳು; ದೇವರೇ ಗತಿ ಅಂತಂದುಕೊಂಡು—

"ನಾನು ಇಂದಿನ ಮಾನ್ಯಅತಿಥಿಯವರನ್ನ ಪ್ರಥಮತಃ ಮದ್ರಾಸು ರೈಲ್ವೇ ಸ್ಟೇಷನಿನಲ್ಲಿ ಮಾತನಾಡಿಸಲು ಸಮೀಪಿಸಿದಾಗ ತುಂಬಾ ಸಂತೋಷ ಪಟ್ಟೆ. ಎಷ್ಟಾದರೂ ಪ್ರಭುತ್ವ ಪ್ರತಿಭಾನ್ವಿತರು. ದೊಡ್ಡ ಪದವೀಧರರ ಪತ್ನಿ. ನಾನು ಪ್ರಜಾಪಂಗಡದವಳು. ಅಸಂಖ್ಯಾತ ವಕೀಲರಲ್ಲೊಬ್ಬರ ಮನೆಯಾಕೆ ಎಲ್ಲಾದರೂ ಒಂದೆರಡು ಮೊನಚಾದ ಮಾತುಗಳಿಂದಲೇ ನನ್ನ ಮೂಗು ಚುಚ್ಚಿ ಕಳುಹಿಸಿಬಿಡುತ್ತಾರೋ--ಏನೋಂತ ಗಾಬರಿಯಾಗಿದ್ದೆ. ಆದರೂ ಕೂಡ ತಿಂದುಬಿಡಲಾರರಷ್ಟೆ ಅಂತ ಧೈರ್ಯ ತಂದುಕೊಂಡೆ. ಅಲ್ಲದೆ ಅವರ ಪತಿಯವರು ನಮ್ಮವರ ಹತ್ರ ಸರಳವಾಗಿ ಸಂಭಾಷಿಸುತ್ತಿರುವುದನ್ನು ನೋಡಿ ಅಂಜಿಕೆ ಮತ್ತಷ್ಟು ದೂರವಾಯಿತು. ಈಗ ಅವರ ವಿನಯಶೀಲತೆ, ಸೌಹಾರ್ದ ಸೌಜನ್ಯ ನಿಮಗೆಲ್ಲರಿಗೂ ತಿಳಿದ ವಿಷಯವಾಗಿದೆ. ಅವರು ನಮ್ಮೆಲ್ಲರ ಪ್ರೇಮಾದರಕ್ಕೆ ಪಾತ್ರರಾಗಿದ್ದಾರೆ. ಆದರೆ ನಾನವರ ಗುಣಕಥನವನ್ನಷ್ಟೆ ಮಾಡಿಬಿಟ್ಟರೆ ಅವರ ಯೋಗ್ಯತೆಗೆ ತಕ್ಕ ಮನ್ನಣೆಯನ್ನು ಮಾಡಿದಂತಾಗದು ಅವರು ಅಂತಃಕರಣದಿಂದ ವಿಚಾರಪರತೆಯಿಂದ ಈಗ ನಿಮ್ಮ ಮುಂದಿಟ್ಟ ಸಲಹೆಗಳನ್ನು ಮನನಮಾಡಿ ನಿತ್ಯಾಚರಣೆಗೆ ತರಬೇಕು. ಆಹಾರ ಪರಿಸ್ಥಿತಿ ತೀರಕೆಟ್ಟಿದೆ.ದುರ್ಭಿಕ್ಷೆ ದಂಡೆತ್ತಿ ನೆರೆಮನೆಯತನಕ ಬಂದುಬಿಟ್ಟಿದೆ ಈ ಗಂಡಾಂತರದಿಂದ ಪಾರಾಗುವ ಬಗೆ ಹೇಗೆಂಬುದನ್ನು ಇವರ ಪತಿಯವರು ನಮ್ಮೂರಿನ ಮುಂದಾಳುಗಳೊಡನೆ ನಾಲ್ಕು ದಿನಗಳಿಂದಲೂ ಎಡೆಬಿಡದೆ ಆತುರದಿಂದ ಯೋಚಿಸುತ್ತಿರುವಾಗ ನಾವು ಈ ರೀತಿ ದುಂದು ವೆಚ್ಚ ಮಾಡಿ ತಿಂಡಿಬಾಕತನದ ಸನ್ಮಾನ ಮಾಡಿದ್ದು ಅಸಮಂಜಸವೆಂತ ಅವರು ಬೇಸತ್ತರೆ ಆಶ್ಚರ್ಯವಲ್ಲ. ನಮಗಿರುವ ಅಲ್ಪಸ್ವಲ್ಪ ಬುದ್ಧಿಯನ್ನು ನಮ್ಮ

ದೊಡ್ಡಮನಸ್ಸು ನುಂಗಿ ಬಿಟ್ಟಂತಿದೆ. ನಾವು ಇಂದು ತಿಂದುಳಿದ ತಿಂಡಿಗಳಿಂದಲೇ ನೂರಾರು ಹಸಿವುಗಳನ್ನಡಗಿಸಬಹುದು. ಆದ್ದರಿಂದಲೇ ನಾವು ನಮ್ಮ ಕೈಬಾಯಿ ಕಟ್ಟುವುದಕ್ಕೆ ಈಗಿನಿಂದಲೇ ಅಭ್ಯಾಸ ಮಾಡಬೇಕೆಂದು ಇವರು ಸೂಚಿಸಿದರು. ಇವರ ಹಿತವಾಕ್ಯಗಳನ್ನು ನಾವು ಶಿರಸಾವಹಿಸಿ ದಿನಾಚರಣೆಯಲ್ಲಿ ತಂದುಕೊಳ್ಳುತ್ತೇವೆಂತ ನಿಮ್ಮೆಲ್ಲರ ಪರವಾಗಿ ಅವರಿಗೆ ಭರವಸೆ ಹೇಳಲೆ ? (ಕೈ ಚಪ್ಪಾಳೆ) ಇನ್ನೊಂದೆ ಎಂದಾದರೂ ಅವರು ಇಲ್ಲಿಗೆ ಚಿತ್ತೈಸಿ ಅವರನ್ನು ಸತ್ಕರಿಸುವ ಸುಯೋಗ ನಮಗೆ ಲಭಿಸಿದರೆ ಬರೇ ಜಿಲ್ಲದ ಪಾನಕ ಮತ್ತು ತಾಂಬೂಲವನ್ನಷ್ಟೇ ಕೊಟ್ಟು ಉಪಚರಿಸೋಣ. ಆಭಾಸವೆಂದಿಗೂ ಆಗಲಾರದು. ಅಂಥ ಸುದಿನ ಆದಷ್ಟು ಬೇಗ ಬರಲೆಂದು ನಮ್ಮ ಹೃತ್ಪೂರ್ವಕ ಹಾರೈಕೆ. " ಎಂದು ಹೇಳಿಬಿಟ್ಟು ಕುಳಿತಳು. ಸಭಾಮುಕ್ತಾಯದ ಕರತಾಡನವಾಯಿತು. ಲೇಡಿ ಕಮಿಶನರೂ ನಗುತ್ತ ಕೈ ಚಪ್ಪಾಳೆ ಹೊಡೆದರು. ಎಲ್ಲರೂ ಎದ್ದು ನಿಂತರು. ಗುಜುಗುಜು ಮಾತೆದ್ದಿತು. ಆಗಂತುಕರಲ್ಲಿ ಕೆಲವರು ಪ್ರಮುಖ ಮಹನೀಯರು ಲೇಡಿ ಕಮಿಶನರಿದ್ದೆಡೆ ಬಂದು ಅವರಿಗೂ ಅವರ ಜತೆಯಲ್ಲಿದ್ದ ಮಾಲತಿಗೂ ವಂದಿಸಿ ತಮ್ಮ ತಮ್ಮ ಮನೆಗೆ ತೆರಳಿದರು. ಲೇಡೀ ಕಮೀಶನರು ಸುಶೀಲಮ್ಮ ಮತ್ತು ಡೇಸರ ಕೈ ಕುಲುಕಿಸಿ ಮಾಲತಿ ರಾಘವೇಂದ್ರರಾಯರೊಡನೆ ಮಾತನಾಡುತ್ತ ತಮ್ಮ ಕಾರಿದ್ದೆಡೆ ಹೋಗಿ, ರಾಘವೇಂದ್ರರಾಯರನ್ನು ಅಭಿವಂದಿಸಿ ಮಾಲತಿಯ ಎರಡೂ ಕೈಗಳನ್ನು ಹಿಡಿದೊತ್ತಿ ಮುಖ ನೋಡಿ ನಕ್ಕು ಕಾರುಹತ್ತಿ ಹೊರಟು ಹೋದರು.

ರಾತ್ರಿ ಎಂಟುವರೆ ಗಂಟೆಗೆ ಸಮೀಪವಾಗಿತ್ತು. ಕಿರುಗಾಳಿ ತಂಪಾಗಿ ಬೀಸುತ್ತಿತ್ತು. ಮನೆಗೆ ನಡದೇ ಹೋಗೋಣವೆಂತ ಮಾಲತಿ ಆಸೆಪಟ್ಟದ್ದರಿಂದ ರಾಘವೇಂದ್ರರಾಯರು ನಿಲ್ಲಿಸಿಕೊಂಡಿದ್ದ ಕಾರನ್ನು ಬಾಡಿಗೆ ಕೊಟ್ಟು ಕಳುಹಿಸಿಬಿಟ್ಟು ಆಕೆ ಜತೆಗೆ ಮುನ್ನಡೆದರು. ಅವರಿಬ್ಬರು ನೋಟಕ್ಕೆ ಆದರ್ಶ ದಂಪತಿಗಳಂತೆ ಆನಂದಕರವಾಗಿದ್ದರು. ಆಕೆಯ ಚೆಲುವಿಗೆ ಅವರ ಗಾಂಭೀರ್ಯ. ಆಕೆಯ ಗೆಲುವಿಗೆ ಅವರಭಿಮಾನ. ಆಕೆಯ ದೇಹಲಾವಣ್ಯಕ್ಕೆ ಅವರ ಅಂಗಸೌಷ್ಠವ. ಆಕೆಯ ಲಘುಗಮನಕ್ಕೆ ಅವರ ಮಂದಗಮನ. ಅವರಿಗೆ ಸ್ವಲ್ಪಮುಂದೆ ಅವರಂತೆಯೇ ನಡೆದು ಹೋಗುತ್ತಿದ್ದ ಜಿಲ್ಲಾ

ಜಡ್ಜರೂ ಅವರ ಹೆಂಡತಿಯೂ ಅವರನ್ನು ನೋಡಿ ನಿಂತರು. ಜಡ್ಜರು ಮಾಲತಿಯ ಭಾಷಣದ ಪ್ರಸ್ತಾಪ ತೆಗೆದು, ನಮ್ಮೆಲ್ಲನೇಕರ ಮನಸ್ಸಿನಲ್ಲಿದ್ದುದನ್ನು ನೀವು ಧೈರ್ಯವಾಗಿ ಹೇಳಿಬಿಟ್ಟು ದೊಡ್ಡುಪಕಾರ ಮಾಡಿದಿರಿ" ಎಂದರು.

"ಎಷ್ಟು ಜನರ ಮನಸ್ಸು ನೋಯಿಸಿದೆನೋ ಏನೋ!" ಎಂದಳು ಮಾಲತಿ.

ವಿಚಾರಶೀಲರೆಲ್ಲರಿಗೂ ತುಂಬ ಸಂತೋಷವಾಗಿದೆಯೆಂಬುದಕ್ಕೆ ಅನುಮಾನವಿಲ್ಲ ಎಂದು ಜಡ್ಜರು ಧೈರ್ಯ ಹೇಳಿದರು.

ಅದನ್ನು ಕೇಳಿ ಟ್ವೀಡು ಕೋಟಿನೊಳಗೆ ರಾಘವೇಂದ್ರರಾಯರ ಎದೆ ಉಬ್ಬಿತು. ತನ್ನ ಹೆಂಡತಿ ಲೇಡಿ ಕಮಿಶನರ ಸ್ನೇಹಕ್ಕೆ ಪಾತ್ರಳಾದ್ದೇ ಒಂದು ಸಾರ್ಥಕ್ಯ. ಮೇಲಾಗಿ ಜಿಲ್ಲಾ ಜಡ್ಜರ ಪ್ರಶಂಸೆಯೂ ಪ್ರಾಪ್ತವಾದ್ದು ಒಂದಪೂರ್ವ ಸುಯೋಗವೆಂತ ಅವರ ಹೃದಯ ಸಂತೋಷಾತಿಶಯದಿಂದ ತುಳುಕುತ್ತಿತ್ತು. ತನ್ನ ವಿಷಯದಲ್ಲಿ ಅವರಿಗೆ ಎಂಥ ಭಾವೋದ್ರೇಕವಾದರೂ ಬಾಯಿಗೆ ಬೀಗ ಹಾಕಿಕೊಳ್ಳುವುದೇ ಅವರ ಸ್ವಭಾವವೆಂತ ಚೆನ್ನಾಗಿ ಅರಿತಿದ್ದ ಮಾಲತಿ ಅವರನ್ನು ಮಾತನಾಡಿಸುವ ಗೋಜಿಗೆ ಹೋಗಲಿಲ್ಲ. ಹೆಚ್ಚಾಗಿ ಒಂದಲ್ಲ ಒಂದು ತರ್ಕವನ್ನೊ ತಮಾಷೆಯನ್ನೋ ಎಬ್ಬಿಸಿ ಬಾಯಿತುಂಬ ಹರಟುವಂಥ ಮಾಲತಿ ಮೂಕಳಾದುದು ಅವರಿಗೂ ಅರ್ಥವಾಗಲಿಲ್ಲ. ಬೇಸರ, ಅಸಮಾಧಾನ, ಕೋಪವೇನಾದರೂ ಇದೆಯೋ ಏನೋ; ಹೆಂಗಸರ ಮನೋವ್ಯಾಪಾರವೇ ಒಂದು ಒಗಟು ಎಂದು ಚಿಂತಿಸುತ್ತ ಆಕೆಯ ಮುಖವನ್ನು ಕದ್ದು ನೋಡಿದರು. ಹಾಗೇನೂ ತೋರಿಬರಲಿಲ್ಲ. ಆಕೆ ಯಾವುದೋ ಸ್ವಾರಸ್ಯದಿಂದ ತನ್ನಷ್ಟಕ್ಕೆ ತಾನೇ ನಗುವಂತಿತ್ತು. ಹೀಗಾಗಿ ಅವರು ಮನಸ್ಸಿನಲ್ಲಿ ಪೋಣಿಸುತ್ತಿದ್ದ ನುಡಿಗಳ ನೂಲು ಕಡಿದು ಆಡಬೇಕೆಂದಿದ್ದ ಮಾತುಗಳು ಚದರಿಹೋದವು. ಆದರೆ ಇಬ್ಬರ ಮೌನದಲ್ಲೂ ಪರಸ್ಪರ ತನ್ಮಯತೆಯ ರಾಗವಿತ್ತು. ಇಬ್ಬರ ನಾಲಗೆಯಲ್ಲೂ ಒಂದು ಹೊಸ ಸಖ್ಯದ ಸವಿಯಿತ್ತು. ಇಬ್ಬರಿಗೂ ಪರಸ್ಪರ ವ್ಯಕ್ತಿತ್ವದ ನವೀನ ಪರಿಚಯದ ಉಲ್ಲಾಸವಾಗಿತ್ತು. ಈ ಸುಮುಹೂರ್ತದಲ್ಲಿ ಸಮಾಜ ಹಾಕಿದ ಬೆಸುಗೆ ಎಷ್ಟು ಕಾಲ ಉಳಿಯುವಂಥದು ಎಂಬದು ಮಾತ್ರ ಮಾಲತಿಗಾಗಲಿ ರಾಘವೇಂದ್ರರಾಯರಿಗಾಗಲಿ ಆಗ ತಿಳಿಯಲಿಲ್ಲ.

ಮನೆಗೆ ಬಂದೊಡನೆ ಆಹಾರ ಕಮಿಶನರ ಆಫೀಸಿನಿಂದ ಬಂದ ಪತ್ರ ವೊಂದು ಮೇಜಿನ ಮೇಲಿದೆಯೆಂದು ಜವಾನ ಹೇಳಿದ್ದರಿಂದ ರಾಘವೇಂದ್ರ ರಾಯರು ನೇರ ತಮ್ಮ ಆಫೀಸಿಗೆ ಹೋದರು. ಮಾಲತಿ ಶಾರದಮ್ಮನನ್ನು ಹುಡುಕಿ ಒಳಗೆ ಹೋದಳು. ಆಕೆ ತನ್ನ ಕೋಣೆಯಲ್ಲಿ ಸೀರೆ ಬದಲಿಸುತ್ತಿರು ವಾಗ ರಾಘವೇಂದ್ರರಾಯರು ಬಾಗಲನ್ನು ಧಡಕ್ಕನೆ ದೂಡಿ ಒಳನುಗ್ಗಿ, "ಈ ಕಾಗದ ನೋಡೇ; ನೀನು ಹೇಳಿದಂತೆ ಆಗಿಬಿಟ್ಟಿತು. ನನ್ನ ಜವಾಬು ದಾರಿ ಇಲ್ಲಿಗೆ ಮುಗಿಯಿತು" ಅನ್ನುತ್ತ ಕೈಲಿದ್ದ ಕಾಗದವನ್ನು ಆಕೆಯ ಕಣ್ಮುಂದೆ ಪರಪರ ಅಲುಗಾಡಿಸುತ್ತ ಆಕೆ ಸುತ್ತಿಕೊಳ್ಳುತ್ತಿದ್ದ ಸೀರೆಯ ಅಂಚಿನ ಮೇಲೆ ನಿಂತರು.

"ಸೀರೆ ಉಟ್ಟುಬಿಟ್ಟು ಆ ಮೇಲೆ ಓದಿದರೆ ಆಗದೆ ?" ಅನ್ನುತ್ತ ಮಾಲತಿ ಸೀರೆಯನ್ನು ಅವರ ಬೂಟ್ಸಿನ ಬುಡದಿಂದ ಮೆತ್ತಗೆ ಸೆಳೆದಳು.

"ಓ, ನೋಡಲೇ ಇಲ್ಲ" ಎಂದು ಪಶ್ಚಾತ್ತಾಪಪಡುತ್ತ ಅವರು ಒಂದು ಹೆಜ್ಜೆ ಹಿಂದೆ ಸರಿದರು.

"ಡ್ರೆಸ್ಸಿಂಗ ಮೇಜಿನ ಮೇಲಿಟ್ಟು ಬಿಡಿ, ಕಾಗದವನ್ನ. ನೀವೂ ಡ್ರೆಸ್ ಬದ ಲಾಯಿಸಿ ಬನ್ನಿ" ಅಂದಮೇಲೆ ಕಾಗದವನ್ನು ಮೇಜಿನಮೇಲಿರಿಸಿ ಹೋದರು.

ಜಿಲ್ಲೆಯ ಅಕ್ಕಿಯ ಮೇಲಿನ ಸರ್ವಾಧಿಕಾರ ಕೇಂದ್ರ ಸಹಕಾರಿ ಸಂಘ ಕ್ಕೇನೇ ಒಪ್ಪಿತವಾಗಿದೆ ಎಂತ ಆ ಕಾಗದದ ಸಾರಾಂಶವನ್ನು ತಿಳಕೊಂಡು ಮಾಲತಿ ಅಡುಗೆ ಮನೆಗೆ ಹೋಗಿ ಊಟಕ್ಕೆ ಎಲೆ ಹಾಕುತ್ತಿದ್ದ ಶಾರದಮ್ಮಗೆ ಮಣೆಗಳನ್ನಿಡುವುದಕ್ಕೂ ಲೋಟದಲ್ಲಿ ನೀರಿಡುವುದಕ್ಕೂ ನೆರವಾಗಿ ಗಂಡ ನನ್ನು ಕರೆಯುವದಕ್ಕೆಂತ ಹಾಲಿಗೆ ಬಂದಾಗ ಅವರು ಆ ಕಾಗದವನ್ನೇ ಹತ್ತನೇ ಬಾರಿ ಓದುತ್ತ ನಿಂತಿದ್ದರು.

"ಇನ್ನೊಂದು ಕಾಗದ ಬಂತೇನು ?" ಎಂದು ಕೇಳಿದಳು.

"ಇಲ್ಲ ಆದರೆ ಈ ಕಾಗದದ ಗೂಢಾರ್ಥ ತಿಳಿಯಿತೆ ನಿನಗೆ ?"

"ನಮ್ಮ ತುತ್ತು ವರ್ತಕರ ಕೈಯಿಂದ ತಪ್ಪಿತು ಅಂತಷ್ಟೆ ತಾನೆ ?"

"ಅಲ್ಲ, ಅಷ್ಟೇ ಅಲ್ಲ" ಅನ್ನುತ್ತ 'ಈ ಅನಾಹುತಕ್ಕೆ ನೀನೇ ಕಾರಣ' ಎಂಬಂತೆ ಆಕೆಯನ್ನು ದುರುಗಟ್ಟಿ ನೋಡಿದರು.

“ಆ ಮೇಲೆ ನೋಡೋಣ. ಈಗ ಊಟಕ್ಕಾಯಿತು. ಅಮ್ಮ ಕಾದಿದ್ದಾರೆ, ಬನ್ನಿ—” ಅಂದಮೇಲೆ ಇಬ್ಬರೂ ಊಟಕ್ಕೆ ಹೋದರು. ತನಗೇನೂ ಹಸಿವಿಲ್ಲ; ಮಹಿಳಾ ಸಭೆಯಲ್ಲಿ ತಿಂದಿದ್ದು ಕಲ್ಲಾಗಿ ಕೂತಿದೆಯೆಂದು ಗೊಣಗುತ್ತ ರಾಘವೇಂದ್ರರಾಯರು ಊಟದ ಶಾಸ್ತ್ರಮಾಡಿ ಎದ್ದುಬಿಟ್ಟರು. ಆದರೆ ಮಾಲತಿಗೆ ಹಾಗಿರಲಿಲ್ಲ. ಕಮಿಶನರ ಪತ್ನಿಯ ಪಕ್ಕದಲ್ಲೇ ಕುಳಿತುದರಿಂದ ಆದ ಸಂಕೋಚದಿಂದಲೂ ತಿಂಡಿತಟ್ಟೆಗಳನ್ನು ನೋಡಿ ಉಂಟಾದ ವಾಕರಿಕೆಯಿಂದಲೂ ಆಕೆ ಹಸಿ ಹೊಟ್ಟೆಯಲ್ಲೇ ಇದ್ದಳು. ನಿಧಾನವಾಗಿ ಪರಿಷ್ಕಾರವಾಗಿ ಉಣ್ಣುತ್ತ ಅತ್ತೆಗೆ ಕ್ಲಬ್ಬಿನಲ್ಲಿ ನಡೆದ ಸಂಗತಿಗಳನ್ನೆಲ್ಲಾ ಹೇಳಿ ತಿಳಿಸಿದಳು. ಅವರಿಗೆ ನಗು ಬಂತು. ತನ್ನ ಪ್ರೀತಿಯ ಸೊಸೆ ಪುರಪ್ರಮುಖೆಯರ ಸಮ್ಮುಖದಲ್ಲಿ ಗಣ್ಯರಿಂದ ಪುರಸ್ಕಾರ ಪಡೆದಳೆಂತ ಸಂತೋಷ ಒಂದೆಡೆ. ಹಿಂದೊಂದು ಸಲ ದುಡುಕಿದಂತೆ ಮತ್ತೆ ತಿರುಗಿ ಇದ್ದಕ್ಕಿದ್ದ ಹಾಗೆ ಭೂಳಿಬ್ಬಿಸಿ ಬಂದಳೋ ಏನೋ ಎಂಬ ಚಿಂತೆ ಇನ್ನೊಂದೆಡೆ. ಆಕೆ ಮಹಿಳಾ ಸಮಾಜದವರ ಅವಿಶ್ವಾಸಕ್ಕೆ ಗುರಿಯಾಗಿದ್ದಾಗ ಶಾರದಮ್ಮನ ಮನಸ್ಸು ಬಹಳವಾಗಿ ನೊಂದಿತ್ತು. ಹಿತವನ್ನು ನುಡಿದು ಮಿತದಿಂದ ನಡೆದು ಸುಖ ಕೊಡಲು ಕೈಲಾಗದಿದ್ದರೆ ಹೋಗಲಿ, ಕಠಿಣ ಮಾತುಗಳಿಂದ ದ್ವೇಷ ಕಟ್ಟಿಕೊಂಡು ಫಲವೇನು. ಕುಳಿತು ಜಗಳವಾಡುವದಕ್ಕಿಂತ ಎದ್ದು ಬರುವುದೇ ಲೇಸು—ಎಂದವರ ಮತ.

“ಈಗ ಒಟ್ನಲ್ಲಿ ಏನಪ್ಪ? ನೀನು ಮೊದಲಿನಂತೆ ಕ್ಲಬ್ಬಿಗೆ ಹೋಗ್ತಾ ಬರ್‍ತಾ ಇರ್‍ತೀಯಾ, ಅಥವಾ ಹೀಗೆ ಅಪರೂಪಕ್ಕೆ ಮಾತ್ರ—”

“ಹಾಗೇನೂ ಇಲ್ಲಮ್ಮ. ನಿತ್ಯವೂ ಹೋದರೆ ಬೇಡಾನ್ನುವವರು ಯಾರು? ಆದರೆ ನನಗೆ ಮಾತ್ರ ಹೋಗೋಣಾಂತ ತೋರೋದಿಲ್ಲ.”

“ಬೇಜಾರವಾದಾಗ ಹೋಗಿ ಬರೋದಕ್ಕೆ ಏನಾದರೊಂದು ಸ್ಥಳ ಒಂದು ಸೌಕರ್ಯ ಬೇಕಲ್ಲ!'' ಅಂದರು. ಶಾರದಮ್ಮನ ಕಣ್ಣೆದುರು ಸೊಸೆಯ ಬಂಜೆತನದ ದುರ್ದಿನಗಳ ವಿಸ್ತಾರವೇ ಕಾಣುತ್ತಿತ್ತು. ಮಾಲತಿಗಾದರೂ ಅದೇ ಬರುವ ಭಾನುವಾರದಾಚೆ ಗೆಲವೇ ಕಾಣುತ್ತಿರಲಿಲ್ಲ. ಭಾನುವಾರ ಪಂಬಿಯ ಹುಟ್ಟಿದ ಹಬ್ಬ. ಹೋಗಲೇಬೇಕು. ಆಕೆಯ ಮನೋರಥ ಮುಂದಿರುವ ನೂರು ದಿನಗಳಷ್ಟೇ ದೂರ ಸಾಗಿ ನಿಂತುಬಿಡುವಂತಿದ್ದದ್ದರಿಂದ ಸಂಜೆಯ ಬೇಸರ ಪರಿಹಾರ ಆಕೆಗೆ ಒಂದು ಸಮಸ್ಯೆಯಾಗಿ ತೋರಲಿಲ್ಲ.

" ಬೇಕು, ನಿಜ. ಎಲ್ಲಿಗಾದರೂ ಬೇಕಾದವರ ಮನೆಗೆ ಹೋಗಿ ಬಂದ ರಾಯಿತು. ಸುಮಿತ್ರೆಯಿದ್ದಾಳೆ. ಎಷ್ಟು ಹೊತ್ತಿಗೂ ಬಾ ಅಂದ್ರೆ ಬರ್ತಾಳೆ. ಈ ಸುಶೀಲಮ್ಮನ ಕಂಪನಿಯವರ ನಾಟಕ ನೀವು ನೋಡಬೇಕಮ್ಮ ಎಂದಾದ ರೊಂದುದಿನ."

" ನಿನ್ನ ವಿಷಯವೂ ಅವರು ಅದೇ ಅಭಿಪ್ರಾಯ ಪಡೋದಿಲ್ಲಾಂತ ಏನು ಗೊತ್ತು ?"

" ಗೊತ್ತಿಲ್ಲ. ಆದರೆ ಅವರ ಸರ್ಟಿಫಿಕೇಟಿನಿಂದ ನನಗ್ಯಾವ ಕೆಲಸ ಆಗ ಬೇಕಾಗಿದೆ ?" ಅನ್ನುವಷ್ಟರಲ್ಲಿ ಊಟ ಮುಗಿಯಿತು. ಊಟವಾದ ಮೇಲೆ ಕ್ರಮದಂತೆ ಅತ್ತೆ ಸೊಸೆಯರು ಹಾಲಿನಲ್ಲಿ ಅಡಿಕೆಯಲೆಯ ಹರಿವಾಣವನ್ನು ಇಟ್ಟುಕೊಂಡು ಕುಳಿತಲ್ಲಿಗೆ ರಾಘವೇಂದ್ರರಾಯರು ತನ್ನ ಆಫೀಸಿನಿಂದ ಬಂದರು. ಮಾಲತಿ ಕಟ್ಟಿಕೊಟ್ಟ ಬೀಡ ಬಾಯಿಗೆ ಹಾಕಿಕೊಂಡು ಕುಳಿತರು.

" ಅಮ್ಮ, ಗೋಪಿನಾಥನ್ನ ನಾಳೆ ಬರಹೇಳಬೇಕೂಂತಿದ್ದೇನೆ" ಅಂದರು ಥಕ್ಕನೆ. ಮಾಲತಿಗೆ ಕಿವಿ ನೆಟ್ಟಗಾಯಿತು.

" ಹೇಳಪ್ಪ, ಅದಕ್ಕೇನು ? ಎಷ್ಟು ಹೊತ್ತಿಗೆ ?" ಅಂತಷ್ಟೇ ಕೇಳಿದರು. ಆತನನ್ನು ಕರೆಯಿಸಿಕೊಳ್ಳುವಷ್ಟು ವಿಶೇಷವೇನೆಂತ ಕೇಳಲಿಲ್ಲ. ಅವರೇ ಹೇಳ್ತಾರೆಂತ ಗೊತ್ತು. ಮಾಲತಿ ಚಡಪಡಿಸುತ್ತಿದ್ದಳು ಒಳಗೊಳಗೆ.

" ಯಾತಕ್ಕೇಂತ ಗೊತ್ತೆ ? ನಿನಗಾದರೂ ಗೊತ್ತಾಯಿತೇನೇ ?" ಎಂದರು ಹೆಂಡತಿಗೆ.

" ಮೊನ್ನೆ ಯಾವುದೋ ಕೆಸರಕಂಭದ ಕೇಸೂಂತಿದ್ರಲ್ಲ ? ಅದೇ ಇರ ಬೇಕು." ಅಂತಂದಳು ಕುಹಕಿ.

" ವೀರಕಂಭ ವೀರಕಂಭ. ಕೆಸರಕಂಭವಲ್ಲ. ಆದರೆ ಇದು ಕೇಸುಗಳ ವಿಚಾರವೇ ಅಲ್ಲ. ನೀನು ತಲೆ ಉಪಯೋಗಿಸೋದಿಲ್ಲ; ಕೇಳು. ಹೀಗಿದೆ ಸನ್ನಿವೇಶ. ನಾವಿದುವರೆಗೆ ಆಹಾರ ಸಮಸ್ಯೆಯ ವಿಷಯದಲ್ಲಿ ಸಾಹುಕಾರರ ಸಲುವಾಗಿ ಪಟ್ಟಶ್ರಮ, ಮಾಡಿದ ಪ್ರಯತ್ನ ಎಲ್ಲವೂ ನಿಷ್ಫಲವಾದುವು. ಅಮ್ಮಗೆ ಗೊತ್ತಿರಲಿಕ್ಕೆ ಕಾರಣವಿಲ್ಲ. ಇನ್ಮುಂದೆ ಈ ರೇಶನ್ ಗೀಶನ್ ಎಲ್ಲಾ ಸಹಕಾರ ಸಂಘದವರು ಮಾಡಬೇಕಲ್ಲದೆ ಸಾಹುಕಾರರಲ್ಲಾಂತ ಹುಕುಂ ಬಂದಿದೆ ಯಮ್ಮಾ. ಮಾಲತಿಗೆ ತೋರಿಸಿದೆ ಬಂದ ಕಾಗದನ್ನ. ಓದಿದಳೋ ಇಲ್ಲವೋ

ಇರಲಿ; ನನ್ನ ಪಕ್ಷ ಸೋತರೂ ನನಗೆ ಬೇಸರವಿಲ್ಲ. ನನ್ನ ಕರ್ತವ್ಯ ನಾನು ಮಾಡಿದೆ. ಆದರೆ ಸತ್ಯ ಪ್ರತಿಪಕ್ಷದವರಲ್ಲಿತ್ತು, ಅದು ನಿನ್ನೆ ತಾನೆ ವ್ಯಕ್ತ ವಾಯಿತು, ನನಗೆ" ಎಂದು ಗಂಭೀರವಾಗಿ ಮುಖವನ್ನು ತಾಯಿ ಕಡೆಗೂ ಹೆಂಡತಿ ಕಡೆಗೂ ತಿರುಗಿಸುತ್ತ ನಿರೂಪಿಸಿದರು.

"ನಾನು ಮೊದಲೇ ಹೇಳಲಿಲ್ಲವೇ ?" ಎಂಬ ಆಣಕದ ಮಾತು ನಾಲಗೆ ತುದಿಯಲ್ಲಿದ್ದರೂ ಮಾಲತಿಗೆ ಆಗ ಅವರನ್ನು ಹಿಂಸಿಸುವ ಮನಸ್ಸಿರಲಿಲ್ಲ.

"ನಿನ್ನೆ ನಡದ್ದೇನು ?" ಎಂದಷ್ಟೇ ಕೇಳಿದಳು.

"ಅದೇ ಹೇಳ್ತಿದ್ದೇನೆ. ಸುಂಣ ಕೂಡ ಜಾಸ್ತಿ ಹಚ್ಚಿದ್ದೀಯೇನೇ ?" ಅನ್ನುತ್ತ ನಾಲಗೆ ಕಚ್ಚಿಕೊಂಡರು.

"ಛೆ ! ಇಲ್ಲಪ್ಪ ! ಯಾವಾಗಿನಷ್ಟೆ ಹಚ್ಚಿದ್ದೇನೆ. ಆ ಹಾಳು ಕ್ಲಬ್ಬಿನ ತಿಂಡಿ ಮಾತಾಡ್ತಾಯಿದೆಯೇನೋ."

"ಇರಬಹುದು. ಏನೋ ಹಾಗನಿಸಿತು. ಹೋಗಲಿಬಿಡು. ನಿನ್ನೆ ಬೆಳಿಗ್ಗೆ ಕಮಿಶನರು ನನ್ನ ಜರೂರಾಗಿ ಕರೆಯಿಸಿಕೊಂಡರಲ್ಲ. ಅವರಿಗೆ ಸಿಕ್ಕಿದ ಲೆಕ್ಕ ಪತ್ರ ರುಜವಾತು ಪ್ರಕಾರ, ಇಂಥಿಂಥ–ಹೆಸರುಗಳು ಹೇಳಿ–ಸಾಹುಕಾರನ ವಶ ಇಂತಿಷ್ಟು ಅಕ್ಕಿ ದಾಸ್ತಾನಿರಬೇಕು. ಅದೆಲ್ಲವನ್ನು ಅವರು ತಕ್ಷಣ ಸರಕಾರಕ್ಕೆ ತಾವಾಗಿ ಒಪ್ಪಿಸಬೇಕು. ಅಥವಾ ಆ ವರ್ತಮಾನ ಸುಳ್ಳೆಂತಾದರೆ ಅವರ ಮಂಡಿಗಳನ್ನೆಲ್ಲಾ ಏಕಕಾಲದಲ್ಲಿ ಮತ್ತೊಂದು ತಾಸಿನೊಳಗೆ ಜಪ್ತಿ ಮಾಡಲು ಬಿಡಬೇಕು, ಅಂದರು. ನಾನಾಕ್ಷಣ ವರ್ತಕ ವಿಲಾಸದ ಮುಖ್ಯಸ್ಥರಿದ್ದಲ್ಲಿಗೆ ಹೋಗಿ ಆ ಪ್ರಸ್ತಾಪವನ್ನು ಅವರ ಮುಂದಿಟ್ಟೆ. ಸರ್ವಥಾ ಸಾಧ್ಯವಿಲ್ಲಾಂದುಬಿಟ್ಟರು, ತೆಗೆದ ಮಾತಿಗೆ. ಒಂದು ಕಾಳು ಅಕ್ಕಿಯೂ ಇಲ್ಲ. ಜಪ್ತಿಗೂ ಸಮ್ಮತವಿಲ್ಲಾಂದು ಬಿಟ್ಟರು. ಆಗ ಗೊತ್ತಾಯಿತು ನನಗೆ. ಅವರ ಇರಾದೆ ಚೆನ್ನಾಗಿಲ್ಲಾಂತ. ಇಲ್ಲಿಗೆ ಕಡಿಯಿತು ನಿಮಗೂ ನನಗೂ ಇರೋ ಋಣಾನುಸಂಬಂಧ; ನಾನೀವರೆಗೆ ನಿಮ್ಮ ಕೈಯಾಳಾಗಿ ಕೆಲಸ ಮಾಡಿದ್ದೇ ತಪ್ಪು, ಅಂತ ಹೇಳಿಬಿಟ್ಟು ಕಮಿಶನರಲ್ಲಿಗೆ ಹೋದೆ. ಅವರು ಅವರೆಗೆ ನನ್ನಲ್ಲಿ ವಿಶ್ವಾಸವಿಟ್ಟದ್ದಕ್ಕಾಗಿ ವಂದಿಸಿದೆ. "ನೀವು ವರ್ತಕರ ಪರವಾಗಿ ವಕಾಲತು ವಹಿಸಿದರೂ ಅವರ ಕಳ್ಳಸಂತೆಯ ವಹಿವಾಟಿನಲ್ಲಿ ನಿಮಗೆ ಕೈಯಿಲ್ಲವೆಂತ ಗೋಪಿನಾಥರಾಯರೇ ನನಗೆ ಭರವಸೆ ಹೇಳಿದ್ದರು. ಈ ಲೆಕ್ಕ

ಪತ್ರಗಳ ರುಜುವಾತನ್ನೆಲ್ಲ ಸಂಗ್ರಹಿಸಿ ಪರಿಶೋಧಿಸಿ ಕೊಟ್ಟದ್ದೂ ಅವರೇ" ಅಂದರು ಆ ಪ್ರಕಾರವೇ. ನೋಡು. ಈಗ ಹುಕುಂ ಮಾಡಿದ್ದಾರೆ. ಆದ್ರಿಂದ ಈಗ ಗೋಪಿನಾಥನನ್ನ ಬರಮಾಡಿ ತಪ್ಪು ನನ್ನದೇಂತ ಒಪ್ಪಿಕೋಬೇಡವೇ? ಏನಮ್ಮ? " ಎಂದು ಕೇಳಿದರು.

"ನೀನೇನಾದರೂ ತಿಳತಿಳದು ತಪ್ಪುಮಾಡಿದ್ದಲ್ಲ. ನೀನೇ ವಂಚಿತನಾಗಿದ್ದಲ್ಲದೆ ನಿನ್ನಿಂದ ಇತರರು ವಂಚಿತರಾಗಲಿಲ್ಲ. ಅದೇನು ಮಹ? ಎಷ್ಟು ಎಚ್ಚರದಿಂದಿದ್ದರೂ ಒಂದಲ್ಲ ಒಂದು ಸಮಯ ಮೋಸ ಹೋಗದವರಿಲ್ಲ. ಅಂಥಾದ್ದನ್ನ ಎಲ್ಲರ ಹತ್ರ ಒಪ್ಪಿಕೋ ಬಾರದು. ಅಗತ್ಯವಿಲ್ಲ. ಆದರೆ ಗೋಪಿನಾಥನ ಹತ್ರ ಪರವಾಯಿಲ್ಲ. ಆತ ನಿರಹಂಕಾರಿ. ಅಲ್ಲದೆ ನೀವಿಬ್ರು ಎದುರಾಳಿಗಳಾಗಿರೋದು ನನಗೆಷ್ಟಕ್ಕೂ ಹಿತವಾಗಿರಲಿಲ್ಲ. ಆತ ಬರಲಿ, ಕರೆಕಳುಹಿಸು." ಅಂದರು ಶಾರದಮ್ಮ, ಆದರ ಪೂರ್ವಕವಾಗಿ.

"ಏನೇ, ಮಾಲತಿ?" ಅನ್ನುತ್ತ ಹೆಂಡತಿಯ ಅಭಿಪ್ರಾಯವನ್ನಪೇಕ್ಷಿಸಿದರು. ಮಾಲತಿಗೂ ಶಾರದಮ್ಮಗೂ ಇಬ್ಬರಿಗೂ ಆಶ್ಚರ್ಯವಾಯಿತು. ರಾಘವೇಂದ್ರರಾಯರು ಮನೆಹೊರಗಿನ ವ್ಯವಹಾರವನ್ನು ಮನೆಯೊಳಗೆ ಚರ್ಚಿಸುವುದೇ ಅಪೂರ್ವ. ಅಂಥ ನಿರ್ವಾಹವಿಲ್ಲದ ಸಂಘಟನೆ ಬಂದೊದಗಿದರೂ ಹೆಂಗಸರ ಅಭಿಮತವನ್ನಾಗಲಿ ಸಮ್ಮತಿಯನ್ನಾಗಲಿ ಹಾರೈಸುವುದು ಅವರ ಸ್ವಭಾವಕ್ಕೆ ವಿರುದ್ಧ. ಹೀಗಿರಲು ಅವರು ಇಂದು ಇಷ್ಟು ಮೆತ್ತಗಾಗಿಬಿಟ್ಟದ್ದನ್ನು ನೋಡಿ ಇಬ್ಬರಿಗೂ ಆಶ್ಚರ್ಯ. ಮಾಲತಿಗೆ ಮನಸ್ಸು ಕರಗಿ ಅವರು ಕೇಳಿದ್ದಕ್ಕೆಲ್ಲಾ ಆಗಬಹುದು ಅನ್ನಬೇಕೆನಿಸಿತು. ಆದರೂ ಪ್ರಾಯಶ್ಚಿತ್ತವನ್ನೊಪ್ಪಿಸುವುದಕ್ಕೆ ಇವರೇ ಗೋಪಿನಾಥರಾಯರಿದ್ದಲ್ಲಿ ಹೋಗಬೇಕಲ್ಲದೆ ಅವರನ್ನು ಕರೆಯಿಸುವದು ಅನುಚಿತವೆಂತ ಭಾವಿಸಿ ಹಾಗೇ ಸೂಚಿಸಿದಳು. ಗೋಪಿನಾಥ ಬಂದರೆ ಭಾನುವಾರಕ್ಕೆ ಮೊದಲೇ ಒಂದು ಸಲ ಆತನನ್ನು ನೋಡಬಹುದು ಮಾತನಾಡಿಸಬಹುದೆಂಬ ಒತ್ತಡ ಬಹಳವಾಗಿದ್ದರೂ ಅದನ್ನು ನುಂಗಿಕೊಂಡಳು. ಆದರೆ ಶಾರದಮ್ಮ ಅವರ ಅಭಿಮತವನ್ನು ಮಗನಿಗೇನೇ ಕೊಟ್ಟದ್ದರಿಂದ ಗೋಪಿನಾಥ ಮರುದಿನ ಸಂಜೆ ನಾಲ್ಕು ಗಂಟೆಯ ನಂತರ ಬರುವಂತೆ ಕಾಗದ ಕಳುಹಿಸುವುದಾಗಿ ನಿರ್ಣಯವಾಯಿತು.

೨೭

ಮರುದಿನ ಗುರುವಾರ ಬೆಳಿಗ್ಗೆ ಎಂಟು ಗಂಟೆಯ ಸಮಯ ಗೋಪಿನಾಥನಿಗೆ ಬಂದ ಪತ್ರದಲ್ಲಿ 'ಅದೇ ಸಂಜೆ ನಾಲ್ಕು ಗಂಟೆಯನಂತರ ಬಿಡುವಿದ್ದರೆ, ಒಂದು ಬಾರಿ ಬಂದಿದ್ದರೆ ಉಪಕಾರವಿತ್ತು, ಅತ್ಯಗತ್ಯದ ಕೆಲಸವಿದೆ' ಎಂದು ಬರೆದಿದ್ದರು, ರಾಘವೇಂದ್ರರಾಯರು. ಈ ಚುಟುಕಾದ ಕರೆಯ ರಹಸ್ಯವೇನೆಂತ ಗೋಪಿನಾಥನಿಗೆ ಗೊತ್ತಾಗಲಿಲ್ಲ. ಅದನ್ನೆದುರಿಟ್ಟುಕೊಂಡು ಎಡ ಕೈಯಿಂದ ಮುಂದಲೆಯ ಗುಂಗುರುಗಳನ್ನು ತೀಡುತ್ತ ಮೇಜಿನ ಬಳಿ ಕುಳಿತನು. ತನ್ನೊಡನೆ ಚರ್ಚಿಸತಕ್ಕಂಥ ಮಹತ್ತಿನ ವಿಚಾರವೇನಿರಬಹುದು ? ಇದುವರೆಗೆ ತಮ್ಮ ವೃತ್ತಿ-ಪ್ರವೃತ್ತಿಗಳು ಒಂದಕ್ಕೊಂದು ವಕ್ರಿಸಿಕೊಂಡೇ ಇದ್ದುವು. ಪರಸ್ಪರ ಹೊಂದಿಕೊಂಡಿದ್ದ ಯಾವ ಅನುಸಂಬಂಧವೂ ಇರಲಿಲ್ಲ. ಅವರು ಹಿಡಿದ ಹಾದಿಯೇ ಬೇರೆ, ತಾನು ಹಿಡಿದ ಹಾದಿಯೇ ಬೇರೆ. ಅದಲ್ಲದೆ ಇತ್ತೀಚೆಗೆ ತಾನು ಅವರ ದಾಂಪತ್ಯ ಚಿತ್ರದಮೇಲೆ ಅಡ್ಡಗೆರೆ ಗೀಚುವುದರಲ್ಲಿದ್ದೇನೆ. ಈ ವಿಷಯದಲ್ಲವರಿಗೆ ಅನುಮಾನವುಂಟಾಗಿರಬಹುದೆ ? ಹಾಗಿದ್ದರೆ ಕಷ್ಟ. ಕಷ್ಟವಾದರೂ ಪರವಾಯಿಲ್ಲ. ಎದುರಿಸಬಹುದು, ಗೆಲ್ಲಬಹುದು. ಅಸಹ್ಯ; ಹೊಲಸು. ಅದರೆದುರಿಗೆ ನಿಲ್ಲಲಾರೆ. ಈಗೀ 'ಸಮನ್ಸು' 'ಜ್ಯಾರಿ' ಮಾಡಿದ್ದು ಯಾವ ಅಪಾದನೆಯ ವಿಚಾರಣೆಗಾಗಿಯೋ. ಏನಿದ್ದರೂ ಇರಲಿ. ಹೋಗಿಬಿಡುತ್ತೇನೆ, ಎಂದು ನಿರ್ಧಾರ ಮಾಡಿದನು. ಮಾಲತಿಯ ವಿಚಾರದಲ್ಲಿ ರಾಘವೇಂದ್ರರಾಯರು ದುಡುಕಿ ನುಡಿದರೆ ಮಾತ್ರ ತನ್ನ ಪ್ರತಿವರ್ತನೆ ತನ್ನ ಅಧೀನದಲ್ಲಿರದು ಎಂತಂದುಕೊಂಡನು.

ಕಚೇರಿಯಲ್ಲಿ ರಾಘವೇಂದ್ರರಾಯರು ಗೋಪಿನಾಥನಿದ್ದಲ್ಲಿ ಬಂದು ಕಾಗದ ಬಂದಿದೆಯೇ ಎಂದು ವಿಚಾರಿಸಿ, ಬರದೆ ಇರಬೇಡ ಅಂದರು. ಅವರ ಮುಖಭಾವದಿಂದ ಯಾವುದೊಂದು ಕೋಪವಾಗಲಿ ಸಂಶಯವಾಗಲಿ ಇದ್ದಂತೆ ತೋರಲಿಲ್ಲ. ಆದರೆ ಆತ ಮಾತನಾಡತಕ್ಕ ವಿಚಾರವೇನೆಂದು ಕೇಳಿದಾಗ "ಇದು ಹೇಳತಕ್ಕ ಸ್ಥಳವೂ ಅಲ್ಲ, ಸಮಯವೂ ಅಲ್ಲ" ಅಂದು ಬಿಟ್ಟರು.

ನಾಲ್ಕು ಗಂಟೆ ದಾಟುತ್ತಲೇ ಗೋಪೀನಾಥನು ಹೊರಟನು. ಸಂಘಟನೆ ಏನೇ ಇರಲಿ ಮೈಬಾಗಿ ಮನಗುಂದಿ ವಿನೀತನಾಗಿರುವ ಪ್ರಸಂಗವಲ್ಲವೆಂತ

ನಿರ್ಧಾರಮಾಡಿ ಸ್ವಪ್ರತಿಷ್ಠೆಗೂ ಸ್ವಾವಲಂಬನಕ್ಕೂ ಸ್ಫೂರ್ತಿದಾಯಕವಾದ ಪಾಶ್ಚಾತ್ಯ ಉಡುಪನ್ನೇ ನಾಜೂಕಾಗಿ ಹಾಕಿಕೊಂಡನು. ರಾಘವೇಂದ್ರರಾಯರು ತನ್ನನ್ನು ಯಾವ ವರೆಗಲ್ಲಿಗೆ ಹಚ್ಚಿದರೂ ತನ್ನ ಸ್ವಾಭಿಮಾನದ ಹೊಳಪು ಹೋಗದಂತೆ ನೋಡಿಕೊಳ್ಳುವ ಎದೆಗಾರಿಕೆಯೇನೋ ಇತ್ತು, ಗೋಪಿನಾಥನಿಗೆ. ಆದರೆ ಈ ಸೆಣಸಾಟದಲ್ಲಿ ಮಾಲತಿಯ ಹೆಸರು ಕೆಸರಾಗದಂತೆ ತಾನೆಷ್ಟು ಕೆಳಗಿಳಿಯಬೇಕೋ ಏನೋ ಎಂಬ ಭಯವೂ ಇತ್ತು. ಒಟ್ಟಿನಲ್ಲಿ ಆತ ಅಪೂರ್ವವಾದೊಂದು ಭೇಟಿಗೆ ಹೋಗಬೇಕಾಗಿದೆ. ಬಂದ ಮೇಲೆ ಹೇಳುತ್ತೇನೆಂತ ಮುಖವೆತ್ತಿ ತನ್ನನ್ನು ಆರಾಧಕ ದೃಷ್ಟಿಯಿಂದ ನೋಡುತ್ತಿದ್ದ ಪಂಬಿಯನ್ನು ಮುದ್ದಿಟ್ಟು ಮನೆಯಿಂದ ಹೊರಬಿದ್ದಾಗ ಅವನೆದೆ ಶತ್ರುವಿನ ಶಿಬಿರಕ್ಕೆ ಹೊರಟವನಂತೆ ಕಲ್ಲಾಗಿತ್ತು.

ರಾಘವೇಂದ್ರರಾಯರ ಮನೆಯ ಗೇಟಿನೊಳಗೆ ಕಾಲಿಡುತ್ತಲೇ ಅವನ ಮುನ್ನೋಟದ ಎಣಿಕೆಗಳೆಲ್ಲವೂ ಒಮ್ಮೆಗೇ ಅಳಿಸಿಹೋದವು. ಅಲ್ಲೇ ಹಲವು ಹೆಜ್ಜೆಗಳಾಚೆ ಆತನ ಮನೋಹರಿ ಇದ್ದಳು. ಮೇಜಿನ ಅಲಂಕಾರಕ್ಕೆ ಹೂ ಕೊಯ್ಯಲು ಆತ ಬರುವ ವೇಳೆಗೆ ಸರಿಯಾಗಿ ತೋಟಕ್ಕೆ ಬಂದು ಹೊಂಚು ಹಾಕುತಲಿದ್ದ ಮಾಲತಿ ಆತನನ್ನು ನೋಡಿ ಆನಂದದಾಯಿಯಾದಳು. ಆಕೆಗಷ್ಟೇ ಬೇಕಾದುದು. ಆತ ಮನೆಯೊಳಗೆ ಬಂದನೆಂದರೆ ಆತನ ಅಲೌಕಿಕ ನಯನಕಾಂತಿಗೆ ನಿತ್ಯ ವ್ಯವಹಾರದ ಮುಸುಕು ಬಂದುಬಿಡುತ್ತದೆ. ಅದಕ್ಕೆ ಮುಂಚೆ ತಾನೊಬ್ಬಳೇ ಕಣ್ತುಂಬ ನೋಡಿಬಿಡಬೇಕೆಂದಿತ್ತು. ನೋಡಿ ಸಂತೃಪ್ತಳಾದಳು.

"ನಿಮ್ಮನ್ನು ಕಾದಿದ್ದಾರೆ" ಅಂದಳು.

"ಯಾರು ?"

"ಅವರು"

"ನೀನು ?"

"ನಾನೂ ಕೂಡಾ."

"ಈ ಗುಲಾಬಿಹೂಗಳ ಜತೇಲಿ ?"

"ಅಲ್ಲ ಒಬ್ಬಳೇ. ನೀವೆಲ್ನೋಡೋದು ? ಇಲ್ನೋಡಿ, ಒಂದೇ ದಂಟಿನ ಮೇಲೆ ಅರಳಿದ ಈ ಅವಳಿ ಲಾ ಫ್ರಾನ್ಸ್‌ಗಳನ್ನು."

"ನನ್ನ ಕಂಣೆದುರಿಗಿರುವ ಕುಸುಮವೊಂದು ಅತಿಹತ್ತಿರವಾಗಿ ಬೇರೆ ಯಾವ ಹೂವೂ ಕಾಣಿಸುವುದಿಲ್ಲವಲ್ಲ" ಎಂದನು ಅವಳನ್ನೇ ನೋಡುತ್ತ.

"ಹಾಗಲ್ಲ ಹೂ ನೋಡೋದು" ಅಂದಳು ನಾಚಿ "ಮೂರುದೂರ ಹಿಡಿದು ನೋಡಬೇಕು."

"ಹೊರಗಿನಿಂದ ಮಾತ್ರವಿದ್ದರೆ ಸರಿಯೆ, ನೀನು ಹೇಳೋದು. ಅಂದದಷ್ಟೆ ಪರಿಮಳವಿದ್ರೆ?"

ಅದಕ್ಕೆ ಉತ್ತರಕೊಡದೆ ತಲೆತಗ್ಗಿಸಿ ಆ ಆವಳಿಹೂಗಳನ್ನು ಚಿವುಟಿ ತೆಗೆಯುತ್ತಿದ್ದ ಮಾಲತಿಯನ್ನು ತಡೆದು,

"ಕೊಯ್ಯಬೇಡ. ಗಿಡದಲ್ಲೇ ಇರಲಿ" ಅಂದನು.

"ಮೇಜಿನ ಮೇಲಿಟ್ಟರೆ ಚೆನ್ನಾಗಿರುತ್ತೆ. ನಿಮ್ಮ ಡ್ರೆಸ್ಸಿಂಗ್ ಮೇಜಿನ ಮೇಲಿತ್ತಲ್ಲ, ಮೊನ್ನೆ?"

"ನಿನಗಾಗಿ ತಂದಿಟ್ಟಿದ್ದೆ."

"ಹಾಗಾದರೆ ಇದು—" ಅನ್ನುತ್ತ ಮುಗುಳು ನಗುತ್ತ ಗೋಪಿನಾಥ ನನ್ನು ನೋಡಿ ಹೂಗಳನ್ನು ಕೊಯ್ದುಬಿಟ್ಟಳು.

"ಇನ್ನೀಗ?" ಎಂದು ಆತ ಕೇಳಲು, "ಬನ್ನಿ, ಹೋಗೋಣ" ಅನ್ನುತ್ತ ಸರಸರನೆ ಒಳಗೆ ನಡೆದಳು. ಆಫೀಸಿಲ್ಲಿದ್ದ ರಾಘವೇಂದ್ರರಾಯರು ಗೋಪಿ ನಾಥ ಮಾಲತಿಯ ಹಿಂದೆ ಒಳಗೆ ಹೋದುದನ್ನು ಕಂಡು ತಾವೂ ಹೋಗಿ ಹಾಲಿನಲ್ಲಿ ಕುಳಿತುಕೊಳ್ಳುವಂತೆ ಆರ್ಡರು ಕೊಟ್ಟು ಕುಳಿತರು. ಮಾಲತಿ ಮೇಜಿನ ಮೇಲಿದ್ದ ಹೂವಿನ ಪಾತ್ರೆಯನ್ನು ತಗೊಂಡು ತನ್ನ ಕೋಣೆಗೆ ಹೋದಳು. ರಾಘವೇಂದ್ರರಾಯರು ಒಡನೆ ಪ್ರಸ್ತುತ ವಿಷಯವನ್ನೇ ಎತ್ತಿದರು.

"ನಾನು ಕರ್ತವ್ಯಮೂಢನಾಗಿದ್ದೆ; ಗೋಪಿನಾಥ, ನಿನ್ನೆ ತನಕ. ಪ್ರಾಯಶಃ ನಿನಗೆ ಮೊದಲೇ ಗೊತ್ತಿದ್ದಿರಬೇಕು. ನಮ್ಮ ಅನ್ನದ ಮೇಲಿನ ಅಧಿಕಾರವನ್ನಾದರೂ ನಮ್ಮ ಸುಖದುಃಖವನ್ನರಿಯದ ಪರದೇಶಿ ಸರಕಾರದ ಕೈಯಿಂದ ತಪ್ಪಿಸಬೇಕೆಂತ ಸಾಧಿಸಿದೆ. ಸಾಹುಕಾರರು ಕಾಂಗ್ರೆಸ್ಸಿನ ಹಿತೈಷಿ ಗಳು, ಸ್ವಜನ ಪ್ರಿಯರು ಎಂದು ತಿಳಿದು ಅವರ ಪ್ರತಿನಿಧಿಯಾಗಿ ದುಡಿದೆ. ಆದರೆ ಅವರ ಮುಂದಾಳುಗಳೆನಿಸಿಕೊಂಡವರು ಕುಹಕಿಗಳು, ಲೋಕಕಂಟ ಕರು ಅಂತ ನಿನ್ನೆ ತಾನೆ ನನ್ನ ಅರಿವಿಗೆ ಹೊರಬಿತ್ತು, ನಿನ್ನಿಂದಾಗಿ. ಅವರ

ಕಾಳಸಂತೆಯಿಂದ ಹೊರಬರಲು ಬೆಳಕು ತೋರಿಸಿದ್ದು ನೀನೇ.” ಎಂದು ಭಾಷಣಕ್ಕಾರಂಭಿಸಿದರು. ತನ್ನ ಮುಖಸ್ತುತಿಯನ್ನು ಕೇಳಿ ಗೋಪಿನಾಥಗೆ ತುಂಬ ಸಂಕೋಚವಾಗಿ ನಾಲತಿ ಹಿಂತಿರುಗಿ ಬರುವುದರೊಳಗೆ ಈ ಪಜೀತಿಯನ್ನು ಕೊನೆಗಾಣಿಸಬೇಕೆಂಬ ಆತುರದಿಂದ ಅಡ್ಡ ಮಾತಾಡಲು ಬಾಯಿ ತೆರೆದನು. ಆದರೆ ರಾಘವೇಂದ್ರರಾಯರು ಕೈಸನ್ನೆ ಮಾಡಿ ತಡೆದರು. ಸ್ವಲ್ಪ ತಾಳು ನಿನ್ನ ಮುಖಸ್ತುತಿ ಮಾಡುವುದಕ್ಕೆ ಕರೆಸಿದ್ದಲ್ಲ. ನನ್ನ ಮನಶ್ಶಾಂತಿಗಾಗಿ ನನ್ನ ತಪ್ಪನ್ನು ನಿನ್ನೆದುರು ಒಪ್ಪಿಕೊಳ್ಳುತ್ತಿದ್ದೇನೆ, ಅಷ್ಟೇ. ಇದೊಂದು ಆತ್ಮಸಂಸ್ಕಾರ. ಇನ್ನೊಂದು ವಿಷಯ. ನೀನು ಕಮ್ಯುನಿಸ್ಟರ ಪಂಗಡಕ್ಕೆ ಸೇರಿದ ಹಿತಶತ್ರುವೆಂತ ನಿನ್ನ ಮೇಲೆ ಅಪವಿಶ್ವಾಸವಿತ್ತು, ನನಗೆ. ಅಷ್ಟೇ ಅಲ್ಲ—ಹೇಳೋದಕ್ಕೆ ನಾಚಿಕೆ ಆಗುತ್ತೆ—ನಿನಗೇನೋ ಒಳಗೈಯಿರಬೇಕು. ಸ್ವಾರ್ಥವಿಲ್ಲದೆ ಸಾಹಸ ಮಾಡತಕ್ಕವನಲ್ಲವೆಂತ ಒಂದೊಂದು ವೇಳೆ ಅನುಮಾನ ಪಟ್ಟಿದ್ದೂ ಉಂಟು. ನನ್ನೀ ಅಪರಾಧವನ್ನು ಮನ್ನಿಸಬೇಕು. ನೀನು ಮಾಡಿದ ಕೆಲಸವೆಷ್ಟು ಹಿರಿದೆಂದು ನಿನ್ನೆ ಕಮೀಶನರಿಂದಲೇ ತಿಳಿದುಬಂತು. ನನಗೆ ತುಂಬ ಸಂತೋಷ. ನಿನ್ನಿಂದ ಪರಸೇವೆ ಪರಿಪೂರಿತವಾಯಿತಲ್ಲಾಂತ. ಇನ್ನು ಮುಂದಿನ ನಿನ್ನ ಕೆಲಸಕ್ಕೆ ನನ್ನ ಶಕ್ತಿ ಮೀರಿ ನಿನಗೆ ನೆರವಾಗಬೇಕೆಂತ ನನ್ನ ಹಾರೈಕೆ. ನಿನಗೆ ಸಮ್ಮತವೆ ?” ಎಂದು ಕಣ್ಣರಳಿಸಿ ಕೇಳಿದರು.

ಗೋಪಿನಾಥಗೆ ತಕ್ಷಣ ಏನುತ್ತರ ಕೊಡುವುದೆಂದು ಹೊಳೆಯಲಿಲ್ಲ. ಆತನ ತಲೆ ಸುತ್ತುತ್ತಿತ್ತು. ತಾನು ನೆನಸಿದ್ದೊಂದು; ನಡದ್ದೊಂದು. ತನ್ನ ಮನಸಿದ್ಧತೆ ಒಂದುರೀತಿ, ಸಂದರ್ಭ ಇನ್ನೊಂದು ರೀತಿ. ಅದೂ ಅಲ್ಲದೆ ರಾಘವೇಂದ್ರರಾಯರ ಸ್ವಭಾವ ಅಷ್ಟು ಸರಳವಾದ್ದು, ಅವರ ಮನೋಧರ್ಮ ಅಷ್ಟು ಸಾತ್ವಿಕವಾದ್ದೆಂತ ಆತನೆಂದೂ ಗ್ರಹಿಸಿರಲಿಲ್ಲ. ತಾನೇ ಅವರ ವಿಚಾರದಲ್ಲಿ ಅಲ್ಪಾಲೋಚನೆಗಳಿಗೆಡೆಕೊಟ್ಟುದಕ್ಕಾಗಿ ಕ್ಷಮೆ ಬೇಡಬೇಕೆನಿಸಿತು. ಆದರೆ ಸ್ತುತಿಗೆ ಪ್ರತಿಸ್ತುತಿ ಮಾಡಲು ಹೇವರಿಸಿ ಸುಮ್ಮಗಿದ್ದನು. ತನ್ನಲ್ಲೂ ಎದೆ ಬಿಚ್ಚಿ ಹೇಳುವ ಆಶವಿದೆ. ತನಗೂ ಆತ್ಮಸಂಸ್ಕಾರದ ಅವಶ್ಯಕತೆಯಿದೆ. ಅವರಂತೆ ತಾನೂ ಗರ್ವವನ್ನು ನುಂಗಿ ಧೈರ್ಯದಿಂದಲೂ ನಿರ್ವಂಚನೆಯಿಂದಲೂ ಎದೆಯ ಹೊರೆಯನ್ನು ನಿವಾಳಿಸಿಕೊಂಡರೆ ಪ್ರಾಯಶಃ ಮನೋವಿಕಾರಗಳಿಂದಲೂ ಭಾವನಾಸಂಕಲನದಿಂದಲೂ ತಾನು ನಿವೃತ್ತನಾಗ

ಬಹುದು. ತನ್ನ ಮನಸ್ಸು ಅವರಿಗಿಂತ ಸಂಕುಚಿತವಾದ್ದೇ? ಅವರಿಗಿದ್ದ ಧೈರ್ಯ ತನಗೂ ಬರಲಾರದೆ? ಎಂದು ಗೋಪಿನಾಥ ಚಿಂತಾಕ್ರಾಂತನಾದುದನ್ನು ನೋಡಿ ರಾಘವೇಂದ್ರರಾಯರು,

"ನನ್ನ ಪೂರ್ವಸಹವಾಸದಿಂದಾಗಿ ನಿನ್ನ ಕೆಲಸಕ್ಕೆ ನಾನು ಅಡ್ಡಿಯಾಗುವ ಹಾಗಿದ್ದರೆ ಹೇಳಿಬಿಡು. ನಾನು ದೂರವೇ ಇದ್ದು ಬಿಡುತ್ತೇನೆ" ಎಂದು ಬಿರುಸಾಗಿ ವಿನಂತಿಸಿದರು.

ಅದನ್ನು ಕೇಳಿ ಗೋಪಿನಾಥನ ಮನಸ್ಸು ಕರಗಿ ನೀರಾಯಿತು. ಅಂಥವರ ಸೋದರ ಸೌಹಾರ್ದ, ಅವರ ವಿಶ್ವಾಸವನ್ನು ಸಂಪಾದಿಸುವುದಕ್ಕೆ ಯಾವ ತ್ಯಾಗ ಮಾಡಿದರೂ ಸಲ್ಲುವುದು. ಇದ್ದುದನ್ನೆಲ್ಲವನ್ನೂ ಹೇಳಿಬಿಟ್ಟು, ನಿದ್ರಿಸುತ್ತಿರುವ ಆತ್ಮನಿಷ್ಠೆಯನ್ನು ಎಚ್ಚರಿಸುತ್ತೇನೆ, ಅಂತಂದುಕೊಂಡು ಅಂತರ್ಯನಿವೇದನೆಯ ತೊರೆಯಲ್ಲಿ ಧುಮುಕಿದನು.

"ಹಾಗೇನೂ ಇಲ್ಲ. ನಿನ್ನ ಲೋಕವ್ಯವಹಾರಜ್ಞಾನ, ರಾಜಕೀಯ ಅನುಭವ, ಕಾರ್ಯನಿಷ್ಠೆ. ಇವು ಎಂತಹ ಚಳುವಳಿಯ ಮುನ್ನಡೆಗೂ ಅತ್ಯಗತ್ಯವಾದದ್ದೇ. ನನ್ನ ತಲೆಯೊಳಗಿದ್ದ ನೊಣ ಬೇರೊಂದು. ನನಗೂ ನಿನ್ನಲ್ಲಿ ಸಮರ್ಪಿಸತಕ್ಕ ಎದೆ ಸಂಕಟವಿದೆ. ನಿನಗೆ ಆಶ್ಚರ್ಯವಾಗುತ್ತೆ, ಅಲ್ಲವೇ? ನಾನು ಹೇಳುವುದಕ್ಕಿರುವುದನ್ನ ಕೇಳಿದ ಮೇಲೆ ಏನೆನ್ನುವಿಯೋ? ಆದರೆ ನಾವಿಬ್ಬರೇ ಇದ್ದು ಮಾತನಾಡುವ ಹಾಗಿದ್ರೆ ಚೆನ್ನಾಗಿತ್ತು. ನಿನ್ನ ಆಫೀಸಿಗೆ—"

ಅನ್ನುವಷ್ಟರಲ್ಲಿ ಹೂವಿನ ಪಾತ್ರೆ ಸಮೇತ ಮಾಲತಿ ಆಕೆಯ ಕೋಣೆಯಿಂದ ಬಂದಳು. ಗೋಪಿನಾಥನ ಗಹನವಾದ ಮಾತುಗಳನ್ನು ಕೇಳಿ ಗಾಬರಿಗೊಂಡ ರಾಘವೇಂದ್ರರಾಯರಿಗೆ ಫಕ್ಕನೆ ಸಿಟ್ಟಿದ್ದು.

"ಮಾಲತಿ, ನಿನಗೇನು ಕೆಲಸ ಇಲ್ಲಿ?" ಎಂದು ಥಡಕ್ಕನೆ ಎಗರಿದರು. ಮಾಲತಿ, ಹೂ ತುಂಬಿದ ಪಾತ್ರೆಯನ್ನು ಮೇಜಿನ ಮೇಲಿಟ್ಟು ತಲೆ ಎತ್ತದೆ,

"ಬರಬಾರದೆಂತ ಗೊತ್ತಿರಲಿಲ್ಲ. ಅಂಥ ಗುಟ್ಟೇನೂ ಇರಲಾರದೂಂತ ನೆನಸಿದೆ." ಅನ್ನುತ್ತ ಅವರ ದುಡುಕತನದಿಂದುಂಟಾದ ಕೋಪವನ್ನೂ ನಾಚಿಕೆಯನ್ನೂ ನಗೆಯಲ್ಲಡಗಿಸಿದಳು.

ರಾಘವೇಂದ್ರರಾಯರಿಗೆ ಪಶ್ಚಾತ್ತಾಪವಾಯಿತು. "ಪರವಾಯಿಲ್ಲ" ಅಂದರು. ಆಮೇಲೆ "ಆಫೀಸಿಗೆ ಹೋಗೋಣವೇ ನಾವು?" ಎಂದು

ಗೋಪೀನಾಥನನ್ನು ಕೇಳಿದರು. ಆದರೆ ತನ್ನ ಪ್ರಾಣಪ್ರಿಯೆಯ ಮುಖದ ಮೇಲೆ ಮಿಂಚಿಹೋದ ನೋವನ್ನು ಗಮನಿಸಿ ಆತನ ಮನಸ್ಸು ಕಲ್ಲಾಗಿತ್ತು. "ಅಹಂಕಾರದ ಒರಟುತನ ನಿರ್ದಯೆಯಿರುವತನಕ ತನಗೂ ಅವರ ಹೆಂಡತಿಗೂ ಇದ್ದ ಸಂಬಂಧವನ್ನು ರಾಘವೇಂದ್ರರಾಯರು ಅಂತಃಕರಣ ಶುದ್ಧಿಯಿಂದ ತಿಳಿದುಕೊಳ್ಳಲು ಶಕ್ಯರಲ್ಲ. ಅವರಿಗೆ ಹೇಳುವುದು ಯುಕ್ತವಲ್ಲ. ತಾನು ಅನಾವಶ್ಯಕವಾಗಿ ದ್ರೋಹಿಯೆನಿಸಿಕೊಳುವುದೇತಕ್ಕೆ? ಕೈಗಾದ ಮಸಿಯನ್ನು ಮೋರೆಗೆ ಹಚ್ಚಿಕೊಂಡಂತೆ?" ಎಂದು ಮನಗಂಡು,

"ಬೇಡ; ಇಲ್ಲೆ ಇರೋಣ. ನಾನು ಹೇಳಬೇಕೆಂದಿದ್ದ ಸಂಗತಿ ಸದ್ಯಬೇಡ. ಅದನ್ನು ಮುಚ್ಚಿಟ್ಟರೆ ಹುಳಿಯಾಗದು." ಎಂದುತ್ತರಕೊಟ್ಟನು. ಆ ಮೇಲೆ ಅಲ್ಲೇ ತುದಿಕಾಲಲ್ಲಿ ನಿಂತಿದ್ದ ಮಾಲತಿಯನ್ನು ನೋಡಿ "ಶಾರದಮ್ಮ ಎಲ್ಲಿ ನಾನೀ ವೇಷಹಾಕ್ಕೊಂಡು ಒಳಗೆ ಹೋಗೋಣಾಂದ್ರಿಲ್ಲ." ಎಂದು ಸೂಚನೆ ಕೊಟ್ಟನು.

"ಬರೋಪಕ್ಕೆ ಹೇಳೇ. ನೀನೂ ಬಂದು ಬಿಡು." ಎಂದರು ರಾಘವೇಂದ್ರರಾಯರು ತನ್ನ ತಪ್ಪು ಪರಿಹಾರಾರ್ಥವಾಗಿ. ಮಾಲತಿ ಹೊರಟುಹೋದಳು. ಒಂದು ಗಳಿಗೆ ಇಬ್ಬರೂ ಸುಮ್ಮಗಿದ್ದರು.

"ಒಂಥ ದೊರಗು ನಾಲಿಗೆ ಈ ಪಶೂದು? ಮಾಲತಿ ಹತ್ರ ನುಡಿವಾಗ ನಾಲಿಗೆ ನವನೀತದಂತಿರಬೇಕು." ಎಂದು ಗೋಪಿನಾಥ ತನ್ನಷ್ಟಕ್ಕೇ ವಿಲಾಪಿಸುತ್ತಿದ್ದರೆ,

"ಈಗ ನನ್ನ ಮನೇಲೂ ಅಧಿಕಾರ ಚಲಾಯಿಸುತ್ತಿದ್ದಾನಲ್ಲಾ" ಅಂತ ರಾಘವೇಂದ್ರರಾಯರ ಮುಖ ಬಾತುಕೊಂಡಿತ್ತು.

ಶಾರದಮ್ಮನೂ ಮಾಲತಿಯೂ ಕಾಫಿ ತಿಂಡಿಗಳ ಸರಬರಾಯಿಯನ್ನು ತಂದು ಒಂದು ಕೈಮೇಜಿನಮೇಲಿಟ್ಟು, ಅದನ್ನು ಗೋಪಿನಾಥ ರಾಘವೇಂದ್ರರಾಯರ ನಡುವಿಗಿರಿಸಿದರು. ಮಾಲತಿ ತಿರುಗಿ ಹೋಗಿ ಒಂದು ಬೋಗುಣಿಯಲ್ಲಿಷ್ಟು ಬಿಸಿನೀರನ್ನೂ ಒಂದು ಮಡಿ ಟವೆಲನ್ನೂ ತಂದಿಟ್ಟಳು.

"ಇದೇನು ಇಬ್ಬರಿಗೇ ತಂದಹಾಗಿದೆಯಲ್ಲಾ?" ಎಂದು ಗೋಪಿನಾಥ ಶಾರದಮ್ಮನ ಹತ್ರ ಕೇಳಿದನು.

"ಅಮ್ಮ ಎರಡೂಟ ಹೊರತು ಬೇರೇನೂ ತಗೊಳ್ಳೋದಿಲ್ಲ" ಎಂದರು ರಾಘವೇಂದ್ರರಾಯರು.

" ನಮ್ಮಮ್ಮನ ಹಾಗೆ."

" ನಿಮ್ಮಮ್ಮನ ಹಾಗೇನೇ, ಮತ್ತೇನು ? ನಾವು ಒಂದೇ ಜಾತಿ. ತಲೆ ಕೂದಲು ತೆಗೀದೇ ಇಟ್ಟುಕೊಂಡಿರೋದ್ರಿಂದ ರಾತ್ರಿ ಊಟಕ್ಕೊಂದು ಅಧಿಕಾರ ಬಂತು. ಇಲ್ಲದೆ ಹೋದ್ರೆ ಒಪ್ಪತ್ತೇ ಗತಿ " ಎಂದರು ಶಾರದಮ್ಮ.

" ನಿಜ; ಆದರೆ—" ಅನ್ನುತ್ತ ಮಾಲತಿಯನ್ನು ಸೂಕ್ಷ್ಮಿಸಿದನು

" ಅವಳಿಗೇನು, ನಿಮ್ಮ ಜತೇಲಿ ಕೂತುಕೊಳ್ಳದೆ ?" ಎಂದು ಶಾರದಮ್ಮ ಸೊಸೆಯನ್ನು ಪ್ರಶ್ನಿಸಿದರು.

" ಬಾರೇ ನಿನ್ನ ಪಾಲೂ ತಗೊಂಡು ಬಾ. ಇಲ್ಲೇ ಕೂತುಕೋ " ಎಂದು ಗಂಡನ ಅಪ್ಪಣೆಯಾದ ಮೇಲೆ ಮಾಲತಿ ಒಳಗೆ ಹೋದಳು.

" ನೀನು ತಕೋ " ಅನ್ನುತ್ತ ರಾಘವೇಂದ್ರರಾಯರು ಕೈಹಾಕಿದರು.

" ಎಲ್ಲರೂ ಒಟ್ಟಿಗೇ ತಿನ್ನೋಣ " ಎಂದು ಗೋಪಿನಾಥ ಹೇಳಿದ್ದರಿಂದ ನೀಡಿದ್ದ ಕೈಯ್ಯನ್ನು ಹಿಂತೆಗೆದರು.

ಶಾರದಮ್ಮ ಇಂದಿರಮ್ಮನನ್ನೂ ಪ್ರಭೆಯನ್ನೂ ಕುರಿತು ಕುಶಲಪ್ರಶ್ನೆ ಮಾಡಿದರು. ಅಷ್ಟರಲ್ಲಿ ಮಾಲತಿ ಒಂದೇ ತಟ್ಟೆಯಲ್ಲಿ ಎರಡು ಬಗೆ ತಿಂಡಿಯನ್ನೂ ತುಂಬಿ ಒಂದು ಲೋಟದಲ್ಲಿ ಕಾಫಿ ಸಮೇತ ತಂದು ಅತ್ತೆಯ ಬಳಿ ಕುರ್ಚಿಯೊಂದರಲ್ಲಿ ಕುಳಿತಳು.

" ಭೀಮಾಚಾರ್ರು ತರಕಾರಿ ತರೋದಕ್ಕೆ ಹೋಗ್ತಾರಂತಮ್ಮ " ಎಂದ್ರು ತಿಳಿಸಿದೊಡನೆ ಶಾರದಮ್ಮ ಎದ್ದು ಹೋದರು.

" ನಿನ್ನೆ ನಿಮ್ಮ ಮಹಿಳಾ ಸಭೆಯಲ್ಲಿ ನಡೆದ ಸಂಗತಿ ಹೇಳೇ, ಮಾಲತಿ " ಎಂದು ರಾಘವೇಂದ್ರರಾಯರು ಹೆಮ್ಮೆಯಿಂದ ಆಜ್ಞಾಪಿಸಿದರು.

" ಅದನ್ನೇನು ಹೇಳೋದು ಮಹ " ಎಂದು ಸುಮ್ಮನಿದ್ದಳು. ಆಕೆಗೆ ರುಚಿಸದ್ದನ್ನು ಕೇಳುವ ಕುತೂಹಲ ಆತಗಿರಲಿಲ್ಲವಾದರೂ ಮುಖ ಮರ್ಯಾದೆಗೋಸ್ಕರ ಲವಲವಿಕೆಯಿಂದ ವಿಚಾರಿಸಲು ರಾಘವೇಂದ್ರರಾಯರೇ ತಮ್ಮ ಹೆಂಡತಿಗೆ ಲಭಿಸಿದ ಸತ್ಕಾರ ಸನ್ಮಾನಗಳನ್ನು ವಿವರಿಸಿದರು. ಈ ಅಲ್ಪಾನುಭವವನ್ನು ರಸಾವಿಷ್ಟರಾಗಿ ಹೊಗಳುವುದನ್ನು ಕೇಳಿ ಮಾಲತಿಗೆ ಸಹಿಸಲಾರದ ನಾಚಿಕೆಯಾಯಿತು. ಅವರ ಪ್ರಶಂಸೆಯಲ್ಲಿ ಪ್ರಾಮಾಣಿಕತೆಯಿದ್ದರೂ ಸಮತೂಕದ ಸೊಗಸಿರಲಿಲ್ಲ. ತಾಳ್ಮೆಯಿಂದ ನಸುನಗುತ್ತ ಕೇಳುತ್ತಿದ್ದ ಗೋಪಿ

ನಾಥ ಏನು ಅಭಿಪ್ರಾಯಪಡುತ್ತಾನೋ ಎಷ್ಟು ಅಸಹ್ಯಗೊಳ್ಳುತ್ತಾನೋ ಎಂಬ ಕಳವಳದಿಂದ ಆಕೆಗೆ ಮುಳ್ಳಿನ ಮೇಲೆ ಕುಳಿತಹಾಗಿತ್ತು. ಆಗಾಗ ಆತನ ಮುಖ ನೋಡುತ್ತಿದ್ದಳು. ಆಕೆಯ ಈ ಪೇಚನ್ನು ಕಂಡು ರಾಘವೇಂದ್ರರಾಯರ ಮಾತನ್ನು ಬೇರೆಡೆಗೆ ತಿರುಗಿಸುವ ಪ್ರಯತ್ನದಿಂದ ಗೋಪಿನಾಥ

"ನಮ್ಮ ಮಹಿಳೆಯರ ಸಂಗೀತವನ್ನು ಕೇಳಿ ಅವರೇನೆಂದರು?" ಎಂದು ಪ್ರಶ್ನಿಸಿದನು

"ಅದೇನೋ ನನಗೆ ಗೊತ್ತಿಲ್ಲ. ನಾನಲ್ಲಿರಲಿಲ್ಲ. ಮಾಲತಿಗೆ ಗೊತ್ತಿರಬೇಕು." ಅಂದರು.

"ಸಂಗೀತವೆಂದರೆ ಬಾಯಿಹಾಡಿಕೆಯಿರಲಿಲ್ಲ. ವಾದ್ಯಮೇಳ ಸಂಗೀತವೇ. ಅವರಿಗೆ ಯಾವುದೂ ರುಚಿಸಿದಹಾಗೆ ತೋರಲಿಲ್ಲ. ತಿಲಕ್ ಕಾಮೋದ ನುಡಿಸಿದಾಗ ಮಾತ್ರ ಕಿವಿಗೊಟ್ಟು ಕೇಳಿದರು. ಬಲು ಚೆನ್ನಾಗಿದೆ ಇದು, ಅಂದರು ನನ್ನ ಹತ್ರ.

"ಆಶ್ಚರ್ಯವಲ್ಲ. ಆ ರಾಗದ ಓಟದಲ್ಲಿ ಜಿಂಕೆಯ ಜಿಗಿತವಿದೆ"

"ನಿಶ್ಚಯ. ಅದರ ವಿಳಂಬದಲ್ಲಿ ತೊಟ್ಟಿಲ ತೂಗಾಟವಿದೆ."

"ಮತ್ತೇನೂ ಅಭಿಪ್ರಾಯ ಸೂಚಿಸಲಿಲ್ವೇ, ಅವರು?"

"ಸೂಚಿಸಿದರು. ಬೇರೆ ಬೇರೆ ವಾದ್ಯಗಳಿದ್ದರೂ ಒಂದೇ ರಾಗವನ್ನು ಒಂದೇ ತಾಳದಲ್ಲಿ ಒಂದೇ ಸ್ಥಾಯಿಯಲ್ಲಿ ನುಡಿಸುವುದೇತಕ್ಕೆ? ವಿವಿಧ ಸ್ವರ ಸಮ್ಮೇಳನವಿಲ್ಲವಲ್ಲ?" ಅಂದರು

"ಅದಕ್ಯಾರೂ ಉತ್ತರ ಕೊಡಲಿಲ್ವೇ?"

ತನ್ನನ್ನೇ ನಿರ್ದೇಶಿಸಿ ಕೇಳುವಬದಲು ಈ ದ್ರಾವಿಡ ಪ್ರಾಣಾಯಾಮದ ಪ್ರಶ್ನೆಯೇತಕ್ಕೆಂದು ಗೊತ್ತಾಗದೆ ಮಾಲತಿ ನಕ್ಕಳು. ಆದರೆ ಆಕೆಯನ್ನು ಸಂಬೋಧಿಸುವುದು ಏಕವಚನದಲ್ಲೋ ಬಹುವಚನದಲ್ಲೋ ಎಂದು ಬಗೆಹರಿಯದೆ ಗೋಪಿನಾಥ ಈ ಉಪಾಯ ಹೂಡಿದ್ದನು.

ನಾನೇ ಹೇಳಿದೆ. 'ಸಂಗೀತದಲ್ಲೂ ನಿಮ್ಮನ್ನ ಅನುಕರಿಸಬೇಕೆಂತ ಹೇಳುವಿರಾ?' ಅಂತ. 'ಸರ್ವಥಾ ಅಲ್ಲ. ಸಂಗೀತದಷ್ಟು ವೈಯಕ್ತಿಕ ಕಲೆ ಬೇರೆ ಯಾವುದೂ ಇರಲಾರದು. ನನ್ನ ಪಾಶ್ಚಾತ್ಯ ಕಿವಿಗೆ ಒಗ್ಗಲಿಲ್ಲ; ಅಷ್ಟೆ' ಅಂದರು.

ಈ ರೀತಿ ಪ್ರಿಯವಚನ ವಿನಿಮಯದಲ್ಲಿ ಅವರಿಬ್ಬರು ತಾವೆಲ್ಲಿದ್ದೇವೆಂಬುದನ್ನು ಮರೆತು ತಮ್ಮದೇ ಆಪ್ತಾವರಣವೊಂದನ್ನು ರಚಿಸಿಕೊಂಡರು ಮಾತು ಮಾತಿಗೆ ಹಾಸ, ಹೊಕ್ಕಾಗಿ ಅವರ ಸುತ್ತು ನೇದ ಮೋಹಜಾಲದ ಅರಿವೇ ಇರಲಿಲ್ಲ ಅವರಿಗೆ ಆದ್ದರಿಂದ ರಾಘವೇಂದ್ರರಾಯರು ಮಾತೆತ್ತಿದಾಗ ಇಬ್ಬರಿಗೂ ಮೈದಡವಿ ಎಬ್ಬಿಸಿದಂತಾಯಿತು.

"ಸಂಗೀತದ ಹುಚ್ಚು ನಿಮ್ಮಿಬ್ಬರಿಗೂ ಹಿಡಿದಹಾಗಿದೆ. ನಾನು ಆಫೀಸಿನಲ್ಲಿರುತ್ತೇನೆ" ಅನ್ನುತ್ತ ರಾಘವೇಂದ್ರರಾಯರು ಎದ್ದುನಿಂತರು.

"ಇಲ್ಲ. ನಾನೂ ಹೊರಟೆ. ಶಾರದಮ್ಮನ ಹತ್ರ ಹೇಳಿಬಿಟ್ಟು ಹೋಗೋಣಾಂತಿದ್ದೇನೆ" ಅನ್ನುತ್ತ ಗೋಪಿನಾಥನೂ ಎದ್ದು ನಿಂತನು.

ಅತ್ತೆಗೆ ತಿಳಿಸಿಬರುತ್ತೇನೆಂತ ಹೋದ ಮಾಲತಿ ಬರುವಾಗ ಕರಕೊಂಡೇ ಬಂದಳು. ಅವರಿಬ್ಬರು ಬರುವಾಗ ಇವರಿಬ್ಬರು ನಿಂತುಕೊಂಡೇ ಕಚೇರಿಯ ಯಾವುದೋ ಕಗ್ಗವನ್ನು ಚರ್ಚಿಸುತ್ತಿದ್ದರು. "ಏನಪ್ಪ ಗೋಪಿ, ಆಗಲೆ ಹೊರಟು ನಿಂತಿದ್ದಿಯಂತೆ. ಏನಪ್ಪ ಅವಸರ?" ಎಂದು ಶಾರದಮ್ಮ ಕೇಳಿದರು.

"ಅವಸರವೆ? ಒಳ್ಳೇ ಲೆಕ್ಕಾಚಾರ ನಿಮ್ಮದು. ಇಲ್ಲೇ ಇದ್ದು ಬಿಡುತ್ತಿದ್ದೆ. ಆದರೆ ದಿನನಿತ್ಯ ಹೀಗೆ ರುಚಿರುಚಿ ತಿಂಡಿ ಮಾಡಿಕೊಟ್ರೇನು ಗತೀಂತ ತುಂಬ ಅಂಜಿಕೆ, ನನಗೆ. ನಾಡದು ಭಾನುವಾರ ನಮ್ಮ ಪಂಬೀದು ಹುಟ್ಟಿದ ಹಬ್ಬ. ವಿಶೇಷವೇನೂ ಇಲ್ಲ. ಹೊರಗಿನವರಿಗೆ ಯಾರಿಗೂ ಹೇಳೋದಿಲ್ಲ. ಆದರೆ ನೀವೆಲ್ಲ ಬಾದ್ರೆ ಚೆನ್ನಾಗಿತ್ತು. ನಮ್ಮವರಾಗಿ ಬಂದು ಹೋಗತಕ್ಕವರು ಬೇರೆ ಯಾರೂ ಇಲ್ಲ" ಎಂದು ತಾಯಿ ಮಗಂದಿರಿಬ್ಬರಿಗೂ ವಿನಂತಿ ಮಾಡಿದನು.

"ಅದಕ್ಕೇನು ಕಷ್ಟ? ಅವರಿಬ್ಬರೂ ಹೋಗಲಿ. ನಾನೇತಕ್ಕೆ ಶುಭ ಕೆಲಸಕ್ಕೆ?"

"ಸರಿಸರಿ! ನೀವೂ ನಮ್ಮಮ್ಮನೂ ಹಾಗಂದು ಬಿಟ್ಟು ದೂರ ಕೂತರೆ ನಮ್ಮ ಪಾಡು? ಪ್ರೀತಿ ವಾತ್ಸಲ್ಯವಿದ್ದಲ್ಲಿ ತಾನೇ ಶುಭ, ಮಂಗಳ? ನೀವು ಬರಲೇಬೇಕು. ನಿಮ್ಮ ಸೊಸೆ ಬಂದರೆ ಕೂಸಿಗೊಂದು ಆರತಿ ಮಾಡೋಣ ಅಂತಿದ್ದಳು, ಅಮ್ಮ."

"ಆಗಲಪ್ಪ. ನೀನಿಷ್ಟು ಅಭಿಮಾನದಿಂದ ಕರೆಯುವಾಗ ಹೇಗೆ ಒಲ್ಲೆ ಅನ್ನೋದು ? ಏನು ರಾಘು ?"

"ಆಗಬಹುದಮ್ಮ. ಆದರೆ ಮಾಲತಿ ಮಟ್ಟಿಗೆ ನೀನೇ ಹೊಣೆಗಾರಿಕೆ ವಹಿಸಿಕೋಬೇಕು. ಭಾನುವಾರ ಎಲ್ಲೋ ಹೋಗಬೇಕೂಂತಿದ್ದಳು. ಅಲ್ವೇನೇ ?" ಅನ್ನುತ್ತ ಹೆಂಡತಿಯನ್ನು ನೋಡಿದರು ಗದರಿಸಿದಂತೆ. ಅವರ ಬೋಳೇತನವು ಗೋಪೀನಾಥನ ಮನಸ್ಸನ್ನು ಚುಚ್ಚಿತು. ಮಾಲತಿಯೂ ಮುಖತಗ್ಗಿಸಿ,

"ಹಾಗೇನೂ ಇಲ್ಲ. ನೀವು ಹೋಗೋದಿದ್ರೆ ನಾನೂ ಬರ್ತೀನೆ" ಅಂದಳು.

"ಮಧ್ಯಾಹ್ನ ಊಟಕ್ಕೇನೆ ಬಂದುಬಿಡಿ. ನೆನಪಿರಲಿ ರಾಘು, ಮರಿಯಬೇಡ" ಎಂದು ಗೋಪಿನಾಥ ಎಚ್ಚರಿಸಿದ್ದಕ್ಕೆ ಅವರು "ಇಲ್ಲ. ಈಗಲೇ ಹೋಗಿ ಡೈರೀಲಿ ಬರಕೊಂಡು ಬಿಡುತ್ತೀನೆ" ಅನ್ನುತ್ತ ನೇರ ಆಫೀಸಿಗೆ ಹೋದರು.

ಅತ್ತೆಸೊಸೆಯರಿಬ್ಬರು ಜತೆಯಾಗಿ ನಿಂತು ಮಮತೆಯಿಂದ ಗೋಪಿನಾಥನನ್ನು ನೋಡುತ್ತಿರುವಾಗ ಆತಗೆ ಥಕ್ಕನೆ ಎದೆ ಅದುರಿ ಕಂಣು ತುಂಬಿದಂತಾಯಿತು. ಆತಗೇನೇ ಆಶ್ಚರ್ಯವಾಯಿತು ತನ್ನ ಮೃದುತ್ವಕ್ಕೆ. ಇತ್ತೀಚಿಗೆ ಆತನ ತನುಮನವೆಲ್ಲವೂ ಕರಗಿಹೋದಂತಿತ್ತು. ಬುದ್ಧಿ ಭಾವಗಳೆಲ್ಲ ಮಾಗಿ ಮೆದುವಾಗಿ ರಸಪೂರಿತವಾಗಿದ್ದುವು. ಇದ್ದಕ್ಕಿದ್ದಹಾಗೆ ಮನೋವಿಕಾರಗಳುಂಟಾಗಿ ಅವುಗಳನ್ನು ಕಂಬನಿಗಳಲ್ಲಿ, ಇಲ್ಲವೆ ಆತ್ಮಸಂಭಾಷಣೆಯಲ್ಲಿ, ಇಲ್ಲವೆ ಹಾಡಿನಲ್ಲಿ ಹೊರಗೆಡವಿ ಉಪಶಮನ ಮಾಡಿಕೊಳ್ಳೋಣವೆಂತ ತೋರುತ್ತಿತ್ತು. ಮೊದಲು ಹೀಗಿರಲಿಲ್ಲ. ಹೀಗೆಂದೂ ಇರಲಿಲ್ಲ. ಯಾವ ರಸಸನ್ನಿವೇಶ ಒದಗಿ ಬಂದರೂ ಅದು ಆತನ ವಜ್ರಕವಚದಂತಿದ್ದ ವೈರಾಗ್ಯದ ಚಿಪ್ಪಿನ ಮೇಲೆ ಸಿಡಿದು ಚೂರು ಚೂರಾಗುತ್ತಿತ್ತು. ವಿನಹ ಒಳಗಿನ ಶಾಂತ ಸರೋವರವನ್ನು ಕದಡುತ್ತಿದ್ದಿಲ್ಲ. ಆದರೆ ಈ ಗುಪ್ತಸರೋವರಕ್ಕೆ ಧುಮುಕಿ ಅದರ ತಳಾದಿಯಲ್ಲಿದ್ದ ಮುತ್ತನ್ನು ಮಾಲತಿ ಅಪಹಾರ ಮಾಡಿದ ಮೇಲೆ ಆ ರಕ್ಷೆ ತಾನಾಗಿ ಕಳಚಿಬಿತ್ತು. ಅಂದಿನಿಂದ ಆತನಲ್ಲಿ ಅತಿ ಸುಲಭವಾಗಿ ರಸೋದ್ರೇಕವಾಗುತ್ತಿತ್ತು. ಶಾರದಮ್ಮನ ಮುಖದ ಲೋಕಕಾರುಣ್ಯದ ಪ್ರಸನ್ನತೆ, ಜಗನ್ಮಾತೆಗೊಪ್ಪುವ ಗಾಂಭೀರ್ಯ, ಅವರ ಸೊಸೆಯ ಕಂಣು

ಕೆನ್ನೆಗಳಲ್ಲಿ ಚಿಮ್ಮುವ ನವನೂತನ ತಾರುಣ್ಯ, ಇವನ್ನು ನೋಡುತ್ತ ಏನೋ ಹುಚ್ಚು ಹಿಡಿದಂತಾಗಿ ತಟ್ಟನೆ ಎರಡು ಹೆಜ್ಜೆ ಮುಂದಿಟ್ಟು ಬಗ್ಗಿ ಶಾರದಮ್ಮನ ಪಾದ ಮುಟ್ಟಿ ನಮಸ್ಕರಿಸಿದನು. ತಲೆ ಎತ್ತಿದಾಗ ಆತನ ಕಂಣುಗಳು ಒದ್ದೆಯಾದುದನ್ನು ನೋಡಿ ಮಾಲತಿ ಮುಖ ತಿರುಗಿಸಿ ಮೆಲ್ಲಗೆ ಅಲ್ಲಿಂದ ಜಾರಿಬಿಟ್ಟಳು. ಶಾರದಮ್ಮ,

"ಇದೇನು ಗೋಪಿ, ಹೀಗೂ?" ಎಂದು ಅಕ್ಕರೆಯಿಂದ ಕೇಳಿದರು. ಗೋಪೀನಾಥಗೆ ನಾಚಿಕೆಯಾಗಿಬಿಟ್ಟಿತು. ಕಾಲುಮುಟ್ಟಿ ನಮಸ್ಕರಿಸಿದೆ ಅಂತಲ್ಲ. ಸೂಟು ಬೂಟು ಹಾಕ್ಕೊಂಡು ಹಳೇಕಾಲದ ಅಳಿಯನಾತೆ ಮಾಡಿದೆನಲ್ಲಾಂತ.

"ಏನೂ ಇಲ್ಲ. ನಿಮ್ಮನ್ನು ನೋಡಿ ಏನೋ ಅನಿಸಿತು" ಅಂದ.

"ಈಗಿನ ಕಾಲದವರಿಗೆ ಹಿರಿಯರ ಮೇಲಿನ ಅಭಿಮಾನ ಕಡಿಮೇಂತ ತಿಳಿದಿದ್ದೆ."

"ಅಭಿಮಾನ ಕಡಿಮೆಯಿಲ್ಲ. ಆದರೆ ಬಗ್ಗೋದಕ್ಕೆ ಬರೋದಿಲ್ಲ, ಅಷ್ಟೆ. ನಾನೀಗ ಹೋಗಿ ಬರ್ತೀನೆ. ನಾಡದು ಎಲ್ಲರೂ ಬಂದು ಬಿಡಿ—" ಅನ್ನುವಾಗ ಅವನ ದೃಷ್ಟಿ ಮಾಲತಿ ಹೋದೆಡೆ ಸಂಚರಿಸಿದ್ದನ್ನು ನೋಡಿ ಶಾರದಮ್ಮ ಮುಗುಳ್ನಗುತ್ತ,

"ಆಕೆಗೆ ನಾನು ಹೇಳ್ತೀನೆ. ನೀನು ಹೋಗಿಬಾಪ್ಪಾ" ಅಂದರು ಗೋಪಿನಾಥ ತನ್ನ ಅಜಾಗರೂಕತೆಗೆ ತಾನೇ ಶಪಿಸಿ ಕೊಳ್ಳುತ್ತ ತೆರಳಿದನು.

೨೮

ಭಾನುವಾರ ಪ್ರಭೆಗೆ ಮೂರನೇ ವರ್ಷ ಮುಗಿದು ನಾಲ್ಕನೇ ವರ್ಷದ ಮೊದಲ ದಿನದ ಹಬ್ಬ. ಆದರೆ ಆದಕ್ಕೆ ಮುಂಚೆ ಹಬ್ಬದಾಚರಣೆಯ ಆಲೋಚನೆ ಗೋಪೀನಾಥನಿಗಾಗಲಿ ಇಂದಿರಮ್ಮನಿಗಾಗಲಿ ಇರಲಿಲ್ಲ ಮಗು ಹುಟ್ಟಿದ ಸುಖದ ಸವಿಯೊಡನೆ ತಾಯಿ ಸತ್ತ ದುಃಖದ ಕಹಿಯೂ ಆಗುತ್ತಿದ್ದುದರಿಂದ ಅದರ ನೆನಪೇ ಬೇಡವಾಗಿತ್ತು. ಪಂಬಿಯ ಹುಟ್ಟಿದ ಹಬ್ಬಕ್ಕೆ ಬಾ ಎಂತ ಗೋಪಿನಾಥ ಮಾಲತಿಗೆ ಹೇಳಿದಾಗ ಅಂಥ ಹಬ್ಬಕ್ಕೆ ಏನೆಲ್ಲ ಬೇಕು, ಯಾರೆಲ್ಲ ಬರಬೇಕು, ಏನು ಮಾಡಬೇಕು, ಹೇಗೆ ಮಾಡಬೇಕು ಎಂಬ ಯಾವ ವಿಚಾರವೂ ಗೊತ್ತಿರಲಿಲ್ಲ. ಆಮೇಲೆ ಇಂದಿರಮ್ಮ ಹೇಳಿದ

ಮೇಲೆ ತಿಳಿಯಿತು. ಹಬ್ಬದೂಟವಾಗಬೇಕು. ಆರತಿ ಉಡುಗೊರೆಯಾಗಬೇಕು. ಮಾಲತಿಯೊಬ್ಬಳಿದ್ದರೆ ಸಾಲದು. ನಾಲ್ಕು ಮಂದಿ ಮುತ್ತೈದೆಯರು ಬೇಕು. ಅವರನ್ನು ಹೋಗಿ ಕರೆದುಬರಬೇಕು ಯಾರು? ಮಾಲತಿ. ಮತ್ಯಾರು? ಇಂದಿರಮ್ಮಗೆ ನಗುಬಂತು. ಮಾಲತಿ, ಮಾಲತಿ, ಮಾಲತಿ. ಪ್ರತಿಯೊಂದಕ್ಕೂ ಮಾಲತಿ. ಆಕೆಯಿಲ್ಲದೆ ಯಾವುದೂ ಇಲ್ಲ.

"ಅದಕ್ಕೇನಮ್ಮ ಆಕೆಗೆ ಬೇಕಾದ ನಾಲ್ಕು ಮಂದಿಗೆ ಹೇಳಿಬರಲಿ" ಅಂದುಬಿಟ್ಟನು ಗೋಪಿನಾಥ ಇಂದಿರಮ್ಮ ಯತ್ನವಿಲ್ಲದೆ ಒಪ್ಪಿಕೊಂಡರು. ಶನಿವಾರ ಸಂಜೆ ಹೋಗಿ ಶಾರದಮ್ಮನ ಹತ್ರ ಹೇಳಿದರು. ಮಗನ ಆದರ ವಚನವ ಪರಿ.

ಮತ್ತವನಿಗೇನು ಗೊತ್ತು ಪಾಪ, ಈ ವಿಚಾರ. ನಾಳೆ ಬೆಳಿಗ್ಗೆ ಮಾಲತಿ ನಾಲ್ಕು ಮನೆಗೆ ಹೋಗಿ ಹೇಳಿಬರಲಿ ಅಂದರು ಶಾರದಮ್ಮ. ಸ್ವಜಾತಿಯವರು ಯಾರೂ ಇಲ್ಲವಾದ್ದರಿಂದ ಗುರುತಿದ್ದ ಅಯ್ಯರು ಆಯ್ಯಂಗಾರರನ್ನು ಅರಿಸಿನ ಕುಂಕುಮಕ್ಕೆ ಕರೆಯುವುದೆಂತ ನಿಷ್ಕರ್ಷೆಯಾಯಿತು. ಈ ಮಾತುಕತೆ ನಡೆಯುತ್ತಿರುವಾಗ ಇಬ್ಬರೂ ತಾಯಂದಿರ ಮನಸ್ಸಿನಲ್ಲಿ ಮಾಲತಿ ಗೋಪಿನಾಥನ ಜೀವನ ಚಿತ್ರದಲ್ಲಿ ಈರೀತಿ ಹೆಚ್ಚು ಹೆಚ್ಚಾಗಿ ಸೇರಿಕೊಂಡಿರೋದು ಚಂದವಲ್ಲ, ಹಿತವಲ್ಲವೆಂಬ ಯೋಚನೆ ಕೊರೆಯುತ್ತಿದ್ದರೂ ಅದನ್ನು ಬಾಯಿಬಿಟ್ಟು ಹೇಳುವ ಧೈರ್ಯ ಇಬ್ಬರಿಗೂ ಇರಲಿಲ್ಲ.

ಪ್ರಭೆಯ ಹುಟ್ಟಿದ ಹಬ್ಬದ ಆಚರಣೆ ಅಂದೇ ಆರಂಭವಾದರೂ ಅದು ಪ್ರಭಾಕರನ ಚಿತ್ತಕ್ಕೆ ಬಂದಹಾಗಿರಲಿಲ್ಲವೆಂಬಂತೆ ಬೆಳಗಿನಿಂದ ಮೋಡ ಕವಿದಿತ್ತು; ಶಕೆ ಬೇರೆಯಿತ್ತು; ಮಳೆಯೂ ಬರುವಹಾಗಿತ್ತು. ಮಾನವ ಧರ್ಮಾರ್ಥ ಕಾಮ ಪ್ರವೃತ್ತಿಗಳೆಲ್ಲವಕ್ಕೂ ಎಲ್ಲ ಕಲೆಗಳಿಗೂ, ಎಲ್ಲ ಸುಖ ಸಿದ್ಧಿಗೂ ಪ್ರೋತ್ಸಾಹಕನಾದ ಸೂರ್ಯದೇವನ ದರ್ಶನವೇ ಇಂದು ದುರ್ಲಭವಾಗಬೇಕೆ? ಎಂದು ಗೋಪಿನಾಥನಿಗೆ ಬೇಸರವಾಗಿತ್ತು. ಪ್ರಭೆಯ ಹುಟ್ಟಿದ ಹಬ್ಬಕ್ಕೆ ಬಂದು ಬೆಳಗದದ್ದ ಆದಿತ್ಯನು ಮಿಕ್ಕ ದಿನಗಳಲ್ಲಿ ಇದ್ದರೇನು ಇರದಿದ್ದರೇನು ಅಂದುಕೊಳ್ಳುತ್ತ ಕೆಲಸಕ್ಕೆ ಬಾರದ ಕೂಲಿಯ ಮೇಲೆ ಕೋಪಿಸಿಕೊಂಡಂತೆ ಆತನು ಅಸಮಾಧಾನದಿಂದಿದ್ದನು. ಆದರೆ ತಕ್ಷಣ ಮಾಲತಿಯ ನೆನಪಾಗಿ ಉಲ್ಲಾಸಿತನಾದನು. ಇನ್ನು ಸ್ವಲ್ಪ ಹೊತ್ತಿನಲ್ಲಿ ಆಕೆ ಬರುವವಳಿದ್ದಾಳೆ. ಆಕೆ ಹೊಸಲ ದಾಟಿದರೆ ಸಾಕು, ಮನೆತುಂಬ ಬೆಳಕು. ಆತ್ಮ

ಸಖಿಯಿರುವಾಗ ಈ ನಿತ್ಯಮಿತ್ರನ ಹಂಗೇನು, ಅಂತಂದುಕೊಂಡನು. ಮಾಲತಿ ಯೊಂದಿಗೆ ಆಕೆಯ ಗಂಡನೂ ಅತ್ತೆಯೂ ಬರುತ್ತಾರೆ, ನಿಜ. ಆದರೆ ಅವ ರಿಂದ ಯಾವ ತೊಡಕೂ ಇರಲಾರದು. ತಮ್ಮ ಗುಪ್ತಪ್ರಾಕಾರದೊಳಗೆ ಅವರಿಗೆ ಪ್ರವೇಶವಿಲ್ಲ. ಅವರಿಗೆ ಅದರ ಅರಿವೇ ಇಲ್ಲ. ಹೀಗಂದುಕೊಳ್ಳು ವಾಗ ಆತಗೆ ನಾಲ್ಕು ದಿನಗಳ ಹಿಂದೆ ಶಾರದಮ್ಮನೆದುರು ತಾನು ಮಾಡಿದ ದಡ್ಡತನದ ನೆನಪಾಗಿ ಹೇವರಿಸಿದನು. ಆತ್ಮನಿಂದಾ ಪರಂಪರೆಗೆ ತುತ್ತಾ ದನು. ಏಕಾಕಿಯಾಗಿ ತನ್ನ ಕೋಣೆಯಲ್ಲಿ ಒಂದೆಡೆ ಚಿಂತಾಲಿಂಗಿತನಾಗಿ ಕುಳಿತುಬಿಟ್ಟನು.

“ ಇನ್ನು ಮುಂದೆ ಎಷ್ಟು ಎಚ್ಚರಿಕೆಯಿಂದಿದ್ದರೂ ಸಾಲದು. ಈಗಾಗಲೇ ಹಲವರಿಗೆ ಗೊತ್ತಾಗಿರಬೇಕು, ನಮ್ಮ ಗುಟ್ಟು. ಪ್ರಥಮ ಪತ್ತೆ ಮಾಡಿದ್ದು ಬಹುಶಃ ಅಮ್ಮನಾಗಿರಬೇಕು. ಇದೊಂದು ಹೊಸ ನೋವು, ಅವಳಿಗೆ. ನಿತ್ಯ ನೆಮ್ಮದಿಗೊಂದು ಹೊಸ ವಿಘ್ನ. ಪಾಪ, ನನ್ನಿಂದಾಗಿ ಅವಳಿಗೆ ತಲೆನೋವು ತಪ್ಪಿದ್ದಲ್ಲ. ಇನ್ನು ಡಾಕ್ಟರು, ಸುಮಿತ್ರಾಬಾಯಿಯವರಿಗೂ ಸಂಶಯವಾಗಿರ ಬೇಕು. ಹಾಸ್ಯ ಹರಟೆಗಳ ದೆಸೆಯಿಂದ ಅವರ ಅಂತರಂಗವನ್ನು ತಿಳಿದು ಕೊಳ್ಳುವುದು ಸುಲಭವಲ್ಲ. ಆದರೂ ಆದಿನ ನಾವೆಲ್ಲರೂ ಅವರ ಮನೆಯಲ್ಲಿ ದ್ದಾಗ ಆ ಹುಡುಗಿ ಸುಮಿತ್ರಾಬಾಯಿ, ವಿನೋದದಲ್ಲಿ ನಮ್ಮಿಬ್ಬರನ್ನು ನೊಡಿ ನೋಡಿ ತನ್ನೊಳಗೇ ನಗುತ್ತಿರಲಿಲ್ಲವೇ ? ಆದರೆ ಅವರಿಬ್ಬರೂ ನಮ್ಮ ಹಿತೈಷಿ ಗಳು, ಸುಹೃದಯರು, ಹಾಸ್ಯಪ್ರಿಯರು. ಅವರಿಗೆ ಗೊತ್ತಿದ್ದರೂ ಪರವಾ ಯಿಲ್ಲ. ಶಾರದಮ್ಮಗೆ ಮಾತ್ರ ಅನುಮಾನಕ್ಕೆ ಎಡೆಗೊಡಬಾರದಿತ್ತು. ನನ್ನ ಕುರಿತು ಅವರೇನು ಬೇಕಾದರೂ ತಿಳಿದುಕೊಳ್ಳಲಿ. ಅವರ ಸೊಸೆಮೇಲೆ ತಪ್ಪು ಹೊರಿಸದಿದ್ದರೆ ಸಾಕು. ” ಎಂದು ಗೋಪಿನಾಥನು ಸೊರಗಿದನು.

ತನ್ನ ಸ್ವಂತ ಹಾರೈಕೆ ಹವಣಿಕೆಗಳನ್ನು ಹಿಂದೊತ್ತಿ ಪರಸೇವಾಪ್ರವೃತ್ತ ನಾಗುವುದು ಆತಗೆ ಯಾವಾಗಲೂ ಕಷ್ಟತಮವಾಗಿರಲಿಲ್ಲ. ಈಗಲಂತೂ ಪ್ರೇಮಸಂಸ್ಕಾರದಿಂದ ಸ್ವಾರ್ಥತ್ಯಾಗಿಯಾಗಿದ್ದನು. ಸಾಮಾನ್ಯರಿಗೆ ಸ್ವಕೀಯ ವಿಚಾರಗಳನ್ನು ಮರೆಯುವುದೇ ಒಂದು ಸಮಸ್ಯೆ, ಒಂದು ಆವಿದ್ಧ ಸಾಹಸ. ಆದರೆ ಪ್ರಣಯಿಗಳಿಗೆ ತಮ್ಮ ಹಿತವನ್ನು ಗಮನದಲ್ಲಿಟ್ಟುಕೊಳ್ಳು ವುದೇ ದುಸ್ತರವಾಗಿಬಿಡುತ್ತದೆ. ತಮಗೆ ತಾವೇ ಶತ್ರುಗಳಾಗುವ ಸಂಭವ

ವಿದೆ. ಪ್ರಣಯಿ ಪರಿಣತರಲ್ಲಿ ಪ್ರಥಮಸ್ಥಾನ. ಆತಗೆ ತನ್ನ ತಪಸಿದ್ಧಿ ಯನ್ನು ಬಿಟ್ಟು ಬೇರೆ ಯಾವ ಲಕ್ಷ್ಯವೂ ಇಲ್ಲ. ಅಹಂಭಾವನೆಯೇ ಇಲ್ಲ. ಸ್ಥಾನಮಾನಗಳ ಅರಿವಿಲ್ಲ. ಸಮಾಜದ ಸಂಭಾವನೆಗೆ ಬೆಲೆಯಿಲ್ಲ. ನಿಷ್ಕಾರಣ ವಾಗಿ ತನ್ನನ್ನು ತಾನೇ ಹಳಿಯುವನು; ತನಗೆ ತಾನೇ ಪ್ರತಿಕೂಲನಾಗುವನು. ಹೀಗೇ ಗೋಪಿನಾಥನು ತನ್ನ ನಡತೆಯಿಂದ ಮಾಲತಿಯ ಹೆಸರು ಕೆಸ ರಾಗುವಂತಿದೆ, ಆಕೆಯ ಶೀಲ ಚಾಡಿತರಳಿಗಳ ಕೋಟಲೆಗೆ ತುತ್ತಾಗು ವಂತಿದೆ, ಎಂದು ವಿಷಾದಿಸಿದನು.

ಇದರೊಂದಿಗೆ ಇನ್ನೊಂದು ಕಳವಳ. ಅಪನಿಂದೆಗೆ ಹೆದರಿ ನಟನೆ ಬೇರೆ ಮಾಡಬೇಕು. ನೋಡುವವರ ಕಣ್ಣಿಗೆ ಮಣ್ಣೆರಚಬೇಕು. ಈ ವಂಚನೆಗೆ ತಿಳಿಮನಸ್ಸು ಒಡಂಬಡಲಾರದು. ಆದರೆ ಒಳಗಿದ್ದಂತೆ ಹೊರಗಿದ್ದರೆ, ಆಂತ ರ್ಯದ ಅತಿಶಯವನ್ನು ಬಹಿರಂಗ ಪ್ರದರ್ಶಿಸಿದರೆ? ಮುಕ್ಕಾಲು ಪಾಲು ಮಂದಿ ಅಪಾರ್ಥಮಾಡಿಕೊಳ್ಳುವುದು ಖಂಡಿತ. ಸಮಾಜದ ದೃಷ್ಟಿಗೆ ಪ್ರೇಮ ವೆಂದರೆ ಒಂದೇ ಅರ್ಥ. ನಿತ್ಯನಡವಳಿಕೆಗೆ ಸಿಲುಕುವ ಅರ್ಥ. ಸಾತ್ವಿಕ ಪ್ರೇಮ ಸಂಬಂಧವೊಂದಿದೆ. ಅದರ ಅರ್ಥಕೋಶದಲ್ಲಿ 'ಪರಸ್ತ್ರೀ' 'ಪರ ಪುರುಷ'ವೆಂಬ ಶಬ್ದಗಳಿಲ್ಲ. ಅದರ ಸ್ವರ್ಗೀಯ ಸನಿಹಮಾತ್ರದಿಂದ ಋಣಾನು ಬಂಧಗಳೆಲ್ಲವೂ ಕಾದು ಕರಗಿ ಕಳಚಿಬಿದ್ದು ಅಂತಿಮ ಬಿಡುಗಡೆ ಉಂಟಾಗುತ್ತ ದೆಂತ ಅನ್ಯರಿಗೆ ಹೇಗೆ ಗೊತ್ತು? ಅವರಿಗೆ ಹೇಳುವುದಕ್ಕಾದರೂ ಸಾಧ್ಯವೇ? ಯಾವ ಭಾಷೆಯಲ್ಲಿ, ಯಾವ ಸನ್ನಿವೇಶದಲ್ಲಿ, ಯಾವ ಮುಖದಲ್ಲಿ ಹೇಳ ಬೇಕು? ವಂಚಿಸಲೇ ಬೇಕು. ಇಲ್ಲವೆ ವಂಚಕ ಅಂತನಿಸಿಕೊಳ್ಳಬೇಕು.

"ಆಗಲಿ, ಮಾಲತಿಗಾಗಿ ಮತ್ತೊಂದು ಸಾಹಸ. ಅವಳು ಆ ವಿದ್ಯೆಯಲ್ಲಿ ನಿಪುಣಳು. ಹುಟ್ಟುಗುಣವಿರಬೇಕು. ಅವಳಿಂದ ಕಲಿತುಬಿಡೋಣ, ಈ ಕುಟಿಲ ಕೌಶಲ್ಯ. ಬದುಕಿರುವವರೆಗೆ ಕಲಿಯುವ ಈ ಕುತೂಹಲ ಇದ್ದೇ ಇದೆಯಲ್ಲ. ಸತ್ಯ ವರ್ತನೆಯಿಂದ ನಮ್ಮಿಬ್ಬರ ಮಾನವನ್ನೂ ಮಣ್ಣುಪಾಲು ಮಾಡುವದಕ್ಕಿಂತ ನಟನೆಯಿಂದ ಕಾಪಾಡಿಕೊಳ್ಳುವುದೇ ಮೇಲು. ಆದರೆ ಸ್ವಾಭಾವಿಕವಾಗಿ ಎದೆಯೊಳಗೆ ಆನಂದತೀರ್ಥ ತುಂಬಿದಂತೆಲ್ಲ ಹೊರ ದೃಷ್ಟಿ ಒಣಗಿ ಅಂತರ್ಮುಖವಾಗುತ್ತೆ. ಅಂತಶ್ಚಕ್ಷು ಅರಳಿದಷ್ಟೆ ಹೊರ ಗಣ್ಣು ಮಂದವಾಗುತ್ತೆ. ಲೋಕಾಸಕ್ತಿಯೂ ಎಚ್ಚರಿಕೆಯೂ ತಗ್ಗುತ್ತದೆ.

ವಿವೇಕ ಸ್ಫುಟಗೊಂಡಹಾಗೆಲ್ಲ ವ್ಯವಹಾರ ಚಮತ್ಕಾರ 'ಬುದ್ಧಿಮತಿಕೆ' ಕಡಿಮೆಯಾಗುತ್ತೆ. ಮನಗಾನದ ಇಾಪಿಗೆ ಕಣ್ಣು ತಾನಾಗಿ ಮುಚ್ಚುತ್ತೆ. ನಾನೇನು ಮಾಡಲಿ ? ನನಗೆ ತಿಳಿದ ಸುಳ್ಳು ಸಾಲದು. ನಾನು ಕಂಡ ಸತ್ಯ ಸಲ್ಲದು ಎಂಥ ವಿಪರ್ಯಾಸವಿದು ? ಎಂಥ ಸಂದಿಗ್ಧ ಸನ್ನಿವೇಶ !" ಎಂದು ಚಿಂತಿಸಿದನು.

ಆತ ಹಿಂದೆ ಹೀಗಿರಲಿಲ್ಲ. ಬಂದೊದಗಿದುದನ್ನೆಲ್ಲ ಇದಿರಿಸುವ ಶಕ್ತಿಯಿತ್ತು. ನಿರೀಕ್ಷಿತವಾಗಲಿ, ಅನಿರೀಕ್ಷಿತವಾಗಲಿ ಸಂಭವಿಸಿದ ಘಟನೆಗಳನ್ನು ಧೈರ್ಯದಿಂದ ಪಾರಾಗುವ ಚೈತನ್ಯವಿತ್ತು. ಅವು ಹಿಡಿದ ಹಾದಿಯಲ್ಲಿ ಆತ ಹೋಗುತ್ತಿರ ಲಿಲ್ಲ. ಅವುಗಳೆಬ್ಬಿಸಿದ ಧೂಳಿನಿಂದ ಆತನ ಕಣ್ಣು ಮುಚ್ಚುತ್ತಿರಲಿಲ್ಲ, ಶಾಂತತೆ ಕಳೆಗುಂದುತ್ತಿರಲಿಲ್ಲ. ಸರಿಯಾಗಲಿ, ತಪ್ಪಾಗಲಿ ತನ್ನದೇ ಒಂದು ಸಾಮ್ರಾಜ್ಯ ವಿತ್ತು. ಧ್ಯೇಯಧೀರತನವಿತ್ತು. ಹಾಗೆಯೇ ಇರಬೇಕು. ಹೀಗೆಯೇ ಮಾಡ ಬೇಕೆಂಬ ದೀಕ್ಷೆಯಿತ್ತು. ಅದರ ಅವಲಂಬನದಲ್ಲಿ ಒಂದು ಬಗೆಯ ಹಿಗ್ಗು. ಉಲ್ಲಾಸವಿತ್ತು. ಆಸೆ ಹಿಂಗಿಸಿ, ಬಯಕೆ ಬತ್ತಿಸಿ ದೇಹವು ಹಗುರವಾಗಿತ್ತು, ಜೊಂಪು ಹತ್ತದಂಥ ಜಾಗರಣೆಯಿಂದ ಮನಸ್ಸು ತಿಳಿಯಾಗಿತ್ತು. ಬುದ್ಧಿ ಹರಿತವಾಗಿತ್ತು. ಅದೊಂದು ಉತ್ತಮ ದಶಾ ಸಿದ್ಧಿಯಲ್ಲ; ನಿಜ. ಅತೃಪ್ತಿ ಇದ್ದೇ ಇತ್ತು. ಆದರೆ ಅದು ಅಂಗಲಾಚುವ ಲೋಭದ ಅತೃಪ್ತಿಯಲ್ಲ. ಕಂಡಿದ್ದೆಲ್ಲ ಬೇಕೆಂದು ಕೈ ನೀಡುವ ಪ್ರತ್ಯಾಸೆಯಲ್ಲ. ಇದ್ದುದು ಸಾಕು. ಪಡೆದುದು ಸಾಕು. ಇನ್ನು ಕೊಡಬೇಕು, ಉಂಟುಮಾಡಬೇಕು, ಸತ್-ಕ್ರಿಯೆ ಬೇಕೆನಿಸುವ ಉನ್ನತಾಕಾಂಕ್ಷೆ. ಹಿಂದೆ ಆತಗಿದ್ದ ಚಿಂತೆ ಆಳುವ ಅರಸನಿಗಿರುವ ಚಿಂತೆ. ಚೇತನಾಸಂಪನ್ನನ ಲವಲವಿಕೆ. ಸ್ವತಂತ್ರಶಕ್ತಿ ವಿಹೀನವಾದ ಗುಲಾಮನ ನರಳುವಿಕೆಯಲ್ಲ. ಆದರೀಗ ? ಅತ್ಯಲ್ಪ ಕಾರಣಗಳಿಂದ ಮನಸ್ಸು ಕದಡಿಹೋಗುವಂತಾಗಿದೆ. ಹಿಂದೆ ಅತೃಪ್ತಿಯಿಂದ ಅತೃಪ್ತಿಗೆ ಒಂದೊಂದೇ ಮೆಟ್ಟಲು ಹತ್ತುತ್ತ ಮೇಲೇರುತ್ತಿರುವ ಉನ್ನತಭಾವನೆಯಿತ್ತು. ಈಗ ಒಂದು ಕಗ್ಗತ್ತಲೆಯ ಕಾಡಿನಲ್ಲಿ ದಾರಿತಪ್ಪಿದ ಹೊಟ್ಟೆ ಸಂಕಟ ! ತಾನು ಹೀಗೂ ಮಾರ್ಪಟ್ಟಿರಬಹುದೆ ? ಎಂದು ಗೋಪಿನಾಥಗೆ ಆಶ್ಚರ್ಯವಾಯಿತು.

ಮಾಲತಿಯ ಪ್ರೇಮ ದೈವಾನುಗ್ರಹಲಬ್ಧವಲ್ಲವೇ ? ಆಕೆಯೂ ಬಯಸಿ ಬಂದವಳಲ್ಲ, ಆದಿನ ಸಿನೆಮಕ್ಕೆ. ಸುಮ್ಮನೆ ಬಂದಳು; ಎದುರಾದೆವು. ಗುರು

ತಿಸಿದೆವು, ಪರಸ್ಪರ ಆತ್ಮೀಯತೆಯನ್ನು. ಮನಸೋತೆವು. ಹಾಗಿರುವಾಗ ಈ ಎದೆಯುರಿಗೇನು ಕಾರಣ? ಎಲ್ಲೋ ಒಂದು ತೊಟ್ಟು ವಿಷವಿರಬೇಕು. ನನ್ನಲ್ಲೋ, ಅವಳಲ್ಲೋ ಅಥವಾ ಇಬ್ಬರಲ್ಲೋ. ಅದನ್ನು ಕಿತ್ತೊಗೆಯಬೇಕು; ಇಲ್ಲವೆ ಜೀರ್ಣಿಸಿಕೊಳ್ಳಬೇಕು. ಈಗಾಗಲೆ ಅವಳಿಂದ ನನಗೆ ಸಿಕ್ಕಿದ ಸುಖ ಸಾಲದೆ? ಸಾಯುವತನಕ ಸೊರಗುವುದಕ್ಕೆ? ಆದರೆ ಇಬ್ಬರೂ ರೋಗಿಗಳಾದರೆ ಚಿಕಿತ್ಸೆ ಮಾಡುವವರಾರು? ಒಂದುವೇಳೆ ಮಾಲತಿ ಬೇಕೆಂದು ಹೇಳಿದರೆ ಬೇಡವೆನ್ನುವಷ್ಟು ಚೈತನ್ಯವಿದೆಯೆ, ನನಗೆ? ನಲ್ಲಿಗೆ ಒಲ್ಲೆಯೆನ್ನುವಂಥ ನಪುಂಸಕನೆ ನಾನು?”

ಈ ಪ್ರಶ್ನೆ ಒಂದು ದೊಡ್ಡ ಬೆಟ್ಟದಂತೆ ಗೋಪಿನಾಥನ ಗಮನವನ್ನು ಅಡ್ಡಗಟ್ಟಿತು. ಅಷ್ಟರಲ್ಲಿ ಪಂಬಿ ಬಂದು ಏನೋ ಕೇಳುತ್ತಿದ್ದಳು. ಫಕ್ಕನೆ ಅರ್ಥವಾಗಲಿಲ್ಲ.

“ಏನಪ್ಪ?”

“ನಂಗೆ ದವಡೆ ಹಯ್ಯು ಬಯುದು ಆವಾಗ”

“ದವಡೆ ಹಲ್ಲು ಬರೋದು ಯಾವಾಗಾಂತಲೇ?”

“ಓದು, ದವಡೆ ಹುಯ್ಯು” ಅನ್ನುತ್ತ ಬಾಯೊಳಗೆ ಬೆರಳು ಹಾಕಿ ತೋರಿಸಿದಳು.

“ಇದ್ದ ಹಲ್ಲು ಸಾಲದೇ? ಮುತ್ತಿನ ಮಣಿಹಾಗುಂಟಲ್ಲ?”

“ಕಬ್ಬು ತಿನ್ನಕ್ಕೆ? ದವಡೆಹುಯ್ಯು ಬೇಕಂತೆ, ಅತ್ತೆ ಹೇಯಿದ್ಳು.”

“ಹಾಗಾದರೆ ಅತ್ತೆಯೇ ಬರಲಿ, ಅವಳನ್ನೇ ಕೇಳೋಣ. ನೀನೀಗ ಹೋಗು. ಅಡ್ತಿರು” ಅನ್ನುತ್ತ ಬೆನ್ನುತಟ್ಟಿ ಕಳುಹಿಸಿದನು.

“ಈ ಕಂದಗೂ ಮಾಲತೀದೇ ಜಪ. ಮಾಲತಿ, ಮಾಲತಿ, ಮಾಲತಿ! ಮೂರ್ತಿಮತ್ತಾದ ಮಾಯೆ, ಅವಳು. ನಿಸರ್ಗದೇವಿಯ ಮಾನವಾವತಾರ! ಸೃಷ್ಟಿಲಯ ಲಾಲಿತ್ಯದ ಸಾಕ್ಷಾತ್ಕಾರ. ಅವಳು ಬಂದರೆ ಹೇಗೆ ಬೇಡವೆನ್ನಲಿ? ಬೇಡವೆನ್ನುವಷ್ಟು ಶಕ್ತಿ ಎಲ್ಲಿದೆ, ನನ್ನಲ್ಲಿ? ನನ್ನನ್ನು ಅಧೀರನನ್ನಾಗಿ ಮಾಡಿಬಿಟ್ಟಿದ್ದಾಳೆ. ಹೃದಯವನ್ನು ಎರಡು ಹೋಳುಮಾಡಿ ಒಂದನ್ನು ತನ್ನ ಅಂಗೈಯಲ್ಲಿಟ್ಟುಕೊಂಡಿದ್ದಾಳೆ ಅಯ್ಯೋ! ಒಲವಿನ ಒರಳಲ್ಲಿ ನನ್ನ ದೇಹವನ್ನು ಕುಟ್ಟುತ್ತಿದ್ದಾಳೆ. ಅವಳಿಗೇನು ಬೇಕು? ಅದಾದರೂ ಗೊತ್ತಿದ್ದರೆ?

ಅವಳಿಗೆ ಕಡಿಮೆಯಾದುದು ಯಾವುದು ? ಯಾವ ಕೊರತೆಯನ್ನು ನೀಗಿಸುವುದಕ್ಕಾಗಿ ನನ್ನ ಜೀವ ತಿನ್ನುತ್ತಿದ್ದಾಳೆ ? ನಾನವಳಿಗೆ ಯಾವ ಸುಖವನ್ನೀಯಲಿ ? ಯಾವ ಸಾಫಲ್ಯವನ್ನು ದೊರಕಿಸಲಿ ?

ಅವಳಿಗೆ ಗೊತ್ತಿದೆಯೋ ಇಲ್ಲವೋ, ತನಗೆ ಬೇಕಾದುದೇನೆಂತ. ಅವಳಿನ್ನೂ ಹುಡುಗಿ, ಮುಗುದೆ. ತನ್ನ ಮನಸ್ಥಿತಿಯನ್ನು ತಾನೇ ಅರಿತಿರಲಾರಳು. ಇಂದೊಂದು ಹೊಸ ಅನುಭವ–ಇಬ್ಬರಿಗೂ. ಆಗಲೇ ಬೇಕಿತ್ತು; ಯಾತಕ್ಕೋ ದೇವರೇ ಬಲ್ಲ. ಯಾವ ಕರ್ಮಾಂತರದ ಸೇಡನ್ನು ವಿಧಿಯು ತಾನು ತೀರಿಸಿಕೊಳ್ಳುತ್ತಿರುವುದೋ ಕಾಣೆ. ಅಥವಾ ಒಂದು ನವ ಚೈತನ್ಯವನ್ನು ನಮ್ಮಲ್ಲಿ ಮೂಡಿಸುವುದಕ್ಕಾಗಿ ಈ ಸತ್ವಪರೀಕ್ಷೆ ಮಾಡುತ್ತಿರುವುದೋ ನೋಡಬೇಕು. ನಮ್ಮ ಸಮ್ಮಿಲನದ ಅರ್ಥವೇನು ? ಉದ್ದೇಶವೇನು ? ಇಷ್ಟೊಂದು ದಿಟ. ನನ್ನಿಂದ ಮಾಲತಿಗೆ ಯಾವ ಘಾಸಿಯೂ ಆಗಬಾರದು. ಯಾವ ಕೇಡೂ ಸಂಭವಿಸಬಾರದು. ನನ್ನ ಗಂಡುತನಕ್ಕೆ ಅವಳ ಹೆಂಣು ಜೀವ ಬಲಿಯಾಗಬಾರದು. ಎಂದು ನನ್ನ ಅಂತರ್ಯದಲ್ಲಿ ಅವಳಿಗಿರುವ ಸ್ಥಾನವನ್ನು ನನ್ನ ಮನೆಯಲ್ಲಿ ಕೊಡಲು ಸಾಧ್ಯವಿಲ್ಲವಾಯಿತೋ ಅವಳ ಸಂಪತ್ತು ಅವಳ ಸೌಭಾಗ್ಯ ನನ್ನದಲ್ಲ. ಅವಳೇ ಅರ್ಪಿಸಿದರೂ ಸ್ವಿಕರಿಸಲಾರೆ. ನಾನು ಸೂರೆ ಮಾಡಲಾರೆ. ಮಾಡುವುದೇನೋ ಅತಿ ಸುಲಭ. ಆದರೆ ಆ ಮೇಲೆ ? ಅವಳೂ ಇಲ್ಲ. ನಾನೂ ಇಲ್ಲ. ಮತ್ತುಳಿಯುವುದು ನಮ್ಮಿಬ್ಬರ ಕಳೇಬರವನ್ನಾವರಿಸಿ ಸುಡುವ ಬೆಂಕಿಯೊಂದೇ.

“ ಛೀ ! ಹಾಗೆಂದಿಗೂ ಆಗಬಾರದು. ಅವಳು ಅರಿಯದೆ ಕೊಡಬಹುದು. ಆದರೆ ನಾನು ಕೊಳ್ಳಬಾರದು. ಗುಪ್ತಗಾಮಿನಿಯಾದ ನೀರ್ಝರಿ ಉಸುಬಿನ ಮಡಿಲಲ್ಲಿ ಕಣ್ಮರೆಯಾದಂತೆ ಅವಳ ಮುಗ್ಧತೆ ನನ್ನ ಒಂಟಿತನಕ್ಕೆ ಆಹುತಿಯಾಗಬಾದು.

“ ಕೃಷ್ಣಯ್ಯ ಉಪದೇಶಿಸಿದಂತೆ ಹಸ್ತಗತವಾದ ಹಂಣಿನ ರಸ ಹೀರಿ ಉಳಿದುದನ್ನು ಕಸವೆಂತ ಉಗುಳಿಬಿಡುವವರೆಗೆ ಇದಾವ ಚಿಂತೆಯೂ ಇಲ್ಲ. ಒಂದು ದಿನದ, ಒಂದುಗಳಿಗೆ ಸುಖಕ್ಕಾಗಿ ಗಂಡು ಹೆಣ್ಣು ದೇಹಗಳೆರಡು ಒಡಗೂಡಿ ಅನಂತರ ನಗುತ್ತ “ Thanks for a good time ” ಎಂದು ವಂದಿಸಿ ಅಗಲಿಬಿಟ್ಟು ಪರಸ್ಪರ ಮರೆತು ಮುಗಿಯುವಂತಿದ್ದರೆ ಸುಖವೇ.

ಬುದ್ಧಿ ಪ್ರಾಥಮಿಕ ದರ್ಜೆಯಲ್ಲಿದ್ದು, ಮನಸ್ಸಿನ ಅಂಕೆಗೆ ಒಳಗಾಗಿದ್ದರೆ. ಅದು ಕರ್ಮಾಂತರ ಶಿಕ್ಷಣದಿಂದ ವಿಕಸಿತವಾಗಿದ್ದರೆ ?

" ಅಷ್ಟೇ ಅಲ್ಲ. ಆತ್ಮವೊಂದಿಯೆನ್ನುತ್ತಾರಲ್ಲ. ಅದು ಬೇರೆ, ಮನಸ್ಸು ಬೇರೆ, ಇಂದ್ರಿಯಗಳು ಬೇರೆಯೆನ್ನಬಹುದೇ ? ಒಂದೇ ವೃತ್ತಿಯನ್ನು ಈ ರೀತಿಯಾಗಿ ವಿಭಾಗಿಸಲು ಸಾಧ್ಯವೇ ? ಇಂದ್ರಿಯೋಪಭೋಗದಿಂದ ಆತ್ಮನು ನಿಸ್ತೇಜನಾಗುವನೆ? ಅಥವಾ ಇಂದ್ರಿಯ ವ್ಯಾಪಾರದ ಸೋಂಕು ಆತ್ಮನಿಗೆ ತಗಲುವುದೇ ಇಲ್ಲವೇ ? ಇದೊಂದು ವಿಚಿತ್ರಯೋಜನೆ. ಆಧುನಿಕ ಪ್ರಜಾಸಾಮ್ರಾಜ್ಯತೆಗೆ ತೀರ ವಿರುದ್ಧ ಆತ್ಮನೇ ಪ್ರಭು. ಇಂದ್ರಿಯಗಳೇ ಪ್ರಜೆಗಳು. ಆತ್ಮನು ಪ್ರಜೆಗಳ ಹಂಗಿಲ್ಲದೆ, ಅವರ ಹಿತವನ್ನೆಣಿಸದೆ. ಅವರ ಯಾವ ಕರ್ಮಬಂಧನಕ್ಕೂ ಕಟ್ಟುಬಿದ್ದಿರದೆ ತಾನೊಬ್ಬನೇ ಬೇರೆ, ಏಳನೇ ಅಂತಸ್ಥಿನಲ್ಲಿರುವುದು. ಇದು ಕೇವಲ ಏಕ ಚಕ್ರಾಧಿಪತ್ಯದ ದುರಹಂಕಾರ. ವಿಶ್ವರಚನೆಯ ನ್ಯಾಯ ಹೀಗಿರಲಾರದು. ಬಹುಸಂಖ್ಯಾತರ ಪ್ರಭುತ್ವವೇ ಲೋಕ ನೀತಿ. ಆತ್ಮನೆಂದರೆ ಈ ದೇಹವನ್ನವಲಂಬಿಸಿದ, ಈ ಜೀವವಾಹಿನಿಯಲ್ಲಿ ಸೇರಿ ಪ್ರವಹಿಸುವ ದೈವ ಸಂಭೂತವಾದ ಒಂದು ಶಕ್ತಿ, ಒಂದು ವಾಣಿ, ಒಂದು ಬೆಳಕು. ಅದರ ಅಭಿವೃದ್ಧಿ, ಅವಹೇಳನ ತನುಮನಗಳ ವ್ಯಾಪಾರವನ್ನು ಹೊಂದಿಕೊಂಡಿದೆ — ಅಥವಾ ಹೊಂದಿಕೊಂಡಿರಬೇಕು. ಈ ದೇಹವು ನಶಿಸಿದಾನಂತರ ಇನ್ನೊಂದು ದೇಹದ ಆಶ್ರಯ ಆತ್ಮನಿಗೆ ಬೇಕೇ ಬೇಕು. ಆತ್ಮನು ಇಂದ್ರಿಯಗಳ ಪ್ರತಿಸಿಧಿಯಲ್ಲದಿದ್ದರೂ ಅವುಗಳ ಹಿತವೇ ಆತನ ಹಿತ. ಅವುಗಳನ್ನು ಬಿಟ್ಟು ಆತಗೆ ಬಿಡಾರವಿಲ್ಲ. ಅಂದರೆ—ಆತನನ್ನೂ ಆಳುತ್ತಿರುವ ಅಮಾನುಷ ಪ್ರಭುತ್ವವೊಂದಿರಬೇಕಲ್ಲ ? ರಾಗದ್ವೇಷಗಳಿಲ್ಲದ, ಹುಟ್ಟು, ಸಾವುಗಳಿಲ್ಲದ, ಶಾಶ್ವತವಾದ ಒಂದು ಅನುಪಮ ಶಕ್ತಿ ಅನಿವಾರ್ಯವಲ್ಲವೆ? ಏನೋ ಯಾರಿಗೆ ಗೊತ್ತು ? ಈಗೇತಕ್ಕೆ ಈ ಘನಘೋರ ಸಮಸ್ಯೆ ? ಯಾರೋ ಬಂದರು." ಅನ್ನುತ್ತ ಗೋಪಿನಾಥ ಹೊರಗೆ ಬಂದು ನೋಡಲು ವೀರಖಂಬದ ವೆಂಕಣ್ಣಜೋಯಿಸರು ಒಬ್ಬ ಆಳಿನ ಹತ್ರ ಒಂದು ಹೊರೆ ಹೊರಸಿಕೊಂಡು, ಕೈಯಲ್ಲೊಂದು ತಂಬಿಗೆ ನೇಲಿಸಿಕೊಂಡು ಬಂದು ನಿಂತಿದ್ದರು.

" ಏನು ಜೋಯಿಸರೆ, ಅಪರೂಪ ಬಂದು ಬಿಟ್ರಿ ? ಕೂತುಕೊಳ್ಳಿ. "

" ತಮ್ಮನ್ನ ಕಂಡು ಹೋಗೋಣಾಂತ ಬಂದೆ." ಅನ್ನುತ್ತ ಆಳಿನ ತಲೆ ಹೊರೆಗೆ ಕೈಕೊಟ್ಟು ಕೆಳಗಿಳಿಸಿ, ಕೂಲಿಕೊಟ್ಟು ಕಳುಹಿಸಿ, ದೂರ ಒಂದು ಬೆಂಚಿನ ಮೇಲೆ ಕುಳಿತರು.

" ನಿಮ್ಮ ದೋಸ್ತಿ ಸುಬ್ಬಾಭಟ್ಟರು ಹೇಗಿದ್ದಾರೆ ?"

" ಹೂಂ. ಇದ್ದಾನೆ, ಸದ್ಯ ತೆಪ್ಪಗೆ. ತಮ್ಮ ತೀರ್ಮಾನಕ್ಕೆ ಒಪ್ಪಿ ಕೊಂಡದ್ದೇ ತಪ್ಪು ಅಂತ ಹೇಳ್ತಿದ್ದಾನೆ."

" ಆತ ಏನೂ ಅಂದುಕೊಳ್ಳಿ. ಇದೇಸಿದು ದೊಡ್ಡ ಸಂತೇನೇ ತಂದು ಬಿಟ್ಟಿ ದ್ದೀರಲ್ಲಾ " ಅನ್ನುತ್ತ ಆಶ್ಚರ್ಯಪಟ್ಟನು. ಹೊರೆಯಿಂದ ತರಕಾರಿಗಳನ್ನು ತೆಗೆತೆಗೆದು ರಾಸಿಹಾಕುತ್ತಿದ್ದರು, ಆದಾದ ಮೇಲೆ ತಂಬಿಗೆಯನ್ನು ಆ ರಾಸಿಯ ಪಕ್ಕದಲ್ಲಿಟ್ಟು, ಕೈ ಮುಗಿದು ನಿಂತರು ಮುದುಕರು. " ಒಂದು ಮಗುವಿತ್ತಲ್ಲ ? ಹೋದ ಸಲ ಬಂದಾಗ ನೋಡಿದ್ದು ನೆನಪು " ಎಂದರು.

ಆಗ ಮಾಲತಿಯೂ ಸುಮಿತ್ರೆಯೂ ಗಾಡಿಯಿಂದಿಳಿದು ಗೇಟಿನೊಳಗಿಂದ ಬಂದುದರಿಂದ ಗೋಪಿನಾಥ ಸಂತೋಷದಿಂದ ಹೋಗಿ ಕರೆದುಕೊಂಡು ಬಂದನು. ಅವರಿಬ್ಬರು ಒಳಗೆ ಹೋದಮೇಲೆ ಆತ ಹೊರಗೆ ಬಂದು—

" ಇವೊತ್ತು ಆ ಮಗುವಿನ ಹುಟ್ಟಿದ ಹಬ್ಬ ಒಳಗಿದ್ದಾಳೆ; ಬರ್ತಾಳೆ " ಅಂದನು.

" ಒಳ್ಳೇ ದಿನ ಬಂದು ಬಿಟ್ಟೆ." ಅನ್ನುತ್ತ ಜೋಯಿಸರು ತನ್ನ ಎಲೆ ಅಡಿಕೆ ಜೋಳಿಗೆಯಿಂದ ಮೂರು ಕಿತ್ತಲೆಹಣ್ಣುಗಳನ್ನು ಹೊರತೆಗೆದು ಹಿಡಿದು ಕೊಂಡರು. ಆಗ ಮಾಲತಿ ಪಂಬಿಯನ್ನೆತ್ತಿಕೊಂಡು ಹೊರಗೆ ಬಂದಳು. ಜೋಯಿಸರು ಆಕೆಯಿದ್ದಲ್ಲಿಗೆ ಹೋಗಿ ಕಿತ್ತಲೆ ಹಣ್ಣುಗಳನ್ನು ಕೊಟ್ಟು, ಕತ್ತು ಕೊಂಕಿಸಿ ಮಾಲತಿಯನ್ನು ಆಪಾದ ಮಸ್ತಕ ನೋಡಿ,

" ದೈವ ಸಂಕಲ್ಪ. ಪರಮಸಂತೋಷವಾಗುತ್ತೆ ನಿಮ್ಮನ್ನು ನೋಡಿ. ನಿಮ್ಮ ಯಜಮಾನರು ನನ್ನ ಮನೆ ಉಳಿಸಿದರಮ್ಮ; ಬಡವನನ್ನ ಕಾಪಾಡಿ ದರು. ಮತ್ತೇನೂ ತಂದು ಕೊಡೋ ಶಕ್ತಿಯಿಲ್ಲ. ಇದೊಂದಿಷ್ಟು ತರಕಾರಿ, ತುಪ್ಪ ತಂದಿದ್ದೇನೆ." ಎಂದು ವಿಜ್ಞಾಪಿಸಿಕೊಂಡರು.

ಮಾಲತಿ ಮುಗುಳ್ನಗುತ್ತ ಗೋಪಿನಾಥನನ್ನು ನೋಡಿದಳು. ಆತ ನಗುತ್ತ,

" ಜೋಯಿಸರೆ ಇಷ್ಟೆಲ್ಲ ಶ್ರಮಪಡಬೇಕಾಗಿರಲಿಲ್ಲ. ಅದನ್ನೆಲ್ಲ ಒಳಗಿಡಿ ಸೋಣ. ಆದರೆ ಇವರು ವಕೀಲ್ ರಾಘವೇಂದ್ರರಾಯರ ಹೆಂಡತಿ. ನಮ್ಮ ಮಗಳ ಹುಟ್ಟಿದ ದಿನಕ್ಕೆ ಬಂದಿದ್ದಾರಷ್ಟೆ." ಅಂದನು.

" ಓ ! ಹಾಗಾದರೆ ತಮ್ಮ—?"

" ನನ್ನ ಹೆಂಡತಿ ತೀರಿಕೊಂಡು ಕೆಲವು ವರ್ಷಗಳಾಯಿತು. ಇದೇ ನಮ್ಮ ಮಗು."

"ನಾವೇನು ಮಾಡೋದಕ್ಕಾಗುತ್ತೆ. ಎಲ್ಲವೂ ಅವನಿಚ್ಛೆ! ಭಗವತ್ಸಂಕಲ್ಪ! ನನಗೆ ಗೊತ್ತಿರಲಿಲ್ಲ. "

ಮಗುವನ್ನು ಹರಸಿ ಜೋಯಿಸರು ಹೋದರು. ಅಷ್ಟರಲ್ಲಿ ಒಳಗಿನಿಂದ ಸುಮಿತ್ರೆಯೂ ಬಂದಳು.

" ನಾನೊಬ್ಬಳೇ ಬಂದೆನೋ ಎಂಬ ಸಂಶಯ ಸುರುವಾಯಿತು. ನೀನೆಲ್ಲಿ ನೋಡಿದರೂ ಕಾಣೆ " ಅಂದಳು ಮಾಲತಿಗೆ.

" ಇಲ್ಲಿಯೂ ಕಾಣದೇ ಹೋಗಿದ್ರೆ ಪ್ರಾಯಶಃ ನೇರ ಬಂದದಾರಿ ಮೇಲೆ ಹುಡುಕಿಕೊಂಡು ಹೋಗುತ್ತಿದ್ದರೋ ಏನೋ, ಅಲ್ವೆ ?" ಎಂದು ಗೋಪಿನಾಥನು ಕೇಳಿದನು.

" ಇಲ್ಲ; ಅವಳಿಗೆ ಮೊದಲಿಂದಲೂ ದೃಷ್ಟಿ ಸ್ವಲ್ಪ ಮಂದ. " ಅಂದಳು ಮಾಲತಿ.

"ಇವತ್ತಂತೂ ಶೆಕೆಯಿಂದಾಗಿ ಕಣ್ಣು ಬಿಡೋದಕ್ಕೆ ಆಗೋದಿಲ್ಲ." ಅನ್ನುತ್ತ ಸುಮಿತ್ರೆ ಕೈ ಬೆರಳುಗಳಿಂದ ಮುಖಕ್ಕೆ ಗಾಳಿ ಹಾಕಿಕೊಂಡಳು.

" ನಿಮ್ಮನ್ನೋಡಿದರೆ ಅಷ್ಟೇನೂ ಶೆಕೆಯಿದ್ದ ಹಾಗೆ ಕಾಣೋದಿಲ್ಲವಲ್ಲ." ಎಂದನು ಗೋಪಿನಾಥ.

" ಇಲ್ಲವೇ ? ಮುಡಿದಿದ್ದ ಹೂವನ್ನು ತೆಗೆದಿಟ್ಟುಬಿಟ್ಟು ಬಂದಿದ್ದೇನೆ ಶೆಕೇಂತ ?"

" ಪಾಪ "

" ಯಾರು ಪಾಪ ?" ಅಂತ ಸುಮಿತ್ರೆ ಕೇಳಿದಳು.

" ಹೂವು "

" ಅದರ ಮೇಲೇನು ಅಷ್ಟು ಕನಿಕರ ?"

"ನೀವು ಮುಡಕೊಂಡೇ ಇದ್ದಿದ್ರೆ ಬಾಡದೇಇರುತ್ತಿತ್ತೋ ಏನೋ, ಕಾಂತ."

" ನಾನಂಥ Refrigeuator ಅಲ್ಲ, ಬನ್ನಿ ಒಳಗೆ ಕುಳಿತು ಕೊಳ್ಳೋಣ. " ಅಂದಳು

ನಡುಮಧ್ಯಾಹ್ನ ಸಮೀಪಿಸುವಾಗ ರಾಘವೇಂದ್ರರಾಯರೂ ಶಾರದಮ್ಮನೂ ಬಂದರು. ಗೋಪಿನಾಥ ಅವರನ್ನು ಆದರದಿಂದ ಕರೆತಂದನು.

'' ನೋಡು ಗೋಪಿ, ಎಲ್ಲರೂ ಹಾಜ್ರಾಗಿದ್ದೇವೆ; ಬಿಡಾರ ಕಿತ್ಕೊಂಡೇ ಬಂದಿದ್ದೇವೆ. ನೀವೆಷ್ಟು ಹೊತ್ತಿಗೆ ಬಂದ್ರಿ " ಅನ್ನುತ್ತ ಶಾರದಮ್ಮ ಸಾವಿತ್ರೆ ಮಾಲತಿಯರ ಕಡೆಗೆ ತಿರುಗಿದರು.

" ನಾವು ಆ ನಾಲ್ಕು ಮನೆಗೆ ಹೋಗಿ ಹೇಳಿಬಿಟ್ಟು ಇಲ್ಲಿಗೆ ಬರುವಾಗ ..........." ಅಂತ ಮಾಲತಿ ಹೊತ್ತಿನ ಅಂದಾಜಿಗೆ ಮಾತು ತೇಲಿಸಿದಾಗ ಗೋಪಿನಾಥ ಸಹಾಯಕ್ಕೆ ಬಂದು

" ಒಂಭತ್ತುವರೆ ಯಾಗಿತ್ತು " ಅಂದನು.

" ಅಷ್ಟು ಬೇಗನೆ ಹೇಗಪ್ಪ ಹೋಗಿ ಬಂದ್ರಿ ?"

" ಸಾವಿತ್ರೀ, ಅಮ್ಮ . ಅವಳಿದ್ದದ್ರಿಂದ ಎಲ್ಲೂ ಅನಾವಶ್ಯಕ ಹೊತ್ತು ಕಳಿಯಲಿಲ್ಲ. ಅವರು ಅಪರೂಪ ಬಂದಿದ್ದೀರಿ. ಕೊಂಚ ಹೊತ್ತು ಕೂತು ಹೋಗಬಾರದೇ ಅಂದದ್ದಕ್ಕೆ ' ಹೆಚ್ಚಿನ ಮಾಹಿತಿ ಬೇಕಾದ್ದಲ್ಲಿ ಸಂಜೆ ನಾಲ್ಕು ಗಂಟೆಗೆ ತಪ್ಪದೇ ಹಾಜ್ರಾಗಬೇಕು. ಅಲ್ಲಿ ಕೊಡೋಣಾಗುವದು' ಅಂದು ಬಿಟ್ಟಳು. " ಎಂದಳು ಮಾಲತಿ.

ಮಾಲತಿ ತೊಡೆಯ ಮೇಲೆ ಕೂರಿಸಿಕೊಂಡಿದ್ದ ಪಂಬಿಯನ್ನು ನೋಡಿ ರಾಘವೇಂದ್ರರಾಯರಿಗೆ ಏನೆನಿಸಿತೋ ಏನೋ. ಎಂದೂ ಮಕ್ಕಳನ್ನು ಮಾತ ನಾಡಿಸದ ಮಹಾರಾಯರು ಪಂಬಿ ಕಡೆಗೆ ಒಂದು ಕೈನೀಡಿ " ಬಾ ಮಗು, ನನ್ನ ಹತ್ರ ಬಾ " ಅಂದರು.

ಮಾಲತಿಗೆ ಹೇಳಲಾರದ ಆನಂದದಿಂದ ಮೈ ನಿಮಿರಿತು ಮಗು ಆಕೆಯ ಮುಖವನ್ನೆ ನೋಡುತ್ತ ' ಇವಯು ಆಯು ? " ಎಂದು ಕೇಳಿದಳು.

ಮಾಲತಿ ನಗುತ್ತ " ಸ್ವಲ್ಪ ಹೇಳಿ '' ಅಂದಳು ಗಂಡನ ಹತ್ರ. ಪಂಬಿ ರಾಘವೇಂದ್ರರಾಯರನ್ನೇ ದಿಟ್ಟಿಸಿ ನೋಡುತ್ತ " ಓ ಮೊನ್ನೆ ಕಾಪಿ ಕುಯಕ್ಕೆ ಬಂದಿದ್ದು ?" ಎಂದು ಗುರ್ತು ಹಿಡಿದಳು.

" ಯಾವಾಗ ?" ಎಂದು ಮಾಲತಿ ಕೇಳಿದಳು.

" ಆ ಕೇಸಿನ ಎವಾರ್ಡ್ ಇತ್ತಲ್ಲ, ಭಾನುವಾರ. ಆ ದಿನವಿರಬೇಕು " ಅಂದನು ಗೋಪಿನಾಥ.

ಮಗುವು ಕುಳಿತಲ್ಲಿಂದ ಕದಲದಿರುವುದನ್ನು ನೋಡಿ ರಾಘವೇಂದ್ರ ರಾಯರು ಅದರ ಬೆನ್ನು ನೇವರಿಸಿಬಿಟ್ಟರು. ಪಂಬಿಗೆ ಅವರು ಕರೆದಾಗ ಹೋಗುವ ಮನಸ್ಸಿಲ್ಲದಿದ್ದರೂ ಅವರ ಮುದ್ದಾಟಕ್ಕೆ ಆಕ್ಷೇಪವಿರಲಿಲ್ಲ. ಅದು ತನ್ನ ಅರ್ಹತೆಯೆಂದು ತಿಳಿದಿದ್ದಳು.

" ಮಕ್ಕಳೆಲ್ಲ ನಿರ್ದಾಕ್ಷಿಣ್ಯ ಪ್ರಾಣಿಗಳು. ತಮ್ಮದೇ ತಮಗೆ. ಇನ್ನೊಬ್ಬರ ಲಕ್ಷ್ಯವೇ ಇಲ್ಲ. " ಎಂದು ಸುಮಿತ್ರೆ ಕಟುವಾಗಿ ಟೀಕಿಸಿದಳು.

" ಹಾಗಲ್ಲ ದಯೆ ದಾಕ್ಷಿಣ್ಯವೆಂಬುದು ಹಿರಿತನದ ಲಕ್ಷಣಗಳು. ತುಲನೆ ಮಾಡಿ ವ್ಯತ್ಯಾಸವನ್ನು ಸೂಚಿಸುವ ಶಬ್ದಗಳು " ಎಂದನು ಗೋಪಿನಾಥ.

" ಪ್ರಾಯಶಃ ಮಕ್ಕಳ ಕಣ್ಣಿಗೆ ನಾವೇ ನಿರ್ದಾಕ್ಷಿಣ್ಯ ಪಶುಗಳಾಗಿ ಕಾಣ ಬಹುದು. "ಎಂದು ರಾಘವೇಂದ್ರರಾಯರು ಅನುಮೋದಿಸಿದರು. ಮಾಲತಿಗೆ ಅತ್ಯಾಶ್ಚರ್ಯವಾಯಿತು. ತನ್ನ ಗಂಡನಲ್ಲಿ ಈ ಪರಿವರ್ತನೆ ಹೇಗೆ ಬಂತು ? ಇಂದೇನಾಗಿದೆ ಇವರಿಗೆ ? ಅಥವಾ ತಪ್ಪಿ ನುಡಿದು ಬಿಟ್ಟರೊ ! ಅಥವಾ ಅವರಿಗೆ ಸುಮಿತ್ರೆಯು ಮೇಲಿದ್ದ ವಿರೋಧ ಭಾವನೆಯನ್ನು ಪ್ರಕಾಶಪಡಿಸು ವುದಕ್ಕಾಗಿ ಮಾತ್ರ ಹಾಗಂದಿರಬಹುದೋ !

" ನಿಜ. ಮಕ್ಕಳ ಮನೋವೃತ್ತಿಯೇ ಬೇರೆ " ಎಂದನು ಗೋಪಿನಾಥ.

" ನನಗೆ ಹಾಗೆನಿಸೋದಿಲ್ಲ. ನನ್ನ ಅಭಿಪ್ರಾಯವೇ ಬೇರೆ. " ಎಂದಳು. ಸುಮಿತ್ರೆ.

" ಆ ಭಾಗದಲ್ಲಿ ನಿಮ್ಮಿಂದ ಗೋಪಿನಾಥರಾಯರಿಗೇ ಹೆಚ್ಚಿನ ತಿಳುವಳಿಕೆ ಯಿರಬೇಕಲ್ಲ ?" ಎಂದರು ರಾಘವೇಂದ್ರರಾಯರು ಅದಷ್ಟು ತಾಳ್ಮೆಯಿಂದ.

ಒಂದು ಮಗುವಾದಾಕ್ಷಣ ಏನು ಅನುಭವವಾಗುತ್ತೆ ? ಇದ್ದ ತಿಳುವಳಿಕೆ ಯೆಲ್ಲ ಮುದ್ದಿನಲ್ಲೇ ಮುಳಗಿಹೋಗುತ್ತೆ. ಅಜ್ಜಿ ಸಾಕಿದ ಮಗು ಅಂತಾರಲ್ಲ; ಹಾಗೆ. ಅನುಭವವಾಗಬೇಕಾದರೆ—"

ಸುಮಿತ್ರೆ ಮುಗಿಸುವುದರೊಳಗೆ ಮಾಲತಿ ಅಡ್ಡ ಮಾತನಾಡಿದಳು.

" ಒಂದು ಹತ್ತು ಹನ್ನೆರಡಾದರೂ ಮಕ್ಕಳತಾಯಿಯಾಗಬೇಕು. ಅಥವಾ ಒಂದು ಶಾಲೆಯಲ್ಲಿ ಉಪಾಧ್ಯಾಯಿನಿಯಾಗಬೇಕು."

" ಥೂ; ಉಪಾಧ್ಯಾಯಿನಿಯರಿಗೇನು ಗೊತ್ತು, ಮಕ್ಕಳ ವಿಚಾರ ? ಹತ್ತು ಹನ್ನೆರಡು ಹೆತ್ತು ಸಾಕುವುದರೊಳಗೆ ತಾಯಂದಿರು ಮೂಲೆ ಪಾಲಾಗುತ್ತಾರೆ. ವಿಚಾರ ಮಾಡಿ ತಿಳಕೊಳ್ಳುವ ಶಕ್ತಿಯೂ ಇರೋದಿಲ್ಲ. ಪುರಸೊತ್ತು ಅದಕ್ಕೆ ಮೊದಲೇ ಇಲ್ಲ. " ಎಂದಳು ಸುಮಿತ್ರೆ.

" ಇಷ್ಟೆಲ್ಲ ಶಿಶುವಿಜ್ಞಾನ ಸಂಗ್ರಹ ನಿಮ್ಮ ಪೂರ್ವಜನ್ಮದ್ದಿರಬೇಕು. " ಎಂದನು ಗೋಪಿನಾಥ.

" ಇದೇ ಜನ್ಮದ್ದೇ. ಅವಳ ಸ್ವಂತ ಅಭಿಪ್ರಾಯ ಹೇಳ್ತಿದ್ದಾಳೆ, ಮಕ್ಕಳ ಪ್ರತಿನಿಧಿಯಾಗಿ " ಅಂದಳು ಮಾಲತಿ ನಗುತ್ತ.

ಅಷ್ಟರಲ್ಲಿ ಸುಮಿತ್ರೆಗೆ ತಾನಿನ್ನು ಇದ್ದರೆ ಮಿಕ್ಕವರ ಊಟಕ್ಕೆ ಅಡ್ಡಿಯಾಗಬಹುದೆಂತ ನೆನಪಾಗಿ ಥಕ್ಕನೆ ಎದ್ದು ನಾಲ್ಕು ಗಂಟೆ ಬಿಟ್ಟು ಬರುತ್ತೇನೆಂತ ಹೇಳಿ ಮನೆಗೆ ಹಿಂತಿರುಗಿದಳು.

ಇಂದಿರಮ್ಮ ಬಂದು ಎಲ್ಲರನ್ನೂ ಊಟಕ್ಕೆಬ್ಬಿಸಿದರು. ಊಟವಾಗಿ ಒಂದರ್ಧ ತಾಸಿನಲ್ಲಿ ರಾಘವೇಂದ್ರರಾಯರು ಹೊರಟರು. ತಾನಿನ್ನು ಇದ್ದು ಮಾಡವುದೇನಿಲ್ಲ. ಎಲ್ಲ ಹೆಂಗಸರ ಕಾರ್ಯಭಾರ, ಎಂದರು. ಇಂದಿರಮ್ಮ ಬಲವಂತ ಮಾಡಿದ್ದರಿಂದ ಮತ್ತೆ ಅರ್ಧಗಂಟೆ ಮುಳ್ಳಿನ ಮೇಲೆ ಕುಳಿತಂತೆ ಇದ್ದರು. ಒಂದು ಲೋಟ ಕಾಫಿಯಲ್ಲಿ ಸ್ವಲ್ಪ ಕುಡಿದು ಹಾಗೆಯೇ ಬಿಟ್ಟರು. ಆ ಮೇಲೆ ಶಾರದಮ್ಮನೇ ಹೇಳಿದರು.

" ಹೋಗಲಿ, ಬಂದದ್ದೇ ವಿಶೇಷ. ನೀವು ಬಾರದಿದ್ರೆ ನಾನೂ ಹೋಗೋದಿಲ್ಲವೆಂತ ಮಾಲತಿ ಹಟ ಮಾಡಿದ್ರಿಂದ ಬಂದ. "

" ಆಗಲಪ್ಪ ಹೋಗಿಬಾ. ಈ ಮನೆ ಬೇರೆ, ನಿನ್ನ ಮನೆ ಬೇರೇಂತ ತಿಳಿದುಕೊ ಬೇಡ. ಬಂದು ಹೋಗ್ತಾ ಇರು, ಆಗಾಗ. ಮರಿಯಬೇಡ." ಅಂದರು ಇಂದಿರಮ್ಮ.

" ನನ್ನ ಬಗ್ಗೆ ನಿಮ್ಮ ಮಗನೇ ಸಮಾಧಾನ ಹೇಳಲಿ; ಬರ್ತೇನೆ " ಅನ್ನುತ್ತ ಹೋಗಿಬಿಟ್ಟರು. ಮಾಲತಿ ಮಗು ಸಹಿತ ಅವರೊಂದಿಗೆ ಗೇಟು ತನಕ ಹೋದಳು. ಗೇಟಿನಬಳಿ ಎಲ್ಲವೂ ಮುಗಿಸಿಕೊಂಡೇ ಬಾ ಎಂತ ಹೆಂಡತಿಗೆ ಹೇಳಿ ಪಂಬಿಯ ಬೆನ್ನು ತಟ್ಟಿ ಹೋದರು.

## ೨೯

ಆ ರೀತಿ ಮಾಲತಿ ರಾಘವೇಂದ್ರರಾಯರ ಜತೆಯಲ್ಲಿ ಹೋಗಿ ಅವರ ಮುಖ ನೋಡಿ ಮಾತನಾಡಿ ಪ್ರಸನ್ನಳಾಗಿ ಬಂದುದನ್ನು ಎವೆಯಿಕ್ಕದೆ ನೋಡುತ್ತಿದ್ದ ಗೋಪಿನಾಥಗೆ ಒಂದು ಅನಂತಕ್ಷಣದ ಅವಧಿಯಲ್ಲಿ ನರಕದ ಸಕಲ ಯಾತನೆಯ ಅನುಭವವಾಗಿ ಬಿಟ್ಟಿತು. ಅವನೆದೆ ಮುದುರಿ ಬಿತ್ತು, ಹೊರಳಿತು, ನರಳಿತು, ಉರಿಯಿತು. ಮಾಲತಿಯನ್ನು ನೋಡಿದಷ್ಟೂ ಸಾಲದು ನಿಜ ಆದರೆ ಆಕೆಯ ತುಂಬಿದ ಗಲ್ಲಗಳಲ್ಲಿ, ಅಲುಗದ ತುಟಿಗಳಲ್ಲಿ, ಆಳವಾದ ಕಣ್ಣುಗಳಲ್ಲಿ, ಅತೃಪ್ತಿಯ, ಅಸಮಾಧಾನದ, ದುಃಖದ ಒಂದೇ ಒಂದಾದರೂ ಚಂಚಲ ಕಿರಣ ಕುಣಿಯುತ್ತಿದ್ದರೆ ಆಗುತ್ತಿತ್ತು. ಬೇಕಾದ್ದು ತನಗುಂಟು ಎಂಬ ಶಾಂತ ಮಂದಹಾಸದ ಬದಲು ಬೇಕಾದ್ದೊಂದು ಬಿಟ್ಟು ಬೇರೆಲ್ಲ ಭಾಗ್ಯವುಂಟೆಂಬ ನಿರಾಶೆಯ ನೆರಳಿದ್ದರೆ ಚೆನ್ನಾಗಿತ್ತು, ಎಂದು ಹೊಟ್ಟೆಕಿಚ್ಚು ಪಟ್ಟನು. ಕೋಪಿಸಿಕೊಂಡನು. ಕೊನೆಗೆ ತನ್ನ ತಿಳಿಗೇಡಿತನಕ್ಕೆ ತಾನೇ ನಾಚಿಗೊಂಡು ತಣಿದನು.

ರಾಘವೇಂದ್ರರಾಯರು ಹೋದಮೇಲೆ ಗೋಪಿನಾಥಗೆ ಮನೆತುಂಬ ಓಡಾಡಲು ಯಾವ ಅಡ್ಡಿಯೂ ಇರಲಿಲ್ಲ. ಅವರಿರುವ ತನಕ ಆತಗೊಂದು ತಲೆ ಹೊರೆ ಅವರೊಡನೆ ಹೇಗೆ ವರ್ತಿಸಲಿ, ಏನು ಮಾತನಾಡಲಿ, ಯಾವ ಪ್ರಸ್ತಾಪವೆತ್ತಲಿ, ಎಂಬುದು. ಅವರು ತನ್ನಂತೆ ಹೋಗಿಬಂದಲ್ಲಿ ಸಲಿಗೆಯಿಂದಿರುವವರಲ್ಲ. ಕೇವಲ ಸಂಬಂಧಿಕರಾದರೂ ಹೆಂಗಸರೊಂದಿಗೆ ಕುಶಲಪ್ರಶ್ನೆ ಮಾಡುವವರಲ್ಲ. ತಮ್ಮ ವೃತ್ತಿ, ತಮ್ಮ ಉದ್ಯೋಗ, ಅಭಿರುಚಿಗೆ ಹೊರಗಾದ ವಿಷಯಗಳಿಗೆ ತಲೆ ಹಾಕುವವರಲ್ಲ. ಆದರೂ ಇಂದು ವಾಸಿ. ಆಶ್ಚರ್ಯ ! ಎಂದೆನಿಸಿತು ಆತಗೆ. ನಾಲ್ಕು ಗಂಟೆಯ ತನಕ ಮನೆಯೆಲ್ಲ ಅಡ್ಡಾಡಿದನು. ಕಾಸಿನ ಕೆಲಸವಿಲ್ಲದಿದ್ದರೂ ಅತಿ ಉತ್ಸಾಹದಿಂದ ಒಳಗಿಂದ ಹೊರಗೆ, ಹೊರಗಿಂದ ಒಳಗೆ ಅಡ್ಡಾಡಿದನು. ಒಂದು ಸಲ ಹೆಂಗಸರೆಲ್ಲ ಅಡುಗೆ ಮನೆಯಲ್ಲಿ ಅಡಿಕೆ ಪೊಟ್ಣಗಳನ್ನು ಕಟ್ಟಿ ಎಲೆಪಟ್ಟೆಗಳನ್ನು ಸಜ್ಜುಗೊಳಿಸುತ್ತಿರುವಾಗ ಹೋದನು. ಆಗ ಇಂದಿರಮ್ಮ ಹೇಳಿದರು.

"ಏನು ಗೋಪಿ ? ನಿನಗೇನು ಕೆಲಸ ಅಡುಗೆಮನೇಲಿ ? ಒಬ್ಬನಿಗೇ ಬೇಜಾರವಾದರೆ ಕೂತುಕೋ ನಾಲ್ಕು ಪೊಟ್ಣ ಕಟ್ಟಿಕೊಡು ನೋಡೋಣ."

" ನನ್ನ ಕೆಲಸ ಹಾಗಿರಲಿ ಅತಿಥಿಗಳಾಗಿ ಬಂದ ಇವರಿಗೇನು ಕೆಲಸ ಅಡುಗೆ ಮನೇಲೀಂತ ತನಿಖಿಗೆ ಬಂದೆ. ಪೊಟ್ಣ ಕಟ್ಟಿಕೊಡೋಣ. ಅದಕ್ಕೇನು ? ನಿಮಗಿಂತ ಚೆನ್ನಾಗಿ ಕಟ್ಟಬಲ್ಲೆ " ಅಂದನು.

" ಆಗಲಿ ನೋಡೋಣ ನಿನ್ನ B. A; B. L. ಸಾಮರ್ಥ್ಯ; ಕೂತುಕೋ. ಈ ತಟ್ಟೇಲಿ ಕಾಗದವಿದೆ. ಈ ಬಾಟ್ಲೇಲಿ ಅಡಿಕೆಯಿದೆ." ಅನ್ನುತ್ತ ಶಾರದಮ್ಮ ಸರಿದು ಜಾಗಮಾಡಿದರು. ಗೋಪಿನಾಥ ಸಡಗರದಿಂದ ಕುಳಿತು ಸ್ವಲ್ಪ ಹೊತ್ತು ಹಾಗೇ ನೋಡುತ್ತಿದ್ದ.

" ಏನು ಗೋಪಿ, ಕೈಕಟ್ಟಿ ಕೂತಿದ್ದೀಯಲ್ಲಾ. ಇದೇಯೇನು ನೀನು ಕಟ್ಟೋದು ?'' ಎಂದರು ಇಂದಿರಮ್ಮ.

" ಹಾಗೆಲ್ಲ ಅವಾಂತರ ಮಾಡಿದರೆ ಹೇಗಮ್ಮ ? ನೀವು ಕಟ್ಟೋ ಕ್ರಮ ಯಾವುದು. ನನ್ನ ಕ್ರಮ ಯಾವುದೂಂತ ಪರೀಕ್ಷೆಮಾಡಿ ತುಲನೆ ಮಾಡಿ ಆ ಮೇಲೆ ತಾನೇ ಕೆಲಸಕ್ಕೆ ಆರಂಭ ?" ಅನ್ನುತ್ತ ಎರಡು ಪೊಟ್ಣಗಳನ್ನು ಹಾಗೂ ಹೀಗೂ ಕಟ್ಟಿ ಮುಗಿಸಿದನು.

" ಹೇಗಿದೆ ?" ಎಂದು ಹೆಮ್ಮೆಯಿಂದ ಕೇಳಿದನು.

ಮಾಲತಿ ಒಂದು ಪೊಟ್ಣವನ್ನು ತಗೊಂಡು ಅಂಗೈ ಮೇಲಿಟ್ಟುಕೊಂಡು ತೂಗುತ್ತ, " ಬಲು ಚೆನ್ನಾಗಿ ಕಟ್ತಾರಮ್ಮ. ಗಣಪತಿ ಗುಡೀಲಿ ಪಂಚಕಜ್ಜಾಯ ಕಟ್ತಾರಲ್ಲ, ಹಾಗೆ " ಅಂದಳು.

" ಮತ್ತೆ ಅಷ್ಟು ಅಡಿಕೆ ಬೇಡವೇನು ಒಬ್ಬರಿಗೆ ?"

" ಇಲ್ಲೇ ತಿನ್ನೋವ್ರಿಗೆ ಬೇಡ. ಜೇಬಿಗೆ ಹಾಕ್ಕೊಂಡು ಮನೆಗೆ ರವಾನಿಸೋವ್ರಿಗೆ ಸಾಲದು " ಅಂದಳು ನಗುತ್ತ.

" ನಿಮ್ಮ ಪೈಕಿ ಅಂಥವರೂ ಬರೋವ್ರಿದ್ದಾರೆಂತ ನನಗೇನು ಗೊತ್ತು ?'' ಅನ್ನುತ್ತಾ ಆಕೆಯ ಕೈಯಿಂದ ತಗೊಂಡು ತಿರುಗಿ ಕಟ್ಟುತ್ತಾ ಕುಳಿತನು. ಈ ಮಧ್ಯೆ ಪಂಬಿ ಕಡೆಗೆ ಯಾರೂ ಗಮನ ಕೊಡಲಿಲ್ಲ. ಆಕೆ ತನ್ನ ಹುಟ್ಟಿದ ಹಬ್ಬಕ್ಕೆ ಕೈಲಾದಷ್ಟುಮಟ್ಟಿಗೆ ಸಹಾಯ ಮಾಡಬೇಕೆಂಬ ಆತುರದಿಂದ ಅಡಿಕೆ ಪುಡಿಯನ್ನು ಬಾಟ್ಲಿಯಿಂದ ತಟ್ಟೆಗೂ ತಟ್ಟೆಯಿಂದ ಬಾಟ್ಲಿಗೂ ಹಾಕುತ್ತಿದ್ದವಳು ಈ ಪ್ರಯೋಗದಿಂದ ತನ್ನ ಬೆರಳುಗಳಿಗೆ ಅಂಟಿಕೊಂಡಿದ್ದ ಸಕ್ಕರೆಯ ಹರಳುಗಳನ್ನು ಪರಿಷ್ಕಾರವಾಗಿ ನೆಕ್ಕುತ್ತಿದ್ದಳು. ಗೋಪಿನಾಥ ನೋಡಿ, " ಅಲ್ನೋಡಿ, ಪಂಬೀನ " ಅನ್ನುತ್ತಾ ನಕ್ಕನು.

"ಥೂ! ಥೂ! ಪಂಬಿ, ನೀನು ಹೊರಗೆ ಹೋಗು. ನಿನ್ನ ಕೋಣೆಗೆ ಹೋಗಿ ಆಡು. ಇಲ್ಲೇನು ಕೆಲಸ?" ಎನ್ನುತ್ತ ಇಂದಿರಮ್ಮ ಮಗುವನ್ನೆತ್ತಿ ನಿಲ್ಲಿಸಿ ಅಂಗಿಯನ್ನು ಕೊಡವಿದರು.

"ಮಾಲತಿ, ನೀನವಳನ್ನ ಕರೆದುಕೊಂಡು ಹೋಗಮ್ಮ. ಇದನ್ನಿಷ್ಟು ನಾವು ಮುಗಿಸುತ್ತೇವೆ" ಅಂದರು ಇಂದಿರಮ್ಮ.

ಮಾಲತಿ ಮಗುವನ್ನೆತ್ತಿಕೊಂಡು ಹೋದಮೇಲೆ ಅಲ್ಲಿ ಕುಳಿತಿರಲು ಗೋಪಿನಾಥನಿಗೆ ಪ್ರಯಾಸವಾದರೂ ಆಕೆಯನ್ನು ಹಿಂಬಾಲಿಸುವುದು ತರವಲ್ಲ ವೆಂಬದರಿಂದ ಕೊಂಚ ಹೊತ್ತು ಮಾತನಾಡುತ್ತಿದ್ದು ಆ ಮೇಲೆ ಎದ್ದು ಹೋದನು. ಪಂಬಿಯನ್ನು ಆಕೆಯ ಆಟದ ಸಾಮಾನುಗಳ ಜತೆಯಲ್ಲಿ ಬಿಟ್ಟು, ಹೊರಗೆ ಗೇಟು ತೆರೆದು ಹಾಕಿದ ಸದ್ದು ಕೇಳಿಸಿದ್ದರಿಂದ ಮಾಲತಿ ಹೊರಗೆ ಹಜಾರಕ್ಕೆ ಹೋಗಿ ನೋಡಿದಳು. ಯಾರೂ ಬಂದಹಾಗಿರಲಿಲ್ಲ. ಆಶ್ಚರ್ಯ ಪಡುತ್ತ ಹಾಗೇ ಹಾಲಿನ ಹೆಬ್ಬಾಗಿಲಿಗೆ ಅಡ್ಡವಾಗಿ ನಿಂತಿರುವಾಗ ಹಿಂದಿ ನಿಂದ ಹೆಗಲಮೇಲೆ ಒಂದು ಕೈಬಿತ್ತು. ತಬ್ಬಿಬ್ಬಾಗಿ ತಿರುಗಿನೋಡಲು ಗೋಪಿನಾಥ.

"ಭಯವಾಯಿತೆ?"

"ಇಲ್ಲ." ಎಂದುಸುರಿದಳು ಮುಖ ಆರಕ್ತವಾಗಿತ್ತು.

"ಇಲ್ಲೇನು ಮಾಡ್ತಿದ್ದೀ."

"ಯಾರೋ ಗೇಟು ತೆರೆದು ಹಾಕಿದ ಹಾಗೆ ಕೇಳಿಸಿತು. ಬಂದುನೋಡಿದೆ. ಯಾರೂ ಇಲ್ಲ."

"ಕೆಲಸಗಿತ್ತಿ ಹೋಗಿದ್ದಿರಬೇಕು. ಮಾಲತಿ ನಿನಗೆ ಎಂದಾದರೂ ನನ್ನ ಭಯವಿತ್ತೆ?"

"ಇಲ್ಲ."

"ಪ್ರಥಮಬಾರಿ ನನ್ನ ಕಂಡಾಗ?"

"ಇಲ್ಲ."

"ಆ ದಿನ ಸಿನೆಮದಲ್ಲಿ?"

"ಇಲ್ಲ, ಭಯವೇತಕ್ಕೆ?"

"ಹೊಸಬರನ್ನು ಮೊತ್ತಮೊದಲು ಎದುರಿಸುವಾಗ ಒಂದು ಅಳುಕು, ಸಂಕೋಚ, ಭಯ ಇದ್ದೇ ಇರುತ್ತಲ್ಲ, ಎಲ್ಲರಿಗೂ ?"

"ಇರುತ್ತೆ ನಿಜ. ಕಾರಣ ?"

"ಕಾರಣ ಪ್ರತಿಯೊಬ್ಬನಲ್ಲೂ ಒಂದು ಕೊರತೆ, ಒಂದು ಅಸಮಾಧಾನ, ಒಂದು ದುರ್ಬಲತೆ ಇದ್ದೇಇದೆ. ಗುಪ್ತವ್ಯಾಧಿಯಂತೆ ಅದೆಲ್ಲಾದರೂ ಹೊರಬಿದ್ದೀತೆಂಬ ಭಯ. ಒಳಗಿನ ಜಳ್ಳಿಗೂ, ಹೊರಗಿನ ಜಂಭಕ್ಕೂ ಇರುವ ತಾರತಮ್ಯ ಪರಕೀಯನಿಗೆ ಗೊತ್ತಾದೀತೆಂಬ ಹೆದರಿಕೆ."

"ನಿಮಗೆ ಹೀಗಾಗಿತ್ತೇ ?" ಎಂದು ಕೇಳಿದಳು ನಗುತ್ತ.

"ಆಗಿತ್ತು."

"ನನ್ನ ನೋಡಿ ?"

"ಅಹುದು. ಆದರೆ ಒಂದೇ ಒಂದು ಕ್ಷಣ. ನಿನ್ನ ಸರಳತನದಿಂದ ನನಗೆ ಸುಲಭವಾಯಿತು. ನೀನು ಅಂಜಿಕೆ, ನಾಚಿಕೆಯ ಮುಸುಕು ಹಾಕಿಕೊಂಡಿದ್ದರೆ.----"

"ಈ ಅವಸ್ಥೆಗೆ ಬರುತ್ತಿರಲಿಲ್ಲ." ಅನ್ನುತ್ತ ಆತನ ಕಣ್ಣಿಗೆ ಕಣ್ಣಿಟ್ಟು ನೋಡಿದಳು.

"ಬರಬಾರದಿತ್ತೇ ?"

"ನೀವೇ ಹೇಳಿಬಿಡಿ; ಉತ್ತರ."

"ನೀನೀದಿನ ಇಲ್ಲಿಂದ ಹೋಗುವುದರೊಳಗಾಗಿ ಹೇಳುತ್ತೇನೆ."

ಆಗ ಭಯವಾಯಿತು, ಮಾಲತಿಗೆ. ಕಣ್ಣು ತಗ್ಗಿಸಿದಳು. ಹೃದಯದ ತಳಾದಿ ಅದುರಿದಂತಾಗಿ ಅವ್ಯಕ್ತ ಗಂಡಾಂತರವೊಂದು ಸಮೀಪಿಸಿದಂತಾಯಿತು. ಯಾವುದೋ ಒಂದು ಕಣ್ಣುಕಾಣದ, ತಟತಟ ನೀರು ಜೊಟ್ಟುವ, ತಲೆ ಎತ್ತಿದರೆ ತಾಕುವ, ನೆಲಮಾಳಿಗೆಯೊಳಗೆ ಸಿಲುಕಿಕೊಂಡವಳಂತೆ ಭೀತಿಗೊಂಡಳು. ಹಠಾತ್ತಾಗಿ ಮೂರುವಾರಗಳ ಹಿಂದೆ ತನ್ನತ್ತೆಗಾದ ಕನಸಿನ ನೆನಪು ಬಂತು. ಆ ವಿಚಿತ್ರ ಸ್ವಪ್ನಕ್ಕೂ ಇಂದಿನ ಅನುಭವಕ್ಕೂ ಏನೋ ನಿಕಟ ಸಂಬಂಧವಿರಬೇಕೆಂದು ಮನಸ್ಸಿಗೆ ಮಿಂಚಿ ನಡುಗಿದಳು.

"ಮಾಲತಿ, ನೀನು ನಿಜವಾಗಿಯೂ, ಹೆದರಿದಂತಿದೆ." ಅನ್ನುತ್ತ ಆಕೆಯ ಎರಡು ರಟ್ಟೆಗಳನ್ನೂ ಬಿಗಿದು ಹಿಡಿದನು.

"ನನಗೆ ಅಂಜಿಕೆ, ನಾಚಿಕೆ ಎರಡೂ ಇಲ್ಲವೆಂತ ನೀವೇ ಹೇಳಿದಿರಲ್ಲ, ಈಗ ?"

"ಅಹುದು, ಪ್ರಿಯತಮೆ. ನಿನಗೆಲ್ಲಿ ಬರಬೇಕು ಆ ಸುಳ್ಳಿನ ಮೋಜು? ನೀನು ಸತ್ಯವತಿ. ಇವೊತ್ತು ಸ್ವಚ್ಛ ಶ್ವೇತಾಂಬರವನ್ನೇ ಉಟ್ಟಿದ್ದೀ. ಬಿಳುಪು ಒಪ್ಪಬೇಕಾದರೆ, ಅದಕ್ಕೊಂದು ಯೋಗ್ಯತೆ ಬೇಕು. ಸಾತ್ವಿಕತೆಯಿರಬೇಕು. ನೀನಿಷ್ಟು ಚೆಲುವೆಯಾಗಿ ನನ್ನ ಕಣ್ಣಿಗೆ ಇದುವರೆಗೆ ಕಾಣಿಸಲಿಲ್ಲ."

"ಆಗ ಹೆದರಿಸಿದಿರಿ. ಈಗ ನಾಚಿಸುತ್ತೀರೇನು?"

"ನಾನು ಹೇಳಿದ್ದು ನಿಜವಲ್ಲವೇ? ನೀನು ಸುಂದರಿಯೆಂಬುದು ನಿನಗೆ ಗೊತ್ತಿಲ್ಲವೆ?" ಅನ್ನುತ್ತ ಆಕೆಯನ್ನು ಮೆತ್ತಗೆ ಕುಲುಕಿಸಿದನು.

"ಮನಸ್ಸಿಗೆ ಯಾವುದು ಹೆಚ್ಚು ಹಿತವಾದ್ದು? ಹೊಗಳುವುದೇ, ಅಥವಾ ಹೊಗಳಿಸಿಕೊಳ್ಳುವುದೇ?" ಎಂದು ಹಾಸ್ಯದಿಂದ ಕೇಳಿದಳು.

ನನ್ನಂತೆ ಮನಃಪೂರ್ವಕವಾಗಿ ಹೊಗಳಿದರೂ ಹಿತ. ನಿನ್ನಂತೆ ವಿನಯದಿಂದ ಹೊಗಳಿಸಿಕೊಂಡರೂ ಹಿತ. ನಿತ್ಯ ನಡತೆಯಲ್ಲಿ ಈ ತರದ ಸಭ್ಯತೆಯ ಆದರ ಉಪಚಾರದ ಮಾತುಗಳು ಸಂಭಾವನೆಗಳು ಇದ್ದಷ್ಟೂ ಉತ್ತಮ. ಆದರೆ ಸಾಕಷ್ಟು ವಿನಯವೂ ಬೇಕು, ಪ್ರಾಮಾಣಿಕತನವೂ ಬೇಕು. ಆದರೆ ಅದಿರಲಿ. ನಾವೀಗ ದ್ವಾರಪಾಲಕರ ಹಾಗೆ ನಿಂತಿದ್ದೇವಲ್ಲ. ಇದಕ್ಕೇನರ್ಥ? ಒಳಗೆ ಹೋಗೋಣ, ಬಾ" ಅನ್ನುತ್ತ ಥಕ್ಕನೆ ಆಕೆಯನ್ನು ಬಿಟ್ಟು ಧ್ಯಾನಪರನಾಗಿ ಮುಂದಾಗಿ ಒಳಗೆ ಹೋದನು.

"ಇವೊತ್ತು ಮಳೆ ಬಂದರೂ ಬರಬಹುದು." ಅಂತಂದುಕೊಳ್ಳುತ್ತ ಮಾಲತಿಯೂ ಹೋದಳು.

## ೩೦

ನಾಲ್ಕು ಗಂಟೆ ಸಮೀಪಿಸುತ್ತಲೇ ಮನೆ ತುಂಬಿಕೊಂಡಿತು. ಒಬ್ಬೊಬ್ಬರಾಗಿ ಹೇಳಿಕೆಯಿದ್ದ ಮುತ್ತೈದೆಯರು ಜಟಕದಲ್ಲೋ ಕಾರಿನಲ್ಲೋ ಬಂದರು. ಸ್ವಜಾತಿಯವರು ಬೇರೆ ಯಾರೂ ಇಲ್ಲದ್ದರಿಂದ ಆರತಿ ಅಕ್ಷತೆಗೆ ಬರತಕ್ಕಂಥ ಬ್ರಾಹ್ಮಣ ಮನೆಯವರನ್ನು. ಅದರಲ್ಲೂ ಅಧಿಕಾರ ಹಾಗೂ ಸಂಪತ್ತಿನ ಅಸಂಭಾವನೆಯಿಲ್ಲದವರನ್ನೇ ಆರಿಸಿ ಆಹ್ವಾನಿಸಿದ್ದಳು, ಮಾಲತಿ. ವಿದ್ಯುತ್ತಿಲಾಖೆಯ ಇಂಜನಿಯರ ಹೆಂಡತಿ, ತೆಲುಗರು; ಡಿಸ್ಟ್ರಿಕ್ಟಕೋರ್ಟ ಶಿರಸ್ತೆದಾರರ ಹೆಂಡತಿ. ಅನೇಕ ವರ್ಷಗಳಿಂದ ಮಂಗಳೂರಲ್ಲೇ ಮನೆ ಮಾಡಿಕೊಂಡಿದ್ದ ಅಯ್ಯರು; ಮುನ್ಸೀಫರ ಹಿರೇಮಗಳು. ಕೋಲಾರದ ಗಂಡನ

ಮನೆಯಿಂದ ಕೆಲವು ದಿನಗಳ ಮಾತಿಗೆ ಬಂದಿದ್ದ ಅಯ್ಯಂಗಾರು; ಓವರ್ ಸೀಯರ ಹೆಂಡತಿ, ಅವರೂ ಅಯ್ಯರು: ಇವರೇ ಅತಿಥಿಗಳು. ಇವರೊಂದಿಗೆ ಹಲವು ಮಕ್ಕಳು ಹಾಗೂ ಒಬ್ಬರಿಬ್ಬರು ಹೆಣ್ಣುಮಕ್ಕಳು ಅಭ್ಯಾಗತರೂ ಬಂದಿದ್ದರು. ವಾಲಗವೊಂದಿದ್ದರೆ ಮದುವೆ ಮನೆಯಂತೆ ಕಾಣುತ್ತಿತ್ತು.

ಗೋಪಿನಾಥನಿಗೆ ಮಾತ್ರ ತನ್ನ ಆಫೀಸುಕೋಣೆ, ಅದರ ಪಕ್ಕದ ಹಜಾರವನ್ನು ಬಿಟ್ಟು ಒಳಗೆಪ್ರವೇಶಕ್ಕೆ ಅವಕಾಶವಿರಲಿಲ್ಲ. ಮನೆದುಂಬಿದ ಹಾಗೆಲ್ಲ ಆತನ ಒಂಟಿತನ ಹೆಚ್ಚಾಗುತ್ತ ಬಂತು. ಒಳಗೆ ಹೋಗಿ ಆರತಿ ಅಕ್ಷತೆಗಾಗಿ ಬಂದಿದ್ದ ಸನ್ಮಾನ್ಯ ಸ್ತ್ರೀಯರೊಡನೆ ಮಾತನಾಡುವ ಹಾಗಿದ್ದರೆ ಎಷ್ಟು ಚೆನ್ನಾಗಿತ್ತು! ಆದರೆ ಪರಗಂಡಸರೆದುರು ಮುಖಕೊಟ್ಟು, ನಿಸ್ಸಂಕೋಚವಾಗಿ ಮಾತನಾಡತಕ್ಕವರು ಅವರಲ್ಲಿ ಯಾರೂ ಇದ್ದಹಾಗೆ ತೋರಲಿಲ್ಲ. ಎಲ್ಲರೂ ಸರ್ವಸಾಮಾನ್ಯ ವರ್ಗದವರೇ. ಸಂಪತ್ತಿರಲಿ, ಸೌಂದರ್ಯವಿರಲಿ, ವಿದ್ಯೆಯಿರಲಿ ಇಲ್ಲದಿರಲಿ ಎಲ್ಲರೂ ಒಂದೇ. ಗಂಡಸರ ಹೆಬ್ಬಯಕೆಯ ವಸ್ತುಗಳು ತಾವೆಂಬುದನ್ನು ಒಂದರೆಕ್ಷಣವೂ ಮರೆಯಲಾರದ ಸ್ವಶಕ್ತಿಶೂನ್ಯರು. ಒಂದುವೇಳೆ ಗಂಡಸರ ಒಣಹೆಮ್ಮೆ ಕಮ್ಮಿಯಾದರೆ ಹೆಂಗಸರ ಈ ದುಶ್ಚೇಷ್ಟೆ ದೂರವಾಗಬಹುದು ಈ ರೀತಿ ಗೋಪಿನಾಥ ಬೇಸರ ಪಡುತ್ತಿರುವಾಗ ಪಂಬಿ ಆಂದಿನಹಬ್ಬದ ವೈಭವವನ್ನೆಲ್ಲ ತನ್ನ ಹಾಲುಗಲ್ಲಗಳಲ್ಲಿ ತುಂಬಿಕೊಂಡು ಅತಿ ಠೀವಿಯಿಂದ ಆಗಾಗ ಬಂದು ತಂದೆಗೆ ದರ್ಶನಕೊಟ್ಟು ಹೋಗುತ್ತಿದ್ದಳು. ನವಿಲುನೀಲಿ ಬಣ್ಣದ ರೇಶ್ಮೆ ಪೀತಾಂಬರದ ಮೇಲೆ ಪಾರಿವಾಳ ಬಣ್ಣದ ರೇಶ್ಮೆ ಜಂಪರು ಹಾಕಿಕೊಂಡು ಮೇಲೆ ಚಿನ್ನದ ಹಾರ, ಮುತ್ತಿನ ಕಂಠಿಯನ್ನು ಧರಿಸಿ, ಕಿವಿಗಳಿಂದ ಜಾಲರಿಯ ಲೋಲಾಕುಗಳನ್ನು ನೇಲಿಸಿಕೊಂಡು ಸಾಧ್ಯವಾದಷ್ಟು ಮಟ್ಟಿಗೆ ಗಣ್ಯ ಮಹಿಳೆಯಂತೆ ಅತ್ತಿತ್ತ ತಿರುಗುತ್ತಿದ್ದಳು. ಮಾಲತಿಯೂ ಎರಡು ಮೂರು ಸಲ ಆರತಿ ಹೊತ್ತಾದರೂ ಸುಮಿತ್ರೆ ಇನ್ನೂ ಬರಲಿಲ್ಲವೆಂಬ ನೆಪದಿಂದ ಗೋಪಿನಾಥನ ಸಮೀಪ ಹೊಂಚುಹಾಕಿ ಹೋಗುತ್ತಿದ್ದಳು.

ಆರುಗಂಟೆಯ ಸಮಯ ಡಾಕ್ಟರೂ ಸುಮಿತ್ರೆಯೂ ಒಂದು ಕಾರುಮಾಡಿಕೊಂಡು ಬಂದರು. ಬರುತ್ತ ರಟ್ಟಿನ ಒಂದು ದೊಡ್ಡ ಪೆಟ್ಟಿಗೆಯನ್ನೂ ತಂದರು. ಅದನ್ನು ಗೋಪಿನಾಥನ ಆಫೀಸಿನೊಳಗಿಟ್ಟು, ಡಾಕ್ಟರು,

“ ಇವರೊಳಗೇನಿದೆ ಅಂತ ಕೇಳಕೂಡದು, ಗೋಪಿ. ಅಮ್ಮಾವ್ರ ಅಪ್ಪಣೆ” ಅನ್ನುತ್ತ ಗದರಿಸಿದರು. ಆಗ ಕಾರಿನಿಂದ ಇಳಿದು ನೇರ ಒಳಗೆಹೋಗಿದ್ದ ಸುಮಿತ್ರೆ ಮಾಲತಿ ಜತೆಗೆ ಬಂದಳು. ಡಾಕ್ಟರು ಮಾಲತಿಯನ್ನು ನೋಡಿ,

“ ನನ್ನ ಯಾಕಪ್ಪ, ಬರಹೇಳಿದ್ರಿ, ಈ ಹೆಂಗಸರ ಹತ್ರಕ್ಕೆ ? ನನಗೇನೂ ಕೆಲಸವಿಲ್ಲ, ಇಲ್ಲಿ. ” ಅಂದರು.

“ ನಾನು ಬರಹೇಳಲಿಲ್ಲವಲ್ಲ !” ಎಂದು ಮಾಲತಿ ಗಾಬರಿಯನ್ನು ನಟಿಸಿದಳು.

“ ಅರರೆ ! ಹಾಗಾದರೆ, ಗೋಪಿ, ನೀನು ಹೇಳಿರಬೇಕು ”

“ ನಾನೂ ನಿರಪರಾಧಿ ” ಅಂದನು ಗೋಪಿನಾಥ ನಗುತ್ತ.

“ ಅಂದ್ರೆ ! ಹೇಳಿಕೆಯಿಲ್ಲದೆ ನಾನೆಲ್ಲಿಗೂ ಹೋಗುವುದಿಲ್ಲವಲ್ಲ ?”

“ ಅವರಿಗೇನು ಗೊತ್ತು ನಿಮ್ಮ ದುರಭ್ಯಾಸ ?” ಎಂದಳು ಸುಮಿತ್ರೆ.

“ ನೀನೇ. ನಿನ್ನದೇ ಕಿರುಕುಳ. ಗೋಪಿನಾಥರಾಯರು ಮಾಲತಿಬಾಯಿ ಇಬ್ಬರೂ ಹೇಳಿದ್ದಾರೆ. ಬರಲೇಬೇಕು ಅಂತ. ನೋಡಿದಿಯಾ ?” ಅನ್ನುತ್ತ ಹೆಂಡತಿಯ ಮೇಲೆ ತಪ್ಪು ಹೊರಿಸಿದರು. ಆಗ ಗೋಪಿನಾಥ “ ವಾಸು ಹೇಗೂ ಬಂದು ಸಿಕ್ಕಿ ಬಿದ್ದಿ. ಇನ್ನು ಆರತಿಯಾಗುವವರೆಗೆ ಇದ್ದು ಬಿಡು. ನನಗೂ ಬೇರೆ ದಿಕ್ಕಿಲ್ಲ. ಜಾಗತಪ್ಪಿದ ಹಾಗಾಗಿದೆ ” ಎಂದನು.

“ ಅದೇನೊ ನಿಜ. ಆದರೆ ಆರತಿ ಹೊತ್ತಿಗೆ ಹಾಡು ಹೇಳೂಂದ್ರೆ ?”

“ ಯಾರ ಹತ್ರ ?” ಎಂದು ಮಾಲತಿ ಕೇಳಿದಳು.

“ ನನ್ನ ಹತ್ರ ” ಅಂದರು ಡಾಕ್ಟರು.

ಮಾಲತಿ ನಕ್ಕಳು ಸುಮಿತ್ರೆಯನ್ನು ನೋಡುತ್ತ, “ ಹೌದೌದು. ಬೇಕಾಗಬಹುದು. ನಿಮ್ಮ ಹಾಡು. ಪಂಬಿ ಅತ್ತುಗಿತ್ತು ಮಾಡಿದರೆ ಬಾಯಿ ಮುಚ್ಚಿಸೋದಕ್ಕೆ ” ಅಂದಳು.

ಮಾಲತಿ ಹೇಳಿದ್ದು ತಮಾಷೆಗಾಗಿದ್ದರೂ ಆರತಿ ಹೊತ್ತಿಗೆ ಪಂಬಿಯ ಪರಾಕ ಇದ್ದೇಇತ್ತು. ಪಪ್ಪ ಬಾರದೆ ಹಸೆಮಣೆಯಮೇಲೆ ಕುಳಿತು ಕೊಳ್ಳೋದಕ್ಕೆ ಸರ್ವಥಾ ಒಪ್ಪಲಿಲ್ಲ ಏನೇನು ಹೇಳಿ ಪುಸಲಾಯಿಸಿದರೂ ಕೇಳಲಿಲ್ಲ. “ ಪಪ್ಪ ಜಾ (ಸಹ) ಬರಬೇಕು ” ಅಂತೊಂದೇ ಹಠ. ಅಷ್ಟು ಮಂದಿ ಅಪರಿಚಿತ ಹೆಂಗಸರಿದ್ದರು ಕುಳಿತು ಆರತಿ ಮಾಡಿಸಿಕೊಳ್ಳಲು

ಗೋಪಿನಾಥನೂ ಸುರುವಿಗೆ ಸಮ್ಮತಿಸಲಿಲ್ಲ. ಡಾಕ್ಟರು ಬದಲಿ ಡ್ಯೂಟಿಗೆ ತಯಾರಿದ್ದರು. ಆದರೆ ಕರೆಯುವವರಾರೂ ಇರಲಿಲ್ಲ. ಪಪ್ಪನ ಬದಲು ತಾನಾಗಬಹುದೇ ಅಂತ ಅವರೇ ಕೇಳಿದಾಗ ಪಂಬಿ ಹೊಡೆಯೋದಕ್ಕೇ ಬಂದಳು. ಕೊನೆಗೆ ಇಂದಿರಮ್ಮ ಸ್ವತಃ ಬಂದು ಬಲವಂತ ಮಾಡಿದಮೇಲೆ ಮೈತುಂಬ ಒಂದು ಖಾದಿಶಾಲು ಹೊದ್ದುಕೊಂಡು ತಲೆಗೊಂದು ಗಾಂಧಿ ಟೋಪಿಯನ್ನಿಟ್ಟುಕೊಂಡು ಅಳುಕುತ್ತ ಮಗಳ ಪಕ್ಕದಲ್ಲಿ ಹಸೆಮೇಲೆ ಮುಗುಳ್ನಗುತ್ತ ಕುಳಿತ. ಡಾಕ್ಟರನ್ನು ಅಲ್ಲೇ ಬೆಂಬಲಕ್ಕಾಗಿ ಹತ್ತಿರ ಬರುವಂತೆ ಕೈಸನ್ನೆ ಮಾಡಿ ಕರೆದ.

ಆರತಿಗೆ ಕುಳಿತಾಯಿತು. ಆದರೆ ಆರತಿ ಹಿಡಿಯುವದಕ್ಕೆ ಮಾಲತಿಯಲ್ಲದೆ ಮತ್ತೊಬ್ಬಳು ಬೇಕಲ್ಲ! ಯಾರು? ಅಲ್ಲಿದ್ದ ಹೆಂಗಸರಿಗೆಲ್ಲ ತೆವಲು ತುಂಬಿದ್ದರೂ ಒಬ್ಬರೂ ಮುಂದೆ, ಬರಲಿಲ್ಲ. ನೀನು ಹೋಗೇ. ನೀನು ಹೋಗೇ, ಅನ್ನುತ್ತ ಒಬ್ಬರನ್ನೊಬ್ಬರು ದಬ್ಬಿದರು. ಕೊನೆಗೆ ಮುನ್ಸೀಫರ ಮಗಳು ಒಪ್ಪಿಕೊಂಡಳು. ಆರತಿಗೆ ಮುಂಚೆ ಉಡುಗೊರೆಗಳಾದುವು. ಗೋಪಿನಾಥನ ಆಫೀಸಿನಿಂದ ಡಾಕ್ಟರು ಒಂದು ಚಿಕ್ಕ ಅರಮನೆಯನ್ನೇ ಹೊತ್ತು ತಂದು ಪಂಬಿ ಎದುರಿಗಿಟ್ಟರು ಅದನ್ನು ನೋಡುವುದಕ್ಕೆ ನೆರೆದಿದ್ದವರೆಲ್ಲ ಆಶ್ಚರ್ಯದಿಂದ ಮುತ್ತಿಗೆ ಹಾಕಿದರೂ. ಪಂಬಿ ಹಸೆ ಬಿಟ್ಟು ಏಳಲಿಲ್ಲ. ಯಾತಕ್ಕೇಳಬೇಕು ? ಇನ್ನೊಬ್ಬರಿಗಾಗಿ ತಂದ ವಸ್ತುವಲ್ಲ. ತನಗಾಗಿಯೇ ಕೊಟ್ಟ ಉಡುಗೊರೆ. ಅಂಗಲಾಚಿಕೊಂಡು ಎದ್ದು ನೋಡುವುದು ಮರ್ಯಾದೆಯಲ್ಲ. ಅವಸರವೇನು ? ಅದೇನು ಹಿಂತಿರುಗಿ ಹೋಗೋದಿಲ್ಲವಷ್ಟೇ! ಪುರಸೊತ್ತಿನಲ್ಲಿ ಒಬ್ಬಳೇ ಇದ್ದಾಗ ನೋಡಬಹುದು—ಒಳಗೆ ಹೊರಗೆ, ಹಿಂದೆ ಮುಂದೆ ಎಲ್ಲ; ಎಂಬ ಗರ್ವದಿಂದ ಮುಳ್ಳಿನ ಮಣೆಯ ಮೇಲೆ ಕುಳಿತಹಾಗಿದ್ದಳು.

ಗೋಪಿನಾಥ ಆರತಿಗೆ ಕುಳಿತದ್ದರಿಂದ ಮಾಲತಿಯ ಮನಸ್ಸು ಕದಡಿತು. ಆರತಿ ಮಾಡುವವರಿಲ್ಲದೆ ಬಾಕಿಯಾದ ಹುಟ್ಟಿದ ಹಬ್ಬ ತನ್ನಿಂದಾಗಿ ಆಚರಣೆಗೆ ಬಂದುದೇ ಒಂದಪೂರ್ವಯೋಗ. ಕರುಣಾಜನಕವಾದ ಪ್ರಸಂಗ. ಅದಲ್ಲದೆ ತನ್ನ ಚೇತೋಹಾರಿ ಗೋಪಿನಾಥನಿಗೂ ಆರತಿ ಮಾಡುವ ಪುಣ್ಯ ತನಗೊದಗೀತೆಂಬುದು ಆಕೆಯ ಊಹೆಗೂ ಅಸಾಧ್ಯವಾಗಿತ್ತು. ಹಸ್ಸೆ ಮಣೆಯಮೇಲೆ ವಿನಯಗಾಂಭೀರ್ಯ ಲಕ್ಷಣಗಳಿಂದ ಕಂಗೊಳಿಸುತ್ತ

ತಲೆಬಾಗಿ ನಿಶ್ಚಲನಾಗಿ ಕುಳಿತಿದ್ದ ಗೋಪಿನಾಥ ಆಕೆಯ ಕಣ್ಣಿಗೆ ಒಬ್ಬ ತೇಜಸ್ವಿಯಾದ ರಾಷ್ಟ್ರವೀರನಾಗಿದ್ದನು. “ಈ ಧೀರ ಸತ್ಪುರುಷ ಅಖಿಲ ಭಾರತದ ವರಪುತ್ರ. ಜಗದ್ವಂದಿತ ವ್ಯಕ್ತಿ. ಈ ಮನೆ, ಈ ಸಂಸಾರ, ಈ ನಾಡು, ಈ ನಿತ್ಯ ಜೀವನದ ಕೂಪ ಎಲ್ಲವನ್ನೂ ಮೀರಿರುವ ಪ್ರತಿಭೆ ಈತನದು. ಈತ ತನ್ನವನಾಗುವುದಾದರೂ ಹೇಗೆ? ಈತನನ್ನು ತಡೆದು ನಿಲ್ಲಿಸಿ ಕಟ್ಟಿಹಾಕುವದು ನನ್ನ ಕೈಮೀರಿದ ಕೆಲಸ. ಈತನನ್ನು ಒಲಿಸುವ ಭಾಗ್ಯ ನನ್ನ ಹಣೆಯಲ್ಲಿ ಬರೆದಿಲ್ಲ. ಈ ಯುಗಪುರುಷನನ್ನು ನಂದನವನದ ಬೆಳದಿಂಗಳಿಗೊಯ್ದು ಭೋಗ ವೈಭವದಲ್ಲಿ ತಣಿಸಿ ಕ್ಷಣಕಾಲ ನಿಲ್ಲಿಸಬಹುದು. ಆದರೆ ಅಲ್ಲಿಂದ ಮುಂದುವರಿಯದಂತೆ ಮೋಹಪಾಶದಲ್ಲಿ ಬಿಗಿಯುವದಕ್ಕೆ ಯಾವ ಸುರಾಂಗನೆಯಿಂದಲೂ ಸಾಧ್ಯವಾಗದು. ಆತನ ಹುಟ್ಟೂರು ಸತ್ಯಲೋಕ. ಎಲ್ಲಿ ರಕ್ತ ಬಿಸಿಯಾಗದೋ ಮತಿ ಮಲಿನವಾಗದೋ ಅಲ್ಲಿ. ನಿತ್ಯಧೂಳಿಲ್ಲದ ತಿಳಿಗಾಳಿಯ ತುರೀಯಲೋಕ. ಅಂತಹ ಸ್ವಾಮಿಯ ದರ್ಶನ ಇದೇ ಕೊನೇದು. ನನ್ನ ಸ್ವಪ್ನ ಸ್ವರ್ಗ ಇಲ್ಲಿಗೆ ಮುಗಿಯಿತು” ಈ ರೀತಿ ಆಕೆಯ ಮನಸ್ಸು ತಲ್ಲಣಗೊಂಡಿತು. ಆರತಿ ಎತ್ತುವಾಗ ಎಲ್ಲಿ ತನ್ನ ಕೈ ಕಂಪಿಸುವುದೋ, ಮುಖಭಾವದಿಂದ ಒಳಗುಟ್ಟು ಬಯಲಾಗುವುದೋ, ಸಭಾಭಾಸವಾಗುವುದೋ ಎಂದು ಹೆದರಿದಳು. ಆಕೆಗೆ ತನ್ನ ದೇಹವೇ ಹಚ್ಚಿಟ್ಟ ಒಂದು ಆರತಿಯಂತೆ ಕಾದು ಸುಡುವಂತಾಯಿತು. ಆ ಗಳಿಗೆಯಲ್ಲಿ ಆಕೆ ತನ್ನ ಅಂಗೈ ಮೇಲೆ ಕರ್ಪೂರ ಹಚ್ಚಿ ಗೋಪಿನಾಥನಿಗೆ ಆರತಿ ಮಾಡಲು ಕೂಡ ತಯಾರಿದ್ದಳು.

ಆರತಿ ಸಮಯ ಮಿಶ್ರ ಮುತ್ತೈದೆಯರು ರತಿಪತಿಪ್ರಿಯರಾಗದಲ್ಲಿ ‘ಜಗಜ್ಜನನಿ’ ಹಾಡಿದರು. ಅವರ ಶಾಸ್ತ್ರೋಕ್ತ ಸುಮಧುರ ಸಂಗೀತದಿಂದ ಮಾಲತಿ ಮನಸ್ಸು ಉಲ್ಲೋಲಕಲ್ಲೋಲವಾಯಿತು. ಗೋಪಿನಾಥ ತಲೆ ತಗ್ಗಿಸಿಕೊಂಡು ಕೇಳುತ್ತಿದ್ದ. ಯಾರೋ ತಲೆಯೆತ್ತಬೇಕು. ಆರತಿ ನೋಡಬೇಕು ಅಂದರು. ವಿಧೇಯತೆಯಿಂದ ಕಣ್ಣೆತ್ತಿ ಅತಿ ಸಮೀಪವಿದ್ದ ಮಾಲತಿಯ ಮುಖವನ್ನು ನೋಡಿದ. ಆರತಿಯ ದೀಪಗಳ ಬೆಳಕಿಗೆ ಆಕೆಯ ಹೈತಲೆಯಲ್ಲಿ ಬೆವರ ಹನಿಗಳು ಮಿನುಗುತ್ತಿದ್ದುವು. ಕಣ್ಣುಗಳು ಪುತ್ತಲಿ ಪ್ರತಿಮೆಯ ಅಚಲ ಅಜೀವನ ಚಕ್ಷುಗಳಂತಿದ್ದುವು. ಗೋಪಿನಾಥ ಅಚ್ಚರಿಗೊಂಡ. ಈ ಸಮ್ಮಾನಕ್ಕೆ ಕಾರಣವೇನೆಂತ ಊಹಿಸಲಾರದೆ.

ಆರತಿ ಮಾಡಿಪ್ಪಾಯಿತು. ಪಂಬಿಹತ್ತಿರ ಹಿರಿಯರ ಕಾಲುಮುಟ್ಟಿನಮಸ್ಕಾರ ಮಾಡಿಸಿದ್ದಾಯಿತು. ಬೆಳಗ್ಗಿಂದ ಮೋಡಗಳನ್ನು ಕೂಡಿಹಾಕುತ್ತಲಿದ್ದ ಆಕಾಶ ಆಗಲೇ ಹುಬ್ಬುಗಂಟುಹಾಕಿಕೊಂಡು ಬಿಸುಸುಯ್ಯುವುದಕ್ಕೆ ಸುರುವು ಮಾಡಿದ್ದರಿಂದ ಎಲ್ಲರೂ ಒಮ್ಮನಸ್ಸಿನಿಂದ ಎದ್ದು ಹೊರಟರು. ತಟಪಟ ನಾಲ್ಕಾರು ಕಲ್ಲು ಹನಿಗಳೂ ಉದುರಿದವು. ಜೋರಾಗಿ ಮಳೆ ಬಂದ ಮೇಲೆ ಹೋಗುವುದಕ್ಕೆ ಪ್ರಯಾಸವಾಗಬಹುದೆಂತ ಡಾಕ್ಟರು ಅವಸರ ಮಾಡಿ ಸುಮಿತ್ರೆಯನ್ನು ಹೊರಡಿಸಿದರು. ಅವರು ಹೊರಟದ್ದನ್ನು ನೋಡಿ ಮಾಲತಿಯೂ ಹೊರಟಳು. ಆದರೆ ಪಂಬಿ ಬಿಡಲಿಲ್ಲ. 'ಅತ್ತೆ' ಇಲ್ಲೇ ಇರಬೇಕು. ಅಂತ ಹಟ ಮಾಡಿದಳು. ಇಂದಿರಮ್ಮನೂ ಹೇಳಿದರು, "ಊಟ ಮಾಡಿಕೊಂಡು ಹೋಗು. ಒಳ್ಳೇದಿವಸ ಇವೊತ್ತು. ಯಾವಾಗಲೂ ಯಾಕೆ ಬರ್ತೀನೀನು. ಅಸರಿಬ್ಬರೂ ಹೋಗಲಿ" ಅಂತ. ಮಾಲತಿ ಏನೂ ಉತ್ತರ ಹೇಳಲಾರದೆ ನಸುನಕ್ಕು ಸುಮ್ಮನಿದ್ದಳು. ಅಂದಿನ ಪರಿಪಾಠವೇ ವಿಚಿತ್ರವಾಗಿತ್ತು. ನೆನಸದೆ ಇದ್ದುದೇ ನಡೆದು ಹೋಗುತ್ತಿತ್ತು. ತನ್ನ ಮನಸ್ಸೇ ತನ್ನ ಆಧೀನದಲ್ಲಿರಲಿಲ್ಲ. ತನಗ್ಯಾವುದು ಬೇಕು, ಯಾವದು ಬೇಡ, ಒಂದೂ ತಿಳಿಯದು. ಅಂದಿನ ಕಾರ್ಯಕ್ರಮವನ್ನೆಲ್ಲ ಪ್ರಕೃತಿ ಮಾತೆ ಸ್ವತಃ ನಿರ್ವಹಿಸುವಂತಿತ್ತು. ಆಗಲಿ ಎಲ್ಲವೂ ಜಗಜ್ಜನನಿಯ ಇಚ್ಛೆ ಎಂದೆನಿಸಿತು ಮಾಲತಿಗೆ. ಸುಮಿತ್ರೆ ಹೋಗುವ ಹೊತ್ತಿಗೆ ಆಕೆಯನ್ನು ಒಂದೆಡೆ ಕರೆದೊಯ್ದು "ಮಾಲತಿ ಬೇಗ್ಗ ನಮ್ಮನೆಗೆ ಬಂದು ಬಿಡು. ಬಹಳವಿದೆ ಮಾತಾಡೋದಕ್ಕೆ. ಇಲ್ಲಿ ನೀನೊಬ್ಬಳಾಗಿ ಒಂದು ನಿಮಿಷವೂ ಸಿಗಲಿಲ್ಲ. ನೆನಪಿರಲಿ" ಎಂದು ತಾಕೀತು ಮಾಡಿದಳು. ಮಾಲತಿ ಒಪ್ಪಿಕೊಂಡು "ಹೋಗ್ತಾ ನಮ್ಮನೇಗೆ ತಿಳಿಸಿಬಿಡು. ಒಂದು ಜಟಕಾ ಕಳುಹಿಸಲಿ, ಇನ್ನೊಂದರ್ಧ ಗಂಟೆಯೊಳಗೆ" ಎಂದಳು.

ಡಾಕ್ಟರು ಸುಮಿತ್ರೆ ಹೋಗಿ ಕೆಲವು ನಿಮಿಷಗಳಲ್ಲೇ ಮಳೆ ಸುರಿಯುವದಕ್ಕಾರಂಭಿಸಿತು. ಆದರೆ ಇಂಜನಿಯರ ಹೆಂಡತಿ ತಮ್ಮ ಕಾರನ್ನು ನಿಲ್ಲಿಸಿಕೊಂಡಿದ್ದರಿಂದ ಮಿಕ್ಕ ನಾಲ್ಕು ಮಂದಿಯೂ ಅದರೊಳಗೆ ಸೇರಿಕೊಂಡರು. ಧಡ್, ಧಡ್, ಬಾಗಿಲು ಬಡಿದುಕೊಂಡರು. ಇಣಿಕಿ ನೋಡುತ್ತ ಕೈಯಾಡಿಸಿ ಹೋಗಿ ಬರುತ್ತೇವೆಂದರು. ವಿದ್ಯುದ್ದೀಪಗಳ ಬೆಳಕಿಗೆ ಚಿನ್ನದ ಸರಿಗೆಗಳ ಪರದೆಯಂತೆ ಬೀಳುತ್ತಿದ್ದ ನೀರಧಾರೆಯನ್ನು ಸೀಳಿಕೊಂಡು ಕಾರು ಸರ್ರನೆ ಹೋಗಿ ಬಿಟ್ಟಿತು.

ಮಾಲತಿ ತಿರುಗಿನೋಡಿ ಅತಿ ಸಮೀಪ ನಿಂತಿದ್ದ ಗೋಪಿನಾಥನಿಗೆ "ಸುಖವಾಗಿ ಹೋಗಿ ಬಿಡಬಹುದಿತ್ತು ಕಾರ್ನಲ್ಲಿ" ಅಂದಳು.

ಆಕೆ ಎಂದಿನಂತೆ ಹರ್ಷ ಚಿತ್ತಳಾದುದನ್ನು ನೋಡಿ ಸಂತೋಷಪಟ್ಟು ಗೋಪಿನಾಥ "ಕಾರು ಹೋದ ವೇಳೆ ಹೇಳ್ತೀಯಲ್ಲಾ?" ಅಂದ.

"ಕಾರಿರುವಾಗ ಹೋಗೋಣಾಂತನಿಸಲಿಲ್ಲ."

"ಹೋಗೋದಿದ್ರೆ ನನ್ನ ಕೊಡೆ, ರೈನುಕೋಟು ಕೊಡ್ತೇನೆ."

"ನಿಮಗೆ?"

"ನನಗ್ಯಾಕೆ? ನಾನು ಬರೋದಿಲ್ಲ. ಈ ಮಳೇಗೆ ನೆನೆಯೋದಕ್ಕೆ ನಿನಗೆ ಹುಚ್ಚೂಂತ, ನನಗೂ ಹುಚ್ಚೇ?"

"ನಿಮ್ಮ ಕೊಡೆನೂ ಬೇಡ. ರೈನುಕೋಟೂ ಬೇಡ. ಜಟ್ಕಾ ಬಾದೀತು. ಅಮ್ಮ ಕಳುಹಿಸ್ತಾರು."

"ಜಟಕ ಸಿಕ್ಕರೆ ತಾನೆ?"

"ಇಡೀ ಊರಿಗೆಲ್ಲ ನಿಮ್ಮ ಜಟಕದವನೊಬ್ಬನೇ ಅಂತ ಮಾಡಿದಿರಾ?"

"ಇರೋವ್ರೆಲ್ಲರೂ ಅಂತಹವರೇ. ರಾತ್ರಿಹೊತ್ತು ಮಳೇಗೆ ಯಾರೂ ಕಾದಿರೋದಿಲ್ಲ."

"ಆಗಲಿ ನೋಡೋಣ. ಗೊತ್ತಾಗುತ್ತಲ್ಲ?"

"ಗೊತ್ತಾಗುತ್ತೆ. ಈಗ ಬಾ, ಒಳಗೆ. ಇಲ್ಯಾಕೆ ನಿಲ್ಲೋದು. ಮಳೆ ಜೋರಾಗ್ತಾಯಿದೆ, ಬಾ."

ಮಳೆಗಾಳಿಯೊಂದಿಗೆ ಗುಡುಗು ಮಿಂಚುಗಳ ಪ್ರಚಂಡ ಪರಿವಾರವೂ ಸೇರಿ ವಾತಾವರಣ ಭೀಕರತರವಾಯಿತು. ಇಬ್ಬರೂ ಹಜಾರದಿಂದ ಹಾಲಿಗೆ ಹೋಗಿ ಹೆಬ್ಬಾಗಿಲನ್ನು ಹಾಕಿದರು. ಮನೆಯೊಳಗೆ ಪ್ರಶಾಂತವಾಗಿತ್ತು. ವಿದ್ಯುದ್ದೀಪಗಳು ಬೆಚ್ಚಗೆ ಬೆಳಗುತ್ತಿದ್ದವು. ಹೊರಗಿನ ಪ್ರಕೃತಿಯ ರಣರೋದನ ಮುಸುಕಿನೊಳಗೆ ನರಳಿದಂತೆ ಕೇಳಿಸುತ್ತಿತ್ತು. ಆರತಿಗೆ ಹಸೆ ಹಾಕುವುದಕ್ಕಾಗಿ ಮೇಜು ಸೋಫಗಳನ್ನು ಒಂದು ಬದಿಗಿರಿಸಿ ಒತ್ತರೆ ಮಾಡಿದ್ದರಿಂದ ಹಾಲು ವಿಶಾಲವಾಗಿಯೂ ನೆಮ್ಮದಿಯಾಗಿಯೂ ತೋರುತ್ತಿತ್ತು. ಇಂದಿರಮ್ಮ ಒಳಗೆ ಕೆಲಸದಲ್ಲಿದ್ದರು. ಪಾಬಿ ತನ್ನ ಹೊಸ ಮನೆಯೊಳಗೆ ಆಟದ ಸಾಮಾನುಗಳನ್ನು ತುಂಬಿಸುತ್ತ ತೆಗೆಯುತ್ತ ತನ್ನಷ್ಟಕ್ಕೇ ಇದ್ದಳು.

ಗೋಪಿನಾಥ ಮಾಲತಿ ಹತ್ತಿರ ಅಂದು ಬಂದಿದ್ದವರು ಯಾರು ಯಾರೆಂತ ವಿಚಾರಿಸುತ್ತಿರುವಾಗ ಇಂದಿರಮ್ಮ ನಾಲ್ಕು ಬೆಳ್ಳಿಯ ತಟ್ಟೆಗಳನ್ನು ತಂದು ತೋರಿಸಿ,

'ಮಾಲತಿ ಕೊಟ್ಟ ಉಡುಗೊರೆ ನೋಡಿದಿಯಾ, ಗೋಪಿ?' ಎಂದರು. ನಾಲ್ಕು ತಟ್ಟೆಗಳಲ್ಲಿ ಒಂದು ದೊಡ್ಡದು, ಮೂರು ಚಿಕ್ಕವು. ಗಟ್ಟಿಮುಟ್ಟಾಗಿಯೂ ನಾಜೂಕಾಗಿಯೂ ಇದ್ದುದನ್ನು ನೋಡಿ ಗೋಪಿನಾಥ ಸಂತೋಷದಿಂದ,

"ಪಂಬಿ ಉಣುವಾಗಲಿಲ್ಲ ನೆನಪಿಗಾಯಿತು ಇವೊತ್ತೇ ಮುಹೂರ್ತವಾಗಲಿ ಉಪಯೋಗಕ್ಕೆ" ಎಂದ.

"ಆದಾಗಲೇ ನಿಶ್ಚಯವಾಗಿಬಿಟ್ಟಿದೆ. ಅತ್ತೆ ಕೊಟ್ಟ ತಟ್ಟೇಲಿ ಅತ್ತೆಯೇ ಉಣಿಸಬೇಕು ಅಂತ" ಅಂದರು ಇಂದಿರಮ್ಮ

ಪಂಬಿಯ ಅಪೇಕ್ಷೆ ಮೇರೆಗೆ ಮಾಲತಿ ಉಣಿಸಿದಾಪಮೇಲೆ ಆಕೆಯೂ ಗೋಪೀನಾಥನೂ ಕುಳಿತರು. ಅವರಿಗೆ ಎದುರೆದುರು ಎಲೆ ಹಾಕಿ ಬಡಿಸುತ್ತಿದ್ದ ಇಂದಿರಮ್ಮನ ಮುಖದಲ್ಲಿ ತೃಪ್ತಿಯ ಕಳೆಯಿತ್ತು. ಗೋಪಿನಾಥ ಮಾಲತಿ ಜತೆಗೆ ಕುಳಿತು ಉಣ್ಣುವುದು, ತಾನು ಬಡಿಸುವುದು ಸುಸಂಗತ ಸಂಯೋಗವೆಂತ ಅವರ ಮೃದುಮನಸ್ಸು ಒಳಗೊಳಗೆ ಹಿಗ್ಗುತ್ತಿತ್ತು. ಆದರೂ ಯಾವುದೋ ಒಂದು ಅನುಮಾನ ಆ ಹಿಗ್ಗಿನೊಳಗೆ ನುಗ್ಗಿ ಅವರ ಮುದುರಿ ಬಿಗಿದ ಕೆಳತುಟಿಗಳಲ್ಲಿ ಲಜ್ಜೆಯಾಗಿ ಕಾಣುತ್ತಿತ್ತು. ಅವರ ದೃಷ್ಟಿಗೆ ಮಾಲತಿ ಬಹಳ ಸಮಯಬಿಟ್ಟು ಬಹು ದೂರದಿಂದ ಬಂದ ಮಗಳಾಗಿದ್ದಳು. ಮಾಲತಿಯನ್ನು ಆಗಾಗ ನೋಡುತ್ತ ನಿತ್ಯಾನ್ನವನ್ನು ಔತಣದಂತೆ ರುಚಿಸಿಕೊಂಡು ಉಣುತ್ತಿದ್ದ ಗೋಪಿನಾಥನೂ ಅವರ ಕಣ್ಣಿಗೆ ಹತ್ತುವರ್ಷ ಚಿಕ್ಕವನಾದಂತೆ ತೋರಿದ.

ಇವರು ಹೀಗೆ ಅಡುಗೆಮನೆಯಲ್ಲಿ ನಿಧಾನವಾಗಿ ಉಣ್ಣುತ್ತಿರುವಾಗ ಹೊರಗಿನ ತುಮುಲದ ಮೊರೆ ದೂರದ ಕಡಲಿನ ಕರೆಯಂತೆ ಕೇಳಿಸುತ್ತಿತ್ತು.

"ಈ ಗಾಳಿಮಳೆಗೆ ಹೇಗಮ್ಮ ಮಾಲತಿಬಾಯಿ ಹೋಗೋದು" ಎಂದು ಗೋಪಿನಾಥ ಕೇಳಿದ ಉಣ್ಣುತ್ತ.

"ನಾನೂ ಅದೇ ಯೋಚ್ನೇಲಿದ್ದೇನೆ, ನೋಡು."

“ಅಸಾಧ್ಯ! ಮಳೆಯಾದರೂ ಸ್ವಲ್ಪ ಹೊತ್ತಿನಲ್ಲಿ ಸುಮಾರಾಗಬಹುದು. ಆದರೆ ಗುಡುಗು ಮಿಂಚು ಕಡಿಮೆಯಾಗುವಂತಿಲ್ಲ.” ಅನ್ನುತ್ತ ಮಾಲತಿ ಮುಖವನ್ನು ನೋಡಿದ.

ಆಕೆ, “ಏನಪ್ಪ, ನನಗೊಂದೂ ತೋರೋದಿಲ್ಲ.” ಅಂದಳು. ಕಣ್ಣೆತ್ತದೆ. ನಿಜಕ್ಕೂ ಆಕೆಗೆ ಮುಂದಾರಿ ಕಾಣುತ್ತಿದ್ದಿಲ್ಲ. ತಾನೇನು ಮಾಡಬೇಕು, ಹೇಗೆ ನಡಕೊಳ್ಳಬೇಕೆಂಬುದೇ ತಿಳಿಯಲಿಲ್ಲ. ಸ್ವವಿಚಾರಶಕ್ತಿಯೇ ಇಂಗಿಹೋದಂತಿತ್ತು. ಇಷ್ಟು ಆಲೋಚಿಸಿದರೂ ಯಾವ ನಿರ್ಧಾರಕ್ಕೂ ಬರುತ್ತಿದ್ದಿಲ್ಲ. ಯಾವ ನಿರ್ಧಾರವೂ ಬೇಡವಾಗಿತ್ತು. ಸ್ವಾಭಾವಿಕವಾಗಿ ಸ್ವಾವಲಂಬಿಯಾದ ಮಾಲತಿ ಆ ಗಳಿಗೆಯಲ್ಲಿ ಗಾಳಿಬಂದಂತೆ ತಲೆದೂಗುವ ಹುಲ್ಲೆಳೆಯಂತಿದ್ದಳು. ಆಕೆ ಏನೂ ಹೇಳದ್ದರಿಂದ ಗೋಪಿನಾಥ ಆ ಪ್ರಸ್ತಾಪವನ್ನು ಮುಂದುವರಿಸಲಿಲ್ಲ.

ಅವರು ಊಟ ಮಾಡಿ ಕೈತೊಳೆದು ಹಾಲಿಗೆ ಬರುತ್ತಿರುವಾಗ ಹೊರಗಿನಿಂದ ಯಾರೋ “ಅಮ್ಮಾ, ಅಮ್ಮಾ” ಅಂತ ಆರ್ತಸ್ವರದಿಂದ ಕೂಗುವುದು ಕೇಳಿಸಿ, ಮಾಲತಿ ಓಡಿಹೋಗಿ ಬಾಗಿಲನ್ನು ತೆರೆದು ನೋಡಿದಳು. ಬುಸುಗುಟ್ಟುತ್ತಿದ್ದ ಗಾಳಿಯ ಬಡಿತಕ್ಕೆ ಬಾಗಿಲು ಒಡೆದುಬಂತು. ಮಾಲತಿ ‘ಯಾರದು?’ ಅಂತ ಕೇಳುವಾಗಲೇ ಗೊತ್ತು ತನ್ನ ಮನೆಯ ಜವಾನನೆಂಬುದು. ಅಲ್ಲೇ ಹೆಗಲಮೇಲಿಂದ ಬಂದುದಾರೆಂತ ಹೇಳಿತಿಳಿಸಿದಳು, ಹಿಂದೆ ನಿಂತಿದ್ದ ಗೋಪಿನಾಥನಿಗೆ. ಜವಾನ ಕೊಡೆ ಸಮೇತ ಬಂದಿದ್ದನಾದರೂ ಒದ್ದೆಮುದ್ದೆಯಾಗಿ ಚಳಗೆ ನಡುಗುತ್ತಿದ್ದ. “ಒಂದು ಜಟಕ ಮಾಡಿಕೊಂಡು ಹೋಗಿ ಕರಕೊಂಡು ಬಾ. ಜಟಕ ಸಿಗದೆ ಹೋದ್ರೆ ಕಾರಾದರೂ ಸಿಗುತ್ತೋ ನೋಡು. ಅದೂ ಸಿಗದೇಹೋದ್ರೆ ಇವತ್ತು ಬರೋದೇಬೇಡ. ಅಲ್ಲೇ ಇರಲಿ, ನಾಳೆ ಬಂದರೆ ಸಾಕು” ಅಂತ ರಾಯರು ಹೇಳಿಕಳುಹಿಸಿದ್ದಾರೆ ಎಂದು ತಿಳಿಸಿದ. “ಎಲ್ಲಿ ಹುಡುಕಿದರೂ ಒಂದೇ ಒಂದು ಜಟಕ ನೋಡಿಯೇನೂಂದ್ರಿಲ್ಲ. ಬಾಡಿಗೆ ಕಾರು ಬಿಟ್ಟು ಖಾಸಗಿ ಕಾರುಗಳ ಸುಳಿವೂ ಇಲ್ಲ. ರಸ್ತೆಗಳಲ್ಲಿ ಮನುಷ್ಯರ ಸಂಚಾರವೇ ಇಲ್ಲ. ಮಳೆಯೊಂದೇ ಧಾರಾಕಾರವಾಗಿ ಸುರಿಯುತ್ತಿದೆ” ಅನ್ನುತ್ತ ಜವಾನ ತಿರುಗಿ ಹೊರಟ. ಒದ್ದೆ ಬಟ್ಟೆಗಳನ್ನು ಹಿಂಡಿಬಿಟ್ಟು, ಊಟ ಮಾಡಿಕೊಂಡು ಹೋಗು, ಅಂದ ಗೋಪಿನಾಥ. ಆದರೆ

ಆತ ‘ ರಾಯರು ಕಟ್ಟಪ್ಪಣೆ ಮಾಡಿದ್ದಾರೆ. ತಕ್ಷಣ ಬಂದುಬಿಡೂಂತ, ಹೋಗ್ತೀನೆ ಹೇಗಾದರೂ’ ಎಂದು ಹೇಳಿ ಮಳೆಯೊಳಗೆ ಧುಮುಕಿದ.

ಆತ ಹೋದ ಮೇಲೆ ಹಾಲಿನ ಬಾಗಿಲು ಹಾಕಿ ಗೋಪಿನಾಥ ಮಾಲತಿ ಮುಖ ಮುಖ ನೋಡುತ್ತ ಒಂದು ನಿಮಿಷ ಅವಾಕ್ಕಾಗಿ ನಿಂತರು. ಅದು ವರೆಗೆ ಇಬ್ಬರ ಮನಸ್ಸು ಕೊರೆಯುತ್ತಿದ್ದ ಸಂಶಯ, ಅನಿಶ್ಚಯ ನಿವಾರಣೆ ಯಾಯಿತು. ಆದರೆ ಅದರ ಭಾರದಿಂದ ಅದುಮಿದ್ದ ಆಸೆಯೂ ಅಂಜಿ ಕೆಯೂ ತಲೆಯೆತ್ತಿದುವು. ಮಾಲತಿಗೆ ಬಿಡುಗಡೆಯಾದಂತೆ ಸುಖವಾಯಿತು. ಗೋಪಿನಾಥನಿಗೆ ಬಂಧಿತನಾದಂತೆ ಅಸುಖವಾಯಿತು. ಫಕ್ಕನೆ ತಲೆ ತಗ್ಗಿಸಿ ಮಾಲತಿ ನಕ್ಕಳು. ಆ ವರೆಗೆ ಬಾಡಿದಂತಿದ್ದ ಆಕೆಯ ಮುಖಕಮಲ ಅರ ಳಿದ್ದನ್ನು ನೋಡಿ ಆಕೆಯ ಚೆಲುವಿಗೆ ಬೆರಗಾಗಿ ಗೋಪಿನಾಥ ಅಧೀರನಾದ. ತನ್ನಷ್ಟಕ್ಕೆ “ ನಮ್ಮಿಬ್ಬರನ್ನು ದೇವರೇ ಕಾಪಾಡಬೇಕು ” ಅಂತಂದರೂ ಮಾಲತಿಯನ್ನು ಕುರಿತು “ ನಾನಾಗಲೇ ಹೇಳಲಿಲ್ಲವೇ ?” ಅಂದ.

ಅಷ್ಟರಲ್ಲಿ ಇಂದಿರಮ್ಮ ಪಂಬಿ ಸಮೇತ ಬಂದು ನಡೆದ ಸಂಗತಿಯನ್ನು ಕೇಳಿ ತಿಳಿದುಕೊಂಡು,

“ ಒಳ್ಳೇದೇ ಆಯಿತು, ಇನ್ನು ಯೋಚನೆ ಮಾಡಬೇಕಾಗಿಲ್ಲವಷ್ಟೇ. ಪಂಬಿ ಪುಣ್ಯ. ಪಂಬಿ, ನಿನ್ನತ್ತೆ ಇಲ್ಲೇ ಇರ್ತಾಳಂತೆ, ರಾತ್ರೆ. ಆಗಬಹುದಾ ? ” ಅಂದರು.

“ ನಾಯೆ ಯಾತೆ?” ಎಂದು ಕೇಳುತ್ತ ಮಗು ಅಜ್ಜಿಯ ಕೆನ್ನೆ ಸವರಿತು.

“ ನಾಳೆ ರಾತ್ರೆ ಸಂಗ್ತಿ ಯಾಕೀಗ ? ಇವತ್ತೇನು, ಹೇಳು. ಹೋಗ್ಲಿಯಾ, ಇರ್ಲಿಯಾ? ”

“ ಆಯು ?”

“ ಆರು ಅಂದ್ರೆ ? ನಿನ್ನತ್ತೆ. ಮತ್ತಾರು? ”

“ ಹೂಂ ಇಯ್ಲಿ ! ಪಾಪ ”

ಗೋಪಿನಾಥನಿಗೆ ಮಗುವಿನ ಹಿರಿತನದ ಮಾತು ಕೇಳಿ ನಗು ಬಂತು. ಮಾಲತಿಯ ಮುಖ ಇನ್ನಷ್ಟೂ ಅರಳಿತು.

“ನೋಡಪ್ಪ ಮಾಲತಿ, ನಿನ್ನಜ್ಜೀದು ಒಪ್ಪಿಗೆಯಾಯಿತು. ಇನ್ನು ನಿಶ್ಚಿಂತೆಯಿಂದ ಇರಬಹುದು” ಅಂದರು ಇಂದಿರಮ್ಮ.

## ೩೧

ಗೋಪಿನಾಥನಿಗೆ ನಿದ್ರೆ ಬಾರದು. ಬರುವ ಸಂಭವವೇ ಕಾಣದು. ಆಕಳಿಕೆಯೇನೋ ಮೇಲೆ ಮೇಲೆ ಬರುತ್ತಲೇ ಇತ್ತು. ಆದರೆ ನಿದ್ರೆಯನ್ನು ತರುವುದಕ್ಕಲ್ಲ; ತೊಲಗಿಸುವುದಕ್ಕೆ. ದೀಪನೊಂದಿಸಿ ಮಂಚದ ಮೇಲೆ ಬಿದ್ದುಕೊಂಡಾಗ ಮೈಯೆಲ್ಲ ಬಿಗಿದು ಬೆಂಡಾಗಿತ್ತು. ಕೈಕಾಲುಗಳಲ್ಲಿ ಬಲವೇ ಇರಲಿಲ್ಲ. ಪಂಬಿ ಕ್ಷಣಕ್ಕೊಬ್ಬೊಬ್ಬರ ಹತ್ತಿರ ಮಲಗುತ್ತೇನೆಂತ ಹೇಳುತ್ತಿದ್ದುದರಿಂದ ಮಲಗುವ ವ್ಯವಸ್ಥೆ ಸುಲಭಸಾಧ್ಯವಾಗದೆ ಗೋಪಿನಾಥ ಕಾದಿರಬೇಕಾಗಿತ್ತು.

ಇಂದಿರಮ್ಮನ ಕೋಣೆಯ ಮಂಚವನ್ನು ಹೊರಗಿಡದ ವಿನಹ ಅಲ್ಲಿ ಮಾಲತಿಗೂ ಮಗುವಿಗೂ ಇಬ್ಬರಿಗೂ ಜಾಗವಿರಲಿಲ್ಲ. ತಂಡಿ ಹವೆಗೆ ನೆಲದಮೇಲೆ ಮಲಗಬಾರದೆಂತ ಡಾಕ್ಟರು ಹೇಳಿದ್ದರಿಂದ ಮಂಚ ಅಲ್ಲೇ ಇರಬೇಕಾಯಿತು. ಆ ಕೋಣೆಯನ್ನು ಬಿಟ್ಟು ತಂದೆಯ ಮಂಚದ ಮೇಲೆ ಒಂದು ಗಳಿಗೆ ಮಲಗಿದಳು, ಪಂಬಿ. ಆದರೆ ‘ಅತ್ತೆ’ ಕೂಡ ಅಲ್ಲೇ ಮಲಗಬೇಕೆಂತ ಸುರು ಮಾಡಿದ್ದರಿಂದ ಆ ಏರ್ಪಾಡೂ ಸರಿಬೀಳಲಿಲ್ಲ. ಕೊನೆಗೆ ಆಕೆಯ ಕೋಣೆಯನ್ನೇ ತೆರವುಮಾಡಿ, ಅಲ್ಲಿಯೇ ಹಾಸಿಗೆಬಿಡಿಸಿ, ಮಗು ಮಾಲತಿಯ ಮಗ್ಗುಲಲ್ಲಿ ಮಲಗಿತು. ಆದರೆ ನಿದ್ರೆ ಬರುವಷ್ಟರಲ್ಲಿ ಪಂಬಿಗೆ ಅಜ್ಜಿಯೂ ಬೇಕು, ಅಪ್ಪನೂ ಬೇಕು ಅಂದನಿಸಿ, ತಟ್ಟನೇ ಎದ್ದುಬಿಟ್ಟಿತು. ಹೀಗಾಗಿ ಮಗುವನ್ನು ಅಜ್ಜಿ ಮಗ್ಗುಲಲ್ಲೇ ಮಲಗಿಸಿ, ಬೆನ್ನುತಟ್ಟುತ್ತ ಕತೆ ಹೇಳುತ್ತ ನಿದ್ರೆಮಾಡಿಸಿ ಆ ಮೇಲೆ ಮಾಲತಿ ತನ್ನ ಪಂಬಿಕೋಣೆಯ ಹಾಸಿಗೆಯನ್ನು ಸೇರುವ ತನಕ ಗೋಪಿನಾಥ ಸುಮ್ಮನೇ ಕುಳಿತಿರಬೇಕಾಯಿತು. “ಇದೇನಪ್ಪ, ಈ ಮಗು ಹೀಗೂ ಮಾಡುತ್ತಲ್ಲ; ಸುತ್ತ ಮುತ್ತ ಹುಲ್ಲುರಾಶಿಗಳ ನಡುವೆ ಉಪವಾಸ ಬಿದ್ದ ಕತ್ತೆಯ ಹಾಗೆ. ಈ ರೀತಿ ಹಾಸಿಗೆ ಬದಲಿಸುತ್ತ ಇದ್ರೆ ನಿದ್ರೆ ಮಾಡೋದು ಯಾವಾಗ ?” ಅಂದು ಕೊಳ್ಳುತ್ತ ಕಾವಲು ಕುಳಿತಿದ್ದ. ಏನಾದರೂ ಸಲಹೆ ಹೇಳೋಣವೆಂದರೆ ಅಪಾರ್ಥಕ್ಕೀಡಾದೀತೆಂಬ ಭಯ. ಆದ್ದರಿಂದ ಮಗುವಿನ ಚೆಲ್ಲಾಟವನ್ನು ಬಾಯಿ ಮುಚ್ಚಿಕೊಂಡೇ

ಸಹಿಸಬೇಕಾಯಿತು. ಮಾಲತಿ ಮಗುವಿನೊಂದಿಗೆ ಮಗುವಿನಂತೆ ಬೆರೆತು ಉಲ್ಲಾಸದಿಂದ ಓಡಾಡುವುದನ್ನ ನೋಡಿ ಆಶ್ಚರ್ಯಪಡುತ್ತಿದ್ದನು.

ಹಾಸಿಗೆಯ ಮೇಲೆ ಹೇಗೆ ಮಲಗಿದರೂ ಎಲ್ಲಿ ಹೊರಳಿದರೂ ತೂಕಡಿಕೆಯ ಸುಳಿವೇ ಇಲ್ಲ. ಎದ್ದು ಏನಾದರೂ ಓದೋಣವೆಂದರೆ ತಲೆಗೆ ಹತ್ತದೆಂಬುದು ಮೊದಲೇ ಗೊತ್ತು. ಆದ್ದರಿಂದ ಬೇರೇನೂ ಮಾಡಲಾರದೆ ಎದ್ದು ಕಿಟಕಿಯ ಬಾಗಿಲೊಂದನ್ನು ತೆರೆದು ಗಾಳಿಮಳೆಗೆ ಜೇಳಿನಂತೆ ತಣ್ಣಗಿದ್ದ ಸರಳುಗಳೆರಡರ ನಡುವೆ ಮುಖವಿಟ್ಟು ಆಕಾಶದ ಕಡೆಗೆ ನೋಡುತ್ತ ಧ್ಯಾನಾಧೀನನಾದ. ಮೃತ್ಯುಮಯ ಕಗ್ಗತ್ತಲು. ಕ್ಷಣಕ್ಕೊಂದು ಮಿಂಚು ವಜ್ರಖಡ್ಗದಂತೆ ದಿಗಂತವನ್ನು ಸೀಳಿ ಕಾರ್ಮೋಡಗಳ ಬೆಟ್ಟಗಳ ಹಿಂದುಗಡೆ ಮಾಯವಾಗುತ್ತಿತ್ತು. ಪಂಚಭೂತಗಳು ಕಲ್ಪಾಂತ್ಯದ ಲಯೋನ್ಮತ್ತತೆಯಿಂದ ಅಷ್ಟದಿಕ್ಕುಗಳೊಡನೆ ಉಗ್ರಕಾಳಗನೆಸಗುತ್ತಿದ್ದುವು. ವಿಶ್ವನಿರ್ಮಾಪಕ ಗಣಗಳು ಜಗತ್ತಿನ ಪುನರ್ರಚನೆಗಾಗಿ ಅಮಾನುಷ ಬಲದಿಂದ ಪರ್ವತಶ್ರೇಣಿಗಳನ್ನೇ ಅತ್ತಿತ್ತ ಉರುಳಿಸುತ್ತಿದ್ದಂತೆ ಬಹುದೂರದ ಸಿಡಿಲುಗಳು ಗುಡುಗುತ್ತಿದ್ದುವು. ಈ ರುದ್ರರಮಣೀಯತೆಯನ್ನು ನೋಡುತ್ತ ವೈಮರೆತ ಗೋಪಿನಾಥನಿಗೆ ಮುಖವೆಲ್ಲ ಒದ್ದೆಯಾದುದು ಗಮನಕ್ಕೇ ಬರಲಿಲ್ಲ. ಹಲವು ನಿಮಿಷಗಳ ಮೇಲೆ "ಎಂತಹ ರಾತ್ರಿ ಇದು!" ಅನ್ನುತ್ತ ಬಾಗಿಲು ಮುಚ್ಚಿ ಉಟ್ಟಬಟ್ಟೆಯಿಂದ ಮುಖ ಒರಸಿಕೊಂಡ.

ಛಳಿಯಾಗುತ್ತಿದ್ದರೂ ಹೊದ್ದುಕೊಳ್ಳದೆ ಮಂಚದ ಮೇಲೆ ಮಲಗಿದ; ಆ ಕೂಡಲೇ ಮನಸ್ಸಿಗೆ ಹೊಳೆಯಿತು. ಮಾಲತಿಗಾಗಿ ತೆಗೆದಿಟ್ಟಿದ್ದ ರಗ್ಗನ್ನ ಹಾಲಿನ ಸೋಫದ ಮೇಲೆ ಹಾಕಿದ್ದ. ಆದರೆ ಮಾಲತಿಗೆ ಹೇಳಿದ ನೆನಪಿರಲಿಲ್ಲ. ಹೋಗಿ ನೋಡಿ ಬರಲೇಬೇಕು. ಛಳಿಗೆ ನಡುಗುತ್ತಿದ್ದರೆ? ಎದ್ದು ಸ್ವಿಚ್ಚು ಹಾಕಿ ಗಡಿಯಾರ ನೋಡಲು ಹತ್ತು ಮುಕ್ಕಾಲು ಗಂಟೆ. ಆಕೆಗೆ ಆಗಲೇ ನಿದ್ರೆ ಬಂದಿದೆಯೋ ಏನೋ? ಪರವಾಯಿಲ್ಲ ನೋಡಿ ಬರುವುದೇ ಲೇಸು, ಅಂದುಕೊಳ್ಳುತ್ತ ಬಾಗಿಲು ತೆರೆದು ಹಾಲಿಗೆ ಹೋಗಿ ಅಲ್ಲಿಯ ದೀಪಹಾಕಿ ನೋಡಿದ. ರಗ್ಗು ಸೋಫದ ಮೇಲೆ ಹಾಕಿದಲ್ಲೇ ಇತ್ತು. ತಕ್ಷಣ ಅದನ್ನು ತಗೊಂಡು ಪಂಬಿಯ ಕೋಣೆಯ ಬಾಗಿಲ ಬಳಿ ನಿಂತ. ಮುನ್ನಡೆಯಲು ಮೊದಲೇ ಸೋತಿದ್ದ ಕಾಲುಗಳು ಅಂಜಿಕೆಯಿಂದಲೂ ನಾಚಿಕೆ

ಯಿಂದಲೂ ನಡುಗಿದುವು. ತನ್ನ ಅಸಹಾಯಕತೆಗೆ ತಾನೇ ಕನಿಕರಪಡುತ್ತ ಹೀಗೆ ಚಿಂತಿಸುವಾಗ ಹಜಾರದ ಕಿಟಕಿಗಳಿಂದ ತಂಗಾಳಿ ಬೀಸಿ ಅದರ ಬೆನ್ನಿಗೆ ಗುಡುಗೊಂದು ಹಿಂಬಾಲಿಸಿ ಬಂದು ಬಡಿದು ಗೋಪಿನಾಥನನ್ನು ದಬ್ಬಿದುವು. ಅರೆತೆರೆದಿದ್ದ ಬಾಗಿಲುಗಳನ್ನ ದೂಡಿ ಹೊಸಲು ದಾಟಿ ಹಾಲಿನ ದೀಪದ ಬೆಳಕಿನಲ್ಲಿ ಇಣಿಕಿನೋಡಿದ. ಮಾಲತಿ ಮುಗ್ಗುಲಾಗಿಕೊಂಡು ಮೈಮುದುರಿಕೊಂಡು, ಮುಖವನ್ನ ತೋಳುಗಳಿಂದ ಮುಚ್ಚಿಕೊಂಡು ಮಲಗಿದ್ದಳು. ಹಾಸಿಗೆ ಬಳಿ ಮೊಣಕಾಲೂರಿ ರಗ್ಗನ್ನು ಬಿಡಿಸಿ ಮೆತ್ತಗೆ ಆಕೆಯ ಮೈ ಮುಟ್ಟದೆ ಹೆಗಲವರೆಗೂ ಹೊದಿಸಿದ. ಹೊದಿಸಿದಾನಂತರ ಎದ್ದು, ಸದ್ದು ಮಾಡದೆ ಬಾಗಿಲು ಸರಿಸಿ, ಹಾಲಿನ ಸ್ವಿಚ್ಚ್ ಹಾಕಿ ತನ್ನ ಕೋಣೆಗೆ ಬಂದು ಮಂಚದ ಅಂಚಿನ ಮೇಲೆ ಕುಳಿತ. ಆಗಲೇ ಗೊತ್ತು ತನ್ನೆದೆ ಬಡಿದುಕೊಳ್ಳುತ್ತಿದ್ದುದು.

ರಗ್ಗು ತೆಗೆದಿಟ್ಟಿದ್ದನ್ನು ಇಂದಿರಮ್ಮ ಹೇಳಿದ್ದರು ಮಾಲತಿಗೆ. ಆದರೆ ಮಾಲತಿಗೆ ಪಾಪುವನ್ನು ನಿದ್ರೆಮಾಡಿಸಿ ತನ್ನಷ್ಟಕ್ಕೆ ತಾನು ಒಂದೆಡೆ ಬಿದ್ದುಕೊಂಡರೆ ಸಾಕಾಗಿತ್ತು. ಅವರೆಗೆ ಆಕೆ ಸಹಿಸಿದ್ದ ಅಂದಿನ ವಿಚಿತ್ರ ಸಂಕ್ಷೋಭೆಯಿಂದ ತಲೆ ಸುತ್ತುತ್ತಿತ್ತು. ಮಲಗಿದಮೇಲೆ ಹೊದಿಕೆ ಬೇಕೆನಿಸಿತು. ಆದರೆ ಎದ್ದು ಹೋಗಿ ತರಲು ಉದಾಸೀನವಾಯಿತು. ಹಾಗೆಯೇ ಮಲಗಿದಳು, ಆದಷ್ಟು ಬೆಚ್ಚಗಾಗಿ ಮುರುಟಿಕೊಂಡು. ಕಣ್ಮುಚ್ಚಿ ಅಂದಿನ ವಿಚಿತ್ರ ಘಟನೆಗಳನ್ನು ಜ್ಞಾಪಿಸಿಕೊಂಡಳು. ಆದರೆ ಮನಸ್ಸು ನೀರಿಗೆ ಬಿದ್ದ ಕಾಗದದಂತಿತ್ತು. ಅನುಭವ ಲಿಪಿಯೆಲ್ಲ ತೋಯ್ದು ಕರಡಿ ಗುರುತಿಸಲಾರದಂತಿತ್ತು. ಒಬ್ಬಳೇ ಮಲಗಿರಲು ಪ್ರತಿನಿಮಿಷವೂ ಹೆಚ್ಚೆಚ್ಚು ಪ್ರಯಾಸವಾಗುತ್ತ ಬಂತು. ಏಕಾಂಗಿಯಾಗಿ ಆ ಕೋಣೆಯಲ್ಲಿ ಉಸಿರಿಡುವುದು ಕೂಡ ಕಷ್ಟತಮವಾಗಿ ತೋರಿತು. ಚಳಿಗೆ ನಡುಗುತ್ತಿರಬೇಕೆಂದೆನಿಸಿ ಹೋಗಿ ರಗ್ಗು ತರಬೇಕೆಂದು ಹೇಳಿಕೊಂಡಳು. ಆದರೆ ಎದ್ದೇಳುವುದಕ್ಕೂ ಶಕ್ತಿಯಿರಲಿಲ್ಲ. ಸ್ವಲ್ಪ ಸಮಯದ ಮೇಲೆ ಎದ್ದು ಕೂತಳು. ಆಗ ಹಾಲಿನ ದೀಪ ಜಗ್ಗೆಂದು ಹಾರಿದ್ದನ್ನು ನೋಡಿ ಕೂಡಲೆ ಮಲಗಿ ನಿದ್ರೆ ನಟಿಸಿದಳು. ಮುಖ ಮುಚ್ಚಿಕೊಂಡು ತೋಳುಗಳೆಡೆಯಿಂದ ದೀಪ ಹಾಕಿ ಕೋಣೆಯ ಬಾಗಿಲ ಬಳಿ ನಿಂತುದು ಗೋಪಿನಾಥನೆಂತ ತಿಳಿಯಿತು. ಆದರೆ ಒಳಗೆ ಬರುವನೆಂತ ಊಹಿಸಲಿಲ್ಲ. ಹೆಜ್ಜೆಹೆಜ್ಜೆಗೂ ಆತ ಹತ್ತಿರ ಬರುವಾಗ ಆಕೆಯ ಹೃದಯಪಂಜರದ ಪ್ರಾಣಪಕ್ಷಿ ರೆಕ್ಕೆ ಬಡಿಯ ಪ್ರಾರಂಭಿಸಿತು. ಆತ ಮೊಣಕಾಲೂರಿ ರಗ್ಗು ಹೊದಿಸುವಾಗ ಕೈಸೋಡಿದರೆ

ಸಿಗುವಷ್ಟು ಸಮೀಪವಿದ್ದ. ಮಾಲತಿಯ ನೈರಕ್ತವೆಲ್ಲ ಎರಡು ತೋಳುಗಳಲ್ಲಿ ತುಂಬಿದಂತೆ ವೇದನೆಯಾಗಿ ಅಲುಗದೆ ಮಲಗಿರಲು ಅತಿ ಕಷ್ಟವಾಯಿತು. ಈ ಕಷ್ಟವನ್ನು ಸಹಿಸಲಾರದೆ ಚಿಟ್ಟನೇ ಚೀರುವುದರಲ್ಲಿದ್ದಳು. ಉನ್ಮಾದಿನಿ ಯಂತೆ. ಮುಖವನ್ನು ದಿಂಬಿಗೆ ಒತ್ತಿಟ್ಟುಕೊಂಡು ಹಾಗೇ ಬಿದ್ದಿದ್ದಳು. ಗೋಪಿನಾಥ ಹೋದ ಮರುಕ್ಷಣ ಎದ್ದು ಕುಳಿತಳು.

ಎಷ್ಟೋಸಲ ಏಕಾಂತದಲ್ಲಿ ಸವಿಸನ್ನಿವೇಶಗಳನ್ನು ಕಲ್ಪಿಸಿಕೊಂಡು ಗೋಪಿನಾಥನೊಂದಿಗೆ ರಸನಿಮಿಷಗಳನ್ನು ಕಳೆದಿದ್ದಳು. ಎಷ್ಟೋಸಲ ತನ್ನ ಹೃದಯೇಶ್ವರನನ್ನು ಧ್ಯಾನಿಸುತ್ತ ತನ್ನದೇ ಆದ ಒಂದು ಭವ್ಯಸ್ವರ್ಗವನ್ನು ವಿರಚಿಸಿ ಅದರೊಳಗೆ ಇಷ್ಟಬಂದಂತೆ ವಿಹರಿಸಿದ್ದಳು. ಆದರೆ ನೆನಸು ಕನಸು ಗಳು ಈ ರೀತಿ ವಿಕೃತಿಗೊಂಡು ತನ್ನನ್ನು ಅಣಕಿಸಬಹುದೆಂತ ಎಂದೂ ಊಹಿಸಿರಲಿಲ್ಲ. ಇದ್ದಕ್ಕಿದ್ದ ಹಾಗೆ ರಾಘವೇಂದ್ರರಾಯರ ನೆನಪು ಬಂತು. ಅವರೊಂದು ತೆರ, ಗೋಪಿನಾಥನೊಂದು ತೆರ. ಇಬ್ಬರ ವ್ಯಕ್ತಿಚಿತ್ರಗಳನ್ನು ಹೋಲಿಸಿ ನೋಡಿದಳು. ಸ್ಫುಟವಾಗಿ ಯಾವುದೂ ಮನಗಾಣಲಿಲ್ಲ. ಇಬ್ಬರ ರೂಪ ಗುಣ ವಿಶೇಷಗಳೂ ಮಸುಕು ಮಸುಕಾಗಿದ್ದವು. ಇಷ್ಟೊಂದು ಸ್ಪಷ್ಟ ವಾಯಿತು—ತನ್ನ ಗಂಡನ ಗಾಂಭೀರ್ಯ, ಸ್ವಾವಲಂಬನ, ಸ್ವಾಭಿಮಾನ ಎಲ್ಲವೂ ಹೊರಗಿನ ಆಡಂಬರ. ಒಳಗೆ ಅವರು ಸಹಜವಾಗಿ ಮಗುವಿನಂತಿ ದ್ದರು. ಗೋಪಿನಾಥ ಶಾಂತ ಸೌಮ್ಯಮೂರ್ತಿಯಾಗಿ ತೋರಿದರೂ ಪ್ರತಿಭಾ ಶಾಲಿಯಾಗಿದ್ದನು. ರಾಘವೇಂದ್ರರಾಯರಿಗೆ ಆಕೆಯನ್ನು ಬಿಟ್ಟು ಒಂದು ದಿನವೂ ಕಳೆಯದು. ಈಗಲೂ ತನಗಾಗಿ ಎಷ್ಟು ಗಾಬರಿಯಾಗಿದ್ದಾರೋ ಏನೋ!

ಆಗ ಪಕ್ಕದ ಕೋಣೆಯಿಂದ ಧೊಪ್ಪಂತ ಸದ್ದು ಕೇಳಿಸಿ ಮಾಲತಿಯ ಎದೆ ಹಾರಿಬಿತ್ತು. ಕಾಲಮೇಲಿದ್ದ ರಗ್ಗನ್ನ ಒದ್ದೆಸೆದು ಎದ್ದು ನಿಂತಳು. ಕತ್ತ ಲಲ್ಲಿ ತಡವರಿಸುತ್ತ ಗೋಪಿನಾಥನ ಕೋಣೆಯ ಕಡೆಗೆ ಹೆಜ್ಜೆಹಾಕಿದಳು. ಕೋಣೆಯ ಬಾಗಿಲು ಹಾಕಿರಲಿಲ್ಲ. ಅದೊಂದು ಗುಹೆಯಂತೆ ಭಾವನೆಯಾಗಿ ಬಾಗಿಲ ಬದಿ ಗೋಡೆಗೆ ಒರಗಿ ಏಗುತ್ತ ಕಿವಿಗೊಟ್ಟು ಕೇಳುತ್ತ ನಿಂತಳು. ನಿಶ್ಶಬ್ದವಾಗಿತ್ತು. ಗಾಳಿಯ ಸುಯ್ಯಲು, ಗುಡುಗಿನ ನಗಾರಿಯಲ್ಲದೆ ಮೂರ ನೆಯ ಸದ್ದಾವುದೂ ಕೇಳಿಸಲಿಲ್ಲ. ಆದರೆ ಏನೋ ಯಾರೋ ಬಿದ್ದ

ಹಾಗಾಯಿತಲ್ಲ? ಬರೀ ಭ್ರಾಂತಿಯಾಗಿರಲಾರದು! ಕತ್ತಲು ಕೈಗೆ ಸಿಗುವಂತಿತ್ತು. ಒಮ್ಮೊಮ್ಮೆ ಹಾಲಿನ ಕಿಟಿಕಿಗಳಿಂದ ಮಿಂಚುಗಳು ಇಣಿಕಿ ಕುರ್ಚಿ ಮೇಜುಗಳನ್ನು ಎಣಿಕೆಹಾಕಿ ಆಕೆಯನ್ನಣಕಿಸಿ ಹೋಗುತ್ತಿದ್ದುವು.

ಗೋಪಿನಾಥ ಮಂಚದಮೇಲೆ ಕುಳಿತಿರಲಾರದೆ ಅತ್ತಿತ್ತ ನಡೆಯಲು ಯತ್ನಿಸಿದಾಗ ಸೋಫವನ್ನು ಎಡವಿದ. ಆ ಕೋಣೆಯು ಅಷ್ಟು ಚಿಕ್ಕದೆಂದು ಯಾರಿಗೆ ಗೊತ್ತು? ಈ ಕೋಣೆಯೇನು, ಈ ಲೋಕವೇ ಚಿಕ್ಕದು. ಅತಿ ಚಿಕ್ಕದು. ಅಸಂಖ್ಯಾತ ಜೀವಿಗಳಿರುವ ಈ ಕರ್ಮಕ್ಷೇತ್ರದಲ್ಲಿ ಮಾಲತಿಯೂ ತಾನೂ ಒಂದೆಡೆಗೆ ಇರುವುದಕ್ಕೆ ಜಾಗವಿಲ್ಲ. ತಮಗೆ ಕಲ್ಪನಾ ಪ್ರಪಂಚವೇ ಗತಿ. ಜತೆಗೆ ಮುನ್ನಡೆಯುವದಕ್ಕೂ ಮಾರ್ಗವಿಲ್ಲ. ಸತ್ಯಲೋಕಕ್ಕಿರುವ ಸೇತುವೆ ಅಷ್ಟು ನಿರ್ಬಲ. ಕೊನೆಯ ಯಾತ್ರೆಯನ್ನು ಒಬ್ಬನೇ ಮಾಡಬೇಕು. ಗೋಪಿನಾಥ ತನ್ನ ಮನೆ, ಮಂದಿ ತನ್ನ ಸರ್ವಸ್ವವನ್ನು ಬಿಟ್ಟು ಎಲ್ಲಿಗೋ ಬಹುದೂರ ಹೊರಟವನಂತೆ ವ್ಯಾಕುಲಚಿತ್ತನಾದ. ಆತನೊಂದಿಗೆ ಆ ವರೆಗೆ ಬಂದವರೆಲ್ಲ ಹಿಂದುಳಿದಹಾಗೂ, ಮುಂದುವರಿಯಲು ತ್ರಾಣವಿಲ್ಲದ ಹಾಗೂ ಧೈರ್ಯಸಾಲದೆ ಹಿಂತಿರುಗಿದ ಹಾಗೂ ಭಾಸವಾಯಿತು. ಈ ಜೀವನಯಾತ್ರೆಯಲ್ಲಿ ಕೆತ್ತಿದ ಮೆಟ್ಟಲುಗಳಿರುವಲ್ಲಿವರೆಗೆ, ಭದ್ರವಾಗಿ ಕಾಲೂರುವಲ್ಲಿವರೆಗೆ ಹೇಗೂ ತನ್ನ ಜತೆಗೆ ಹತ್ತಿಬಂದರು. ದಾರಿ ದುಸ್ತರವಾದೊಡನೆ ಪಾಲಕಿಯನ್ನಿಳಿಸಿ ಬಿಟ್ಟು ಹಾಯಾಗಿ ಮಲಗಿಬಿಟ್ಟರು. ತಾನಿನ್ನು ಪಾಲಕಿಯಿಂದ ಹೊರಬಂದು ತನ್ನಷ್ಟಕ್ಕೇ ಮುನ್ನಡೆಯಬೇಕು. ತನಗೆ ಪ್ರತಿಯೊಂದರಲ್ಲೂ ಸರಿಸಮಾನಳಂತೆ ತೋರುತ್ತಿದ್ದ ಮಾಲತಿಗೂ ನಿದ್ರೆ. ತಾನು ಪರಿತ್ಯಕ್ತ, ನಿರ್ಭಾಗ್ಯ. ತಾನಿದ್ದೆಡೆ ಯಾರೂ ಬರಲಾರರು. ನಿದ್ರೆಯೂ ಬರಲಾರದು. ನಲ್ಲೆಯೂ ಬಾರಲಾರಳು. ನಿದ್ರೆಯಾದರೋ ಬರಲಿ, ಬಾರದಿರಲಿ. ಇಂದಿಲ್ಲ ನಾಳೆ ಬಂದೇಬಂದೀತು. ಕೊನೆಯ ದೀರ್ಘನಿದ್ದೆಯಂತೂ ತಪ್ಪಿದ್ದಲ್ಲ. ಆ ಪರಮಸುಖ ಯಾವಾಗ ಪ್ರಾಪ್ತಿಯಾಗುತ್ತೋ! ಸಕಲ ಸಮಸ್ಯೆಗಳ ಸಕಲ ಸಂಕಷ್ಟಗಳ ಪರಿಸಮಾಪ್ತಿ ಮಾನವಕುಲದ ಜಗನ್ಮಾತೆಯಾದ ನಿದ್ರಾದೇವಿಯ ಮಡಿಲಲ್ಲಿ ಈ ದಣಿದ ದೇಹವನ್ನಿಳಿಸಿ ಬಿಡುಗಡೆ ಹೊಂದಬಹುದು. ಆದರೆ ಮಾಲತಿ? ಮಾಲತಿಗೂ ತಾನು ಬೇಡವಾದೆನೆ? ನಿದ್ರೆಯೂ ನಲ್ಲೆಯೂ ಒಂದಾಗಿ ತನ್ನ ಕೈಬಿಟ್ಟರೆ ತಾನು ಬಹುದಿನ ಬದುಕಿರಲಾರೆ. ಹೀಗಾಗುವ

ಬದಲು ಹೊರಗೆ ನಡೆಯುವ ಮೂಲವಸ್ತುಗಳ ರಣಕ್ಷೇತ್ರದಲ್ಲಿ ಮೈಯೊಡ್ಡಿ ಮಡಿಯುವುದೇ ಲೇಸು, ಎಂದೆನಿಸಿತು ಗೋಪಿನಾಥನಿಗೆ.

ಈ ಚಿಂತನದ ಉದ್ವೇಗದಲ್ಲಿ ಮಾತು ತಾನಾಗಿ ಹೊರಬಿದ್ದದು ಗೋಪಿನಾಥನ ಗಮನಕ್ಕೆ ಬಾರದಿದ್ದರೂ ಹೊಸಲಾಚೆ ಗೋಡೆಗೆ ಬೆನ್ನುಹಚ್ಚಿ ಮೈಯೆಲ್ಲ ಕಿವಿಯಾಗಿ ನಿಂತಿದ್ದ ಮಾಲತಿಗೆ ಕೇಳಿಸಿತು. ಕೇಳಿ ಭಯಗೊಂಡಳು. ಅತ್ಯಂತ ಸುಖವೇದನೆಯಿಂದ ನಡುಗಿದಳು. ನಿಂತಿರಲಾರದೆ, “ಅಯ್ಯೋ ಗೋಪೀ, ಗೋಪೀ.” ಅನ್ನುತ್ತ ಕುಸಿದು ಬಿದ್ದುಬಿಟ್ಟಳು. ಆಕೆಯ ಆರ್ತಸ್ವರ ಕೇಳಿ ಗೋಪಿನಾಥನಿಗೆ ಹೊಡೆದೆಬ್ಬಿಸಿದಂತಾಗಿ ರೋಮಾಂಚನವಾಯಿತು. ತಕ್ಷಣ ಕೋಣೆಯ ದೀಪಹಾಕಿ ನೋಡಿದ. ಅತಿ ಹತ್ತಿರ ಕೇಳಿಸಿತ್ತು ಆ ಕೂಗು! ಆ ಪ್ರಿಯ ಧ್ವನಿ! ಹಾಲಿಗೆ ಹೋದ. ಅಷ್ಟರಲ್ಲಿ ದೀಪದೊಂದಿಗೆ ಜಾಗ್ರತಿ ಜಿಗಿದುಬಂದ ಮಾಲತಿ ಎದ್ದುನಿಂತಿದ್ದಳು.

“ಮಾಲತಿ, ಮಾಲತಿ. ಇದೇನು ಪ್ರಮಾದ? ಬರುವಾಗ ಬಿದ್ದಿಯೇನು? ಎನ್ನುತ್ತ ಆಕೆಯ ಎರಡು ಕೈಗಳನ್ನೂ ಹಿಡಿದುಕೊಂಡ. ಆಕೆ ಆತನನ್ನು ಹಾಗೆಯೇ ಕೋಣೆಯೊಳಗೆಳೆದು ಬಾಗಿಲ ಮುಚ್ಚಿ ಬಿಗಿದಪ್ಪಿದಳು. ಆಗ ಅಂತಹ ಮನೋನ್ಮಣಿಯ ಮುಖ ಪ್ರಫುಲ್ಲಿತವಾಗುವುದಕ್ಕೆ ಕಾರಣಭೂತನಾದ ತಾನೇ ಕೃತಾರ್ಥ, ತಾನೇ ಧನ್ಯ ಎಂದು ಹಿರಿಹಿಗ್ಗುತ್ತ ಗೋಪಿನಾಥ ಮಂದಸ್ಮಿತನಾಗಿ,

“ನಾನು ರಗ್ಗು ಹೊದಿಸುವಾಗ ನಿನಗೆ ಎಚ್ಚರಿಕೆಯಿತ್ತೇ?” ಎಂದು ಕೇಳಿದ. ಆದಕ್ಕುತ್ತರವಾಗಿ ಮಾಲತಿ ಆತನನ್ನು ಚುಂಬಿಸಿ “ಆ ದೀಪ ತೆಗೆಯಿರಿ” ಅಂದಳು. ಗೋಪಿನಾಥ ಅರೆಮನಸ್ಸಿನಿಂದ ದೀಪ ತೆಗೆದು ಆಕೆಯನ್ನು ಮಂಚದಮೇಲೆ ಕುಳ್ಳಿರಿಸಿ ಪಕ್ಕದಲ್ಲಿ ತಾನೂ ಕುಳಿತ. ಸ್ವಲ್ಪಮುಂಚೆ ಆತ ಹಾಕಿದ್ದ ಕಿಟಕಿಯನ್ನು ತುಂಟಗಾಳಿಯೊಂದು ಧಡಕ್ಕನೆ ತೆರೆಯಿತು. ಗಾಳಿಯೊಂದಿಗೆ ಕಣ್ಮುಚ್ಚಾಲೆಯಾಡುತ್ತಿದ್ದ ಮಿಂಚುಗಳೂ ಒಳನುಗ್ಗಿದುವು. ಆ ಬಾಗಿಲನ್ನು ಭದ್ರವಾಗಿ ಹಾಕುವದಕ್ಕೆಂತ ಎದ್ದವನನ್ನು ಮಾಲತಿ ತಡೆದು,

“ಹಾಗೇ ಇರಲಿ. ಗಾಳಿ ಮಳೆ ಮಿಂಚು ಎಲ್ಲವೂ ಬರಲಿ. ನಾವಿಬ್ಬರೂ ಒಟ್ಟಿಗಿರುವುದನ್ನು ಅವಾದರೂ ನೋಡಿ ಸಂತೋಷಪಡಲಿ” ಅಂದಳು.

" ಹಾಗಾದರೆ ಹೊರಗೆ ಹಜಾರಕ್ಕೆ ಹೋಗೋಣ. ಅಲ್ಲಿ ಇನ್ನಷ್ಟು ರಮ್ಯವಾಗಿದೆ. "

" ಬೇಡ ಅದು ಶುದ್ಧ ಹುಚ್ಚು. ಈ ಅರೆಹುಚ್ಚೇ ಸಾಕು. "

" ಆದರೆ ಇಲ್ಲೇ ಎಷ್ಟು ಹೊತ್ತೆಂತ ಕೂತಿರಬಹುದು ? "

ಮಾಲತಿಗೆ ಈ ಮಾತಿನ ಅರ್ಥವಾಗದೆ ಸುಮ್ಮಗಿದ್ದಳು. ಈ ಕೋಣೆಯಲ್ಲಲ್ಲದೆ ಮತ್ತೆಲ್ಲಿ ? ಈ ಶಯ್ಯಾಗೃಹದ ಆಪ್ತಾವರಣದಲ್ಲಿ, ಈ ಕತ್ತಲ ಆಲಿಂಗನದಲ್ಲಿ ಅಲ್ಲದೆ ಮತ್ತೆಲ್ಲಿ ? ಕ್ರಮೇಣ ಆ ಮಾತಿನ ಗೂಢಾರ್ಥ ಮನಗತವಾಯಿತು. ಕ್ರೀಡಾನೌಕೆಯು ನಡುನೀರಿನಲ್ಲಿ ಕಾಣದ ಬಂಡೆಗೆ ಬಡಿದು ತತ್ತರಿಸಿದಂತೆ ಒಮ್ಮೆ ನಡುಗಿದಳು.

" ಆ ಬಾಗಲು ಹಾಕಿಬಿಡಿ. ಭಯವಾಗುತ್ತೆ " ಅಂದಳು.

ಗೋಪಿನಾಥ ಕಿಟಕಿಯ ಬಾಗಿಲನ್ನು ಭದ್ರವಾಗಿ ಮುಚ್ಚಿ ಎಡಹುತ್ತ ಹಿಂತಿರುಗಿ ಬರುವಾಗ ಆತನ ಕೈ ಎದ್ದುನಿಂತಿದ್ದ ಮಾಲತಿಯ ಎದೆಗೆ ತಗಲಿತು. ಆಗ ಆಕೆಯ ಮದನಾಲಿಂಗಿತ ಮೈಯಿಂದೆದ್ದ ಪುಳಕದ ತೆರೆ ಆತನ ಅಚಂಚಲ ಪಡಕ್ಕಪ್ಪಳಿಸಿತು. ಕೈ ಹಿಂದೆಳೆಯಲು ಯತ್ನಿಸಿದ. ಮಾಲತಿ ಬಿಡಲಿಲ್ಲ. ಆತನ ಕೈಯನ್ನು ಹಿಸುಕುತ್ತ, ಎದೆಗೊತ್ತುತ್ತ,

" ನನ್ನ ಕೈ ಬಿಡಬೇಡಿ. ನನ್ನನ್ನಿಲ್ಲಿಂದ ಕಳುಹಿಸಬೇಡಿ. ನಿಮ್ಮನ್ನು ಬಿಟ್ಟು ನನಗೆ ಬೇರೆ ಗತಿಯಿಲ್ಲ. ನಾನು ಬದುಕಿರಲಾರೆ. " ಅನ್ನುತ್ತ ಆತನನ್ನು ನಿರಾಶೆಯ ಬಲದಿಂದ ಬಿಗಿದಳು. ಗೋಪಿನಾಥ ಆಕೆಯನ್ನು ಮಗುವಿನಂತೆ ಎತ್ತಿ ಮಂಚದಮೇಲೆ ಮಲಗಿಸಿ ಪಕ್ಕದಲ್ಲಿ ಕುಳಿತು ಆಕೆಯ ಮುಖವನ್ನು ಬೊಗಸೆಯಲ್ಲಿ ಹಿಡಿದು,

"ಮಾಲತಿ, ನನಗೆ ಗೊತ್ತು ನಿನ್ನ ಮನಸ್ಸಿನಲ್ಲಿರುವುದೇನೆಂತ. ನಿನ್ನ ಮನೋರಥವನ್ನು ಪೂರೈಸುವದೇ ಒಂದು ಪವಿತ್ರ ಪುರುಷಾರ್ಥ, ನನಗೆ. ನನ್ನ ರಾಣಿ ನೀನು, ಸರ್ವಾಂಗಸುಂದರಿ ! ನಿನ್ನೊಡನೆ ಐಕ್ಯದ ಪರಿಮಿತಿಯನ್ನನುಭೋಗಿಸುವ ಸುಖ ನನಗೆಂದಾದರೂ ಬೇಡವಾದೀತೇ ? ನಿನ್ನ ಪ್ರೇಮಾರಾಧನೆಯ ಎದುರು ಈ ಪ್ರಪಂಚದ ಸಕಲ ಸೌಭಾಗ್ಯವೂ ತೃಣಸಮಾನ. ಆದರೆ ಮಾಲತಿ ನಾವಿಬ್ಬರು ಒಮ್ಮೆ ಈ ಸುಖದ ಸೆರೆಯಾಳುಗಳಾದರೆ ಮತ್ತೆ ಮುಂದರಿಯುವಂತಿಲ್ಲ. ಈ ಸ್ವರ್ಗದೊಳಗೆ ಹೊಕ್ಕರೆ ಹೊರಬರಲು ಬಾಗಿ

ಲಿಲ್ಲ. ಅಲ್ಲಿ ನೀನು ನನ್ನ ಆಧೀನ. ನಾನು ನಿನ್ನ ಆಧೀನ. ಆ ರೀತಿ ಪರಸ್ಪರ ದಾಸೋಹ ಇಬ್ಬರ ಪತನಕ್ಕೂ ಕಾರಣ. ಸ್ವರ್ಗದ ಆಚೆ ಒಂದು ಸದ್ಗತಿ ಇದೆ. ಸ್ವರ್ಗಸುಖಕ್ಕೂ ಮಿಗಿಲಾದ ಸುಖವನ್ನೀಯುವ ಯೋಗ್ಯತೆ ನಿನ್ನಲ್ಲಿದೆ. ಅದನ್ನು ಪಡೆಯುವ ಮಹಾಭಾಗ್ಯ ನನಗಿದೆ. ನಾವು ವಿಷಯಸುರಾಪಾನ ವನ್ನಷ್ಟೇ ಸವಿದು ಸಂತೃಪ್ತರಾಗುವವರಾದರೆ ನಮಗೂ ಲೆಕ್ಕವಿಲ್ಲದಷ್ಟು ಮಂದಿ ಕಾಮಾಂಧರಾದ ಹೆಣ್ಣುಗಂಡುಗಳ ವರ್ಗಕ್ಕೂ ವ್ಯತ್ಯಾಸವೇನು? ನಾವು ಒಬ್ಬರಿಗೊಬ್ಬರು ಬೇಕು ಬೇಕೆನಿಸಿದ್ದು, ಒಬ್ಬರ ಸನಿಹದಿಂದ ಒಬ್ಬರು ಸಂತೋಷಿಸಿದ್ದು, ಪರಸ್ಪರ ಸುಮಧುರ ಸ್ನೇಹದ ಮಂಗಳಸ್ನಾನ ಮಾಡಿದ್ದು, ಇದೆಲ್ಲ ಒಂದು ರಾತ್ರಿಯ ಕಾಮಪೀಡನೆಯ ನಿವಾರಣೆಗಾಗಿಯೇ? ನಾನು ನಿನ್ನ ದೃಷ್ಟಿಗೆ ಅಷ್ಟಕ್ಕೆ ಮಾತ್ರವೆಂತಾದರೆ, ಅಥವಾ ನಿನ್ನಿಂದ ನನಗೆ ಬೇರೇನೂ ಬೇಡವೆಂತಾದರೆ ನಾನೂ ನೀನೂ, ಇಬ್ಬರೂ ಈ ಕ್ಷಣವೇ ಆತ್ಮ ಹತ್ಯೆ ಮಾಡಿಕೊಳ್ಳುವುದೇ ಲೇಸು ಅಲ್ಲವೇ?" ಎಂದು ಬೇಡಿದನು.

"ನೀವು ಹೇಳಿ ಮುಗಿಸುವಷ್ಟರಲ್ಲಿ ನನಗೆ ಆತ್ಮಹತ್ಯೆಯ ಅಗತ್ಯವೇ ಇರ ಲಾರದು." ಅನ್ನುತ್ತ ಕಣ್ಣೀರು ಒರೆಸಿಕೊಂಡಳು.

"ಕ್ಷಮಿಸು. ಏನೇನೋ ಹೇಳಿದೆ. ಅಳಬಾರದು."

"ಇಲ್ಲ ಅಳುತ್ತಿಲ್ಲ. ನಿಮ್ಮ ಹತ್ತಿರವಾದರೂ ಇದ್ದೇನಲ್ಲಾ ಎಂಬ ಆನಂದಬಾಷ್ಪದಿಂದ ನಿಮ್ಮ ಕೈ ಒದ್ದೆಯಾದ್ದು."

"ಪ್ರೇಮರತ್ನ" ಅನ್ನುತ್ತ ಮಾಲತಿಯ ಕೈಗಳಿಂದ ತನ್ನ ಕೆನ್ನೆಗಳನ್ನು ಮುಚ್ಚಿಕೊಂಡ.

"ನಿಜವಾಗಿಯೂ ನಿಮಗೆ ನನ್ನ ಮೇಲೆ ಅಷ್ಟೊಂದು ಪ್ರೀತಿ ಇದೆಯೇ?"

"ಇನ್ನೂ ಸಂಶಯವೇ ಮಾಲತಿ? ಎಷ್ಟೊಂದು ಯಾವ ಮಾತಿನಲ್ಲಿ ಹೇಳಿ ದರೆ ನಿನಗೆ ಸಮಾಧಾನವಾದೀತು? ನಿನ್ನಿಂದ ನನ್ನ ಬಾಳುವೆ ಬೆಳಗಿತು. ನಿನ್ನ ಚೆಲುವು ನನ್ನ ಮನೆಯನ್ನು ಸಿಂಗರಿಸಿತು. ನಿನ್ನ ನಗೆ, ನಿನ್ನ ಮಾತು ನಿನ್ನ ಗೆಳೆತನ ಇವನ್ನು ಮರೆತೆನೆಂದರೆ ನಾನು ಜೀವಂತನಾಗಿಲ್ಲವೆಂದೇ ಅರ್ಥ. ನೀನು ನಿನ್ನ ದಿವ್ಯಪ್ರೇಮದ ಬಲದಿಂದ ನನ್ನನ್ನು ಸ್ವರ್ಗದಾಚೆ ದಾಟಿಸಿರುವಿ."

"ಸ್ವಪ್ನ ಸ್ವರ್ಗವಿನಾ ಬೇರೆ ಸ್ವರ್ಗದ ಬಾಗಿಲನ್ನೂ ನೋಡದ ನಾನು ನಿಮ್ಮನ್ನು ಅದರಾಚೆಗೆ ದಾಟಸುವುದೆಂದರೆ?"

"ನಿಜಕ್ಕೂ ಹೌದು. ಸ್ವಾರ್ಥವಿಲ್ಲದ ಬಂಧನಮೀರಿದ ನಿರ್ಮಲ ನವ ಚೇತನ ನನ್ನಲ್ಲಿ ಉದ್ದೀಪ್ತವಾದ್ದು ನಿನ್ನಿಂದ. ಸ್ವರ್ಗವೆಂಬುದು ಒಂದು ದಶೆ. ನರಕದಂತೆ ಒಂದು ಅನುಭವ. ಜೀವನ ಪ್ರವಾಸದಲ್ಲಿ ನಾವು ತಂಗುವ ಒಂದು ತಾಣ. ಬೇಕಾದ್ದು ನಮಗಿದ್ದಾಗ ಅದೇ ಸ್ವರ್ಗ. ಬೇಕಾದ್ದು ನಂತರ ಬೇಡವಾದಾಗ ಅದೇ ನರಕ. ಇಂದ್ರಿಯಸುಖ ಈ ಎರಡು ಸ್ಥಿತಿಗಳ ನಡುವೆ ಕಟ್ಟಿದ ಉಯ್ಯಾಲೆ ಎಷ್ಟು ಎತ್ತರ ತೂಗಿದರೂ ಅದು ನಿಲ್ಲುವುದು ಹೊರಟ ತಳದಲ್ಲೇ. ಈ ಮೋಹಜಾಲಕ್ಕೆ ಸಿಲುಕಿದರೆ ಬಲೆಗೆ ಸಿಕ್ಕಿಬಿದ್ದ ನೊಣದಂತೆ ಓಲಾಡುತ್ತಿರಬಹುದು, ಅಷ್ಟೇ. ಆದರಿಂದ ಮತ್ತೆ ಬಿಡುಗಡೆ ಇಲ್ಲ. ನಮ್ಮ ನಿಜ ನಿವಾಸ ಅದರಿಂದಾಚೆಯೆಂಬುದು ನಿನ್ನ ಮೇಲಿನ ನನ್ನ ಪ್ರೀತಿ ಈ ರಾತ್ರಿ ಪರಿಪೂರ್ಣವಾಗಿ ಅರಳಿದಮೇಲೆ ತಾನೇ ಹೊಳೆಯಿತು.

"ಒಂದು ರಾತ್ರಿಯಾದರೂ ನಿಮಗೆ ನನ್ನ ಸರ್ವಸ್ವವನ್ನೂ ಅರ್ಪಿಸಿ ನನ್ನ ಜನ್ಮಸಾಫಲ್ಯವನ್ನು ಪಡೆಯುವ ಸುಯೋಗ ಕಾಲಾನುಕಾಲದಲ್ಲಿ ಲಭಿಸಬಹುದೆಂಬ ಕನಸು ಕಟ್ಟಿಕೊಂಡಿದ್ದೆ. ಅಂತಹ ರಾತ್ರಿಯೇನೋ ಬಂದೊದಗಿದೆ. ಆದರೆ ಹೀಗಾಗುತ್ತೆಂತ ಯಾರಿಗೆ ಗೊತ್ತು ?"

"ಸೈರಿಸಿಕೊ, ಶಾಂತಮಯಿ. ಹೀಗಾಗಲೇ ಬೇಕಿತ್ತು. ನಮ್ಮ ಜೀವಗಳೆರಡು ಕಲೆತು ಒಂದಾಗಿ ಸಂಸ್ಕಾರ ಹೊಂದಲೇಬೇಕಿತ್ತು. ಆ ಯಜ್ಞದ ಬೆಂಕಿಯೇ ನಮ್ಮನ್ನೀಗ ಸುಡುತ್ತಿರುವುದು. ಆದರೆ ನಾವು ಯಜ್ಞಕರ್ತರಾಗಬೇಕು; ಯಜ್ಞದ ಆಹುತಿಗಳಲ್ಲ. ದೈವವೊಂದೆಣಿಸಿದರೆ ನಾವೊಂದೆಣಿಸಬೇಕು. ದೇಹಗಳೆರಡು ಸುಟ್ಟು ಬೂದಿಯಾಗಲಿ. ಆತ್ಮಗಳೆರಡು ಕರಗಿ ಕಲ್ಮಷ ಹೋಗಿ ಕಾಂಚನವಾಗಿ ಬರಲಿ. ಹೀಗೆ ಬಾ, ಮುದ್ದು. ನಿನ್ನ ತಲೆಯನ್ನು ನನ್ನ ತೊಡೆಯ ಮೇಲಿರಿಸು. ಸ್ವಲ್ಪ ಮೇಲೆ ಬಾ. ಹಾಗೆ" ಅನ್ನುತ್ತ ತೊಡೆಯ ಮೇಲೆ ಮಲಗಿಸಿಕೊಂಡು ತಲೆಯನ್ನು ನೇವರಿಸುತ್ತ ಸಮಾಧಾನಿಸಿದ.

"ನಿಮ್ಮನ್ನು ಬಿಟ್ಟು ಹೋದ ಮೇಲೆ ಇಂತಹ ಮಾತುಗಳನ್ನು ಇನ್ನಾರ ಬಾಯಿಂದ ಕೇಳಲಿ ?"

"ಇಂತಹ ಮಾತುಗಳನ್ನು ಕೇಳುವ ಪ್ರಸಂಗವೇ ಬಾರದಿರಲಿ"

"ನಿಮ್ಮನ್ನು ಹೇಗೆ ಮರೆಯಲಿ ? ನೀವು ಬೇರೆ ನಾನು ಬೇರೆ ಎಂಬ

ಭಾವನೆಯೇ ನನಗೆ ಬರುವುದಿಲ್ಲ. ನಿಮ್ಮ ಹತ್ತಿರವಿರುವಾಗ ನನ್ನ ಅರಿವೇ ನನಗಿರುವುದಿಲ್ಲ. ನಾನ್ಯಾಕೆ ನಿಮ್ಮನ್ನು ಬಿಟ್ಟು ಹೋಗಬೇಕೆಂಬುದೇ ಅರ್ಥ ವಾಗುವುದಿಲ್ಲ. ದೇಹಗಳೆರಡಾದರೂ ಜೀವವೊಂದೇ ಅನಿಸುತ್ತೆ. ನಾನೇನು ಮಾಡಲಿ, ಪ್ರಿಯತಮ ?"

" ನಿನ್ನ ಸ್ಥಾನ ರಾಘವೇಂದ್ರನ ಪಕ್ಕದಲ್ಲಿ. ನೀನೇ ಕಣ್ಮಣಿಯೆಂತ ನಂಬಿ ಕೊಂಡಿರುವ ಶಾರದಮ್ಮನ ಮನೆಯಲ್ಲಿ. ನಿನ್ನಗಂಡ ಪುಣ್ಯವಂತ ನೀನೆಂದರೆ ಆತಗೆ ಜೀವ. ನನಗೆ ಗೊತ್ತು. ನೀನೇನು ಮಾಡಿದರೂ ಆತಗೆ ಹಿತ. ನೀನು ಕೊಟ್ಟದ್ದು ಸಂಪತ್ತು, ಆತಗೆ. ಆತನ ಮನಸ್ಸು ಎಷ್ಟು ವಿಶಾಲವಾದ್ದು, ದೋಷ ರಹಿತವಾದ್ದು ಎಂಬುದು ನನಗೆ ಮೊನ್ನೆಮೊನ್ನೆವರೆಗೂ ಗೊತ್ತಿರ ಲಿಲ್ಲ. ಶಾರದಮ್ಮನಂತೂ ಹೇಳಬೇಕಾಗಿಲ್ಲ. ನಮ್ಮಮ್ಮ ಬಿಟ್ಟು ನಾನು ಬೇರೊಬ್ಬರು ತಾಯಿಯನ್ನು ಯಾಚಿಸಿದರೆ ನನ್ನಾಯ್ಕೆ ಶಾರದಮ್ಮನೇ. ಇವ ರಿಬ್ಬರು ಸುಹೃದಯರಿದ್ದಲ್ಲಿ ಅಸಂತೋಷ, ಅಸೂಯೆ, ಅತೃಪ್ತಿಗಳು ಕಾಲಿಡಲಾರವು. ನೀನಲ್ಲಿದ್ದರೆ ಆ ಮನೆಯಲ್ಲಿ ಲಕ್ಷ್ಮೀಸರಸ್ವತಿಯರ ಸಾನ್ನಿಧ್ಯವಿದ್ದಂತೆ. ನಮಗೆ ಮಾತ್ರ ಆ ಭಾಗ್ಯ ಹಣೆಯಲ್ಲಿ ಬರೆದಿಲ್ಲ."

ಮಾಲತಿ ಫಕ್ಕನೆ ಎದ್ದು ಕುಳಿತು, " ನನ್ನನ್ನೀಗಲೇ ಕಳುಹಿಸಿಕೊಡಿ. ನಾನೆಲ್ಲಿರಬೇಕೋ ಅಲ್ಲಿಗೆ " ಎಂದಳು.

" ಛೆ ! ಇದೇನು ಮಾಲತಿ ! ಬೆಳಿಗ್ಗೆ ಹೋದರಾಯಿತು. ನನ್ನ ಮೇಲೆ ಅಷ್ಟೊಂದು ಸಿಟ್ಟೇ ?"

" ಸಿಟ್ಟಿಲ್ಲ. "

" ಅಸಹ್ಯವೇ ?"

" ಅಸಹ್ಯವೂ ಇಲ್ಲ. "

" ಮಾಲತಿ ನನ್ನ ಉದ್ದುದ್ದ ಭಾಷಣದಿಂದ ನೀನೆಷ್ಟು ನೊಂದೆಯೋ ತಿಳಿಯದು. ನಿನ್ನ ಮುಖ, ನಿನ್ನ ಕಣ್ಣುಗಳನ್ನಾದರೂ ನೋಡೋಣವೆಂದರೆ ದೀಪವಿಲ್ಲ. ಬಹಳವಾಗಿ ಪೀಡಿಸುತ್ತಿರಬೇಕಲ್ಲವೇ? ಕ್ಷಮಿಸು. ನನ್ನ ಬಾಯಿಂದ ಹೊರಬಿದ್ದ ಪ್ರತಿಯೊಂದು ಮಾತೂ ನನ್ನೆದೆ ಹಿಂಡಿಬಂದ ರಸಬಿಂದು. ನನಗೆ ಈ ಸನ್ನಿವೇಶದಿಂದ ಒಂದಿನಿತಾದರೂ ಸುಖವುಂಟೆಂತ ಭಾವಿಸಬೇಡ. ಇಷ್ಟು ಹೇಳಿದ್ದಕ್ಕೆ ನನಗೇ ಪಶ್ಚಾತ್ತಾಪವಾಗುತ್ತಿದೆ. ನನ್ನ ಮನಸ್ಸಿಗೆ ನಾನೀಗ ವಯಸ್ಸು ಮೀರಿದ ಮುದುಕನಂತೆ ಕಾಣುತ್ತಿದ್ದೇನೆ."

ಮಾಲತಿ ಗೋಪಿನಾಥನ ಕೊರಳನ್ನಪ್ಪಿಕೊಂಡು,

"ಹಾಗೆಲ್ಲ ಅನ್ನಬೇಡಿ. ನನಗೆ ಕೋಪವೂ ಇಲ್ಲ. ಬೇಸರವೂ ಇಲ್ಲ. ಆದರೆ ನೀವು ವಯೋವೃದ್ಧರೆಂಬುದು ಮಾತ್ರ ನನಗೆ ಸಹಿಸಲಸಾಧ್ಯವಾದ ಚಿಂತನ. ನನ್ನ ಕಣ್ಣಿಗೆ ನೀವು ಸದಾಸುಂದರಮೂರ್ತಿ. ನನ್ನೆದೆಯೊಳಗಿರುವ ನೀವು ಸದಾ ಯೌವನಪ್ರೇಮಮೂರ್ತಿ; ಚಿರಂಜೀವಿ" ಎಂದು ಮೊರೆಯಿಟ್ಟಳು.

"ಹಾಗನ್ನು, ಚಿನ್ನ. ನಿನ್ನಂತಹ ಸಾಧ್ವೀಮಣಿಯ ಪ್ರೀತಿವಿಶ್ವಾಸ ಸಹಾನುಭೂತಿಯ ಊರುಗೋಲಿಲ್ಲದೆ ನನ್ನ ಭವಿಷ್ಯ ಹೆಚ್ಚು ಸಮಯ ನಿಲ್ಲಲಾರದು. ನಿನ್ನ ಪ್ರೀತಿಯ ದಿವ್ಯ ಬೆಳಕಿದ್ದರೆ ನಾನು ಬಹುದೂರ ಹೋಗಬಲ್ಲೆ. ಎಲ್ಲಿ ತನಕ ತಲಪುವೆನೋ ತಿಳಿಯದು. ಹಿಡಿದದಾರಿ ಸರಿಯೆಂಬ ದೃಢನಂಬಿಗೆಯಿದೆ, ಅಷ್ಟೇ. ನಿನಗೂ ಹಾಗೆನಿಸಿದರೆ ಸಾಕು. ನನಗೆ ಬೇರೆ ಬೆಂಬಲ ಬೇಡ."

ಎಡ ತೋಳಿನಿಂದ ಆಕೆಯ ಬಡನಡುವನ್ನು ಸುತ್ತಿ ಎತ್ತಿನಿಲ್ಲಿಸಿ ತಾನೂ ನಿಂತ. "ಇನ್ನು ನಾವಿಲ್ಲೇ ಏಕಾಂತದಲ್ಲಿರುವುದು ತಗವಲ್ಲ. ನೀನು ಹೋಗಿ ನಿನ್ನ ಹಾಸಿಗೆಯಲ್ಲಿ ಮಲಗು. ನಿದ್ರೆ ಬಂದರೆ ಮಾಡು. ಇಲ್ಲವಾದರೆ ಈ ಚಿರವಿರಹಿಗೆ ಕಲ್ಯಾಣವಾಗಲೆಂದು ಪ್ರಾರ್ಥಿಸುತ್ತಿರು. ಹೋಗು, ಆತ್ಮಸಖಿ, ಹೋಗು" ಎಂದು ಬೇಡಿದ.

ಮಾಲತಿ ಅಳುತ್ತಿದ್ದಳು. ಸ್ವೈಸ್ವಸ್ಥವಿಲ್ಲದ ಮಗು ಔಷಧಿ ಕುಡಿದಮೇಲೆ ಅತ್ತಂತೆ ಸದ್ದಿಲ್ಲದೆ ಯತ್ನವಿಲ್ಲದೆ ಅಳುತ್ತಿದ್ದಳು. ಗೋಪಿನಾಥ ದೀಪ ಹಾಕುತ್ತಲೇ ತಕ್ಷಣ ಸೆರಗಿನಿಂದ ಕಣ್ಣೊರಸಿಕೊಂಡು ಮುಗುಳ್ನಗೆಯೊಂದನ್ನು ಕರುಳಿಂದ ಕಿತ್ತುತಂದಳು. ಆಕೆಯ ಬಾತ ಕಣ್ಣುಗಳನ್ನು ಮುಚ್ಚಿ ಗೋಪಿನಾಥ ಹಣೆಯ ಮೇಲೊಂದು ಮುತ್ತಿಟ್ಟ. ಕೈಹಿಡಿದು ನಡೆಸಿಕೊಂಡು ಹೋಗಿ ಆಕೆಯ ಹಾಸಿಗೆಯ ಬಳಿ ಬಿಟ್ಟು ಹಿಂತಿರಗಿ ಬಂದ. ಮಾಲತಿ ಆತನ ಬೆನ್ನು ತಿರುಗಿದೊಡನೆ ಬಾಗಿಲಿಗೆ ಒರಗಿ ನಿಂತು ಒದ್ದೆಗಣ್ಣುಗಳಿಂದ ಆತ ಕಣ್ಮರೆಯಾಗುವುದನ್ನೇ ಎವೆಯಿಕ್ಕದೆ ನೋಡುತ್ತ "ಗೋಪಿ, ಗೋಪಿ" ಎಂದುಚ್ಚರಿಸಿದಳು, ತನ್ನಷ್ಟಕ್ಕೆ.

ಗೋಪಿನಾಥ ತನ್ನ ಮಂಚದ ಮೇಲೆ ಮೂರನೆ ಬಾರಿ ದೇಹವನ್ನೀಸಿ ಅಲುಗಾಡದೆ ಮಲಗಿದ. ಆತನ ಚಿತ್ತ ಹಿಮಾಚಲದ ನೆತ್ತಿಯಂತೆ ತಪೋಮಯವಾಗಿತ್ತು. ಶರೀರ ಮಾತ್ರ ಅನುತಾಪಮಯವಾಗಿತ್ತು.

ಹೊರಗೆ ನಿಸರ್ಗದ ಕಾಳಗ ಶಾಂತವಾಗುತ್ತ ಬಂದಿತ್ತು. ಹಸಿ ಮಳೆಯೂ ಹರಿದು ಹಂಚಿಹೋದ ಮಿಂಚುಗಳೂ ಹಿಂದುಳಿದು ಆಲೆ ದಾಡುತ್ತಿದ್ದವು. ಕೋಣೆಯು ಕಸ-ಕೆಸರುತೆಗೆದ ಕೊಳದ ತಿಳಿತಳ ದಂತಿತ್ತು. ನಿಟ್ಟುಸಿರುಬಿಡುತ್ತ ಮೈಮುರಿದುಕೊಂಡ, “ ಮುಗಿಯಿತು. ಎಲ್ಲವೂ ಮುಗಿಯಿತು. ಮಾಲತಿಯನ್ನು ದಡಕ್ಕೆ ತಂದು ಬಿಟ್ಟೆ. ನಾನೂ ಬದುಕಿದೆ. ಇನ್ನಾವ ಭಯವೂ ಇಲ್ಲ. ಯಾವ ಬಂಧನವೂ ಇಲ್ಲ ಬ್ರಹ್ಮ ಗಂಟು ಒಂದಿತ್ತು. ಅದನ್ನು ಒಡೆದೆ. ಹತ್ತು ಸಾವಿರಕ್ಕೊಬ್ಬಳಾದ ಹುಡುಗಿ, ಮಾಲತಿ. ಅವಳನ್ನೂ ತ್ಯಜಿಸಿದೆ. ಇನ್ನುಳಿದುದು ಆತನೊಬ್ಬನೇ! ಯಾರಿಗಾಗಿ ಎದೆಯೊಳಗಿದ್ದ ಸುಖಸಿರಿಯನ್ನೆಲ್ಲ ಬಳಿದು ಬಿಸಾಟೆನೋ, ಯಾರಿಗಾಗಿ ನನ್ನನ್ನು ಒಲಿದು ಬಂದವಳ ಪಾಲಿಗೆ ನಪುಂಸಕನಾದೆನೋ, ಆತನೊಬ್ಬನೇ ! ನಾನೂ ಒಬ್ಬನೇ. ಆತನೂ ಒಬ್ಬನೇ. ಬಂಧುಬಳಗವಿಲ್ಲ; ಸುಖದುಃಖವಿಲ್ಲ. ಹೇ ದೇವ ! ನಿನಗೆಷ್ಟು ಅಸೂಯೆ, ಅಸಹನೆ ! ನಿನ್ನ ಬಳಿಸಾರುವ ಭಕ್ತರ ಜತೆಗೆ ಯಾರೂ ಇರಬಾರದೆ ? ನೀನೂ ನನ್ನಂತೆ ಚಿರವಿರಹಿಯೆ ! ”

ಬೆಳಗಾಗುತ್ತ ಬರುವಾಗ ಜೊಂಪು ಹತ್ತಿತು. ನಿದ್ರೆ ಬರುವಷ್ಟರಲ್ಲಿ ಜಗ್ಗನೇ ಎದ್ದ. ಹಾಲಿನ ದೀಪ ಉರಿಯುತ್ತಿತ್ತು, ದುಸ್ವಪ್ನದ ನೆನಸಿನಂತೆ. ತ್ವರೆಯಿಂದ ಮಾಲತಿಯ ಕೋಣೆಗೆ ಹೋಗಿ ಬಾಗಿಲು ತೆರೆದು ನೋಡಿದ. ಮಾಲತಿ ಇದ್ದಳು. ಕುಳಿತಿದ್ದಳು.

‘ ಬೆಳಗಾಯಿತು, ಮಾಲತಿ. ’

ಆಕೆ ಎದ್ದು ಆತನ ಸಮೀಪ ಬಂದು ಮುಖ ನೋಡುತ್ತ ನಿಂತಳು. ತಲೆ ಗೆದರಿ ಕುಂಕುಮ ಮಾಸಿ ಹೋಗಿದ್ದರೂ ಆಕೆಯ ಮುಖದಲ್ಲಿ ದಿವ್ಯಾನಂದದ ಮುಂಬೆಳಕು ಕಂಗೊಳಿಸುತ್ತಿತ್ತು. ಕಣ್ಣುಗಳಲ್ಲಿ ಧೀರ ಪ್ರಸನ್ನತೆಯಿತ್ತು. ಒಣಗಿ ಬಿಗಿದಿದ್ದ ತುಟಿಗಳಲ್ಲಿ ಶಾಂತತೆಯಿತ್ತು. ಗೋಪಿನಾಥಗೆ ಸಮಾಧಾನ ವಾಯಿತು.

“ ಇನ್ನು ಹೊರಡು. ನಿನ್ನ ಪತಿಯನ್ನು ಸೇರಿ ಸುಖವಾಗಿರು. ನಮ್ಮ ಇಂದಿನವರೆಗಿನ ಕನಸನ್ನು ಮರೆತುಬಿಡು. ಯಾರಿಗೂ ಹೇಳಬೇಡ. ಹೇಳಿ ಫಲವಿಲ್ಲ. ಎಂದಾದರೊಂದು ದಿನ ಹೇಳುವವರ ಹಾಗೂ ಕೇಳುವವರ

ಅಂತಃಕರುಣ ಶುದ್ಧವಿರುವಾಗ ನಮ್ಮೀ ಪವಿತ್ರ ಪ್ರೇಮದ ಪುಣ್ಯಕಥೆಯನು ಹೇಳು. ಬಾ."

ಕರೆದಾಗ ಕೈನೀಡಿದ ಮಾಲತಿ ಗೋಪಿನಾಥ ನೋಡಿಯೂ "ನೋಡದ ಹಾಗೆ ಮಾಡಿದ್ದನ್ನು ಸಹಿಸಲಾರದೆ ಆತನ ಪಾದಗಳ ಮೇಲೆ ಬಿದ್ದುಬಿಟ್ಟಳು. ಹಿಡಿದೆತ್ತಿ ಕೇಳಿದ,

"ಏತಕ್ಕಾಗಿ ಈ ದುಃಖ?"

"ನಿಮ್ಮನ್ನು ಇನ್ಯಾವಾಗ ನೋಡಲಿ?"

"ಯಾತಕ್ಕೆ ನೋಡಬೇಕು. ನಾನೂ ನೀನೂ ಬೇರೆಬೇರೆಯೆಂಬ ಭೇದ ಭಾವನೆಯನ್ನೇ ಬಿಟ್ಟುಬಿಡು. ನೀನೇ ಹೇಳಿದೆಯಲ್ಲ! ನಾನ್ಯಾವಾಗಲೂ ನಿನ್ನಲ್ಲೇ ಇರುವೆನು. ನೀನು ಎಲ್ಲಿ ಹೋದರೂ ಅಲ್ಲಿ ಇರುವೆನು. ನಮ್ಮಿಬ್ಬರಲ್ಲಿ ಯಾರಿದ್ದರೂ ಸರಿಯೆ; ಇಬ್ಬರೂ ಇದ್ದಹಾಗೆ. ಎಂದಿನವರೆಗೆ ನಾನಿರುವೆನೋ ಅಂದಿನವರೆಗೆ ನೀನಿರುವಿ. ನೀನೀಗ ಶೋಕಿಸುತ್ತ ಹೋದರೆ ಅದೇ ಅಗಲಿಕೆ. ನೀನು ನನ್ನ ನೆನಸಿ ನಕ್ಕರೆ ಅದೇ ಮಿಲನ. ನೀನು ಕಣ್ಣೀರು ತಂದುಕೊಂಡರೆ ನಾನು ಕಾಣಿಸಲಾರೆ. ಸಂತೋಷದಿಂದ ಹೋಗು ಬೆಳಕು ಹರಿಯುತ್ತಿದೆ ಹೊಸದಿನವೊಂದು ಮೂಡುತ್ತಿದೆ. ಹೋಗಿ ಮುಖ ತೊಳೆದುಕೊಂಡು ಬಾ. ಇನ್ನೊಂದು ಕ್ಷಣದಲ್ಲಿ ಅಮ್ಮ ಎದ್ದು ಬಿಡುತ್ತಾಳೆ. ಹೋಗು ಮಾಲತಿ."

ಆಕೆ ಹೋಗಿ ಬರುವುದರೊಳಗೆ ಆತ ವಾಡಿಕೆಯಂತೆ ರಾತ್ರಿ ತಂದಿಟ್ಟ ನೀರಿನಲ್ಲಿ ಮುಖ ತೊಳೆದುಕೊಂಡು ಕ್ರಾಪು ಬಾಚಿಕೊಂಡು ಕಾದಿದ್ದ. ಮಾಲತಿ ಬಂದು ಹಣೆಯನ್ನೊರೆಸಿಕೊಳ್ಳುತ್ತ "ಕುಂಕುಮ?" ಎಂದಳು. ಗೋಪಿನಾಥ ಮುಗುಳ್ನಗುತ್ತ ಹೋಗಿ ಕುಂಕುಮದ ಕರಡಿಗೆಯನ್ನು ತಂದುಕೊಟ್ಟ. ಆದರೆ ಮಾಲತಿ ತಗೊಳ್ಳಲಿಲ್ಲ. "ನೀವೇ—" ಅನ್ನುತ್ತ ಮುಖಕೊಟ್ಟು ನಿಂತಳು. ಗೋಪಿನಾಥ ಸೊಗಸಾದ ಚಿಕ್ಕ ಬೊಟ್ಟೊಂದೆ ನ್ನಿಟ್ಟು "ಕನ್ನಡಿ ನೋಡಿಕೋ" ಅನ್ನುವಷ್ಟರಲ್ಲಿ ಆಕೆ ಫಕ್ಕನೆ ಬಾಗಿ ಆತನ ಪಾದಗಳನ್ನು ಮುಟ್ಟಿ ನಮಸ್ಕರಿಸಿದಳು.

"ಇದೇನು ಹೀಗೂ" ಎಂದು ಆಶ್ಚರ್ಯದಿಂದ ಪ್ರಶ್ನಿಸಿದ.

"ನನ್ನ ಕೊನೆಯ ಆಶೆ, ಪೂರೈಸಿದೆ. ನೀವೇ ನನ್ನ ಜನ್ಮಜನ್ಮಾಂತರದ ಪತಿ. ನೀವೇ ನನ್ನ ಸ್ವಾಮಿ. ನನ್ನ ದೇವರು. ಬನ್ನಿ. ಇಂದಿರಮ್ಮಗೆ ಹೇಳಿ ಬಿಟ್ಟು ಹೋಗುತ್ತೇನೆ" ಎಂದು ತಾನೇ ಮುಂದಾಗಿ ನಡೆದಳು.

ಇವರು ಹೋಗುವುದಕ್ಕೂ ಇಂದಿರಮ್ಮ ಅವರ ಕೋಣೆಯ ಬಾಗಿಲು ತೆರೆಯುವುದಕ್ಕೂ ಸರಿಬಿತ್ತು. ತಾಯಿಯ ಮುಖನೋಡಿ ಗೋಪಿನಾಥನಿಗೆ ಅನುಮಾನವಾಗಿ "ಜಾಗರೆ ಮಾಡಿದೆಯಾ ಅಮ್ಮಾ?" ಎಂದು ಅತಿ ಬೇಸರದಿಂದ ಕೇಳಿದ.

"ಇದುವರೆಗೆ ಮಾಡಿರಲಿಲ್ಲ. ಇಂದು ಮಾಡಿದೆ. ಸಾರ್ಥಕವಾಯಿತು."

"ಸರಿ ಎಲ್ಲರೂ ಜಾಗರ ಮಾಡಿದಹಾಗಾಯಿತು, ಪಂಬಿಯ ಹುಟ್ಟಿದ ಹಬ್ಬಕ್ಕೆ. ಮಾಲತಿ ಹೋಗ್ತಾಳಂತೆ, ನಿನ್ನ ಮಗಳು, ನನ್ನ ಆತ್ಮದ ಅರ್ಧಾಂಗಿ, ಹರಸಿ ಕಳುಹಿಸಿಕೊಡು."

"ಅಯ್ಯೋ ಮಕ್ಕಳೆ? ಹತ್ತುಮಕ್ಕಳ ತಾಯಾಗಮ್ಮ ನೀನು." ಅನ್ನುತ್ತ ನೀಡಿದ ತೋಳುಗಳೊಳಗೆ ಮಾಲತಿ ನುಸುಳಿ ಅವರನ್ನು ತಬ್ಬಿಕೊಂಡಳು. ಆನಂತರ ಅವರ ಕಾಲುಮುಟ್ಟಿ ನಮಸ್ಕರಿಸಿದಳು. ಮಾತೆತ್ತಲು ಧೈರ್ಯ ಸಾಲದೆ ಅವರಿಬ್ಬರೊಂದಿಗೆ ಹಾಲು ದಾಟಿ ಹೊರಗೆಹೋದಳು. ಅಂಗಳ ತೊಳೆಯಲ್ಪಟ್ಟು ನಿರ್ಮಲವಾಗಿತ್ತು. ಗಿಡಮರಗಳಿನ್ನೂ ಎದ್ದಿರಲಿಲ್ಲ. ಹಕ್ಕಿಗಳ ಚಿಲಿಪಿಲಿ ಅಲ್ಲಲ್ಲಿ ಸುರುವಾಗಿತ್ತು. ಚಳಿಗಾಳಿಯೊಂದು ಹೊಂಚುಹಾಕುತ್ತಿತ್ತು. ಮೂವರೂ ನಿಂತರು.

"ಬರ್ತೇನೆ" ಅಂದಳು ಮಾಲತಿ ಇಂದಿರಮ್ಮಗೆ. ತಿರುಗಿ ಗೋಪಿನಾಥ ನನ್ನೊಮ್ಮೆ ಕೊನೆಯಬಾರಿ ಕಣ್ತುಂಬ ನೋಡಿ ನಕ್ಕುಹೋಗಿಬಿಟ್ಟಳು.

---

# ಲಲಿತ ಸಾಹಿತ್ಯಮಾಲೆಯಲ್ಲಿ

## ಇದುವರೆಗೆ ಪ್ರಕಟವಾದ ಪುಸ್ತಕಗಳು

### ಮೊದಲಿನ ವರುಷ ೧೯೪೩-೪೪

೧ ಚಿಗುರು (೨ನೆಯ ಮುದ್ರಣ) ಕಥಾಸಂಕಲನ ಪುಟ ೧೨೦
—ದಿ। ಸೌ. ಗೌರಮ್ಮ (ಮಿಸೆಸ್. ಬಿ. ಟಿ. ಜಿ. ಕೃಷ್ಣ) ೧ ೪ ೦

೨ *ಅಕ್ಕಾಜಿ (೨ನೆಯ ಮುದ್ರಣ) ನಿಡುಗತೆ ಪುಟ ೮೨
ಮೂಲ —ದಿ। ಶರಚ್ಚಂದ್ರ. ಅನುವಾದ— ಮಲ್ಲಾರಿ ೧ ೪ ೦

೩ *ಕುಲದೀಪಕರು (೨ನೆಯ ಮುದ್ರಣ) ವ್ಯಕ್ತಿಚಿತ್ರಗಳು ಪುಟ ೭೫
—ಸಿದ್ಧವನಹಳ್ಳಿ ಕೃಷ್ಣಶರ್ಮ ೦ ೧೦ ೦

೪ *ಸಾಹಿತ್ಯರತ್ನ (೨ನೆಯ ಮುದ್ರಣ) ಕಾದಂಬರಿ ಪುಟ ೨೮೨
—ಅ. ನ. ಕೃಷ್ಣರಾಯ ೪ ೦ ೦

### ೨ನೆಯ ವರುಷ ೧೯೪೪-೪೫

೫ ಮುದ್ದಿನ ಕಣಿ (೨ನೆಯ ಮುದ್ರಣ) ಕಥೆಗಳು ಪುಟ ೭೫
ಮೂಲ —ಆ್ಯಂಟನ್ ಚೆಕ್ಹೊವ್ ಅನು: ಗೋ. ವೆ. ಚುಳಕಿ ೧ ೦ ೦

೬ ಸುಮತಿ-ಅನುರಾಧಾ (೨ನೆಯ ಮುದ್ರಣ) ಪುಟ ೬೨+೫೦
ಮೂಲ —ಶರಚ್ಚಂದ್ರ. ಅನು : ಕುಪ್ಪಮ್ಮ; ಗು. ಜೋಶಿ ೧ ೪ ೦

೭ ಡೊಂಕುಬಾಲ ವಿಡಂಬನೆಗಳು ಪುಟ ೧೧೦
—ನಾ. ಕಸ್ತೂರಿ ತೀರಿವೆ.

೮ ಕಸ್ತೂರಿ ಕಥೆಗಳು
—ಶ್ರೀಮತಿ 'ವಾಣಿ' ತೀರಿವೆ.

೯ ಶೈಲಾಜಿ ಐದು ಏಕಾಂಕಗಳು ಪುಟ ೧೦೦
—ಬಿ. ಕೆ. ರಾಮಚಂದ್ರರಾವ್, ಕೈವಾರ ರಾಜಾರಾವ್,
ಬೇಂದ್ರೆ ಲಕ್ಷ್ಮಣರಾವ್, ಎನ್ಕೆ, ಕಲಮದಾನಿ ಗುರುರಾವ್ ೧ ೪ ೦

೧೦ ಇಂದಿನ ಕರ್ನಾಟಕ (೩ನೆಯ ಮು.) ನಗರ-ಗ್ರಾಮ ಚಿತ್ರಗಳು
(—ವಿವಿಧ ಲೇಖಕರು). ಸಂ: ವಿ. ಕೃ. ಗೋಕಾಕ ಪುಟ ೧೦೦ ೧ ೮ ೦

### ೩ನೆಯ ವರುಷ ೧೯೪೫-೪೬

೧೧ ಹಕ್ಕಿಯ ನೋಟ ವ್ಯಕ್ತಿಚಿತ್ರಗಳು ಪುಟ ೬೦
—ದತ್ತಾತ್ರೇಯ ಕುಲಕರ್ಣಿ ತೀರಿವೆ

೧೨ ಗೃಹಿಣಿ ತೆಲಗು ಕಾದಂಬರಿಯ ಅನುವಾದ ಪುಟ ೧೦೪
ಮೂಲ —ಧನಿಕೊಂಡ ಹನುಮಂತರಾವ್ ಅನು: ವಿ. ಬಿ. ಈಶ್ವರರಾವ್ ,,

೧೩ ಕವಿವರ ಬೇಂದ್ರೆ ಕವಿಯ ಜೀವನ-ಸಾಹಿತ್ಯ ಕುರಿತು ಪುಟ ೧೦೦
ರಸಿಕ ಮಿತ್ರರು ಬರೆದ ಲೇಖನಗಳು ೧ ೮ ೦

---

* ಈ ಗುರುತು ಹಾಕಿದ ಮೂರು ಪುಸ್ತಕಗಳ ಪುನರ್ಮುದ್ರಣ ಬೇರೆ ಪ್ರಕಾಶಕರು ಮಾಡಿರುವದರಿಂದ ಅವುಗಳಿಗೆ ಅಂಚೆಯ, ಇತರ ಸೌಲಭ್ಯ ದೊರೆಯುವದಿಲ್ಲ.

೧೪ ನಿರ್ಮಲಾ ಕಾದಂಬರಿ ಪುಟ ೨೪೦
ಮೂಲ—ಪ್ರೇಮಚಂದ. ಅನು: ಶ್ರೀಮತಿ ಕುಪ್ಪಮ್ಮ ೩ ೦ ೦

೧೫ ಕೊನೆಯ ದಿನಗಳು ಎರಡು ನಿಡುಗತೆಗಳು ಪುಟ ೧೨೦
—'ಭಾರತೀಸುತ' ಕೊಡಗು ೧ ೮ ೦

## ೪ನೆಯ ವರುಷ ೧೯೪೬-೪೭

೧೬ ಕಳ್ಳ ಸಂತೆ ಕಥೆಗಳು ಪುಟ ೯೦
—ಬೇಂದ್ರೆ ಲಕ್ಷ್ಮಣರಾಯರು ತೀರಿವೆ.

೧೭ ಮುರುಕು ಮಂಟಪ ಕಾದಂಬರಿ ಪುಟ ೧೪೦
—ಎಸ್. ಅನಂತನಾರಾಯಣ ೧ ೧೨ ೦

೧೮ ಪುರುಷಾರ್ಥ ರಾಜಕೀಯ ಕಾದಂಬರಿ ಪುಟ ೧೫೦
—'ಶ್ರೀರಂಗ' ೨ ೦ ೦

೧೯ ಪ್ರತಿ ಸರಕಾರ ರಾಜಕೀಯ ಕಾದಂಬರಿ ಪುಟ ೧೪೦
—ಮಿರ್ಜಿ ಅಣ್ಣಾರಾಯರು ೧ ೧೨ ೦

೨೦ ಸ್ಮಶಾನ ವೈರಾಗ್ಯ ಕಾದಂಬರಿ ಪುಟ ೧೨೦
ಮೂಲ—ಟಾಲಸ್ಟಾಯ್ ಅನು: ಗೋ. ವೆ. ಜುಳಕಿ ೧ ೮ ೦

## ೫ನೆಯ ವರುಷ ೧೯೪೮-೪೯

೨೧ ಮದಗಜ ಮಲ್ಲ ಐತಿಹಾಸಿಕ ವೀರಕಥೆಗಳು ಪುಟ ೯೦
—ದೇಸಾಯಿ ಪಾಂಡುರಂಗರಾಯರು ೧ ೪ ೦

೨೨ ಪರಿವರ್ತನೆ ಅಥವಾ ಪ್ರವಾಹ ಕಾದಂಬರಿ ಪುಟ ೨೦೦
—"ನಿಶಾಕಾಂತ" ಬೆಂಗಳೂರು ೨ ೮ ೦

೨೩ ಸ್ವಪ್ನಜೀವಿ ಕಾದಂಬರಿ ಪುಟ ೧೧೦
—'ತ್ರಿವಿಕ್ರಮ' ಬೆಂಗಳೂರು ೧ ೮ ೦

೨೪ ಜೀವನ ಪಾಠಗಳು ವಿಚಾರಲಹರಿಗಳು ಪುಟ ೧೦೦
—ವಿ. ಕೃ. ಗೋಕಾಕ ೧ ೪ ೦

೨೫ ದೋರಾ ಮತ್ತು ಇತರ ಕಥೆಗಳು ಪುಟ ೮೮
—ವಿವಿಧ ಭಾಷೆಯ ವಿವಿಧ ಲೇಖಕರು. ಅನು: ಗೋ. ವೆ. ಜುಳಕಿ ೧ ೦ ೦

## ೬ನೆಯ ವರುಷದಲ್ಲಿ

೨೬ ಚಿರವಿರಹಿ ಸುದೀರ್ಘ ಕಾದಂಬರಿ ೩೦೦ಕ್ಕೂ ಮಿಕ್ಕಿ ಪುಟಗಳು.
—ಬೆಳ್ಳಿ ರಾಮಚಂದ್ರರಾಯರು, ಪುತ್ತೂರು

ಮಾರಾಟಗಾರರು :

**ಮನೋಹರ ಗ್ರಂಥ ಭಾಂಡಾರ, ಧಾರವಾಡ**
**ಕನ್ನಡ ಪುಸ್ತಕಾಲಯ, ಬೆಳಗಾವಿ**

